ಶ್ರೀಃ

# ಕರ್ಣಾಟಕ
# ಸಾಹಿತ್ಯ ಪರಿಷತ್ಪತ್ರಿಕೆ

ಸಂಪುಟ ೧೮] ಶ್ರೀಮುಖ ಸಂವತ್ಸರ ಚೈತ್ರ ಮಾಸ [ಸಂಚಿಕೆ ೧



[ಬಿಡಿ ಸಂಚಿಕೆ ರೂ. ೧-೮-೦

ವಾರ್ಷಿಕ ಚಂದಾ ರೂ. ೪]

ಏಪ್ರಿಲ್ ೧೯೩೩

1588—33.—ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ ಟಿ. ಸುಬ್ರಹ್ಮಣ್ಯ ಅಯ್ಯರವರಿಂದ ಮುದ್ರಿಸಲ್ಪಟ್ಟಿತು.

ವಿಷಯ ಸೂಚಿಕೆ

ಕರ್ಣಾಟಕ

# ಸಾಹಿತ್ಯ ಪರಿಷತ್ಪತ್ರಿಕೆ

---

**ಸಂಪುಟ ೧೮**

---

**ಶ್ರೀಮುಖ ಸಂವತ್ಸರ**

**೧೯೩೩-೩೪**



ಬೆಂಗಳೂರು ಪ್ರೆಸ್

೧೯೩೪

# ವಿಷಯ ಸೂಚಿಕೆ

———

117.34.—ಬೆಂಗಳೂರು ಪ್ರೆಸ್

ಶ್ರೀಃ

ಕರ್ಣಾಟಕ ಸಾಹಿತ್ಯ

# ಪರಿಷತ್ಪತ್ರಿಕೆ



ಸಂಪುಟ ೧೮] ಶ್ರೀಮುಖ ಸಂ॥ ಚೈತ್ರ ಮಾಸ [ಸಂಚಿಕೆ ೧

## ಕರ್ಣಾಟಕ ಸಂಸ್ಕೃತಿ—I

ಮಾನವನ ಕಾರ್ಯ ಪ್ರಪಂಚದಲ್ಲಿ ಆತನ ಮನೋವಿಕಾಸದ ಸ್ಥಿತಿಯು ಪದೇ ಪದೇ ತೋರಿಬರುತ್ತದೆ. ಹಾಗೆ ತೋರಿಬರುವ ಮನೋವಿಕಾಸವನ್ನೇ ನಾವು ಸಂಸ್ಕೃತಿಯೆನ್ನುವುದು. ಈ ಸಂಸ್ಕೃತಿಯು, ಅಥವಾ—ನಮಗೆ ಪರಿಚಿತವಾದ ಮಾತಿನಲ್ಲಿ—ಹುಟ್ಟುಗುಣವು, ವ್ಯಕ್ತಿ ವ್ಯಕ್ತಿಗಳಲ್ಲಿರುವಂತೆ ಕುಲ ಕುಲದಲ್ಲಿಯೂ ದೇಶ ದೇಶದಲ್ಲಿಯೂ ಇರುತ್ತದೆ. ಹಾಗೆಯೇ, ಇದು ನಮ್ಮ ದೇಶದಲ್ಲಿಯೂ ಇದೆ. ಆ ನಮ್ಮ ಹುಟ್ಟುಗುಣವನ್ನು, ನಮ್ಮ ದೇಶದ ಸಂಸ್ಕೃತಿಯನ್ನು ಗುರಿಯಿಟ್ಟಂತೆ ಪ್ರತಿ ಬಿಂಬಿಸಿ ತೋರಬೇಕೆಂಬುದೇ ಈ ಲೇಖನಮಾಲೆಯ[1] ಉದ್ದೇಶ.

ಈ ಲೇಖನ ಮಾಲೆಯಲ್ಲಿ, ನಮ್ಮ ಜನಾಂಗದಲ್ಲಿರುವ ನಾನಾ ಕುಲಗಳ ಆಚಾರ ವ್ಯವಹಾರಗಳು, ಹಾಡು ಕತೆ ಗಾದೆಗಳು, ಆಟ ಪಾಟ ಊಟ ಮೊದಲಾದವು, ವಿಶೇಷ ಪದ್ಧತಿಗಳು—ಇವುಗಳನ್ನೆಲ್ಲ, ಇವುಗಳಲ್ಲಿ ಅಡಗಿ ಕುಳಿತಿರುವ ಸಂಸ್ಕೃತಿಯನ್ನು ಈಚೆಗೆ ಹಿಡಿದೆಳೆದು ಪ್ರದರ್ಶಿಸುವ ಉದ್ದೇಶದಿಂದ ವಿಮರ್ಶೆ ಮಾಡುತ್ತ, ಸಾಧ್ಯವಾದ ಮಟ್ಟಿಗೂ ಸಾಧಾರಣವಾಗಿ ವಿವೇಚಿಸುತ್ತ ಮುಂದುವರಿಯುವೆವು. ಈ ಸಂಸ್ಕೃತಿ ವಿಮರ್ಶೆಯ ದೃಷ್ಟಿಯಿಂದ ನಮಗೆ ನಮ್ಮ ನಾಡಿನ ಕುಲ ಕುಲಗಳೆಲ್ಲವೂ ಒಂದೇ ಸಮನಾಗಿ ಮಾನ್ಯವಾದುವು: ಹಾರುವರೆಂದು ಹೆಚ್ಚಿಲ್ಲ, ಹೊಲೆಯರೆಂದು ಕಡೆಯಿಲ್ಲ; ಕನ್ನಡ ನಾಡಿನಲ್ಲಿ ನೆಲೆಸಿ, ಕನ್ನಡಿಗರು ನಾವು ಎಂದು ಅಭಿಮಾನಪಡುವ ಪ್ರತಿಯೊಂದು ಕುಲವೂ ನಮಗೆ ಮಾನ್ಯವು. ಈ ಕನ್ನಡ ಕುಲಕುಲಗಳ ವ್ಯಷ್ಟಿ ಸಮಷ್ಟಿ ವ್ಯವಹಾರ ಪ್ರಪಂಚವನ್ನು ಸಂಸ್ಕೃತಿಯ ದೃಷ್ಟಿಯಿಂದ ಹುಡುಕಾಡುವುದು ಈ ಲೇಖನಗಳಲ್ಲಿ ಮಾಡುವ ಕೆಲಸ.

1 ಪ್ರಸ್ತಾವನೆ, ಗಂಡುಸರ ಹಾಡುಗಳು, ಹೆಂಗುಸರ ಹಾಡುಗಳು, ಕಥೆಗಳು, ಗಾದೆ ಒಗಟುಗಳು, ಆಟಗಳು, ಆಚಾರ ಸಂಪ್ರದಾಯಗಳು, ವಿಶೇಷಾಂಶಗಳು, ಉಪಸಂಹಾರ—ಎಂಬ ಒಂಬತ್ತು ಲೇಖನ ಗಳು.

ಹೀಗೆ ಒಂದು ಜನಾಂಗದ ಸಂಸ್ಕೃತಿಯನ್ನು ಕುರಿತು ವಿಮರ್ಶಿಸುವಾಗ ಇತರರು ಈ ವಿಚಾರವಾಗಿ ಏನೇನು ಹೇಳಿರುವರೆಂಬುದನ್ನು ಗಮನಿಸುವುದು ಆವಶ್ಯಕ. ಜನಾಂಗದ ಕುಲಕುಲಗಳ ಸಂಸ್ಕೃತಿಯನ್ನು ಪಾಮರ ಸಂಸ್ಕೃತಿ, ವಾಸ್ತವ್ಯ ಸಂಸ್ಕೃತಿ, ಜನತೆಯ ಸಂಸ್ಕೃತಿಯೆಂದೂ ಕರೆಯುವುದುಂಟು. (ಇದನ್ನು ಇಂಗ್ಲಿಷಿನಲ್ಲಿ Folklore ಎಂದೂ ಜರ್ಮನ್ ಭಾಷೆಯಲ್ಲಿ Kulture ಎಂದೂ ಕರೆಯುತ್ತಾರೆ. ಇವುಗಳಲ್ಲಿ ಎರಡನೆಯದೇ ಸರಿಯೆಂದು ನಮ್ಮ ಅಭಿಪ್ರಾಯ.) 'ಜನತೆಯ ಸಂಸ್ಕೃತಿ ಎಂದರೇನು?' ಎಂಬ ಪ್ರಶ್ನೆಗೆ ಹಲವರು ವಿದ್ವಾಂಸರು ಹಲವು ತೆರನಾಗಿ ಉತ್ತರಕೊಟ್ಟಿದ್ದಾರೆ. ಇಂಗ್ಲಿಷಿನಲ್ಲಿರುವ ಸುಪ್ರಸಿದ್ಧವಾದ ವಿಶ್ವಕೋಶ (*Encyclopædia Britannica*, XI Edn.) ದಲ್ಲಿ "ನಾಗರಿಕ ಜನಾಂಗದಲ್ಲಿರುವ ಅಪಂಡಿತ ಕುಲಗಳಲ್ಲಿ ಕಾಣಬರುವ ಪರಂಪರಾ ಪ್ರಾಪ್ತವಾದ ತಿಳಿವು, ಅರಿವು, ಜನತೆಯ ಸಂಸ್ಕೃತಿ" ಎಂದೂ, ಧರ್ಮ ನೀತಿ ವಿಶ್ವಕೋಶ (Encyclopædia of Religion and Ethics)ದಲ್ಲಿ "ಒಂದು ದೇಶದಲ್ಲಿರುವ ಕುಲಗಳ, ವ್ಯಕ್ತಿಗಳ, ಗುಂಪುಗಳ ಪದ್ಧತಿಗಳು, ಆಚಾರಗಳು, ನಂಬಿಕೆಗಳು—ಇವು ಜನತೆಯ ಸಂಸ್ಕೃತಿ; ಜನಾಂಗದ ಅಂಗೀಕೃತವಾದ ಆಚಾರಗಳು, ಪದ್ಧತಿಗಳು, ನಂಬಿಕೆಗಳು—ಇವಕ್ಕೆ ಈ ಜನತೆಯ ಸಂಸ್ಕೃತಿಯು ವಿರುದ್ಧವಾದುದು" ಎಂದೂ ಹೇಳಿದೆ. ಆಂಡ್ರ್ಯೂ ಲ್ಯಾಂಗ್ ಎಂಬವರು 'ಧರ್ಮಗಳ ಆದಿ' (Origin of Religion) ಎಂಬ ತಮ್ಮ ಗ್ರಂಥದಲ್ಲಿ "ಜನತೆಯ ಸಂಸ್ಕೃತಿಯೆಂದರೆ—ವೈದುಷ್ಯಾದಿಗಳಿಂದ ಬದಲಾಯಿಸದಿರುವ ಕುಲಗಳಲ್ಲಿ ಬಳಕೆಯಲ್ಲಿರುವ ಪುರಾಣಗಳು, ಆಚಾರಗಳು, ನಂಬಿಕೆಗಳು" ಎನ್ನುತ್ತಾರೆ. ಇನ್ನೊಂದು ಗ್ರಂಥದಲ್ಲಿ, "ಪ್ರಾಚೀನ ಕಾಲದವರ ಮನೋಭಾವನೆಯ ಪ್ರಕಟ ರೂಪವೇ ಈ ಜನತೆಯ ಸಂಸ್ಕೃತಿ. ಅದು ವೈದ್ಯ, ಶಾಸ್ತ್ರ, ಮತ, ಕುಲಕಟ್ಟು ಮೊದಲಾದ ವ್ಯವಹಾರಗಳಲ್ಲಿಯಾಗಲೀ, ಬೌದ್ಧಿಕವಾದ ಚರಿತ್ರೆ, ಕಾವ್ಯ ಮೊದಲಾದವುಗಳಲ್ಲಿಯಾಗಲೀ ಪ್ರಕಟವಾಗಬಹುದು. ......ಜನತೆಯ ಸಂಸ್ಕೃತಿಯು ಅಪಂಡಿತನ ಪ್ರಪಂಚವನ್ನೆಲ್ಲ ಒಳಗೊಂಡಿದೆ. ಅವನು, ಅವನ ಅದೃಷ್ಟ, ಅವನ ಬಾಹ್ಯಾಭ್ಯಂತರ ವ್ಯವಹಾರ, ಅವನ ಮನಃಪ್ರಪಂಚದ ಕಲ್ಪನೆಗಳು, ಅವನ ವಿಧಿ ನಿಷೇಧಗಳು, ಅವನ ಆಟ ಪಾಟ ವಿನೋದಗಳು—ಇವುಗಳೆಲ್ಲ ಈ ಸಂಸ್ಕೃತಿಯು ಕಂಡುಬರುವುದು" ಎಂದು ಹೇಳಿರುತ್ತಾರೆ.

ಈ ಮೇಲಿನ ಅಭಿಪ್ರಾಯಗಳಲ್ಲಿ ಕಂಡುಬರುವ ಮುಖ್ಯ ಲಕ್ಷಣಗಳನ್ನೇ ಹಿಡಿದು ನಾವೂ ನಮ್ಮ ಜನಾಂಗದ, ನಮ್ಮ ದೇಶದ, ಸಂಸ್ಕೃತಿಯನ್ನು ವಿವರಿಸಬಹುದು. ಆದರೆ ಈ ವಿದ್ವಾಂಸರು ಹೇಳುವಂತೆ, ನಮ್ಮ ಜನಾಂಗದ ಅಪಂಡಿತ ವರ್ಗವನ್ನು ಮಾತ್ರ, ನಮ್ಮ ಜನಾಂಗದ ಕೀಳು ಕುಲದವರನ್ನು ಮಾತ್ರ, ಲಕ್ಷ್ಯವಾಗಿಟ್ಟುಕೊಂಡು ನಮ್ಮ ಸಂಸ್ಕೃತಿಯನ್ನು ಕುರಿತು ಬರೆಯುವುದು ಸಾಧ್ಯವಿಲ್ಲ. ಅದು ನಮ್ಮ ದೇಶದ ಸ್ಥಿತಿ ಗತಿಗಳಿಗೆ ಒಪ್ಪುವುದಿಲ್ಲ. ಈ ದೇಶದಲ್ಲಿ, ಜೈಮಿನಿ, ರಾಜಶೇಖರಗಳಂತಹ ಪ್ರೌಢ ಗ್ರಂಥಗಳನ್ನು ಈ ಕೊನೆಯಿಂದ ಆ ಕೊನೆಯವರೆಗೆ ಕಂಠ ಪಾಠ ಮಾಡಿರುವ ನಿರಕ್ಷರರಿದ್ದಾರೆ; ಚುಟಿಕೆ ಹೊಡೆಯುವಷ್ಟು ಹೊತ್ತಿನಲ್ಲಿ ಹಾಡು ಲಾವಣಿಗಳನ್ನು ಕಟ್ಟಬಲ್ಲ

ಪಾಮರರಿದ್ದಾರೆ; ಸಾವಿರಾರು ನುಡಿಯ ಹಾಡುಗಳು ಇಪ್ಪತ್ತು ಮೂವತ್ತನ್ನು ನಿರಾಯಾಸವಾಗಿ ಚಾಚೂ ತಪ್ಪಿಲ್ಲದೆ, ಇತರ ಸಹಾಯವಿಲ್ಲದೆ ಬಾಯಲ್ಲಿ ಹೇಳುವ 'ಹೆಣ್ಣು ಹೆಂಗುಸ'ರಿದ್ದಾರೆ. ಹೆಸರಾದ ಡಾಕ್ಟರುಗಳು ಕೈಬಿಟ್ಟ ವ್ಯಾಧಿಗಳನ್ನು 'ಘುಟಿಕಾ ಮಂತ್ರ ಮೂಲಿಕೆ'ಗಳಿಂದ ಗುಣಪಡಿಸಬಲ್ಲ ಅಜ್ಞರಿದ್ದಾರೆ. ಇವರೆಲ್ಲರನ್ನೂ ಒಳಗೊಂಡಿರುವ ಜನಾಂಗದಲ್ಲಿ ಪಂಡಿತ ಸಂಸ್ಕೃತಿ, ಪಾಮರ ಸಂಸ್ಕೃತಿ, ಮೇಲಿನವರ ಸಂಸ್ಕೃತಿ, ಕೆಳಗಿನವರ ಸಂಸ್ಕೃತಿ ಎಂದು ವಿಭಾಗ ಮಾಡುವುದು ಸಾಧ್ಯವಿಲ್ಲ. ಅದರಿಂದ ನಾವು ಸಮಷ್ಟಿಯಾಗಿ ಕರ್ಣಾಟಕ ಸಂಸ್ಕೃತಿಯನ್ನು ಕುರಿತು ಹೇಳುವೆವು.

ಇದರ ಜೊತೆಗೆ ನಮ್ಮ ನಂಬಿಕೆಗಳು, ನಮ್ಮ ಜೀವನ ಕ್ರಮ, ನಮ್ಮ ಅರಸರ ಆಳುವಿಕೆಗಳೂ ನಮ್ಮ ಸಂಸ್ಕೃತಿಯ ಸ್ವರೂಪವನ್ನು ಒಂದಚ್ಚಿಗೆ ತಂದಿವೆ. "ಪ್ರತಿಯೊಂದೂ ಆದಿಯಲ್ಲಿ ಒಂದಾಗಿದ್ದು ಬರು ಬರುತ್ತ ಹಲವಾಯಿತು; ಎಲ್ಲವೂ ಮೇಲಿಂದ ಇಳಿಯಿತು" ಎಂಬುದು ನಮ್ಮ ದೃಢವಾದ ನಂಬಿಕೆ. ಮತ್ತೆ ಆ ಮೇಲಕ್ಕೆ ಹೋಗಬೇಕೆಂಬುದೇ ಉದ್ದೇಶವಾಗಿ ಅದೇ ಗುರಿಯಿಂದಲೇ ನಿರೂಪಿಸಿಕೊಂಡಿರುವ ಕಾರ್ಯಕಲಾಪಗಳನ್ನುಳ್ಳ ಜೀವನ ಕ್ರಮ, ಇದರ ಜೊತೆಗೆ, ಪ್ರಜೆಗಳ ಮತ, ಜಾತಿ, ಧರ್ಮಗಳು ತಮಗೆ ಎಷ್ಟೇ ವಿರುದ್ಧವಾಗಿದ್ದರೂ ಅವುಗಳನ್ನು ಬದಲಾಯಿಸಲು, ತಿರಸ್ಕರಿಸಲು, ಪ್ರಕರಾಂತರಗೊಳಿಸಲು, ಯತ್ನಿಸಲೂ ಇಷ್ಟವಿಲ್ಲದೆ, "ಸ್ವಧರ್ಮೇ ನಿಧನಂ ಶ್ರೇಯಃ ಪರ ಧರ್ಮೋ ಭಯಾವಹಃ" ಎಂಬುದನ್ನು ತಾವೂ ನಂಬಿ, ಪ್ರಜೆಗಳನ್ನೂ ನಂಬಿರೆಂದು ಉಪದೇಶ ಮಾಡುವ ರಾಜರ ಆಳುವಿಕೆ—ಇವುಗಳಿಂದ ನಮ್ಮ ಸಂಸ್ಕೃತಿಯು ಸ್ವಾಭಾವಿಕವಾಗಿ, ಸಹಜವಾಗಿ, ನಿರರ್ಗಳವಾಗಿ ಬೆಳೆದುಬಂದಿದೆ. ಈ ಸಂಸ್ಕೃತಿಯನ್ನು ಪಾಶ್ಚಾತ್ಯರ ಅಳತೆಗೋಲಿನಿಂದ ಅಳೆಯುವುದೆಂತು ಸಾಧ್ಯ? ಅವರ ನಂಬಿಕೆ, ಜೀವನ ಕ್ರಮ, ಸರಕಾರದ ಪದ್ಧತಿಗಳು ಬೇರೆ; ಪ್ರತಿಯೊಂದೂ ಅಡಿಯಿಂದ ಆರಂಭಿಸಿ ಹಜ್ಜೆ ಹಜ್ಜೆಯಾಗಿ ಮುಂದುವರಿಯುತ್ತಿದೆ ಎಂಬುದು ಅವರ ನಂಬಿಕೆ.[2] ಭೋಗ ಸಾಧನಗಳನ್ನು ಒಲಿದು ಇದ್ದಷ್ಟು ದಿವಸ, ಆದಷ್ಟು ಮಟ್ಟಿಗೆ, ಸುಖಪಟ್ಟರೆ ಮುಗಿಯಿತು ಎಂಬ ದೃಷ್ಟಿಯಿಂದ ವಿಷಯ ಸೌಖ್ಯ ಪ್ರಧಾನವಾಗಿ ರೂಪುಗೊಂಡ ಜೀವನ ಕ್ರಮ, ಅಧಿಕಾರದಲ್ಲಿದ್ದವನು ಹೇಳುವುದಕ್ಕೆ ವಿರುದ್ಧವಾಗಿರುವುದೆಲ್ಲ ತಪ್ಪೆಂಬ ಸರಕಾರದ ಕೆಳಗೆ ಬದುಕುವುದು—ಇವನ್ನುಳ್ಳವರು ಗೊತ್ತುಮಾಡಿದ ಅಳತೆಗೋಲಿನಿಂದ ನಮ್ಮ ಸಂಸ್ಕೃತಿಯನ್ನು ನಾವು ಅಳೆಯುವುದಿಲ್ಲ. ಅಷ್ಟೇ ಅಲ್ಲ: "ಕ್ರೈಸ್ತ ಮತವೇ ಮತ" ಎಂಬ ಭಾವನೆಯಲ್ಲಿ ಹುಟ್ಟಿ ಬೆಳೆದು ಅದಲ್ಲದ ಮಿಕ್ಕುವೆಲ್ಲವೂ ಕೀಳೆಂದು[3] ಬಾಯ್ಬಿಟ್ಟು ಹೇಳುವವರ ಅಳತೆಗೋಲಿನಿಂದ ಕ್ರೈಸ್ತರಲ್ಲದ ನಾವೇಕೆ ಅಳೆದುಕೊಳ್ಳಬೇಕು?

ಅಲ್ಲದೆ, ನಮ್ಮ ದೇಶದಲ್ಲಿ ಜನಾಂಗದ ಮತ (State Religion) ಜನಾಂಗದ ಆಚಾರ (State Custom) ಎಂಬುದು ಇದ್ದಂತೆ ತೋರುವುದಿಲ್ಲ. ಅದರ ಬದಲಾಗಿ

2 ನಮ್ಮ ವೇದಾಂತದ ವಿವರ್ತ ವಾದ, ಸಾಂಖ್ಯದ ಪರಿಣಾಮ ವಾದ—ಇವುಗಳಿಗೂ ಅವರ ಪರಿಣಾಮ ವಾದಕ್ಕೂ (Evolution) ಇರುವ ವ್ಯತ್ಯಾಸವನ್ನು ಗಮನಿಸಿರಿ.

3 See Chapter I in "The Evolution of the Idea of God" by Grant Allen (R. P. A. Series); and compare what the author of "The Village Gods in South India" says in the introduction thereof.

ಬೇರೆ ಬೇರೆ ಸಂಪ್ರದಾಯಗಳಿಗೂ ರಾಜದೃಷ್ಟಿಯಲ್ಲಿ ಸಮಾನ ಗೌರವವು ಸಿಕ್ಕಿದೆ. ಇದರ ಜೊತೆಗೆ ದೇಶದಲ್ಲಿ ಸಂಸ್ಕೃತಿಯ ತೆರೆಗಳು ಮೇಲೆ ಮೇಲೆದ್ದು ಈ ಕೊನೆಯಿಂದ ಆ ಕೊನೆಗೆ ಉರುಳಿ ಹೊರಳಿ ಹೋಗಿವೆ. ಋಷಿಗಳ ತಪೋವನಗಳು, ಜೈನರ ಬಸ್ತಿಗಳು, ಬೌದ್ಧರ ವಿಹಾರಗಳು, ಬ್ರಾಹ್ಮಣರ ದೇವಸ್ಥಾನಗಳು, ರಾಜರ ಸಭೆಗಳು, ವಿದ್ವಾಂಸರ ಗೋಷ್ಠಿಗಳು, ದಾಸರ ಹರಿಕಥೆಗಳು, ಶರಣರ, ಸಾಧುಗಳ ತತ್ತ್ವಗಳು, ಕೊನೆಗೆ ಭಿಕ್ಷುಕರ ಹಾಡುಗಳು—ಇವೆಲ್ಲ ಸಾವಿರಾರು ಸಲ ಸಂಸ್ಕೃತಿಯ ತೆರೆಗಳನ್ನು ಜನತೆಯ ಮೇಲೆ ಹರಿಯಿಸಿ ಹರಿಯಿಸಿ ಪ್ರಜಾವರ್ಗಕ್ಕೆ ಬೇಕಾದ ಹಾಗೆ ಸಂಸ್ಕೃತಿಯ ಗಂಗಾ ಸ್ನಾನವನ್ನು ಮಾಡಿಸಿವೆ. ಜನಾಂಗದ ಒಂದು ಕೊನೆಯಲ್ಲಿ ಶ್ರೌತ ಸ್ಮಾರ್ತ ಕರ್ಮಗಳನ್ನು ಶ್ರೌತ ಸ್ಮಾರ್ತ ಕರ್ಮಗಳೆಂದು, ವಿಧ್ಯುಕ್ತಗಳೆಂದು ಅರಿತು ಮಾಡುವ ಬ್ರಾಹ್ಮಣನಿದ್ದರೆ, ಇನ್ನೊಂದು ಕೊನೆಯಲ್ಲಿ ಶ್ರುತಿ ಸ್ಮೃತಿಗಳ ಹೆಸರನ್ನೇ ಕೇಳರಿಯದಿದ್ದರೂ ತದುಕ್ತ ಕರ್ಮಗಳನ್ನೇ ರೂಪಾಂತರದಲ್ಲಿ 'ಶಾಸ್ತ್ರ ಶಾಸ್ತ್ರ'ವೆಂದು ಮಾಡುವ, ಮಾಡುತ್ತಿರುವ ಕೀಳು ಜಾತಿಯವನಿದ್ದಾನೆ. (ನಿಶ್ಚಿತಾರ್ಥವು ಕೆಳಜಾತಿಯವರಲ್ಲಿ 'ವೀಳ್ಯೇದ ಶಾಸ್ತ್ರ', ಸಂಚಯನ ಸ್ಥಾನೀಯವಾಗಿ ಮಾಡುವುದು 'ಹಾಲು ತುಪ್ಪದ' ಶಾಸ್ತ್ರ—ಇತ್ಯಾದಿ.) ಸಮಾಜದ ಪುರೋಭಾಗದಲ್ಲಿದ್ದ ಬ್ರಾಹ್ಮಣನಿಂದ ಹಿಡಿದು ಕಾಡನ್ನು ಬಿಟ್ಟು ಊರಿಗೇ ಬರದಿರುವ ಕಾಡು ಕುರುಬನ ವರೆಗೆ ಇರುವ ಕರ್ನಾಟಕದ ನಾನಾ ಕುಲಗಳ ಆಚಾರ ವ್ಯವಹಾರ, ಆಟ ಪಾಟ, ರೀತಿ ನೀತಿ, ನಡೆ ನುಡಿ, ಉಡುಗೆ ತೊಡುಗೆ—ಇವುಗಳನ್ನು ಗಮನಿಸಿ ಕಣ್ಣಿಟ್ಟು ನೋಡಿದರೆ ಸಂಸ್ಕೃತಿಯ ಏಕ ಜಾತೀಯತೆಯು ಕಾಣಬರುತ್ತದೆ. ಏಕ ತಾನವಿಲ್ಲ; ಆದರೆ ಏಕ ಮುಖತೆಯಿದೆ. ಒಂದು ವೇಳೆ ನಾನಾ ಮುಖತ್ವವು ಕಂಡುಬಂದರೂ ಅದು ಪರಶಿವನ ಪಂಚ ಮುಖಗಳಂತೆ: ಹೊರಗಣ್ಣಿನ ನೋಟಕ್ಕೆ ಬೇರೆ ಬೇರೆ; ಒಳಗಣ್ಣಿನ ನೋಟಕ್ಕೆ ಒಂದೇ! ವ್ಯತ್ಯಾಸವಿದೆ; ಆದರೆ ಆ ವ್ಯತ್ಯಾಸವು ಹೊಯಿಸಳರ ದೇವಸ್ಥಾನಕ್ಕೂ ಮಾರಿಯ ಗುಡಿಗೂ ಇರುವಂತೆ. ಎರಡೂ ದೇವತಾರಾಧನೆಗೆಂದೇ ಕಟ್ಟಿದವು; ಒಂದರ ವೈಭವವು ಇನ್ನೊಂದರಲ್ಲಿಲ್ಲ. ಆದರೆ ಎರಡೂ ಗುಡಿಗಳಲ್ಲವೇನು? ಹಾಗೆ. ಸಜಾತೀಯತೆಯು ಹೀಗೆ ಒಡೆದು ಕಾಣುತ್ತಿರಲು, ಸಂಸ್ಕೃತಿ ವಿಮರ್ಶೆಯಲ್ಲಿ ಯಾವ ಕುಲವನ್ನು ಬಿಡುವುದು? ಯಾವ ಕುಲವನ್ನು ಇಟ್ಟುಕೊಳ್ಳುವುದು?

ಇಂದಿಗೂ ಕರ್ನಾಟಕದಲ್ಲಿ ಕಂಡುಬರುವ ಪೂರ್ವ ದ್ರಾವಿಡರು (Pre-Dravidians), ದ್ರಾವಿಡರು, ಆರ್ಯರು ಎಂಬ ಮೂರು ಕುಲಗಳಲ್ಲಿ, ಪೂರ್ವ ದ್ರಾವಿಡರು ದ್ರಾವಿಡರೊಡನೆಯೂ, ದ್ರಾವಿಡರು ಆರ್ಯರೊಡನೆಯೂ ಬೆರೆದು ಹೋಗಿದ್ದಾರೆ. ಅಲ್ಲಲ್ಲಿ ನಾಮಾವಶಿಷ್ಟವಾಗಿ ನಿಂತಿರುವವರಲ್ಲಿ ಪೂರ್ವ ದ್ರಾವಿಡರು ತಮ್ಮ ಮೊದಲಿನ ಭಾಷೆಯನ್ನು (ಅಂತಹ ಭಾಷೆಯೊಂದು ಇದ್ದಿತೆಂಬುದರಲ್ಲಿ ನನಗೆ ನಂಬಿಕೆಯಿಲ್ಲ) ಮರೆತು ದ್ರಾವಿಡ ಭಾಷೆಗಳನ್ನೇ ಆಡುತ್ತಿದ್ದಾರೆ.[4] ಅವರೂ ದ್ರಾವಿಡರೂ ವೈದಿಕ ಸಂಸ್ಕೃತಿಗೆ ಮಾರುವೋಗಿ ನಿತ್ಯ ನೈಮಿತ್ತಿಕ ವ್ಯವಹಾರಗಳಲ್ಲಿಯೂ ವಿಶೇಷಾಚಾರ ಸಂಪ್ರದಾಯಗಳಲ್ಲಿಯೂ ವೈದಿಕ ಸಂಸ್ಕೃತಿಯ ಚೌಕಟ್ಟನ್ನು ತೆಗೆದುಕೊಂಡು

[4] *Vide—The Mysore Gazetteer* (New Edition), Vol. I, page 138.

ಅದನ್ನು ತಮ್ಮ ಸ್ಥಿತಿಗಳಿಗೆ ಅನುಸಾರವಾಗಿ ಹೊಂದಿಸಿಕೊಂಡಿದ್ದಾರೆಂಬುದನ್ನು ನಾವು ಪುರಾಣೇತಿಹಾಸಗಳಿಂದಲೂ ನೋಡಬಹುದು.

ನಮ್ಮ ನಾಡು ಭೂಶಾಸ್ತ್ರ (Geology) ದೃಷ್ಟಿಯಿಂದ ಅತ್ಯಂತ ಪ್ರಾಚೀನವಾದುದು.[5] ಆದರೂ ನಮಗೆ ಅದರ ನೇರವಾದ ಇತಿಹಾಸವು ತಿಳಿದಿರುವುದು ಸುಮಾರು ೨೨ ಶತಮಾನಗಳಿಂದ. ಅದರ ಹಿಂದಿನ ಪುರಾಣ ಯುಗದಲ್ಲಿ, ಕೃತ ತ್ರೇತಾ ದ್ವಾಪರಗಳಲ್ಲಿ, ನಮ್ಮ ನಾಡು ಪ್ರಸಿದ್ಧವಾಗಿದ್ದಿತು, ತಪೋವನವಾಗಿದ್ದಿತು, ನಾಗರಿಕವಾಗಿದ್ದಿತು. ಪ್ರಹ್ಲಾದನು ತೀರ್ಥಯಾತ್ರೆಗೆ ಬಂದಾಗ ಕಾವೇರಿಯ ತೀರದಲ್ಲಿ ಅಜಗರನೆಂಬ ವಿಪ್ರೋತ್ತಮನನ್ನು ಕಂಡನು.[6] ಪರಮ ಭಕ್ತನಾದ ಮಾರ್ಕಂಡೇಯನು ನಮ್ಮ ನಾಡಿನವನು.[7] ರಾಮಾಯಣದಲ್ಲಿ ಪ್ರಸಿದ್ಧವಾದ ಕಿಷ್ಕಿಂಧೆಯು ಇದ್ದುದು ನಮ್ಮ ಕರ್ಣಾಟಕದಲ್ಲಿ. ವೇದ ವೇದಾಂಗ ಪಾರಂಗತರಾದ ಅಗಸ್ತ್ಯ ಶರಭಂಗಾದಿಗಳ ತಪೋವನಗಳಿದ್ದುದು ಇಲ್ಲಿ. ಮಹಾಭಾರತದ ಮತ್ಸ್ಯ, ತ್ರಿಗರ್ತ, ಕುಂತಳ ದೇಶಗಳು ಈಗಿನ ನಮ್ಮ ಉತ್ತರ ದಕ್ಷಿಣ ಪಶ್ಚಿಮ ಕರ್ಣಾಟಕ[8]ಗಳು—ಎಂದರೆ, ಆರ್ಯ ಸಂಸ್ಕೃತಿಯು ಪುರಾಣ ಯುಗದಲ್ಲಿಯೇ ದಕ್ಷಿಣಾ ಪಥಕ್ಕೆ ಹರಿದು ಬಂದು ನೆಲಸಿದ್ದಿತು. ಆರ್ಯರ ಋಷಿಗಳು, ಆರ್ಯರ ರಾಜರು ಬಂದು ಇಲ್ಲಿ ರಾಜ್ಯಗಳನ್ನು ಕಟ್ಟಿದ್ದರು. ಅನಂತರದ ಚಾರಿತ್ರಕ ಯುಗದಲ್ಲಿ ಚಂದ್ರಗುಪ್ತ ಮೌರ್ಯನು ಜೈನ ಮತವನ್ನು ತಂದನು. ಅವನ ಮೊಮ್ಮಗನಾದ ಅಶೋಕನಿಂದ ಈ ನಾಡಿನಲ್ಲಿ ಬೌದ್ಧ ಮತವು ಹರಡಿತು. ಈ ಎರಡು ಮತಗಳ ಪ್ರಾಬಲ್ಯದಿಂದ ಕ್ಷೀಣವಾದ ಬ್ರಾಹ್ಮಣ ಮತವು ಮತ್ತೆ ಸುಮಾರು ೩–೪ನೆಯ ಶತಮಾನಗಳಲ್ಲಿ ತಲೆಯೆತ್ತಿತು. ಅನಂತರ ಬ್ರಾಹ್ಮಣ ವಾಹಿನಿಯು ಉತ್ತರ ದೇಶದಿಂದ ಪದೇ ಪದೇ ಬಂದಿಳಿದಿರುವುದೂ, ಮತ್ತೆ ಉತ್ತರದಲ್ಲಿ ಬ್ರಾಹ್ಮಣ್ಯವು ಖಿಲವಾದಾಗ ನಮ್ಮ ದಾಕ್ಷಿಣಾತ್ಯ ಆಚಾರ್ಯರಿಂದ ಆ ಮತವು ಅಲ್ಲಿ ಉದ್ಧಾರವಾದುದೂ ಚರಿತ್ರೆಯಲ್ಲಿ ಸ್ಪಷ್ಟವಾಗಿರುವ ವಿಷಯ. ಮತ್ತೆ ದೀಕ್ಷಾ ಭಕ್ತಿ ಸಂಪ್ರದಾಯಗಳನ್ನು ಮುಖ್ಯವಾಗಿಟ್ಟುಕೊಂಡು ವೀರಶೈವ ಮತವೂ ಹರಿದಾಸ ಪರಂಪರೆಯೂ ಕೃಷ್ಣೆಯಿಂದ ಭವಾನಿಯ ವರೆಗಿನ ಕನ್ನಡ ನಾಡನ್ನೆಲ್ಲ, ತಮ್ಮ ಬೆಳಕಿನಿಂದ ಬೆಳಗಿದುದೂ ಉಂಟು. ಆದರೆ ಈ ಹೊಸ ಬೆಳಕು ಹಳೆಯ ಬೆಳಕನ್ನು ನುಂಗಲಿಲ್ಲ; ಆ ಹಳೆಯ ಸಂಸ್ಕೃತಿಯು ಹಚ್ಚಿಟ್ಟಿದ್ದ ನಂದಾ ದೀಪದ ಕುಡುವನ್ನಳಿಸಿ ತನ್ನ ಪ್ರಕಾಶದಿಂದ ಅದರ ಪ್ರಕಾಶವನ್ನು ಹೆಚ್ಚಿಸಿತು. ಈ ನಾನಾ ತರಂಗಿಣಿಗಳೆಲ್ಲವೂ ನಾಡಿನಲ್ಲಿ ಒಂದೇ ಕಡೆಗಿಳಿದು ಒಂದೇ ಮಹಾ ನದಿಯಾಗಿ ಹರಿಯುತ್ತಿವೆ. ಆ ಮಹಾ ನದಿಯು ವೇದಗಳಲ್ಲಿ ಉದ್ಗಮಿಸಿ ಉಪನಿಷತ್ತುಗಳಲ್ಲಿ ಪಲ್ಲವಿಸಿ ಬೆಳೆದ ವೈದಿಕ ಸಂಸ್ಕೃತಿ. ಆದರೆ ಆ ವೈದಿಕ ಸಂಸ್ಕೃತಿಯ ಮೂಲ ರೂಪವಿದಲ್ಲ,

5 *Vide—The Mysore Gazetteer* (New Edition), Vol. 1, page 18.

6 ಭಾಗವತ, ಏಳನೆಯ ಸ್ಕಂಧ, ತ್ರಯೋದಶಾಧ್ಯಾಯ, ೧೨ನೆಯ ಶ್ಲೋಕ.

7 ರಾಮಾಯಣ, ಅರಣ್ಯಕಾಂಡ, ೩೦ನೆಯ ಸರ್ಗ, ೨೬ನೆಯ ಶ್ಲೋಕದ ಮೇಲಿನ ತಿಲಕ ವ್ಯಾಖ್ಯಾನವನ್ನು ನೋಡಿರಿ.

8 *Vide—The Bombay Gazetteer* (of North Karnataka—part 7)

ಪ್ರತಿಬಿಂಬ; ಆ ಹಿಂದಿನ ಯಜ್ಞಯಾಗಾದಿ ಕರ್ಮಗಳ ನೈಷ್ಕರ್ಮ್ಯವಿಲ್ಲದಿದ್ದರೂ ಆ ಶ್ರದ್ಧೆಯನ್ನು ಕಾಪಾಡಿಕೊಂಡಿರುವ, ಜ್ಞಾನ ಭಕ್ತಿ ಮಾರ್ಗಗಳ ಸೌಂದರ್ಯವನ್ನು ಮೆರೆಯುತ್ತಿರುವ, ಶ್ರೇಯಃಪ್ರಧಾನವಾದ ವೈದಿಕ ಸಂಸ್ಕೃತಿಯಿದು. ನಮ್ಮ ಜನತೆಯ ಕುಲ ಕುಲಾಂತರಗಳ ಆಚಾರ ಸಮಯಾದಿ ನಾನಾ ವ್ಯವಹಾರಗಳಲ್ಲಿ ಈ ಸಂಸ್ಕೃತಿಯು ಹಾಸು ಹೊಕ್ಕಾಗಿ ಬೆರೆದುಹೋಗಿದೆ; ಬಹು ಮಟ್ಟಿಗೆ ಜನತೆಗೆ ಏಕ ಜಾತೀಯತೆಯನ್ನು ಸಾಧಿಸಿಕೊಟ್ಟಿದೆ; ಕುಲಗಳ ವ್ಯಕ್ತ ಸ್ವರೂಪವನ್ನು ಕಾಪಾಡುತ್ತ ಅದನ್ನು ದೇಶದ ಚೌಕಟ್ಟಿನಲ್ಲಿ ಇತರ ಕುಲಗಳೊಂದಿಗೆ ಬೆಸೆದಿದೆ.

ಇಂದಿಗೂ ನಮ್ಮ ಕರ್ಣಾಟಕದಲ್ಲಿ ನಾನಾ ಸಂಪ್ರದಾಯಗಳಿವೆ. ಆದರೂ ಅವುಗಳಲ್ಲಿ ಮುಖ್ಯವಾದುವು ಬ್ರಾಹ್ಮಣ ವೀರಶೈವಗಳು. ಜನತೆಯ ಒಂದು ಭಾಗವು ಬ್ರಾಹ್ಮಣನನ್ನು ಪೌರೋಹಿತ್ಯಕ್ಕೆ ಇಟ್ಟುಕೊಂಡು ತನ್ನ ಶುಭಾಶುಭ ಕರ್ಮಗಳನ್ನು ನೆರವೇರಿಸುವುದು. ಇನ್ನೊಂದು, ವೀರಶೈವ ಜಂಗಮರನ್ನು ಗುರುಗಳಾಗಿ ಪಡೆಗಿಕೊಂಡು ತನ್ನ ನಿತ್ಯ ನೈಮಿತ್ತಿಕ ಕಾರ್ಯಗಳನ್ನು ಮಾಡುವುದು. ಈ ಎರಡನೆಯ ಗುಂಪೂ ವೇದಾಧ್ಯಯನಾದಿಗಳನ್ನು ಅಂಗೀಕರಿಸಿ ಮೊದಲನೆಯ ಗುಂಪಿನ ಕಡೆ ತಿರುಗುತ್ತಿದೆ.[9]

ಈ ವೈದಿಕೀಕರಣವು ಎಷ್ಟು ದೂರ ನಡೆದಿದೆಯೆಂಬುದನ್ನು ಗಮನಿಸಿ ನೋಡಿದರೆ ಆಶ್ಚರ್ಯವಾಗುತ್ತದೆ. ನಮ್ಮ ದೇಶದಲ್ಲಿರುವ ಪಣಗಳು—ಹದಿನೆಂಟು ಪಣ, ಒಂಬತ್ತು ಪಣಗಳು— ತಮ್ಮಲ್ಲಿ ದೇಶದ ಪ್ರಜೆಯ ಬಹು ಭಾಗವನ್ನು ಒಳಗೊಂಡಿವೆ.[10] ಬ್ರಾಹ್ಮಣರು, ಮತ್ತೆ ಕೆಲವು ಅಲ್ಪ ಸಂಖ್ಯಾತವಾದ ಕುಲಗಳು— ಇವುಗಳನ್ನು ಬಿಟ್ಟು ಮಿಕ್ಕವೆಲ್ಲ ಈ ಪಣದ ವ್ಯವಸ್ಥೆಗೆ ಒಳಪಟ್ಟಿವೆ. ಈ ಕುಲಗಳಲ್ಲಿ ಸಾಮಾನ್ಯವಾಗಿ ಎಲ್ಲಕ್ಕೂ ಗೋತ್ರ ಸೂತ್ರ ವ್ಯವಸ್ಥೆಯು ನಡೆದಿದೆ.[11] ಜಾತಾ ಶೌಚ ಮೃತಾ ಶೌಚಗಳನ್ನು ಈ ಕುಲಗಳೆಲ್ಲ ಒಪ್ಪಿವೆ;[12] ಬ್ರಾಹ್ಮಣ ಸಂಸ್ಕಾರಗಳನ್ನು ಒಂದಲ್ಲ ಒಂದು ವಿಧವಾಗಿ ಆಚರಿಸುತ್ತಿವೆ.[13] ಊಟ ಉಪಚಾರಗಳಲ್ಲಿ, ಹೆಣ್ಣು ಕೊಟ್ಟು ತರುವುದರಲ್ಲಿ ಜಾತಿಯನ್ನೇ ಮುಖ್ಯವಾಗಿಟ್ಟುಕೊಂಡಿವೆ; ಪಿತೃ ಶ್ರಾದ್ಧ ಪರ್ವ ಶ್ರಾದ್ಧಗಳನ್ನು ಮಾಡುತ್ತಿವೆ.[14] ಈ ಕುಲಗಳವರು ನಿತ್ಯ ನೈಮಿತ್ತಿಕಾದಿ

9 "Generally speaking, it will be seen from this and from the glossary, that the more a caste employs Brahmins to superintend its social and religious observances the higher it is held in social esteem."—*The Madras Census Report*, 1901, page 129.

10 *The Mysore Gazetteer* (New Edition), Vol. I, page 178.

11 ಈ ವಿಚಾರದಲ್ಲಿ ಅಭಿಪ್ರಾಯ ಭೇದವಿದೆ. *Vide—The Mysore Census Reports*, 1891 & 1901.

12 ವೀರಶೈವರು ಮಾತ್ರ ಆಚರಿಸುವುದಿಲ್ಲ.

13 ಪುಂಸವನ, ಸೀಮಂತೋನ್ನಯನಗಳ ಸ್ಥಾನದಲ್ಲಿ, ಬಸಿರೊಸಗೆ, ಹೂ ಮುಡಿಸುವುದು, ಬಯಕೆ ಊಟ ಮೊದಲಾದವು. ದಹನ (ಖನನ), ಸಂಚಯನ ಸ್ಥಾನೀಯವಾಗಿ ಹಾಲು ತುಪ್ಪ, ಜಾತಕರ್ಮ ನಾಮಕರಣ ಚೌಲಗಳು, ವಿವಾಹಾಂಗವಾಗಿ ಉಪನಯನ ಸಮಾವರ್ತನಗಳು, ವಿವಾಹದಲ್ಲಿ ಅಗ್ನಿಯನ್ನು ಸ್ಥಾಪಿಸಿ ಮಾಡತಕ್ಕ ಹೋಮಾದಿಗಳು ವಿನಾ ಮಿಕ್ಕೆಲ್ಲ ಕರ್ಮಗಳು, ವಿವಾಹಾಂಗವಾಗಿ ಗರ್ಭಾಧಾನ—ಹೀಗೆ ಸಾಮಾನ್ಯವಾಗಿ ಸರ್ವ ಸಂಸ್ಕಾರಗಳೂ ಈ ಕುಲಗಳವರಿಂದ ಅಂಗೀಕೃತವಾಗಿವೆ.

14 Once a year Soligas perform a feast in commemoration of their deceased parents.—*The Mysore Census Report*, 1901, page 553.

ವ್ರತಗಳನ್ನೂ ಹಬ್ಬ ಹುಣ್ಣಿಮೆ ಹರಿದಿನಗಳನ್ನೂ ಆಚರಿಸುತ್ತಾರೆ; ಅಥರ್ವಣದ ಮಾರ್ಗವನ್ನು ಅನುಸರಿಸಿ ರೋಗೋಪದ್ರವ ಕಾರಕಗಳಾದ ಕ್ಷುದ್ರ ದೇವತೆಗಳನ್ನು ನಾನಾಂತರಗಳಿಂದ ಪೂಜಿಸುತ್ತಾರೆ; ಗೃಹ್ಯಗಳಲ್ಲಿ ಹೇಳಿರುವ ನಾಗ ಪೂಜಾದಿಗಳನ್ನು ಮಾಡುತ್ತಾರೆ. ಹೀಗಿರುವಾಗ, ಈ ಸಂಸ್ಕೃತಿಯು ಅಗ್ನಿ ಪೂಜೆಯನ್ನು ತೊರೆದಿರುವ ವೈದಿಕ ಸಂಸ್ಕೃತಿಯೆಂದು ಹೇಳಲು ಅಡ್ಡಿಯೇನು?

ಕುಲಾಚಾರಗಳನ್ನು ಕುರಿತು ನೋಡಿದಂತೆಯೇ ವ್ಯಕ್ತಿಗಳ ಆಚಾರ ಭಾವನೆಗಳನ್ನೂ ನೋಡೋಣ. ನಮ್ಮ ದೇಶದ ಪ್ರಜೆಗಳಲ್ಲಿ ಬಹು ಭಾಗವಾದ [15]ಒಕ್ಕಲಿಗರನ್ನು ತೆಗೆದುಕೊಳ್ಳೋಣ. ಇವರು ಚುಂಚನಗಿರಿಯ ಮಠಕ್ಕೆ ನಡೆದುಕೊಳ್ಳುವರು. ಈ ಮಠವು ಕಾಪಾಲಿಕ ಸಂಪ್ರದಾಯಕ್ಕೆ ಸೇರಿದುದು. ಈ ಒಕ್ಕಲಿಗರ ಕುಲದಲ್ಲಿ ಅನೇಕರು ಲಿಂಗವನ್ನು ಕಟ್ಟಿಕೊಂಡು ಪಾದೋದಕ ಪ್ರಸಾದಗಳನ್ನು ಗ್ರಹಿಸುವರು. ಇಂತಹವರೂ ಕೂಡ ಬೆಳಗೆದ್ದು ಕೈಕಾಲು ಮುಖ ತೊಳೆದುಕೊಂಡ ಕೂಡಲೆ ಮೂಡಲಿಗೆ ತಿರುಗಿ ನೇಸರಿಗೆ ಕೈಮುಗಿದು—ಕೆಲವರು ಪ್ರದಕ್ಷಿಣ ನಮಸ್ಕಾರವನ್ನೂ ಮಾಡುತ್ತಾರೆ—"ನಮ್ಮಪ್ಪ! ನೀನೇ ಗತಿ!" ಎನ್ನುತ್ತಾರೆ. ಆಗ ಅವರ ಹೃದಯದಲ್ಲಿ, "ನಮ್ಮ ಬುದ್ಧಿಯ ವೃತ್ತಿಗಳನ್ನು ಪ್ರಚೋದಿಸುವ ಆ ಪವಿತ್ರ ದೇವನ ಪೂಜ್ಯವಾದ ತೇಜಸ್ಸನ್ನು ಧ್ಯಾನಿಸುವೆವು" ಎಂಬ ವಿಶ್ವಾಮಿತ್ರ ಗಾಯತ್ರಿಯ ಗಂಭೀರವಾದ ಅರ್ಥವು ಭಾಸವಾಗಿಲ್ಲ; ಆದರೆ ಆ ಅರ್ಥದ ಪರಿಚಯವು ಮಾಡಿಸುವ ಕ್ರಿಯೆಯು ಮಾತ್ರ ನಡೆದಿದೆ. ಹಾಗೆ ಸೂಕ್ಷ್ಮವಾಗಿ ಸೂರ್ಯ ನಮಸ್ಕಾರ ಮಾಡಿದವನು "ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ" ಎಂಬ ಶ್ರುತಿಯನ್ನರಿಯದವನು; ಆದರೂ ಸೂರ್ಯ ವಂದನೆ ಮಾಡುತ್ತಾನೆ. ಈ ಕ್ರಿಯೆಯೂ ಗಾಯತ್ರೀ ಜಪದಲ್ಲಿ ನಡೆಯುವ ಕ್ರಿಯೆಯೂ ಸಜಾತೀಯವಲ್ಲವೆ?[16]

ಇನ್ನೊಂದು ಉದಾಹರಣೆ ತೆಗೆದುಕೊಳ್ಳೋಣ: ನಮ್ಮ ಪ್ರಜೆಗಳಲ್ಲಿ—ಬಲು ಕೀಳು ಜಾತಿಯವರನ್ನು ಬಿಟ್ಟು (ಅವರಲ್ಲಿಯೂ ಶೌಚಾಚಾರಗಳುಳ್ಳವರು ಇದ್ದಾರೆ) ಬಹು ಮಂದಿ ಕೈಕಾಲು ತೊಳೆಯದೆ ನೀರು ಕುಡಿಯುವುದಿಲ್ಲ. 'ಮೂರು ನೀರು ತಾರಮ್ಮ' ಎಂದು ಇಲ್ಲಿಂದ ಕೂಗುತ್ತಿದ್ದ ಹಾಗೆಯೇ, ಒಳಗಿನಿಂದ ಹೆಂಗುಸು ಒಂದು ಚೊಂಬು ನೀರನ್ನು ತರುತ್ತಾಳೆ. ಇವನು ಕೈಕಾಲು ತೊಳೆದುಕೊಂಡು ಚೊಂಬು ಈಸಿಕೊಂಡು ಅದನ್ನು ಮೇಲಕ್ಕೆತ್ತಿ ಇಷ್ಟ ದೈವವನ್ನೋ ಗುರುವನ್ನೋ ನೆನೆದು ಆಮೇಲೆ ನೀರು ಕುಡಿಯುತ್ತಾನೆ. (ಇದು ಈಗಿನ ಯುವಕರಿಗೆ ಅನ್ವಯಿಸುವುದಿಲ್ಲ). ಸಂಪ್ರದಾಯ ಪಾಲನದ ಈ ನಿಷ್ಠುರತೆಯನ್ನು ಶೀಲ ಸಂಪನ್ನರಾದ ವೈದಿಕರ ಪದ್ಧತಿಯೊಡನೆ ಹೋಲಿಸಿ ನೋಡಿರಿ; ಅಂತಹವರು ಮೈಲಿಗೆಯಲ್ಲಿ ನೀರು ಕುಡಿಯುವುದಿಲ್ಲ; ಅಷ್ಟೇ ಅಲ್ಲ; ಕೈ ಕಾಲು ತೊಳೆದುಕೊಂಡು ಮಡಿಯುಟ್ಟು ಶುದ್ಧಾಚಮನ

15 *Vide—The Mysore Census Report*, **1931, Section 349.**

16 ಬ್ರಾಹ್ಮಣರು ಅಬ್ರಾಹ್ಮಣರಿಗೆ ಪೌರೋಹಿತ್ಯ ಮಾಡಿಸುವೆಡೆಗಳಲ್ಲಿ ವೇದ ಮಂತ್ರಗಳನ್ನು ಹೇಳುವುದಕ್ಕೆ ಬದಲು ಅವುಗಳ ಅರ್ಥವನ್ನು ಸಂಸ್ಕೃತದ ಶ್ಲೋಕಗಳಾಗಿ ಮಾಡಿ ಹೇಳುವುದನ್ನು ಹೋಲಿಸಿರಿ.

ಮಾಡುವ ವರೆಗೂ ನೀರು ಕುಡಿಯುವುದಿಲ್ಲ. ಇಲ್ಲಿ ಬ್ರಾಹ್ಮಣರು ಸಮಂತ್ರಕವಾಗಿ ಮಾಡಿದ ಆಚಮನ ಕ್ರಿಯೆಯೂ, ಅಲ್ಲಿ ರೈತನು ಅಮಂತ್ರಕವಾಗಿ ಮಾಡಿದ ಗುರು ದೈವ ಸ್ಮರಣೆಯೂ ಒಂದೇ ಜಾತಿಯಲ್ಲವೆ?

ಪ್ರಾರಬ್ಧದ ವಿಷಯವಾಗಿ ಒಂದು ಉದಾಹರಣೆಯನ್ನು ನೋಡೋಣ: ಲಾಭದಲ್ಲಿ ಸುಖ, ನಾಶದಲ್ಲಿ ದುಃಖ ಎಂಬುದಂತೂ ಹೇಗೆ ಹೇಗೂ ದಿಟವಷ್ಟೆ! ಸುಖದಲ್ಲಿರುವುದಕ್ಕಿಂತಲೂ ದುಃಖದಲ್ಲಿರುವಾಗ ಮನುಷ್ಯನ ಸಂಸ್ಕೃತಿಯ ಸೊಬಗು ಚೆನ್ನಾಗಿ ವ್ಯಕ್ತವಾಗುವುದು. ಅದರಿಂದ ನಾಶದ ದುಃಖವನ್ನು ವಿಚಾರಿಸೋಣ. ನಮ್ಮ ದೇಶದಲ್ಲಿ ಯಾರೇ ಆಗಲಿ, ದುಃಖವನ್ನು ತನ್ನ ತನ್ನ ಕರ್ಮದ ಫಲವೆಂದು, ಹಣೆಯ ಬರೆಹವೆಂದು, ತಿಳಿದಿದ್ದಾರೆಯೇ ಹೊರತು ಅನ್ಯಥಾ ಇಲ್ಲ. ಆವೇಗದಲ್ಲಿ ಆಹತವಾದ ಮನಸ್ಸು ಸಣ್ಣದಾಗಿ ತನ್ನ ದುಃಖದ ಕಾರಣವನ್ನು ಇತರರ ಮಡಲಿಗೆ ಕಟ್ಟಿದರೂ, ತನ್ನ ದುಃಖಕ್ಕೆ ಇತರರು ಕಾರಣವೆಂದು ನಿಂದಿಸಿದರೂ, ಕೂಡಲೆ ಪರೋಪದೇಶದಿಂದಲಾದರೂ ಆ ಸಣ್ಣತನವಳಿಯುತ್ತದೆ; ಮನವು ತಟ್ಟನೆ ತಿಳಿಯಾಗಿ, "ಇದು ಹಣೆಯ ಬರೆಹ, ನಾನು ಮಾಡಿದ ಕರ್ಮ, ಬ್ರಹ್ಮ ಬರೆದ ಬರೆಹ" ಎಂದುಕೊಂಡು ಶಾಂತವಾಗುತ್ತದೆ. ವೇದಾಂತವನ್ನೋದಿ, ದೇಹಾತ್ಮ ವಾದವನ್ನು ನಿರಾಕರಿಸಿ, ಚೆಚ್ಚುಡ ವಿವೇಕದಿಂದ ಲೋಭವನ್ನಳಿಯಿಸಿ, ನಾಶದ ಉದ್ವೇಗವನ್ನು ನುಂಗುವಂತಹ ಚಿತ್ತ ಶಾಂತಿಯನ್ನು ಪಡೆದವರು ಮಾಡುವುದಿನ್ನೇನು? ವಿದ್ವದ್ವರೇಣ್ಯನು ದುಃಖಾತೀತನಾಗಿ ಶಮವನ್ನೇ ಸ್ಥಾಯಿಯಾಗಿಟ್ಟುಕೊಂಡಿದ್ದು ನಿರ್ವಿಷಣ್ಣನಾಗಿರಬಹುದು. ಅದು ಅಭ್ಯಾಸ ಬಲದಿಂದ, ಸಾಧನೆಯ ಆಧಿಕ್ಯದಿಂದ ಸಂಪಾದಿಸಿದ ಕೊನೆಯ ಅಂತಸ್ತಿನ ಸತ್ವಾತಿಶಯ. ಆದರೆ ಅದರ ಮೊದಲಿರುವುದೆಲ್ಲಿ? ದುಃಖೋದ್ವಿಗ್ನನಾಗಿ, ದುಃಖವು ತರಂಗ ತರಂಗವಾಗಿ ಎದ್ದೆದ್ದು ಮನಸ್ಸನ್ನು ಮುಳು ಮುಳುಗಿಸಿದಾಗ, ಆ ಒತ್ತುವ ದುಃಖವನ್ನು ಅತ್ತೊತ್ತಿ ಅದರ ಗಂಡನಾಗುವುದರಲ್ಲಿ ಅಲ್ಲವೆ? ಅಂತಹ ಶಾಂತಿಯಲ್ಲಿ ಕೊನೆಗಾಣುವ ಮೊದಲನೆಯ ಅಂಕುರಾವಸ್ಥೆಯು "ಹಣೆಯ ಬರೆಹ"ವೆಂದು ಸುಮ್ಮನಾಗುವುದರಲ್ಲಿ ಇಲ್ಲವೆ?*

ಈ ಮಾತನಾಡುವವರೆಲ್ಲ ಹಣೆ ಬರೆಹವೆಂಬ ನುಡಿಯಲ್ಲಿ ಅಡಕವಾಗಿರುವ ಅದ್ಭುತ ವಿಚಾರ ಪ್ರಪಂಚವನ್ನು ಅರಿತು ಆಡುವುದಿಲ್ಲ; ನಿಜ, ಆದರೆ ಅದು ಮೇಲೆ ಹೇಳಿದಂತೆ ಸತ್ವಾತಿಶಯದಲ್ಲಿ ಪ್ರಾಪ್ತವಾಗುವ ಉಪಶಮಾವಸ್ಥೆಯ ಅಂಕುರವಲ್ಲವೇನು? ಉಪಶಮದ ಸಜಾತೀಯತೆ ಇಲ್ಲಿ ಇಲ್ಲವೇನು?

---

* ಈ ಕರ್ಮ ವಿಪಾಕ ವಾದವು ನಮ್ಮ ಅವನತಿಯ ಕಾರಣವೆನ್ನುವ ಪ್ರಜ್ಞಾವಾದಿಗಳೂ ಇದ್ದಾರೆ. ಅವರು ನಮ್ಮ ಸಾಮಾನ್ಯ ಪ್ರಜೆಗಳ ಸಹ ನುಡಿಗಳನ್ನು ನೋಡದೆ ಹೇಳುವ ಮಾತಿದು. ಹೆಣ್ಣು ಮಕ್ಕಳು "ಹಿಂದೆ ಮಲ್ಲಿಗೆ ಸಂಪಗೆ ಪೂಜೆ ಮಾಡಿದ ಫಲವಾಗಿ ಈ ಸೌಭಾಗ್ಯವೆಲ್ಲ ಬಂದಿದೆ; ನಾವು ಮಾಡಲಿಲ್ಲ, ನಮಗೆ ಬರಲಿಲ್ಲ. ಈಗಲಾದರೂ ಒಂದೆರಡು ಒಳ್ಳೆಯ ಹೂವಾದರೂ ಪೂಜೆ ಮಾಡೋಣ; ಮುಂದಕ್ಕಾದರೂ ಒಳ್ಳೆಯದಾಗಲಿ" ಎನ್ನುತ್ತಾರೆ. ಈ ಕರ್ಮ ವಿಪಾಕ ವಾದವು ಜನ್ಮಾಂತರವುಂಟೆಂದು ಅಂಗೀಕರಿಸದೆ, ಮುಂದಕ್ಕೂ ಈ ಜನ್ಮಕ್ಕೂ ಗಂಟು ಹಾಕಿ ತೋರಿಸದೆ ಇದ್ದಿದ್ದರೆ ಅಪರಾಧಿಯಾಗುತ್ತಿದ್ದಿತು ನಿಜ. ಆದರೆ, ಈಗ ಅನುಭವಿಸಬೇಕಾದ ದುಃಖದಲ್ಲಿ ಶಾಂತಿಯನ್ನು ತಂದಿತ್ತು, ಮುಂದೆ ದುಃಖ ಬರದಂತೆ ಮಾಡಿಕೊಳ್ಳುವುದು ನಮ್ಮ ಕೈಯಲ್ಲಿದೆ ಎಂದು ಹೇಳುವ ಈ ವಾದದಿಂದ ಅದೇನ ಅಪರಾಧವೊ ದೈವವೇ ಬಲ್ಲುದು.

ಇದು ನಮ್ಮ ಕರ್ಣಾಟಕದ ಸಂಸ್ಕೃತಿಯ ಸೊಬಗು. ಇದನ್ನು ಹೇಗೆ ಇದು ಸಾಧಿಸಿತು ಎಂಬ ವಿಚಾರಕ್ಕೆ ಆಮೇಲೆ ಕೈಯಿಕ್ಕೋಣ. ಅಂತು, ಈಗಿರುವಂತೆ ಈ ಸಂಸ್ಕೃತಿಯು ಮೇಲಿನಿಂದ ಕೆಳಗಿನ ವರೆಗೆ ಇರುವ ಎಲ್ಲರನ್ನೂ ಒಂದೇ ಕಂಬಚ್ಚಿಗೆ ಹಾಕಿ ಒಂದೇ ಗುರಿಗೆ ಎಳೆಯುತ್ತಿದೆ. ಈ ಸಂಸ್ಕೃತಿಗೆ ಸಿಕ್ಕಿರುವವರೆಲ್ಲರೂ ಒಂದೇ ಅಚ್ಚಿನಲ್ಲಿ ಬಿದ್ದು ಒಂದೇ ಜಾತಿಯ ತಂತಿಯಾಗುವುದಕ್ಕೆ ಸಿದ್ಧವಾಗುತ್ತಿರುವ ಒಂದೇ ಲೋಹದ ತುಂಡುಗಳು.[17]

ಹಾಗಾದರೆ ಈ ಸಂಸ್ಕೃತಿಯೇನು? ಈ ಸಂಸ್ಕೃತಿಯೆಂದರೇನು? ಎಂಬ ಪ್ರಶ್ನೆಯನ್ನು ಇಲ್ಲಿ ವಿಸ್ತಾರವಾಗಿ ಚರ್ಚಿಸುವುದು ಆವಶ್ಯಕ. ಸಂಸ್ಕೃತಿಯೆಂಬುದು ಮಾನವನಿಗೂ ಮೃಗಕ್ಕೂ ಇರುವ ಅಂತರವನ್ನು ತೋರಿಸಿಕೊಡುವ ಅಂತಸ್ಸತ್ತ್ವ. ಹೊರಗಿನ ವಿಷಯಾದಿಗಳ ಸೆಳೆತಕ್ಕೆ ಸಿಕ್ಕಿದ ಇಂದ್ರಿಯಗಳ ವೃತ್ತಿಗೆ ಅಧೀನವಾಗಿ ನಡೆಯುವುದು ಮೃಗವೃತ್ತಿಯೆಂದೂ ಜೀವನದಲ್ಲಿ ಗುರಿಯೊಂದುಂಟು ಎಂದುಕೊಂಡು ಹೊರಗಿನ ಸೆಳೆತತುಳಿತಗಳನ್ನೆಲ್ಲ ತಡೆದುಕೊಂಡು ತನ್ನ ಕಾರ್ಯಗಳನ್ನೆಲ್ಲ ಆ ಗುರಿಯ ಕಡೆಗೆ ತಿರುಗಿಸಿಕೊಂಡು, ಹಜ್ಜೆಹಜ್ಜೆಗೂ ಆ ಗುರಿಯ ಬಳಿ ಸಾರಬೇಕು ಎಂಬ ಉದ್ದೇಶದಿಂದ ಬದುಕುವುದು ಮಾನವ ವೃತ್ತಿಯೆಂದೂ ಒಪ್ಪಿಕೊಂಡರೆ, ಆಗ ಆ ಮಾನವನ ಕಾರ್ಯ ಪ್ರಪಂಚದಲ್ಲಿ ಕಾಣಬರುವ ಮನಸ್ಸಿನ ಬೆಳೆವಣಿಗೆಯನ್ನು, ಅಥವಾ ಬೆಳೆದ ಮನಸ್ಸಿನ ಸ್ಥಿತಿಯನ್ನು ತೋರಿಸುವ ಭಾವವೇ ಸಂಸ್ಕೃತಿಯೆನ್ನಬಹುದು. ಆಚಾರ ಸಂಪ್ರದಾಯಗಳಿಂದ, ದೈನಂದಿನದ ಕ್ರಿಯಾ ಕರ್ಮ ಕಲಾಪಗಳಿಂದ, ಆಶೋತ್ತರಗಳಿಂದ, ಬಾಳಿನ ಏಳು ಬೀಳುಗಳಿಂದ, ಈ ಸಂಸ್ಕೃತಿಯ ಬಣ್ಣದಲ್ಲಿ ಏರು ಜಾರುಗಳು ಆಗುವುದುಂಟು. ಆದರೂ ಸಂಸ್ಕೃತಿಯ ಜಾತಿಯೂ ಸ್ವಭಾವವೂ ಬದಲಾಯಿಸುವುದಿಲ್ಲ.

ಹಿಂದಿನ ಒಂದು ದಂತಕಥೆಯನ್ನು ತೆಗೆದುಕೊಳ್ಳೋಣ: ಚೋಳರಾಜನೊಬ್ಬನು ಒಬ್ಬ ಕವಿಗೆ ಅಪರಾಧ ಮಾಡಿ ಆತನ ಶಾಪವನ್ನು ಪಡೆದು ರಾಜ್ಯಾದಿಗಳನ್ನು ಕಳೆದುಕೊಂಡನು. ಸರ್ವಸ್ವವನ್ನೂ ನೀಗಿಕೊಂಡು ತಿರುಕನಾದ ಅರಸನು ಒಂದು ಇರುಳು, ಮಳೆಯಿಂದಾದ ಕೊರಕಲಿನಲ್ಲಿ ಬಿದ್ದುಹೋದನು. ಹಾಗೆ ಬಿದ್ದು ನೊಂದ ಅರಸನು, "ಛೀ! ಕವಳಕ್ಕೆ ಹೋದರೂ ಕೈದೀವಿಗೆ ಹಿಡಿಸಿಕೊಂಡಿರಬೇಕು" ಎಂದುಕೊಂಡನಂತೆ! ಆ ಮಾತಿನಲ್ಲಿ ಒಡೆದು ಕಾಣುವ ಮನಸ್ಸಿನ ವಿಕಾಸವು ಸಂಸ್ಕೃತಿ. ಅವನು ರಾಜ ಪದವಿಯನ್ನು ಅನುಭವಿಸಿದಾಗ ಅವನ ಮನಸ್ಸು ಕೆಲವು ಅನುಭವಗಳನ್ನು ಪಡೆದಿದೆ. ಆಯಾ ಅನುಭವಗಳು ಆ ಮನಸ್ಸನ್ನು ಒಂದು ರೀತಿಯಲ್ಲಿ ಪಕ್ವಮಾಡಿ

17 "There has ever been an attempt to govern the folk customs, popular faith, image worship and public festivals by the transcendental conceptions of the divinity of man and the transitoriness of this world. The folklore of the Hindus is nothing but the adaptations of their metaphysical culture lore to the instincts and aptitudes of 'the man in the street', or obversely, the interpretation of the grosser systems of thought and activity with the conceptions of a higher system of life-values and life-attitudes."

*The Folk Element in Hindu Culture*, by B. K. Sarkar, page X.

ಒಂದು ತೆರನಾಗಿ ಬೆಳೆಸಿವೆ. ಹಾಗೆ ಬೆಳೆದ ಮನಸ್ಸಿನ ಆ ವಿಪಾಕವುಂಟಲ್ಲವೆ? ಅದು ಸಂಸ್ಕೃತಿ. ಐಶ್ವರ್ಯವಂತನು ಬೇಡವೆಂದು ಬಿಟ್ಟಿದ್ದರೂ ಅವನ ಉಡುಗೆ ತೊಡುಗೆ, ಊಟ ಉಪಚಾರ, ನಡೆ ನುಡಿಗಳಲ್ಲಿ ಕಾಣಬರುವ ಶ್ರೀಮಂತತನದ ವೈಭವದಂತೆ; ಪ್ರದರ್ಶನದ ಇಷ್ಟವಿಲ್ಲದಿದ್ದರೂ ಅವನು ಮಾಡುವ ಕಾರ್ಯಕಲಾಪಗಳಲ್ಲೆಲ್ಲ ಕಾಣಿಸಿಕೊಳ್ಳುವ ಬಲಶಾಲಿಯ ಬಲದಂತೆ; ಹಾಲಿನಲ್ಲಿರುವ ಬೆಣ್ಣೆಯಂತೆ; ಮಾನವನ ಅಂತಃಕರಣದಲ್ಲಿದ್ದು ಚಿತ್ತವೃತ್ತಿಯನ್ನೂ ಬುದ್ಧಿವ್ಯಾಪಾರವನ್ನೂ ರೂಪುಗೊಳಿಸುವ ಅಂತಸ್ಸತ್ತ್ವ ಉಂಟಲ್ಲವೆ? ಅದು ಸಂಸ್ಕೃತಿ. ಇದೇ ಸಾಂಖ್ಯದ ಗುಣ, ಯೋಗಿಗಳ ವಾಸನೆ, ಕರ್ಮಠರ ಪುಣ್ಯ, ವೇದಾಂತಿಗಳ ಕರ್ಮವಿಪಾಕ.

ಈ ಸಂಸ್ಕೃತಿಯು, ಕಲಿತ ವಿದ್ಯೆಯ ಪ್ರಭಾವವೆನ್ನುವುದಕ್ಕಿಂತಲೂ ಅರಗಿದ ವಿದ್ಯೆಯ ಪರಿಣಾಮವೆನ್ನುವುದು ಸರಿ. ವ್ಯಾಸರಾಯರು ಶಿಷ್ಯರನ್ನೂ ಕನಕನನ್ನೂ ಕರೆದು ದೇವರಿಗೆ ನಿವೇದನವಾಗಿದ್ದ ಬಾಳೆಯ ಹಣ್ಣು ಒಂದೊಂದನ್ನು ಕೊಟ್ಟು, "ಯಾರೂ ಇಲ್ಲದೆಡೆ ತಿಂದು ಬನ್ನಿ" ಎಂದು ಅಪ್ಪಣೆ ಮಾಡಿದರಂತೆ! ಪಂಡಿತ ಶಿಷ್ಯರು ಅನೇಕರು ತಮಗೆ ತೋರಿದಂತೆ ಏಕಾಂತದಲ್ಲಿ ತಿಂದು ಬಂದರು. ಕನಕನಿಗೆ ಮಾತ್ರ ಎಲ್ಲೆಲ್ಲಿ ಹೋದರೂ ಗುರುಗಳೂ ಕೃಷ್ಣನೂ ಇದ್ದೇ ಇರುವುದು ಕಂಡುಬರುತ್ತಿದ್ದು, ಯಾರೂ ಇಲ್ಲದ ಎಡೆಯೇ ಈ ಲೋಕದಲ್ಲಿ ಇಲ್ಲದೆ, ಆತನು ಆ ಹಣ್ಣನ್ನು ತಿನ್ನದೆ ಹಿಂದಕ್ಕೆ ತಂದನಂತೆ! ಶಿಷ್ಯರದು ಪಾಂಡಿತ್ಯ, ಕನಕನದು ಸಂಸ್ಕೃತಿ. ಹೀಗೆ ನಡೆ ನುಡಿಗಳಲ್ಲಿ ಸಂದು ಬಿಡದಂತೆ ಎರಡನ್ನೂ ಒಂದಾಗಿ ಬೆಸೆಯುವ ಮನಃಪರಿಣಾಮವು ಸಂಸ್ಕೃತಿ. ವಿಚಾರವನ್ನೂ ಆಚಾರವನ್ನೂ ಬೇರೆ ಬೇರೆಯೆಂದು ವಿಭಾಗಿಸಿಡುವ ಮನಸ್ಸಿನ ಕಾರ್ಯವು ಸಂಸ್ಕೃತಿಯಲ್ಲ. ಆಚಾರದಲ್ಲಿ ಕಂಡುಬರುವ, ಅಂತರ್ಗತವಾಗಿರುವ, ಲೀನವಾಗಿರುವ, ಅಥವಾ ಆಚಾರವಾಗಿ ಪರಿಣಮಿಸಿರುವ ವಿಚಾರವೆನ್ನಿರಿ. ವಿಚಾರವು ಬೀಜ, ಆಚಾರವು ಅದರ ವಿಕಾರವಾದ ವೃಕ್ಷವೆಂಬುವ ದೃಷ್ಟಿಯಿಂದ ನೋಡುವಾಗ ಕಾಣುವ, ಕುಲಕ್ರಮಗತವಾದ, ಪರಂಪರಾಪ್ರಾಪ್ತವಾದ ಆಚಾರದ ಹಿಂದಿರುವ ಮನಸ್ಸಿನ ಪಕ್ವಭಾವವಿದೆನ್ನಬಹುದು. ಪಾಂಡಿತ್ಯವೂ ಸಂಸ್ಕೃತಿಯೂ ಪರಸ್ಪರೋಪಕಾರಕಗಳು; ಒಂದು, ಮಳೆಯಂತೆ ಮೇಲಿನಿಂದ ಇಳಿದುದು; ಇನ್ನೊಂದು, ಬುಗ್ಗೆಯಂತೆ ಒಳಗಿನಿಂದ ಚಿಮ್ಮಿ ಮೇಲಕ್ಕೆ ಬಂದುದು. ನಮ್ಮ ಪಂಡಿತರೂ ಪೂರ್ವಾಚಾರಗಳ ಕಟ್ಟುನಿಟ್ಟುಗಳನ್ನು ಗೌರವಿಸುವುದು ಇದಕ್ಕಾಗಿ.

ಪಂಡಿತರ ವಿಚಾರಗಳು ಆಗಾಗ ಹೊಸ ಹೊಸ ಬೆಳಕನ್ನು ಬೀರಿ, ಹಳೆಯ ಆಚಾರಗಳನ್ನು ತಿರಸ್ಕರಿಸಿ ಸ್ವಾತಂತ್ರ್ಯದಾಹವನ್ನೆಬ್ಬಿಸಿವೆ. ಆದರೆ ಆ ಹೊಸ ಬೆಳಕೂ ಸ್ಥೂಣಾನಿಖನನ ನ್ಯಾಯದಂತೆ, ಎಂದರೆ ಕಂಭವನ್ನು ಅಲ್ಲಾಡಿಸಿ ಅಲ್ಲಾಡಿಸಿ ದೃಢಪಡಿಸಿದಂತೆ, ಈ ಸಂಸ್ಕೃತಿಯ ಪೋಷಣೆಗೇ ಸಹಾಯಕಾರಿಯಾಗಿದೆ. ಅಲ್ಲದೆ, ಆಚಾರ ವಿಚಾರ ಸಾಮರಸ್ಯವಿದ್ದವನು ಜನತೆಯ ಮನಸ್ಸನ್ನು ಸಂಗ್ರಹಿಸಿದಂತೆ ತದ್ವಿಪರೀತನಾದವನು ಹಿಡಿದಿಲ್ಲ. ನಡೆಯ ಬೆಂಬಲವಿಲ್ಲದ ನುಡಿಯು ಬೆಡಗಿಗೆ. ಅಲ್ಲಲ್ಲಿ ಆಗಾಗ ಜನವು ಸೋತಿದ್ದರೂ ಆ ಸೋಲು ಶಾಶ್ವತವಾಗಿಲ್ಲ. ಮತ್ತೆ ಮೊದಲಿನ ತನ್ನ

ಹಾದಿಗೇ ಜನತೆಯು ಹಿಂದಿರುಗಿ ಬರುತ್ತದೆ. ಆದರಿಂದ ಅಚ್ಚುಕಟ್ಟು ಕೆಟ್ಟಿಲ್ಲ, ಕೆಚ್ಚು ಅಳಿದಿಲ್ಲ.

ಈ ಅಚ್ಚುಕಟ್ಟನ್ನು ಕಾಯ್ದು ಬಂದುದು ಜನದ ಹೃದಯದಲ್ಲಿ ನೆಲಸಿರುವ ಆಸ್ತಿಕ ಭಾವನೆ, ಕುಲದ ಕಟ್ಟುಪಾಡುಗಳ ವ್ಯವಸ್ಥೆ, ಅರಮನೆ ಗುರುಮನೆಗಳ ಗೌರವ—ಇವುಗಳು. ಒಂದೊಂದು ವೇಳೆ ಅರಮನೆ ಗುರುಮನೆಗಳ ಗೌರವವು ಕಾರಣಾಂತರಗಳಿಂದ ಶಿಥಿಲವಾಗಿರುವುದುಂಟು; ಆದರೂ ಜನತೆಯ ಸಂಸ್ಕೃತಿಯು ಅಳಿಯಲಿಲ್ಲ. ವ್ಯಕ್ತಿಯನ್ನು ಅವನ ಹೃದಯದ ಭಾವನೆಯೂ, ಕುಲವನ್ನು ಕುಲ ವ್ಯವಸ್ಥೆಯೂ ಕಾಪಾಡಿಕೊಂಡು ಬಂದಿವೆ. ಭಿನ್ನ ಭಿನ್ನ ಜಾತಿ ಮತಗಳ ಆಚಾರ್ಯರು ಹುಟ್ಟಿ ತಮ್ಮ ಪ್ರಭಾವವನ್ನು ಪಸರಿಸಿದ್ದರೂ ಜನತೆಯು ಅವರವರ ಉಪದೇಶದಲ್ಲಿದ್ದ ಶ್ರೇಯಸ್ಸು ಶ್ರೇಯಸ್ಸಾಧನೆಗಳಿಗೆ ಒಲಿದು ಅವನ್ನು ಹಿಡಿಯಿತು. ಆದರಿಂದ ಭಿನ್ನ ಭಿನ್ನ ಜಾತಿಗಳಾಗಿದ್ದರೂ, ಹಿಡಿತುಂಬ ಮಾತ್ರ ಇರುವ ಜನದಲ್ಲಿ ನೂರಾರು ಜಾತಿ ಪಂಥಗಳಾದರೂ, ಜನತೆಯ ಸಂಸ್ಕೃತಿಯ ಏಕಜಾತೀಯತೆಯು ಅಳಿಯಲಿಲ್ಲ; ನಾಸ್ತಿಕರ ಉಪದೇಶ ನಿಲ್ಲಲಿಲ್ಲ. ನಿಂತು ನೆಲಸಿದ ಉಪದೇಶಗಳ ಗುರಿಯೆಲ್ಲವೂ ಶ್ರೇಯಸ್ಸು. ಆದರಿಂದ ಬಂದ ಹೋದವರೆಲ್ಲರೂ ಒಬ್ಬರೊಬ್ಬರಿಗೆ ವಿಮುಖರೇ ಆಗಿದ್ದರೂ, ಅವರೆಲ್ಲರ ಉಪದೇಶದಿಂದಲೂ ಸಂಸ್ಕೃತಿಯ ವೃಕ್ಷವು ಬೆಳೆಯುತ್ತಲೇ ಬಂದಿತು. ಅವರೆಲ್ಲರೂ ಪರಸ್ಪರ ವಿಮುಖಗಳಾದ ಶಾಖೋಪಶಾಖೆಗಳು ತಾವು ಬೆಳೆಯುತ್ತ ಮರವನ್ನೂ ಬೆಳೆಸುವಂತೆ ಸಂಸ್ಕೃತಿಯನ್ನು ಬೆಳೆಯಿಸುತ್ತಲೇ ಬಂದರು.[18]

ಈ ಸಂಸ್ಕೃತಿಯು ತಾಳಿಂದ ತುದಿಯ ವರೆಗೂ ಆಸ್ತಿಕವಾದುದು; ಧರ್ಮ, ಕರ್ಮ, ಜೀವ, ಬ್ರಹ್ಮ, ಜನ್ಮ ಸಂಸ್ಕಾರಗಳನ್ನು ಅಂಗೀಕರಿಸಿರುವುದು; ಇಹದಲ್ಲಿ ಋಣಗಳನ್ನೂ, ಪರದಲ್ಲಿ ಲೋಕಾಂತರಗಳನ್ನೂ ಒಪ್ಪಿರುವುದು; ಬಾಳು ಈಗ ಬೇಕಾದ ಹಾಗೆ ಎದ್ದು ಬಿದ್ದರೂ ಕೊನೆಗೆ ಎಂದಾದರೊಂದು ದಿನ ಆನಂದದಲ್ಲಿ ಮುಗಿಯುವುದು ಎಂಬುದನ್ನು ನಂಬಿರುವುದು. ಒಟ್ಟಿನಲ್ಲಿ, ಒಂದೇ ಮಾತಿನಲ್ಲಿ ಹೇಳಬೇಕೆಂದರೆ, ಶ್ರೇಯಃ ಪ್ರೇಯೋ ವಿಭಾಗವನ್ನು ಸ್ವೀಕರಿಸಿ, ಪ್ರೇಯಕ್ಕಿಂತ ಶ್ರೇಯವು ಹೆಚ್ಚೆಂದು ಮನೋವಾಕ್ಕಾಯಗಳಲ್ಲಿಯೂ ನಂಬಿರುವುದು ಈ ಸಂಸ್ಕೃತಿಯ ಮುಖ್ಯ ಲಕ್ಷಣ; ಇಲ್ಲಿ ವೈದಿಕ ಸಂಸ್ಕೃತಿಗೂ ಇದಕ್ಕೂ ಇರುವ ಪ್ರಬಲ ಸಾದೃಶ್ಯ.

ಇದಿಷ್ಟೇ ಆಗಿದ್ದರೆ, ಇದರಲ್ಲೇನು ಅತಿಶಯ? ಎನ್ನಬಹುದಾಗಿದ್ದಿತು. ಆದರೆ ವಾಸ್ತವ್ಯ ಸ್ಥಿತಿಯನ್ನು ನೋಡಿದರೆ ಹಾಗೆನ್ನುವಂತಿಲ್ಲ. ಈಗ ಕರ್ಣಾಟಕದಲ್ಲಿರುವ ಜನರ ನಡೆ ನುಡಿಗಳಿಗೂ ವೇದದ ಕಾಲದಲ್ಲಿದ್ದ ಜನತೆಯ ನಡೆ ನುಡಿಗಳಿಗೂ ಸಾಮ್ಯ ಇದೆ. ಕೆಲವೆಡೆಗಳಲ್ಲಿ ಸಾಮ್ಯವು ಪ್ರಕಟವಾಗಿ ತೋರಿಬರುತ್ತದೆ; ಕೆಲವೆಡೆ ಕೊಂಚ

18 "Southern Hinduism grows by induction, *i.e.* by opposing and as the result of conscious movements against the alien cult and culture. Northern Hindu Culture on the other hand, grows by conduction, *i.e.* by receiving and assimilating and as the result of more or less conscious adaptation to the new ideals."
*The Folk Element in Hindu Culture*, by B. K. Sarkar, page X.

ವ್ಯತ್ಯಾಸ ಹೊಂದಿದ್ದು ಅಲ್ಲಿ ಸಾಮ್ಯವನ್ನು ಹುಡುಕಬೇಕಾಗುತ್ತದೆ. ಆದರೂ ಸಾಮ್ಯವಿದೆಯೆಂಬುದರಲ್ಲಿ ಮಾತ್ರ ಸಂದೇಹವಿಲ್ಲ. ಉದಾಹರಣೆಗೆ, ಸಾಮಾನ್ಯವಾಗಿ ನಮ್ಮ ಕಣ್ಣಿಗೆ ಬೀಳದ ಮಕ್ಕಳಾಟವನ್ನು ತೆಗೆದುಕೊಳ್ಳೋಣ. ಹಿರಿಯ ಮಗು ವೊಂದು ಎಳೆಯ ಮಗುವಿನ ಕೈಯ ಹಿಡಿದುಕೊಂಡು, "ಸಾರಿಸಿ, ಗುಡಿಸಿ, ರಂಗೋಲೆ ಹಾಕಿ, ಅಗ್ರದ ಬಾಳೆಲೆ ಹಾಕಿ, ಎಲ್ಲ ಬಡಿಸಿ, ಜೊಯ್ಯ್ ಎಂತ ತುಪ್ಪ ಸುರಿದರೆ. . . . ಅತ್ತೇ ಮನೆಗೆ ಹೋಗೋ ದಾರಿಯೆಲ್ಲಿಯೆಲ್ಲಿ ಅಂತ ಓಡಿತು" ಎಂದು 'ಕಚ್ಚಗುಳಿ' ಆಡಿಸಿ, ಆಟವನ್ನು ಮುಗಿಸುತ್ತದೆ. ಈ "ಸಾರಿಸಿ ಗುಡಿಸಿ" ಆಟದಲ್ಲಿ, ಬೆಳಗೆದ್ದು ಮನೆ ಬಾಗಿ ಲನ್ನು ಗುಡಿಸಿ ಸಾರಿಸುವ ತಾಯ ವರ್ತನವನ್ನು ಮಗುವು ಅನುಕರಿಸುತ್ತಿದೆಯೆಂದರೆ ಸುಲಭವಾಗಿ ಒಪ್ಪುವುದು ಸಾಧ್ಯ. ಆದರೆ ಅದರಿಂದ ಆಚೆಗೆ ಹೋಗಿ, ಆ ಆಟದಲ್ಲಿ, ಅಗ್ನಿಕಾರ್ಯಕ್ಕಾಗಿ ಕುಳಿತ ವಟುವು ಆಚರಿಸುವ, ನೆಲವನ್ನು ಗುಡಿಸುವುದು, ನೀರು ಚೆಲ್ಲುವುದು, ದರ್ಭೆಯಿಡುವುದು, ಅಗ್ನಿಯನ್ನು ಇಟ್ಟು ಪ್ರಜ್ವಾಲಿಸಿ ಜೊಯ್ ಎಂದು ತುಪ್ಪ ಸುರಿಯುವುದು ಮೊದಲಾದ ಕರ್ಮ ಕಲಾಪವನ್ನು ನೋಡಿರೆಂದರೆ ನಂಬುವುದು ಕಷ್ಟವಾದೀತು. ಆದರೆ, ಅದೇ ಮಗುವು ಅದೇ ಮಗುವನ್ನು ಆಡಿಸುವ ಇನ್ನೊಂದು ಆಟವನ್ನು ನೋಡಿರಿ: "ಸ್ವಾದಿಷ್ಟಯ್ಯ ಮಾದಿಷ್ಟಯ್ಯ ಮತ್ತಿಷ್ಟು ತುಪ್ಪ ಹಾಕಯ್ಯಾ ಹಾಕಯ್ಯಾ!" ಎಂದು ಕೆನ್ನೆಗಳನ್ನು ಹಿಡಿದು ಮಗುವನ್ನು ಹಿಂದಕ್ಕೆ ಮುಂದಕ್ಕೆ ಜೂಗಾಡಿಸುವುದು ಉಂಟಲ್ಲವೆ? ಅದರಲ್ಲಿ ಹೇಳುವ ಆ "ಸ್ವಾದಿಷ್ಟಯ್ಯ ಮಾದಿಷ್ಟಯ್ಯ" ಎಂಬುವುದು 'ಸ್ವಾದಿಷ್ಠಯಾ ಮದಿಷ್ಠಯಾ ಪವಸ್ವ ಸೋಮ ಧಾರಯಾ' ಎಂಬುದರ ಆಭಾಸವಲ್ಲವೆ ನೋಡಿರಿ! ಹಾಗೆಯೇ, ಇದರ ಜೊತೆಗೆ ಮಗುವನ್ನು ನಗಿಸಿ ಆಟವನ್ನು ಮುಗಿಸುವುದರಲ್ಲಿ ಅಡಗಿರುವ ಆನಂದವೇ ಕೊನೆ ಯೆಂಬ ತತ್ತ್ವದ ವೈಖರಿಯನ್ನು ನೋಡಿರಿ.

ಇಷ್ಟೇ ಅಲ್ಲ; ನಮ್ಮ ಕರ್ನಾಟಕದ ಈಗಿನ ಹೆಂಗುಸು ಗಂಡುಸರ ಉಡುಗೆ ತೊಡುಗೆಗಳೂ ವೇದದ ಕಾಲದಲ್ಲಿದ್ದವು. ಹಳ್ಳಿಯ ಹೆಂಗುಸರು ಕಟ್ಟುವ ತುರುಬು, ಅವರು ಸೊಪ್ಪು ಸದೆಗಳನ್ನು ತುರುಕಿಕೊಳ್ಳುವುದಕ್ಕಾಗಿ ಒಂದು ಮಗ್ಗುಲಾಗಿ ಕಟ್ಟುವ ಮುಡಿಲು, ಅವರುಡುವ ಸೀರೆ, ನಮ್ಮ ದೇಶದ ಗಂಡುಸರುಡುವ ಧೋತರ ದಟ್ಟಿ, ಕಠಾರಿಕಚ್ಚೆ ಧೋತರ, ಬಣ್ಣದ ತಲೆಸುತ್ತು ಪಾಗುಗಳು—ಇವೆಲ್ಲವೂ ವೇದದ ಕಾಲದವು. ಅಷ್ಟೇ ಅಲ್ಲ; ಹಳೆಯ ಕಾಲದ ತೊಟ್ಟಿಯ ಮನೆಗಳು, ನಮ್ಮ ಮನೆ ಗಳಲ್ಲಿರುವ ಹಳೆಯ ಮಂಚ, ಕಾಲುಮಣೆ, ಮಣೆ, ಚಾಪೆಗಳು ಮುಂತಾದವುಗಳೆಲ್ಲ ಸಾವಿರಾರು ವರ್ಷಗಳ ಕೆಳಗೆ ವೇದಗಳ ಕಾಲದಲ್ಲಿದ್ದ ಜನರು ಉಪಯೋಗಿಸುತ್ತಿದ್ದವು. ನಮ್ಮ ನಡೆನುಡಿಗಳ ಹಿಂದಿನ ಭಾವನೆಗಳು, ಕಥೆಗಳು, ಗಾದೆಗಳು—ಇವೆಲ್ಲಕ್ಕೂ ವೇದದಲ್ಲಿರುವ ಮಾತೃಕೆಗಳನ್ನು ತೆಗೆದಿಡಬಹುದು;[19] ಆ ಕಾರ್ಯವನ್ನು ಆಯಾ ಸಂದರ್ಭಗಳಲ್ಲಿ ಮಾಡೋಣ.

19 'ರಂಗಭೂಮಿ'ಯ ೭ನೆಯ ಸಂಪುಟದ ೬–೭ನೆಯ ಸಂಚಿಕೆಗಳಲ್ಲಿರುವ "ಪ್ರಾಚೀನ ಕಾಲದ ವಸ್ತ್ರ ಭೂಷಣಗಳು", "ಪ್ರಾಚೀನ ಕಾಲದ ಆಸನಾದಿಗಳು" ಎಂಬ ಲೇಖನಗಳನ್ನು ನೋಡಿರಿ.

ಇದಿಷ್ಟನ್ನೂ ವಿಮರ್ಶಿಸಿ ನಾವು ಕರ್ಣಾಟಕ ಸಂಸ್ಕೃತಿಯು ವೈದಿಕ ಸಂಸ್ಕೃತಿಯ ರೂಪಾಂತರ, ಅಥವಾ ಪ್ರತಿಬಿಂಬವೆನ್ನುತ್ತೇವೆ. ಸಂಗೀತದಲ್ಲಿ 'ಮಾರ್ಗ, ದೇಶಿ' ಎಂದು ಎರಡು ಸಂಪ್ರದಾಯಗಳುಂಟು. ಅದರಲ್ಲಿ ಮಾರ್ಗವು ಆದರ್ಶವಾಗಿದ್ದು ಸರ್ವ ಸಂಪ್ರದಾಯ ಮಾತೃಕೆಯಾಗಿರುವುದು; ದೇಶಿಯು ಆಯಾಯ ದೇಶಗಳ ಪರಿಸ್ಥಿತಿಗಳಿಗೆ ಅನುಗುಣವಾಗಿ ಹೊಂದಿಸಿಕೊಂಡಿರುವ ಮಾರ್ಗ. ಈ ದೃಷ್ಟಿಯಿಂದ ವೈದಿಕ ಸಂಸ್ಕೃತಿಯು 'ಮಾರ್ಗ', ಕರ್ಣಾಟಕ ಸಂಸ್ಕೃತಿಯು 'ದೇಶಿ' ಎನ್ನಬಹುದು. ಹೇಗಾದರೂ ಎರಡಕ್ಕೂ ಇರುವ ಆತ್ಮೀಯವಾದ ನಿಕಟ ಸಂಬಂಧವನ್ನು ಮಾತ್ರ ಗ್ರಹಿಸದಿರುವುದು ಸಾಧ್ಯವಿಲ್ಲ.[20]

ದೇವುಡು.

---

---



---

20 cf. "Similar conditions of mind produce similar practices, apart from identity of race, or borrowing ideas and manners" [*Origin of Religions*] Then what about the individuality of a race? (D.)

# * ಕನ್ನಡ ಛಂದಸ್ಸು



ಛಂದಶ್ಶಾಸ್ತ್ರವು ಲೆಕ್ಕಕ್ಕೆ ಮಗ್ಗಿಯಿದ್ದಂತೆ, ಬಡಗಿಯ 'ಮಟ್ಟ'ದಂತೆ, ಪದ್ಯದ ಬಾಹ್ಯಸ್ವರೂಪವನ್ನಳೆಯುವ ಒಂದು ಅಳತೆಯ ಕೋಲೆಂದರೂ ಸಲ್ಲುವುದು. ಇದರ ಊಳಿಗವು ಇಷ್ಟು ಅಲ್ಪವಾದುದಾದರೂ, ಅನ್ಯನಿರ್ಮಿತವಾದ, ಅಥವಾ ಸ್ವನಿರ್ಮಿತವಾದ ಅದರೊಂದು ಸ್ವಚ್ಛಂದತೆಗೆ ತನ್ನ ಸ್ವಾತಂತ್ರ್ಯವನ್ನು ಮಾರಿಯೇ ಎಂತಹ ವರ ಕವಿಯಾದರೂ ತನ್ನ ರಚನೆಯನ್ನು ಮಾಡುತ್ತಾನೆ; ತಾನು ಮಾಡುವ ಕೆಲಸಗಳಲ್ಲಿ ಕೈಯಿಕ್ಕಿ, ತನ್ನ ಉಪಕರಣಗಳನ್ನು ಅಡಿಮೇಲು ಮಾಡಿ 'ಲೂಟಿ' ಮಾಡುವ ತನ್ನ ಮಕ್ಕಳ ಕಾಟವನ್ನು ಸಹಿಸುತ್ತ, ಅವುಗಳ ಒಲವಿನಂತೆ ಆಡಗೊಟ್ಟು, ತಾನೂ ಸಂತೋಷದಿಂದ ಅವುಗಳ ಆಟದಲ್ಲಿ ಸೇರಿ ಅದರಲ್ಲಿಯೇ ತನ್ನ ಕೆಲಸವನ್ನು ನಿರ್ವಹಿಸಿಕೊಳ್ಳುವ ಜಾಣೆಯಾದ ಗೃಹಿಣಿಯಂತೆ, ಛಂದೋಬಂಧವನ್ನು ಕೊರಗಿಸದೆ ತನ್ನ ಭಾವಗಳನ್ನು ರಸಿಕರಿಗೆ ಸಮರ್ಪಿಸುತ್ತಾನೆ. ಹೀಗೆ ಪರಾಧೀನತೆಯಲ್ಲಿಯೇ ಸಂತೋಷಪಡಬೇಕಾದರೆ, ತಾಯಿಯಲ್ಲಿರುವ ಪ್ರಕೃತಿಯಂತೆಯೇ ಒಂದು ಪ್ರಕೃತಿ ಕವಿಯಲ್ಲಿಯೂ ಇರಬೇಕು; ಛಂದಸ್ಸಿನ ಕಾಟವಿಲ್ಲದೆ ಗದ್ಯದಲ್ಲಿಯೇ ರಚನೆ ಮಾಡುವ, ಬಂಜೆ ಹೆಂಗುಸಿನ ಸ್ವಾತಂತ್ರ್ಯದಲ್ಲಿರುವ ಸವಿಗಿಂತ ಹೆಚ್ಚಿನ ಸವಿಯನ್ನು ಕೊಡುವ ಗುಣವೊಂದು ಛಂದಸ್ಸಿನಲ್ಲಿರಬೇಕು ಎಂದು ತಿಳಿಯಬೇಕಾಗುತ್ತದೆ. ಈ ದೃಷ್ಟಿಯಿಂದ ವಿಚಾರಿಸಿದರೆ, ಪದ್ಯದಲ್ಲಿರುವ ನಿಯಮಿತವಾದ ಗುರು ಲಘು ಗತಿಯ ಸೌಂದರ್ಯವೇ ಕವಿಯನ್ನೆಳೆಯುವ ಗುಣವೆಂದು ತೋರದಿರದು. ಸಾಮಾನ್ಯವಾಗಿ ಒಬ್ಬನೋ, ಒಬ್ಬಳೋ ನಡೆಯುವಾಗ ನಮ್ಮ ಮನಸ್ಸನ್ನು ಎಳೆಯುವುದಕ್ಕಿಂತ ನೂರು ಪಾಲು ಹೆಚ್ಚಾಗಿ ನರ್ತನವು ಎಳೆಯುವುದಕ್ಕೆ ಗತಿಯ ನಿಯಮನದಿಂದುಂಟಾಗುವ ಸೌಂದರ್ಯವೇ ಕಾರಣ. ಆದುದರಿಂದ ನಡೆಯಲ್ಲಿ ಹೇಗೋ ಹಾಗೆ ಮಾತಿನಲ್ಲಿಯೂ ಕಾಲನಿಯಮ, ಗತಿನಿಯಮ, ಲಯವಿನ್ಯಾಸವೇ ಒಂದು ರಮಣೀಯತೆಯನ್ನು ಕೊಡುತ್ತದೆ. ಇದರಿಂದಲೇ ಗದ್ಯಕ್ಕಿಂತ ಪದ್ಯವು ಹೆಚ್ಚು ಆಕರ್ಷಕವಾಗಿದೆ.

ಛಂದೋಬಂಧವು ಅಳತೆಯ ಕೋಲಿನಂತೆಯೇ ಮನುಷ್ಯಕೃತ. ಆದರೆ ಅಳತೆಯ ಕೋಲಿಗೆ ಆಧಾರವಾದ ಉದ್ದಗಲವು ಮನುಷ್ಯಕೃತವಲ್ಲ. ಹಾಗೆಯೇ ಗುರು ಲಘು ರೂಪವಾದ ಛಂದೋಗತಿಯೂ ಪ್ರಕೃತಿ ಸಹಜ. ಅಕ್ಷರೋಚ್ಚಾರಣೆಗೆ

* ಮಡಿಕೇರಿಯಲ್ಲಿ ನಡೆದ ಕ. ಸಾ. ಸಮ್ಮೇಳನಕ್ಕಾಗಿ ಬರೆದು ಓದಿದುದು.

ಬೇಕಾದ ಕಾಲವೇ ವರ್ಣಗಳಿಗೆ ಗುರುತ್ವ ಲಘುತ್ವಗಳನ್ನು ಕೊಡುತ್ತದೆ. ಈ ಕಾಲದ ಉದ್ದಗಲವನ್ನರಿಯುವುದೇ ಛಂದಸ್ಸಿನ ಕೆಲಸ.

ಗುರು ಲಘು ಸಂಜ್ಞೆಗಳೇನೋ ಮನುಷ್ಯ ನಿರ್ಮಿತಗಳು. ಇಂತಿಂತಹ ಅಕ್ಷರಗಳು ಗುರು—ಎಂದರೆ, ಭಾರವಾದುವು, ಇಂತಿಂತಹ ಅಕ್ಷರಗಳು ಲಘು—ಎಂದರೆ, ಹಗುರವಾದುವುಗಳು ಎಂಬ ನಿರ್ಣಯವನ್ನು ಒಂದು ಅಚ್ಚುಗಟ್ಟಿಗಾಗಿ ಮಾಡಿದರೋ, ಅಥವಾ ಆಯಾ ಅಕ್ಷರಗಳ 'ತೂಕವು' ಪ್ರಕೃತಿ ಗತವೋ? ಎಂದರೆ, ಪ್ರಕೃತಿ ಗತವೆಂದೇ ಹೇಳಬೇಕಾಗುತ್ತದೆ. ಅಷ್ಟಷ್ಟು ಕಾಲ ವಿಳಂಬದಿಂದಲೇ ಆಯಾ ವರ್ಣಗಳನ್ನು ಉಚ್ಚರಿಸಲು ಸಾಧ್ಯವೆಂಬುದು ಅನುಭವದಿಂದಲೇ ವೇದ್ಯವಾಗುವುದು. ಆದರೆ ಹತ್ತು ಮಾತ್ರೆಗಳುಳ್ಳುದೆಂದು ಗೃಹೀತವಾದ ಒಂದು ಪದವನ್ನು, ಇಪ್ಪತ್ತು ಮಾತ್ರಾಕಾಲದಲ್ಲಿ, ಅಥವಾ ಐದು ಮಾತ್ರಾಕಾಲದಲ್ಲಿ, ಏನೊಂದೂ ಕೊರತೆ ತೋರದಂತೆ ಉಚ್ಚರಿಸಲು ಸಾಧ್ಯವಾಗುತ್ತದಲ್ಲ! ಎಂಬ ಆಕ್ಷೇಪ ಬರಬಹುದು. ಇಲ್ಲಿ ಉಚ್ಚಾರಣೆಯ ತತ್ತ್ವವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ, ಆಯಾ ಅಕ್ಷರವು ಸ್ಫುಟವಾದ ಮೇಲೆ, ಮತ್ತೊಂದು ಅಕ್ಷರವನ್ನು ಮೊದಲು ಮಾಡುವ ಮೊದಲು, ನಾವು ಬೇಕೆಂದು, ಅಥವಾ ಅದಕ್ಕಿಂತ ಬೇಗ ಆರಂಭಮಾಡಲು ಅಸಾಧ್ಯವಾಗಿ, ಸ್ವಲ್ಪ ಸಮಯವನ್ನು ಸುಮ್ಮನೆ, ಎಂದರೆ ಮೌನದಿಂದ, ಅಥವಾ ಆಲಾಪದಿಂದ ಕಳೆಯುತ್ತೇವೆಂಬುದನ್ನು ಕಾಣಬಹುದು. ಆದುದರಿಂದ ಗುರು ಲಘುಗಳು, ಅಥವಾ ಲಘುವೊಂದಾದರೂ ತತ್ತ್ವತಃ ಸ್ವತಃಸಿದ್ಧವೆಂದಾಗುತ್ತದೆ; ಮತ್ತು ವ್ಯವಹಾರದಲ್ಲಿ ಮಾತ್ರ ಅವುಗಳನ್ನು ನಾವು ಪರಸ್ಪರ ಸಾಪೇಕ್ಷವಾಗಿ ಪ್ರಯೋಗಿಸುತ್ತೇವೆಂದು ಗೊತ್ತಾಗುತ್ತದೆ.

ಗುರು ಲಘುಗಳು ಪ್ರಕೃತಿ ಸಿದ್ಧವೆಂಬುದನ್ನು ಈಯೊಂದು ವಿಷಯವೂ ಸ್ಫುಟಗೊಳಿಸುತ್ತದೆ: ಮಾತ್ರಾ ಗಣನೆಯಲ್ಲಿ ಹ್ರಸ್ವ ಸ್ವರಗಳಿಗೆ ಲಘುತ್ವವೂ ದೀರ್ಘ ಸ್ವರಗಳಿಗೆ ಮತ್ತು ಸಸ್ವರವಾದ ವ್ಯಂಜನ ದ್ವಿತ್ವಗಳಿಗೆ ಗುರುತ್ವವೂ ಶಾಸ್ತ್ರೋಕ್ತವಾಗಿದೆ. ಇದರಿಂದ ಕೇವಲ ವ್ಯಂಜನಗಳಿಗೆ ಛಂದೋಗಣನೆಯಲ್ಲಿ ಅಸ್ತಿತ್ವವಿಲ್ಲವೆಂದಾಯಿತು. ಕಾರಣವೇನೆಂದರೆ, ಸ್ವರ ಸಹಾಯವಿಲ್ಲದೆ ವ್ಯಂಜನವು ಕರ್ಣ ಮೃದಂಗವನ್ನು ಸ್ಪರ್ಶಿಸುವುದು ಸಾಧ್ಯವೇ ಇಲ್ಲ. 'ಆದರೆ ವ್ಯಂಜನವು ಉಚ್ಚಾರಣೆಗೆ ಸಿಲುಕುತ್ತದೆ; ಉಚ್ಚಾರಣೆಗೆ ಕಾಲವೆಂಬುದು ಇದ್ದೇ ಇದೆ. ಹೀಗಿರುವಾಗ ವ್ಯಂಜನಕ್ಕೇಕೆ ಮಾತ್ರೆ ಇಲ್ಲ?' ಎಂಬ ಪ್ರಶ್ನೆ ಉದ್ಭವಿಸುತ್ತದೆ. ಇದನ್ನು ಸ್ವಲ್ಪ ಸೂಕ್ಷ್ಮವಾಗಿ ವಿಚಾರಿಸಿದರೆ ಉತ್ತರವು ದೊರೆಯುತ್ತದೆ:—'ಒಂದು ಹ್ರಸ್ವ ಸ್ವರಕ್ಕೆ ಒಂದು ಮಾತ್ರೆ, ಒಂದು ವ್ಯಂಜನಕ್ಕೆ ಒಂದು ಹ್ರಸ್ವ ಸ್ವರ ಸೇರಿದರೂ ಒಂದೇ ಮಾತ್ರೆ; ಒಂದು ದೀರ್ಘ ಸ್ವರಕ್ಕೆ ಎರಡು ಮಾತ್ರೆ, ಅದಕ್ಕೆ ವ್ಯಂಜನ ಸೇರಿದ್ದರೂ ಎರಡೇ ಮಾತ್ರೆ. ಇದೇಕೆ ಈ ಅನವಸ್ಥಾ ಪ್ರಸಂಗ? ಇದನ್ನು ಪ್ರಕೃತಿ ಸಿದ್ಧವೆನ್ನುವುದು ಹೇಗೆ?' ಎಂದರೆ ಇನ್ನೂ ಮುಂದೆ ವಿಚಾರಿಸುವ:—ವ್ಯಂಜನ ದ್ವಿತ್ವವುಳ್ಳ ಹ್ರಸ್ವ ಸ್ವರಕ್ಕೆ ಎರಡು ಮಾತ್ರೆಯಾಗುತ್ತದೆ. ಉದಾ.—'ಅಣ್ಣ', 'ಚಕ್ರ' ಎಂಬುವುಗಳಲ್ಲಿ ಎರಡೇ ಹ್ರಸ್ವ ಸ್ವರಗಳಿದ್ದರೂ, ಮಾತ್ರೆ

ಮೂರಂತೆ! ತೂಕದ ಲೆಕ್ಕದಲ್ಲಿ ಶೂನ್ಯವಾದ ವ್ಯಂಜನಗಳು ಎರಡು ಸೇರಿದರೆ ಒಂದು ಮಾತ್ರೆಯ ತೂಕವಾಗುತ್ತವೆ! ಇದೇನು? ಎಂದರೆ, ಅವು ಎರಡಲ್ಲ, ಮೂರು ಬಂದರೂ ಒಂದು ಸ್ವರದ ಸಹಾಯವಿಲ್ಲದೆ ಉಚ್ಚಾರಣೆಗೆ ಸಿಲುಕವು. 'ಬೆಟ್ಟ' ಎಂಬುದನ್ನು ನಾವು ಉಚ್ಚರಿಸುವಾಗ, 'ಬೆ' ಎಂದು ಹೇಳಿ 'ಟ' ಎನ್ನುವುದರೊಳಗೆ ಒಂದು ಮಾತ್ರಾ ಕಾಲವನ್ನು ನಾಲಗೆಯನ್ನೊಂದು ನಿಯತ ಸ್ಥಾನದಲ್ಲಿರಿಸಿ 'ತೂಷ್ಣಿ'ಯಲ್ಲಿ ಕಳೆಯುತ್ತೇವೆಯೇ ಹೊರತು, ಆ ಮಧ್ಯ ಕಾಲದಲ್ಲಿ ನಾವು ಸ್ಪಷ್ಟಾರ್ಥದಲ್ಲಿ ಹೇಳುವುದಾದರೆ, ಉಚ್ಚಾರಣೆ ಮಾಡುತ್ತಲೇ ಇಲ್ಲ. ಆದುದರಿಂದ, 'ಬೆಟ್ಟ' ಎಂಬುದಕ್ಕೆ ಮೂರು ಮಾತ್ರಾ ಗಣನೆಯಾಯಿತು. ಒಂದೇ ವ್ಯಂಜನವು ಸ್ವರಕ್ಕೆ ಸೇರಿದರೆ ಉಚ್ಚಾರಣೆಯಲ್ಲಿ ವಿಳಂಬ ಕಾರಣವಾಗುವುದಿಲ್ಲವೆಂಬುದು ಅನುಭವೈಕವೇದ್ಯವಾಗಿದೆ. ಆದರೂ ಎರಡು ವ್ಯಂಜನಗಳಿಗೆ ಒಂದು ಮಾತ್ರೆ ಗಣನೆ ಮಾಡಬೇಕಾಗಿ ಬರುವುದರಿಂದ ಒಂದು ವ್ಯಂಜನಕ್ಕೆ ಮಾತ್ರೆ ಎಷ್ಟೆಂದರೆ 'ಅರ್ಧ'ವೆಂದು ಹೇಳುವುದು ತಪ್ಪಾಗಲಾರದು. ಹೀಗಿರುವುದರಿಂದ, ನಾಗವರ್ಮನು 'ಶಬ್ದಸ್ಮೃತಿ'ಯಲ್ಲಿ, "ವ್ಯಂಜನಂಗಳರೆ ಮಾತ್ರಿಕೆಗಳ್" ಎಂದು ಹೇಳಿದ್ದಾನೆಂದು ತಿಳಿಯಬೇಕು. ಇಲ್ಲಿ, 'ಅರೆ' ಎಂಬುದಕ್ಕೆ ಎರಡರಲ್ಲೊಂದು ಪಾಲೆಂಬ ಅರ್ಥವಲ್ಲ. ಪ್ರಕೃತಿಯ ರಚನೆಗೆ ಪೂರ್ಣತೆಯೇ ಸಹಜ. ಆದರಲ್ಲಿ ಅರ್ಧವೆಂಬುದೇ ಇಲ್ಲ. ಇದ್ದರೆ ಒಂದು, ಇಲ್ಲದಿದ್ದರೆ ಇಲ್ಲ, ಅರ್ಧವೆಂಬುದು 'ಇಡಿ' ಎಂಬುದರ ಸಾಪೇಕ್ಷವಾದ ಪದ; ಎಂದರೆ, ಕಲ್ಪನೆಯ ಕೃತಿ. ಆದರೆ ಇಲ್ಲಿ ಹೇಳಿದ 'ಅರೆ' ಅಂತಹ ಅರ್ಧವಲ್ಲ. ಇದು ಎರಡು ಕೂಡಿ ಒಂದಾಗುವ ಅರ್ಧ ಹೊರತು, ಒಂದನ್ನು ತುಂಡುಮಾಡಿ ಎರಡಾಗುವ ಅರ್ಧವಲ್ಲ; ಎಂದರೆ, ನಿಯತ ಪ್ರಮಾಣದ ಅರ್ಧವಲ್ಲ. ಅಲ್ಲದೆ, ಎರಡಕ್ಕಿಂತ ಹೆಚ್ಚು ವ್ಯಂಜನಗಳು ಬಂದರೂ ಒಂದು ಮಾತ್ರೆಗಿಂತ ಹೆಚ್ಚಾಗುವುದಿಲ್ಲವೆಂಬುದರಿಂದ, ಈ 'ಅರೆ'ಯ ಅರ್ಥವು ಸ್ಫುಟವಾಗುವುದು. ಉದಾ.—'ಸೂಕ್ಷ್ಮ, ನಿಷ್ಕ್ರಮಣ.' ತಥ್ಯಾಂಶವೇನೆಂದರೆ, 'ಅರೆ' ಎಂದರೆ ಅಪೂರ್ಣವೆಂಬ ಅರ್ಥವೇ ಇಲ್ಲಿ ಗ್ರಾಹ್ಯ. (ಅರೆಯೆಂಬುದಕ್ಕೆ ಅಪೂರ್ಣಾರ್ಥವನ್ನು ಕೇಶಿರಾಜನೂ ಹೇಳುತ್ತಾನೆ.) "ವ್ಯಂಜನಂಗಳರೆ ಮಾತ್ರಿಕೆಗಳ್" ಎಂದರೆ, ಸ್ವರಗಳಂತೆ ಪೂರ್ಣ ಮಾತ್ರೆಯುಳ್ಳುವಲ್ಲ; ಎರಡೋ ಹಲವೋ ಸೇರಿದಾಗ ಮಾತ್ರ—ಅದೂ ಸ್ವರದ ಸಹಾಯವಿದ್ದರೆ—ಒಂದು ಮಾತ್ರೆಯ ತೂಕವನ್ನು ಪಡೆಯುವ ಅಪೂರ್ಣ ಮಾತ್ರಾ ಸ್ವಭಾವದವುಗಳು ಎಂಬರ್ಥ. ಪರಮಾಣುವನ್ನು ಭೇದಿಸಿದರೆ ಎರಡಾಗುವುದಿಲ್ಲವಂತೆ; ಅದಕ್ಕೆ ಬದಲಾಗಿ ನಾಶವನ್ನೇ ಹೊಂದುವುದು. ಮಾತ್ರೆಯೆಂಬುದು ಛಂದಶ್ಶಾಸ್ತ್ರದ ಪರಮಾಣು. ಇದರಿಂದ ನಮ್ಮ ಛಂದಶ್ಶಾಸ್ತ್ರವು ಶಾಸ್ತ್ರವೆಂಬ ಹೆಸರಿಗೆ ತಕ್ಕಂತೆ, ಎಷ್ಟು ಗಂಭೀರವಾಗಿ ಮಾಡಿದ ವಿಚಾರದ ಫಲವೆಂದೂ, ಕೇವಲ ಪರಂಪರೆಯ ಆಧಾರದ ಮೇಲೆ ಕಟ್ಟಿದ ಕಟ್ಟಡವಲ್ಲವೆಂದೂ ತಿಳಿಯುವುದು.

ಛಂದಸ್ಸಿನ ಪ್ರಕೃತಿಯೀಗ ಗುರು ಲಘು ರೂಪವಾದ ಕಾಲ ಗತಿಯೆಂದು ನಾವು ತಿಳಿದೆವು. ಕಾಲದ ಗತಿಯಲ್ಲಿ ಎರಡು ವಿಧವಿದೆ: ಒಂದು, ನಿಯತವಾದ ಗತಿ; ಇನ್ನೊಂದು ಅನಿಯತವಾಗಿ ಬೇಕಾದಂತೆ ಹರಿಯುವ ಗತಿ. ಈ ಅನಿಯತವಾದುದಕ್ಕೂ

ಅಳತೆಯ ಕೋಲಿಗೂ ಸ್ನೇಹವಿಲ್ಲ. ನಿಯತ ಗತಿಯಲ್ಲಿಯೂ ಎರಡು ವಿಧವಿದೆ: ಒಂದು ಸಮಾಂತರಗಳಲ್ಲಿ ವಿಶ್ರಾಂತಿಯನ್ನು ಹೊಂದಿ ನಡೆಯುವ ಧ್ರುವ ಗತಿ; ಇನ್ನೊಂದು, ವಿಷಮಾಂತರಗಳಲ್ಲಿ ವಿಶ್ರಮಿಸುವ ಅಪಕೃಷ್ಟ ಗತಿ. ಇವಿಷ್ಟೇ ಗತಿಗಳಿಂದ ಸಮಸ್ತ ವಾಙ್ಮಯವು ರಚಿತವಾಗಿದೆ. ಅನಿಯತ ಗುರು ಲಘು ಗತಿಯಿಂದ ಗದ್ಯ ಉಂಟಾಗುತ್ತದೆ; ನಿಯತ ಗತಿಯಿಂದ ಪದ್ಯವುಂಟಾಗುತ್ತದೆ. ನಿಯತ ಗತಿಯಲ್ಲಿ ಅಂತರ್ಭೂತವಾದ ಧ್ರುವ ಗತಿಯಿಂದ ತಾಳಕ್ಕೆ ಅಳವಡುವ ಛಂದೋಬಂಧಗಳೂ, ಅಪಕೃಷ್ಟ ಗತಿಯ ಉದ್ದವನ್ನು ಮಾತ್ರ ನಿರ್ಬಂಧಿಸಿ ತಾಳಕ್ಕೆ ಸೇರದ ಸಂಸ್ಕೃತದ ಅಕ್ಷರ ವೃತ್ತಗಳಂತಹವೂ ನಿರ್ಮಿತವಾಗುತ್ತವೆ. ಹೀಗೆ ಪದ್ಯ ವಿಧಾನವು ಕಾಲದ ಗತಿಯ ಮೇಲೆ ಹೊಂದಿರುವುದಾದರೆ, ಅದೇ ಆಧಾರದ ಮೇಲೆ ನಡೆಯುವ ಸಂಗೀತಕ್ಕೂ,—ಅದರಲ್ಲಿಯೂ ಮುಖ್ಯವಾಗಿ ತಾಲ ಬದ್ಧವಾದ ಧ್ರುವ ಗಾನಕ್ಕೂ—ಛಂದಸ್ಸಿಗೂ ಸಂಬಂಧವಿರಲೇಬೇಕಾಗುತ್ತದೆ. ಆದರೆ ಇಂದಿನ ನಮ್ಮ, ಅಥವಾ ಲೋಕದ ಇತರ ಭಾಷೆಗಳ ಪದ್ಯಗಳನ್ನೂ, ಮುಖ್ಯವಾಗಿ ಅವುಗಳನ್ನು ಓದುವ ರೀತಿಯನ್ನೂ, ನಮ್ಮ ಸಂಗೀತಗಾರರು ಸಂಗೀತದಲ್ಲಿ ಉಪಯೋಗಿಸುವ ಸಾಹಿತ್ಯವನ್ನೂ ಮೇಲಿಂದ ಮೇಲೆ ಕೇಳಿ ನೋಡಿದರೆ, ಇವುಗಳೊಳಗೆ ಸಂಬಂಧವಿದೆಯೆಂದು ಹೇಳುವುದು ಕಷ್ಟವಾಗಿ ಕಂಡುಬಂದೀತು. ಪದ್ಯಗಳನ್ನು ಲಯ ಸ್ಥಾನಗಳು ತಿಳಿವಂತೆ 'ರಾಗ'ದಿಂದ, ಎಂದರೆ, ಗೀತಚ್ಛಾಯೆಯಲ್ಲಿ ಓದುವುದು ಹಳಬರ ಪದ್ಧತಿ; ಹೊಸಬರು, ಇಂಗ್ಲಿಷಿನ 'ರೆಸಿಟೇಷನ್' (ಇದನ್ನೂ ಒಂದು ತೆರದ ಲಯವಿಟ್ಟೇ ಓದುವವರಿರುವರು) ಪದ್ಧತಿಯಂತೆ, ಅರ್ಥದ ತೂಕಕ್ಕೆ ತಕ್ಕಂತೆ 'ಸ್ವರ ಭಾರ'ವನ್ನು ಹೊರಿಸಿ ಓದುತ್ತಾರೆ. ನಮ್ಮ ಸಂಗೀತಗಾರರು ನಮ್ಮ ಕಾವ್ಯಗಳಲ್ಲಿರುವ ಛಂದೋಬಂಧಗಳನ್ನು ಹಾಡದೆ, ಬೇಕಾದಲ್ಲಿ ಬೇಕಾದಷ್ಟು ಎಳೆದು ಹಾಡಬೇಕಾಗುವ—ಸಂಗೀತಜ್ಞರಲ್ಲದೆ ಇತರರು ಓದಿದರೆ ಕೇವಲ ಗದ್ಯವಾಗುವ, ಅರ್ಥಕ್ಕೆ ಮಹತ್ವವಿಲ್ಲದ—ಹಾಡುಗಳನ್ನು ಹಾಡುತ್ತಾರೆ. ಆದಕಾರಣ ಇಂದು ಛಂದಸ್ಸಿಗೂ ಸಂಗೀತಕ್ಕೂ ಸಂಬಂಧವು ಕಡಿದು ಹೋಗಿದೆಯೆಂದರೆ ಅಲ್ಲವೆನ್ನಲು ಬಹಳ ಧೈರ್ಯಬೇಕು.

ಹಲವು ಭಾಷೆಗಳ ಬಾಲ್ಯಾವಸ್ಥೆಯನ್ನು ಅವಲೋಕಿಸಿದರೆ, ಅಲ್ಲಿರುವ ಪದ್ಯ ಸಾಹಿತ್ಯವೆಂದರೆ ಕೇವಲ ಹಾಡುಗಳೆಂದು ಕಂಡುಬರುವುದು. (ಅದು ಆಯಾ ಜನತೆಯ ಸಂಸ್ಕೃತಿಯಂತೆ, ಒಲವಿನಂತೆ, ಭಕ್ತಿ ಪರವೋ, ವೀರ ರಸ ಪ್ರಧಾನವೋ, ಶೃಂಗಾರ ಮಯವೋ, ಮಿಶ್ರವೋ ಆಗಿರುತ್ತದೆ.) ಇದರಿಂದಲೂ ಪದ್ಯದ ಮತ್ತು ಸಂಗೀತದ ಮೂಲವೊಂದೇ ಎಂಬ ಮಾತಿಗೆ ಪುಷ್ಟಿ ದೊರೆಯುತ್ತದೆ. ಈ ಸಂದರ್ಭದಲ್ಲಿ 'ಛಂದಸ್' ಶಬ್ದದ ಹುಟ್ಟನ್ನು ಪರಿಶೀಲಿಸುವುದು ಅಯುಕ್ತವಾಗಲಾರದು. ಇದಕ್ಕೆ ಹಲವರು ಹಲವು ರೀತಿಯಲ್ಲಿ ವ್ಯುತ್ಪತ್ತಿಯನ್ನು ಹೇಳುತ್ತಾರೆ: 'ಛದ್' (ಛದ) ಎಂಬ ಅಪವಾರಣಾರ್ಥಕವಾದ ಧಾತುವಿನಿಂದ, ಈ ಶಬ್ದವು ಹುಟ್ಟಿತೆಂದು ಪೂರ್ವಿಕರು ಹೇಳಿದ್ದಾರಂತೆ. (ನಾನು ತಿಳಿದ ಮಟ್ಟಿಗೆ 'ಛದಿ' ಧಾತುವಿನಿಂದಲೆಂದು ಪೂರ್ವಿಕರ ಮತ.) ಇನ್ನು ಕೆಲ ಮಂದಿ ಪಾಶ್ಚಾತ್ಯ ಪಂಡಿತರು 'ಸ್ಕಂದ್' ಎಂಬ

ಧಾತುವಿನಲ್ಲಿ ಇದರ ಮೂಲವನ್ನು ಕಾಣುತ್ತಾರಂತೆ. ಘನವಿದ್ವಾಂಸರು ಹೇಳಿದ ಈ ಮಾತುಗಳಿಗೆ ಆಕ್ಷೇಪವೆತ್ತುವುದು ಧಾರ್ಷ್ಟ್ಯವೆಂದಾಗಬಹುದಾದರೂ, ನನ್ನ ಬುದ್ಧಿಗೆ ಹೊಳೆದುದನ್ನು ಹೇಳುವುದು ಧರ್ಮವೆಂದು ಭಾವಿಸುತ್ತೇನೆ. ನನ್ನಮಟ್ಟಿಗೆ ಹೇಳುವುದಾದರೆ, 'ಛಂದ್' (ಛದಿ=ಛಂದ್) ಎಂಬುದೊಂದು ಪ್ರತ್ಯೇಕ ಧಾತು ಇರುವಾಗ, ಅದರಿಂದ ಹುಟ್ಟಿದ ಶಬ್ದಗಳು ವಿಪುಲವಾಗಿ ವ್ಯವಹಾರದಲ್ಲಿರುವಾಗ, ಈ ದ್ರಾವಿಡ ಪ್ರಾಣಾಯಾಮಗಳೇಕೋ ತಿಳಿಯದು. 'ಛಂದ್' ಎಂದರೆ, ಒಲಿಸು, ಸಂತೋಷಪಡಿಸು, ಇತ್ಯಾದಿ ಅರ್ಥಗಳನ್ನು ಶ್ರೀ ಆಪಟೆಯವರು ಸರ್ವಮಾನ್ಯವಾದ ತಮ್ಮ ನಿಘಂಟುವಿನಲ್ಲಿ ಕೊಟ್ಟಿದ್ದಾರೆ. ಅಲ್ಲದೆ, ಸ್ವಚ್ಛಂದ, ಪರಚ್ಛಂದ—ಇತ್ಯಾದಿ ಪದಗಳಲ್ಲಿಯೂ 'ಒಲವು' ಎಂಬರ್ಥವೇ ಕಾಣುತ್ತದೆ. (ಉದಾ.—ಮೂರ್ಖಂ ಛಂದೋನುವೃತ್ತೇನ) ವೇದಕ್ಕೆ ಸಾಮಾನ್ಯವಾಗಿ ಛಂದಸ್ಸೆಂದೇ ಹೆಸರು. ಅವುಗಳಿಗೀ ಹೆಸರು ಏಕೆ ಬಂತೆಂದು ವಿಚಾರಿಸುವುದಾದರೆ, ಅವುಗಳು ಪರಮೇಶ್ವರನನ್ನು ಒಲಿಸುವ ಸ್ತೋತ್ರಗಳಾಗಿರುವುದರಿಂದಲೆಂದು ಹೇಳಬಹುದು. ಆದರೆ ರೂಢಿಯಲ್ಲಿ ಛಂದಶ್ಶಾಸ್ತ್ರವೆಂದರೆ ಪದ್ಯಬಂಧ ನಿಯಮವನ್ನು ಹೇಳುವ ಶಾಸ್ತ್ರವೆಂಬ ಅರ್ಥವಿದೆ. ಆದುದರಿಂದ 'ಪದ್ಯ' ಎಂಬರ್ಥವೇ ಇದಕ್ಕಿದ್ದರೂ ಇರಬಹುದು. ('ಹಿಂದಿ'ಯಲ್ಲಿ ಹೀಗೆಯೇ ಇದೆಯೆಂದು ತೋರುತ್ತದೆ.) ಒಲಿಸುವುದಕ್ಕೆ ಗೀತದಷ್ಟು ಉಪಯುಕ್ತವಾದ ಸಾಧನವು ಬೇರಿಲ್ಲ. ವೈದಿಕ ಸ್ತೋತ್ರಗಳನ್ನು ಹಾಡುವುದೇ ಪದ್ಧತಿ. ಅಲ್ಲದೆ, ಹಾಡುವುದೆಂಬ ಅರ್ಥವನ್ನು ಕೊಡುವ ಸಂಸ್ಕೃತದ ಗಾ, ಗೈ ಧಾತುಗಳಿಗೂ, 'ಒಲಿಸು, ಹೊಗಳು' ಎಂಬ ಅರ್ಥವು ಇದೆ. ಇಷ್ಟು ಮಾತ್ರವಲ್ಲ; ಮನುಸ್ಮೃತಿ (ಅಧ್ಯಾಯ ೩-೧೪೫) ಯಲ್ಲಿ "ಛಂದೋಗಃ-ಸಾಮವೇದಾಧ್ಯಾಯಿ" ಎಂದು ಹೇಳಿದೆ. ಸಾಮವೇದವೆಂದರೆ ಗಾನವೇದ; ವೈದಿಕ ಗಾನದ ಮೇಲಿನ ಮೆಟ್ಟಿಲದು. ಅದನ್ನು ಹಾಡುವವನಿಗೆ, ವಿಶಿಷ್ಟವಾಗಿ ಛಂದೋಗಃ ಎಂಬ ಹೆಸರಿರಬೇಕಾದರೆ, ಗೀತ ಮತ್ತು ಛಂದಸ್ ಎಂಬ ಶಬ್ದಗಳು ಸಮಾನಾರ್ಥಕಗಳಾಗಿರಬೇಕಾಗುತ್ತದೆ. ಆದುದರಿಂದ ಛಂದಸ್ಸೆಂದರೆ ಪದ್ಯವೆಂಬ ಮೇಲಿನ ಅನುಮಾನವೇ ನಿಸ್ಸಂಶಯವಾಗಿ ದೃಢವಾಗುತ್ತದೆ. ಇದರಿಂದ, ಹಿಂದೆ ಪ್ರತಿಪಾದಿಸಿದಂತೆ, ಆದಿಯಲ್ಲಿ ಪದ್ಯ ಗೀತಗಳೊಳಗೆ ಭೇದವೇ ಇದ್ದಿಲ್ಲ; ಅನಂತರ ಅವುಗಳೊಳಗೆ ಅಡಕವಾದ 'ವೈಖರೀ' ಎಂದರೆ, ಅಕ್ಷರಾರ್ಥವುಳ್ಳ ಭಾಷೆ, ಮತ್ತು 'ಮಧ್ಯಮಾ' ಎಂದರೆ ಕೇವಲ ಸ್ವರದಿಂದ ಅರ್ಥ ವ್ಯಂಜನೆ ಮಾಡುವ ಗಾನ—ಇವು ಬೇರೆಬೇರೆ ಪದ್ಯ ರೂಪಗಳಲ್ಲಿ ಬೆಳೆದು ತೋರಿಕೆಗೆ ಭಿನ್ನವಾದುವು ಎಂದು ಒಪ್ಪಿಕೊಳ್ಳಬೇಕಾಗುತ್ತದೆ.

ಸಮಸ್ತ ಜಗತ್ತಿನ ಅತಿ ಪ್ರಾಚೀನ ಭಾಷೆಯಾದ ಸಂಸ್ಕೃತದಲ್ಲಿ ಈ ಸ್ಥಿತಿ ಇತ್ತೆಂದು ತೋರಿಸಲಾಯಿತು. ಇನ್ನೂ ಬೆಳೆಯದೆ, ಅಕ್ಷರಸ್ಥವಾಗದಿರುವ ಒಂದು ಭಾಷೆಯ ದೃಷ್ಟಾಂತವನ್ನು ತೆಗೆದುಕೊಂಡರೂ ಇದೇ ಸಿದ್ಧಿಸುತ್ತದೆ. ನಮ್ಮ ಕನ್ನಡ ನಾಡಿನೊಳಗೇ ಸುಳಿದಾಡುವ ತುಳುವನ್ನು ನೋಡಿರಿ: ಅದರಲ್ಲಿರುವ ಪದ್ಯ ಸಾಹಿತ್ಯವೆಂದರೆ, ತುಳುವರ ಸಂಗೀತ ಸಾಹಿತ್ಯ; ಅವರ ಸಂಗೀತವೆಂದರೆ ಆ ಪದ್ಯ

ಸಾಹಿತ್ಯವನ್ನು ಹಾಡುವುದು. ಕೇವಲ ಗದ್ಯ ರೂಪದಲ್ಲಿರುವ 'ಪಾಡ್ದನೆ'ಗಳನ್ನು ಹಾಡಿಯೇ ಹೇಳುವರು. ಚರಣ ಬಂಧವುಳ್ಳ 'ಕಬಿತ್ತೊ'ಗಳೆಲ್ಲ ತಾಳ ಗತಿಗೆ ಹೊಂದಿ ಹಾಡಲ್ಪಡುವುವು. ಒಟ್ಟಾರೆ, ಇಂದಿನ ವರೆಗಿನ ತುಳು ಸಾಹಿತ್ಯವೆಲ್ಲ ಸಂಗೀತದ ಅಂಗ ವಾಗಿಯೇ ಇದೆ. ಇನ್ನು ಬೇರೆ ಭಾಷೆಗಳಲ್ಲಿಯೂ ಹೀಗೆಯೇ ಇರಬಹುದು, ಇದ್ದಿರ ಬಹುದು ಎಂದು ನನ್ನ ಊಹೆ.

ಈ ವಿವರಣೆಯಿಂದ, ಪದ್ಯದ ಮತ್ತು ಸಂಗೀತದ ಉದ್ಗಮ ಸ್ಥಾನವು ಒಂದೇ; ಅವು ಏಕ ಕಾಲದಲ್ಲಿ ಒಂದಾಗಿ ಹುಟ್ಟಿದುವು; ಸಂಗೀತದ ಸರ್ವಾವಯವಗಳನ್ನು ತೆಗೆದುಹಾಕಿದರೆ ಪದ್ಯವು ಗದ್ಯವೇ ಆಗುವುದು; ಇದು ಯಾವುದಾದರೊಂದು ಭಾಷೆಯ ಪರಂಪರೆಯಲ್ಲ, ಸಾರ್ವತ್ರಿಕವಾದ ಪ್ರಕೃತಿ ನಿಯಮ—ಎಂದು ಹೇಳಿದ ಹಾಗಾಯಿತು. ನಮ್ಮ ಪ್ರಾಚೀನರಿಗೂ ಇದೇ ಅಭಿಪ್ರಾಯವಿತ್ತೆಂದು ನನಗೆ ಹೊಳೆಯುತ್ತದೆ. ಏಕೆಂದರೆ, ಸಂಗೀತಕ್ಕೂ ಸಾಹಿತ್ಯಕ್ಕೂ ಸರಸ್ವತಿಯೊಬ್ಬಳೇ ಅಧಿದೇವಿ; ಅವಳ ಒಂದು ಕೈಯಲ್ಲಿ ವೀಣೆಯಿದ್ದರೆ, ಇನ್ನೊಂದರಲ್ಲಿ ಪುಸ್ತಕ—ಹೀಗೆ ಅವರು ಕಲ್ಪಿಸಿದ್ದಾರೆ. "ಸಂಗೀತಮಪಿ ಸಾಹಿತ್ಯಂ ಸರಸ್ವತ್ಯಾಃ ಸ್ತನದ್ವಯಂ" ಎಂಬ ಶ್ಲೋಕವು ಪ್ರಸಿದ್ಧವಾಗಿದೆ. ಇಲ್ಲಿ ಕವಿಯ ಶೃಂಗಾರ ಲೋಲುಪತೆಯೇ ಆ ರೂಪಕಕ್ಕೆ ಕಾರಣವಾಗಿರಬಹುದು; ಆದರೂ ವಿಶೇಷಾರ್ಥವನ್ನು ಇದಕ್ಕೆ ಅನ್ವಯಿಸ ಬಹುದು. ಭಾಷೆಗೆ ಯೌವನಾವಿರ್ಭಾವವಾದೊಡನೆ, ಒಂದೇ ಕಾರಣದಿಂದ, ಒಂದೇ ಸ್ಥಳದಲ್ಲಿ, ಒಂದೇ ಕಾಲದಲ್ಲಿ ಸಂಗೀತ ಸಾಹಿತ್ಯಗಳು ಹುಟ್ಟಿ ಒಟ್ಟಿಗೆ ಬೆಳೆಯುತ್ತವೆ, ಎಂಬ ಆಶಯವು ಇದರಲ್ಲಿ ಅಡಗಿರಲಾರದೆ?

ಇನ್ನು, 'ಕವಿ' ಶಬ್ದಾರ್ಥವನ್ನು ಪರಿಶೀಲಿಸಿದರೂ ಮೇಲಿನ ಅಭಿಪ್ರಾಯವೇ ಪ್ರಸ್ಫುಟವಾಗುತ್ತದೆ. 'ಕವಿ' ಶಬ್ದವು, ಕು—ಕೂಜನ ಮಾಡು, ಎಂದರೆ ಹಾಡು ಎಂಬ ಧಾತುವಿನಿಂದ ಹುಟ್ಟಿದೆ. ಯಾವನು ಹಾಡುಗಾರನೋ ಅವನೇ ಕವಿ ಯಾಗಿದ್ದನು. "ವಂದೇ ವಾಲ್ಮೀಕಿ ಕೋಕಿಲಂ"—ಇಲ್ಲಿಯೂ ಕೋಗಿಲೆಯ ಸಾಮ್ಯದಿಂದ ವಾಲ್ಮೀಕಿಗೆ ಗಾಯಕತ್ವವು ಪ್ರಾಪ್ತವಾಗಿದೆ; ಅಲ್ಲದೆ, ಆದಿ ಕಾವ್ಯವನ್ನು ಕುಶ ಲವರು ವೀಣಾ ಸಖರಾಗಿಯೇ ಕಲಿತರೆಂಬುದು ಸುಪ್ರಸಿದ್ಧವಾಗಿದೆ. ಇದರಿಂದ, ಕವಿತೆ ಹಾಡುವುದಕ್ಕಾಗಿಯೇ ಹುಟ್ಟಿತು ಎಂಬ ವಿಷಯದಲ್ಲಿ ಯಾವ ಸಂಶಯವೂ ಉಳಿಯುವುದಿಲ್ಲ.

ಶಬ್ದಾರ್ಥ ನಿರ್ಣಯ ಮಾಡುವುದಕ್ಕೆ ವ್ಯುತ್ಪತ್ತಿ, ಪ್ರಯೋಗ ಎಂಬ ಎರಡು ಸಾಧನಗಳು. ಇವೆರಡರಿಂದಲೂ, ಪದ್ಯವೆಂದರೆ ಹಾಡೆಂದೇ ಸಿದ್ಧವಾಯಿತು. ಈ ಹಾಡು ಕನ್ನಡದಲ್ಲಿ ಹೇಗಿತ್ತು? ಹೇಗೆ ಬೆಳೆಯಿತು? ಎಂಬುದು ಪ್ರಕೃತೋಪನ್ಯಾಸದ ವಿಷಯ. ಕನ್ನಡದಲ್ಲಿ 'ಹಾಡು' ಎಂಬುದು ಕ್ರಿಯಾ ಪದವಾಗಿರುವಾಗ 'ಗಾನ ಮಾಡು' ಎಂಬರ್ಥವನ್ನು ಕೊಡುತ್ತದೆ. (ಅಲ್ಲದೆ, ಸಂಸ್ಕೃತದ 'ಗಾ, ಗೈ, ಛಂದ್' ಧಾತುಗಳಂತೆ 'ಒಲಿಸು, ಹೊಗಳು' ಎಂಬರ್ಥವನ್ನೂ ಕೊಡಬಲ್ಲುದು.

ಉದಾ.—ಹಾಡಿ ಹರಸು.) ನಾಮ ಪದವಾಗುವಾಗ ಸಂಗೀತಕ್ಕೆ ಉಪಯುಕ್ತವಾದ ಸಾಹಿತ್ಯ—ಎಂದರೆ ಗೀತ, ಅಥವಾ ಪದ್ಯ—ಎಂಬರ್ಥವಾಗುತ್ತದೆ. (ರೂಢಿಯ ಮಾತಿನಲ್ಲಿ ಸುಖಕರವಾದ, ಅಥವಾ ಚಂದವಾದ ಸ್ಥಿತಿಯೆಂದೂ, ವ್ಯಂಗ್ಯವಾಗಿ ದುಃಸ್ಥಿತಿಯೆಂದೂ ಪ್ರಯೋಗಿಸಲ್ಪಡುತ್ತದೆ; ಆದರೆ ಈ ಅರ್ಥದ 'ಹಾಡು', 'ಪಡು' ಎಂಬ ಧಾತುವಿನಿಂದ ಬಂದಿರಲೂ ಬಹುದು. (ಉದಾ.—ಪಟ್ಟಪಾಡು). ಆದರೂ ಪದ್ಯಾರ್ಥದಲ್ಲಿ ಉಪಯುಕ್ತವಾಗುವ ಹಾಡು, 'ಪಾಡು=ಗಾನೇ' ಎಂಬ ಧಾತುವಿನಿಂದಲೇ ಬಂದಿತೆಂಬುದರಲ್ಲಿ ಯಾರಿಗೂ ಮತಭೇದವಿರಲಾರದು.) ಕನ್ನಡದಲ್ಲಿ ಪದ್ಯವೆಂಬ ಅರ್ಥವನ್ನು ಕೊಡುವ ಬೇರಾವ ಶಬ್ದವೂ ನಾನು ತಿಳಿದಂತೆ ಇಲ್ಲ. ಇದರಿಂದ, ಕನ್ನಡದ ಮಟ್ಟಿಗಂತೂ ಗೀತ, ಪದ್ಯಗಳಲ್ಲಿ ಯಾವ ಭೇದವೂ ಇರಲಿಲ್ಲ ವೆಂಬುದರಲ್ಲಿ ಸಂದೇಹದ ಲೇಶವೂ ಇಲ್ಲ.

ಕನ್ನಡದಲ್ಲಿ, ಬಹುಶಃ ಇತರ ಭಾಷೆಗಳಲ್ಲಿ ಇಲ್ಲದಷ್ಟು ವಿಧವಾದ, ಹಲವು ಛಂದೋಬಂಧಗಳು ಉಪಯೋಗಿಸಲ್ಪಟ್ಟಿವೆ, ಪಡುತ್ತಿವೆ. ಇವೆಲ್ಲ ಕನ್ನಡದಲ್ಲಿಯೇ ಹುಟ್ಟಿ ಬೆಳೆದುವುಗಳಲ್ಲ; ಸಂಸ್ಕೃತದ ಉದಾರ ನಿಧಿಯಿಂದ ನಾವು ಬೇಕಾದಂತೆ ಆಯ್ದುಕೊಂಡಿದ್ದೇವೆ. ಆದರೆ ಎಲ್ಲವೂ ಸಂಸ್ಕೃತದಿಂದ ತಂದುವೇ ಅಲ್ಲದಿದ್ದರೂ, ಅದರ ಮೂಲನಿಧಿಯಿಂದ ದೊಡ್ಡವಾದುವುಗಳು ಹಲವಿವೆ. ಆದುದರಿಂದ ಅವನ್ನು ಕನ್ನಡದ ಸ್ವತಂತ್ರ ಛಂದಸ್ಸುಗಳೆಂದು ಹೇಳಲಾಗುವುದಿಲ್ಲ. ಹೀಗೆ ಶೋಧಿಸುತ್ತ ಹೋದರೆ ಕನ್ನಡದಲ್ಲಿ ಸ್ವತಂತ್ರ ಛಂದಸ್ಸೇ ಇಲ್ಲವೋ ಎಂಬ ಶಂಕೆ ಬರುತ್ತದೆ. ಕೆಲ ಮಂದಿ ವಿದ್ವಾಂಸರು ಹೀಗೆಯೇ ಸಿದ್ಧಾಂತಿಸುತ್ತಾರೆ. ಆದರೆ ಇದರ ನಿಜಾಂಶವನ್ನು ಕಂಡು ಹಿಡಿಯಬೇಕಾದರೆ, ಕನ್ನಡದ ಆದಿ ಕಾವ್ಯಗಳನ್ನು ಪರಿಶೀಲಿಸಬೇಕು. ಕನ್ನಡ ಭಾಷೆ ಸಂಸ್ಕೃತದೊಡನೆ ಬೆರೆಯದೆ ಕೊಡಗೂಸಾಗಿದ್ದಾಗ ಆಡಿದ ತೊದಲ್ನುಡಿಗಳನ್ನೀಗ ನಮಗೆ ಕೇಳಲು ಸಾಧ್ಯವಿಲ್ಲ; ಅಂದಿನ ದಿನಗಳಲ್ಲಿ ಕನ್ನಡದಲ್ಲಿ ಪ್ರಯುಕ್ತವಾಗಿದ್ದ ಛಂದೋಬಂಧಗಳೆಂತಹವೆಂದು ನಾವು ತಿಳಿಯಲು ಮಾರ್ಗವಿಲ್ಲ. ಅಂದಿನ ಎಷ್ಟೋ ದೊಡ್ಡ ಕಾವ್ಯಗಳೂ ಈಗ ನಾಮಶೇಷವಾಗಿವೆ. ನಮಗೆ ದೊರೆಯುವ ಅತಿ ಪ್ರಾಚೀನ ಗ್ರಂಥವೆಂದರೆ ನೃಪತುಂಗನ 'ಕವಿರಾಜಮಾರ್ಗ.' ಇದು ಮುಖ್ಯವಾಗಿ ಕಂದಗಳಿಂದಲೇ ತುಂಬಿದೆ. ಅಲ್ಲಲ್ಲಿ ಒಂದೊಂದು ವೃತ್ತವೂ, 'ಗೀತಿಕೆ' ಎಂಬ ಬಂಧವೂ ದೊರೆಯುತ್ತದೆ. ಈ ಗೀತಿಕೆ ಪ್ರಸಿದ್ಧವಾದ ಸಂಸ್ಕೃತದ ಗೀತಿಕೆಯಿಂದ ಭಿನ್ನವಾಗಿದೆಯೆಂಬುದು ಸುಸ್ಪಷ್ಟ. ಇನ್ನುಳಿದ ಹಳೆಯ ಕಾವ್ಯಗಳಲ್ಲಿ ಅಕ್ಕರ, ಪಿರಿಯಕ್ಕರ ಎಂಬ ಹೆಸರುಗಳಿಂದ ಕೆಲ ಬಂಧಗಳು ಸಿಕ್ಕುತ್ತವೆ. ನಾಗವರ್ಮನು 'ಛಂದೋಂಬುಧಿ'ಯಲ್ಲಿ, ಅಕ್ಕರ, ಗೀತಿಕೆ ಮೊದಲಾದುವುಗಳ ಲಕ್ಷಣವನ್ನು ಬರೆವಾಗ ಅವುಗಳಿಗೆ "ಕರ್ಣಾಟಕ ವಿಷಯ ಜಾತಿ"ಗಳೆಂದು ಹೆಸರು ಹೇಳುತ್ತಾನೆ. ತನಗಿಂತ ಮೊದಲಿನ ಕವಿಗಳು ಈ 'ಜಾತಿ'ಗಳನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದರೆಂದು ನೃಪತುಂಗನೇ ಹೇಳುವಂತಿದೆ. ಪುರಾತನ ಕವಿಗಳ "ಚತ್ತಾಣಮುಂ, ಬೆದಂಡೆಯುಂ" ಎಂತಿದ್ದುವೆಂಬುದನ್ನು ಅವನು ಹೇಳುತ್ತಾನೆ:—

ಕಂದಮುಮಮಳಿನ ವೃತ್ತಮು ।
ಮೊಂದೊಂದೆಡೆಗೊಂದು ಜಾತಿ ಜಾಣೆಸೆಯೆ ಬೆಡಂ ॥
ಗೊಂದಿವರೊಳಮರೆ ಪೇಳಲ್ ।
ಸುಂದರ ರೂಪಿಂ ಬೆದಂಡೆಗಬ್ಬಮದಕ್ಕುಂ ॥

ಕಂದಂಗಳ್ ಪಲವಾಗಿರೆ ।
ಸುಂದರ ವೃತ್ತಂಗಳಕ್ಕರಂ ಚವುಪದಿ ಮ ॥
ತ್ತಂ ದಲ್ ಗೀತಿಕೆ ತಿವದಿಗ ।
ಳಂದಂ ಬೆತ್ತಸೆಯೆ ಪೇಳ್ದೊಡದು ಚತ್ತಾಣಂ ॥

ಇಲ್ಲಿ 'ಬೆದಂಡೆ'ಯ ಲಕ್ಷಣದಲ್ಲಿ ಉಕ್ತವಾದ 'ಜಾತಿ' ಎಂಬ ಪದವು ನಾಗವರ್ಮನು ಹೇಳುವ 'ಜಾತಿ'ಗಳೆಂದೇ ಗ್ರಹಿಸಬೇಕು. ಈ 'ಜಾತಿ'ಗಳಿಗೆ ನೃಪತುಂಗನ ಕಾಲದಲ್ಲಿಯೇ ಮಾನ್ಯತೆ ಕಡಿಮೆಯಾಗಿತ್ತೆಂಬುದು, ಕಂದ ವೃತ್ತಗಳ ಪ್ರಭಾವವು ಹೆಚ್ಚಿರುವ 'ಬೆದಂಡೆ'ಯನ್ನು ಕೊಂಡಾಟದಿಂದ ಮೊದಲು ವರ್ಣಿಸಿ, 'ಜಾತಿ' ಬಂಧಗಳಿಗೆ ಹೆಚ್ಚು ಆಶ್ರಯ ಕೊಡುವ 'ಚತ್ತಾಣ'ವನ್ನು ಮತ್ತೆ ಹೇಳಿದುದರಿಂದಲೂ, ಎರಡು ಪದ್ಯಗಳಲ್ಲಿಯೂ ಕಂದ ವೃತ್ತಗಳಿಗೆ ಅನುಕ್ರಮದಿಂದ ಮೊದಲೆಡೆ ಮಾಡಿ, 'ಜಾತಿ'ಗಳಿಗೆ ಮತ್ತಿನ ಹಂತಿಗಳನ್ನು ಕೊಟ್ಟುದರಿಂದಲೂ ಧ್ವನಿತವಾಗುತ್ತದೆ. ಅಲ್ಲದೆ, ತನ್ನ ಗ್ರಂಥವನ್ನು ಕಂದಗಳಿಂದಲೇ ಎಂಬಂತೆ ರಚಿಸಿದ್ದಾನೆ. ಇರಲಿ, ಈ 'ಜಾತಿ'ಗಳನ್ನು ಅವನ ಅನಂತರ ಕಾಲದ ಮಹಾಕವಿಗಳೂ ಹೀಗೆಯೇ ಅವಜ್ಞೆಗೆ ಗುರಿ ಮಾಡಿ, ತಮ್ಮ ಚಂಪೂ ಪ್ರಬಂಧಗಳಲ್ಲಿ ಅಲ್ಲೊಂದು ಇಲ್ಲೊಂದು ಬರೆದಿರುತ್ತಾರೆ. ಹೀಗೆ ದಿನ ದಿನಕ್ಕೆ ಕ್ಷಯಿಸುತ್ತ ಬಂದು, ಇಂದು ಅವುಗಳನ್ನು ಕ್ರಮವಾಗಿ ಓದಲಾರದ ಸ್ಥಿತಿಗೆ ನಾವು ಮುಟ್ಟಿರುತ್ತೇವೆ. ಆದರೂ ನೃಪತುಂಗನ ಮಾತಿನಿಂದ, ಒಂದಾನೊಂದು ಕಾಲದಲ್ಲಿ ಇವು ಊರ್ಜಿತಾವಸ್ಥೆಯಲ್ಲಿದ್ದುವೆಂದು ಹೊಳೆಯುತ್ತದೆ. ಕಂದ ವೃತ್ತಗಳು ಸಂಸ್ಕೃತ ಪ್ರಾಕೃತಗಳ ಸಂಸರ್ಗದಿಂದ ಬಂದುವೆಂಬುದು ನಿರ್ವಿವಾದ ವಿಷಯ. ಅವುಗಳನ್ನು ಬಿಟ್ಟರೆ, ಆದಿಯಲ್ಲಿ ಕನ್ನಡದಲ್ಲಿದ್ದುವೆಂದು ನಾವು ಹೇಳಬಹುದಾದ ಬಂಧಗಳೆಂದರೆ ಈ 'ಜಾತಿ'ಗಳೇ ಸರಿ. ಈ 'ಜಾತಿ'ಗಳು ನಮಗೆ ತಿಳಿಯಲು ಸಾಧ್ಯವಿದ್ದಮಟ್ಟಿಗೆ ಕನ್ನಡದಲ್ಲಿ ಅತಿ ಪುರಾತನದವೆಂದು ಹೇಳಬಹುದಾಗುತ್ತದೆ.

ಈ 'ಜಾತಿ'ಗಳು ಸಂಸ್ಕೃತದಿಂದ ಬಂದುವೋ, ಕನ್ನಡಕ್ಕೆ ಸಹಜವೋ ಎಂಬುದನ್ನೀಗ ವಿಮರ್ಶಿಸುವ. ಇವುಗಳ ಸ್ವರೂಪ ನಿರ್ಣಯಕ್ಕೆ, ನಮ್ಮ ದುರ್ದೈವದಿಂದ, ನಾಗವರ್ಮನ ಛಂದೋಂಬುಧಿಯನ್ನು ಬಿಟ್ಟರೆ ಬೇರಾವ ಸಾಧನವೂ ದೊರೆತಿಲ್ಲ; ದೊರೆತಿರುವಷ್ಟರಲ್ಲಿಯೇ ನಮ್ಮ ಭಾಗ್ಯವೆಂದು ತೃಪ್ತಿಪಟ್ಟುಕೊಳ್ಳಬೇಕಾಗಿದೆ. ಏಕೆಂದರೆ, ಅದೂ ದೊರೆಯದೆ ಹೋಗಿದ್ದರೆ, ಅಲ್ಲೊಂದು ಇಲ್ಲೊಂದೆಂದು ಪಂಪಾದಿಗಳು ಪ್ರಯೋಗಿಸಿದ ಅಕ್ಕರದಂತಹವುಗಳನ್ನು, ನಾವು ಓದಲರಿಯದೆ, ಅವುಗಳನ್ನು ಛಂದೋಬಂಧಗಳಲ್ಲಿಯೇ ಎಣಿಸುವಂತಿರಲಿಲ್ಲ; ಕನ್ನಡಕ್ಕೆ ಕಂದವೃತ್ತಗಳೇ ಆದಿಯ ಬಂಧ

ಗಳೆಂದೂ ಹೇಳುತ್ತಿದ್ದೆವು. ನಾಗವರ್ಮನು ಇವುಗಳ ವಿಷಯ ಪೀಠಿಕೆಯಲ್ಲಿಯೇ ಹೀಗೆ ಹೇಳುತ್ತಾನೆ:—

"ಕರ್ಣಾಟಾಂಧ್ರ ದ್ರಾವಿಡ. . . . ಕೇರಳ ಶಾಳವಾದಿ ದೇಶದ ಭಾಷೆಗಳೊಳ್ ಪುಟ್ಟುವುವೆಲ್ಲಂ ಸರ್ವ ವಿಷಯ ಭಾಷಾ ಜಾತಿಗಳಕ್ಕುಂ. ಅವಾವುವೆಂದೊಡೆ:—

ಮದನವತಿ ಯಕ್ಕರಂ ಚೌ ।
ಪದಿ ಗೀತಿಕೆಯೇಳೆ ತಿವದಿ ಯುತ್ಸಾಹಂ ಷ ||
ಟ್ಪದಿ ಯಕ್ಕಂಕೆ ಕರು ಚೆ ।
ಲ್ವೊದವಿದ ಛಂದೋವತಂಸಂ" . . . . ||

ಮತ್ತು ಪಂಚಮಾಧಿಕಾರದಲ್ಲಿ, "ಕರ್ಣಾಟಕ ವಿಷಯ ಜಾತಿಯಂ ಕೇಳ್ ಪೇಳ್ವೆಂ" ಎಂದು ಅದೇ ಹತ್ತು ಜಾತಿಗಳ ಲಕ್ಷಣಗಳನ್ನೂ, ಅವುಗಳಿಗೆ ಆಧಾರವಾದ ಬ್ರಹ್ಮ, ವಿಷ್ಣು, ರುದ್ರ ಎಂಬ ಮೂರು ವಿಧವಾದ ಸಂಸ್ಕೃತದ ಛಂದಶ್ಶಾಸ್ತ್ರಗಳಲ್ಲಿಲ್ಲದ ಗಣಗಳ ಸ್ವರೂಪವನ್ನೂ ವಿವರಿಸಿದ್ದಾನೆ. ನಾಗವರ್ಮನ ಅಭಿಪ್ರಾಯದಲ್ಲಿ, ಇವು ಕನ್ನಡದ 'ಜಾತಿ'ಗಳು, ಕನ್ನಡಕ್ಕೆ ಸಹಜವಾದುವುಗಳು—ಎಂದಿದ್ದರೂ, ಪರಾಮರ್ಶಿಸಿ ತಿಳಿಯದೆ ಇದನ್ನು ಒಪ್ಪಲು ಸಾಧ್ಯವಿಲ್ಲ. ಏಕೆಂದರೆ, ನಮ್ಮ ಪೂರ್ವಜರ ಎಷ್ಟೋ ಅಭಿಪ್ರಾಯಗಳನ್ನು, (ಉದಾ.—'ಸಂಸ್ಕೃತದಿಂದಲೇ ಕನ್ನಡ ಮೊದಲಾದ ಸಮಸ್ತ ಭಾಷೆಗಳೂ ಹುಟ್ಟಿದುವು') ಈಗಣ ವಿದ್ವಾಂಸರು ನಿರಾಕರಿಸುತ್ತಾರೆ. ಅಲ್ಲದೆ, ಪ್ರಕೃತ ವಿಷಯದಲ್ಲಿ ಸಂಶಯಕ್ಕೆ ಎಡೆ ಇಲ್ಲದೆ ಇಲ್ಲ. ಆ ಹತ್ತು 'ಜಾತಿ'ಗಳಲ್ಲಿ ಸಂಶಯಾಸ್ಪದವಾದ 'ಏಳೆ'ಯೊಂದನ್ನು ಬಿಟ್ಟರೆ, ಉಳಿದೆಲ್ಲವುಗಳ ಹೆಸರು ಸಂಸ್ಕೃತವೋ, ಅಪಭ್ರಂಶವೋ ಆಗಿದೆಯೆಂಬುದು ಸ್ಪಷ್ಟ. ಅವುಗಳ ಘಟಕಗಳಾದ ಗಣಗಳಿಗೂ ಬ್ರಹ್ಮ, ವಿಷ್ಣು, ರುದ್ರ ಎಂಬ ಸಂಸ್ಕೃತದ ತ್ರಿಮೂರ್ತಿ ನಾಮಗಳೇ ಇವೆ. ಆದರೂ ನಾಗವರ್ಮನ ಅಭಿಪ್ರಾಯಕ್ಕೆ ಆಧಾರ ವಿದೆಯೋ ನೋಡುವ.

ಜನತೆಯು ಅಸಂಸ್ಕೃತವಾಗಿರುವ ಕಾಲದಲ್ಲಿ ಛಂದಶ್ಶಾಸ್ತ್ರದಲ್ಲಿ ಹೇಳಿದ ಲಕ್ಷಣಗಳನ್ನು ನೋಡಿ ಛಂದೋಬಂಧಗಳ ರಚನೆಯಾಗಲು ಸಾಧ್ಯವಿಲ್ಲವೆಂಬುದು ಸರ್ವಗ್ರಾಹ್ಯವಾಗದಿರದು. ಭಾಷೆಯು ತಕ್ಕ ಮಟ್ಟಿಗೆ ಪುಷ್ಟವಾದ ಮೇಲೆಯೇ ವ್ಯಾಕರಣವು ಹೇಗೆ ರಚಿತವಾಯಿತೋ ಹಾಗೆಯೇ ಹಲವು ಜಾತಿಯ ಪದ್ಯ ರಚನೆಗಳಾದ ಮೇಲೆಯೇ ಛಂದಶ್ಶಾಸ್ತ್ರವಾದರೂ ರಚಿತವಾಗಿದ್ದಿರಬೇಕು. ಹೀಗಿರುವಾಗ, 'ಕನ್ನಡ ಜಾತಿ' ಬಂಧಗಳಿಗೆ ಹೆಸರು ಕೊಡುವ ಸಮಯದಲ್ಲಿ ಸಂಸ್ಕೃತದ ಪ್ರಸಾರವು ಸಾಕಷ್ಟು ಆಗಿರಬಹುದಾದುದರಿಂದ ಆ ಹೆಸರುಗಳೂ ಅಲ್ಲಿ ಬರಲು ಕಾರಣವಾಗಿರಬಹುದು. ಅಲ್ಲದೆ, ಗಣ ನಿಯಮವಾದರೂ, ಸ್ವಯಂ ಪ್ರೇರಿತವಾದ, ಎಂದರೆ, ಪ್ರಕೃತಿಯು ಕವಿಯಿಂದ ಬರೆಯಿಸಿದ, ಪದ್ಯದ ಗತಿಯ ರಹಸ್ಯವನ್ನು ಭೇದಿಸಿ ತಿಳಿದ ಛಂದೋಮತಿಯ ಕೃತಿಯೇ ಹೊರತು, ಗಣ ನಿಯಮವನ್ನು ಕೊರಳಿಗೆ ಕಟ್ಟಿಕೊಂಡು

ಆದಿಯ ಕವಿಗಳು ಪದ್ಯ ರಚನೆ ಮಾಡಿದರೆಂಬುದು ಸಮಂಜಸವಾಗಲಾರದು. ಇಷ್ಟು ಮಾತ್ರವಲ್ಲ, ಗಣನೆ ಮಾಡಿ ಬರೆಯುವವನು ಕವಿಯೆಂದೆನಿಸುವುದು ಈಗ ಕೂಡ ಸಾಧ್ಯವಿಲ್ಲ. ಛಂದೋಗತಿಯಲ್ಲಿ ತನ್ನ ಪ್ರತಿಭೆಯ ಗತಿ ಐಕ್ಯ ಹೊಂದಿದಾಗ ಮಾತ್ರ ಪದ್ಯ ರಚನೆ ಸಾಧ್ಯವೆಂಬುದನ್ನು ಕವಿಗಳೆಲ್ಲರೂ ಅನುಭವಿಸಿ ಬಲ್ಲರು. ಆದುದರಿಂದ ಪದ್ಯ ಬಂಧದ, ಅಥವಾ ಗಣಗಳ ಸಂಸ್ಕೃತ, ಅಥವಾ ಅಪಭ್ರಂಶ ನಾಮಗಳು ಆ 'ಧಾಟಿ' ಗಳನ್ನು ಕನ್ನಡದವಲ್ಲವೆಂದು ಮಾಡಲಾರವು. ಗಣವೆಂಬುದಕ್ಕೆ ಸಮಾನಾರ್ಥಕವಾದ ಪಾರಿಭಾಷಿಕ ಶಬ್ದವು ಕನ್ನಡದಲ್ಲಿಲ್ಲವೆಂಬುದರಿಂದ, ಕನ್ನಡ ಕವಿತೆಗೆ ಗಣ ಬಂಧವೇ ಇಲ್ಲವೆಂದು ಹೇಳುವುದು ಸಾಧ್ಯವೇ? ಆದರೆ, ಇದರಿಂದ ನಿಷ್ಪನ್ನವಾಗುವುದೇನೆಂದರೆ, ಕನ್ನಡದಲ್ಲಿ ಸಂಸ್ಕೃತದ ಸಂಪರ್ಕಕ್ಕಿಂತ ಮೊದಲು ಛಂದಶ್ಶಾಸ್ತ್ರ ವಿಚಾರವು ಪ್ರಸ್ಫುಟವಾಗಲಿಲ್ಲವೆಂಬಂಶ ಮಾತ್ರ.

ಹೆಸರಿನಿಂದವನ್ನು ಸಂಸ್ಕೃತ ಜನ್ಯವೆಂದು ಹೇಳಲಾಗುವುದಿಲ್ಲವೆಂದ ಮಾತ್ರಕ್ಕೆ ಅವು ಕನ್ನಡದವೆಂದೇ ಸಿದ್ಧಾಂತ ಮಾಡಿದಂತಾಗಲಿಲ್ಲ. ಇದು ಮಾತ್ರ ಶ್ರಮ ಸಾಧ್ಯ. ಅದರಲ್ಲಿಯೂ, ಕೂಲಂಕಷ ಶೋಧಕರಾದ ಕೆಲ ವಿದ್ವದ್ವರ್ಯರು, ಸಾಮಾನ್ಯವಾಗಿ ಕನ್ನಡದವೆಂದೇ ತಿಳಿಯಲ್ಪಡುವ ಷಟ್ಪದಿಗಳು ಸಂಸ್ಕೃತದ 'ಮಯರಸತಜಭನ'ಗಳಿಂದ ಹುಟ್ಟಿದುವೆಂದು ಹೇಳುತ್ತಿದ್ದಾರೆ. ಈ 'ಜಾತಿ'ಗಳನ್ನು ಕುರಿತು ಮಹನೀಯರಾದ ವಿದ್ವಾಂಸರ ಸುಶೋಧಿತವಾದ ಅಭಿಪ್ರಾಯವೇನೋ ನನಗೆ ತಿಳಿಯದು. ಈ ವಿಷಯವಾಗಿ ಹೆಚ್ಚಿನ ವಿಚಾರಗಳು ಪ್ರಕಟವಾಗಿ ಚರ್ಚೆಯಾದಂತೂ ಇಲ್ಲ. ಇಂತಹ ಸಂದರ್ಭದಲ್ಲಿ ಯಾವುದೊಂದು ವಿಶಿಷ್ಟ ಅಭಿಪ್ರಾಯವನ್ನು ಕೊಡುವುದು ಮತ್ತಷ್ಟು ಪರಿಶ್ರಮ ಸಾಧ್ಯ. ಹೀಗಿದ್ದರೂ, ನನ್ನ ಬುದ್ಧಿಗೆ ಕಂಡುದನ್ನು ಕಂಡಂತೆ ಧೈರ್ಯ ಮಾಡಿ ಹೇಳುತ್ತೇನೆ; ಸಾವಧಾನವಾಗಿ ಪರಿಶೀಲಿಸಬೇಕು.

ಸಂಸ್ಕೃತದ ಪ್ರಸಿದ್ಧವಾದ ಎಲ್ಲಾ ಛಂದೋಬಂಧಗಳು, ಅಕ್ಷರ ಗಣನೆಯಿಂದ, ಅಥವಾ ಮಾತ್ರಾ ಗಣನೆಯಿಂದ ಸಿದ್ಧವಾಗುತ್ತವೆ. ಸಂಸ್ಕೃತದ ಆದಿಯ 'ಛಂದಸ್ಸ' ಗಳನ್ನು ನೋಡಿದರೆ, ಅಲ್ಲಿ ಪಾದಕ್ಕೆ ಗಣ ನಿಯಮವಿಲ್ಲದೆ, ಕೇವಲ ಅಕ್ಷರ ಗಣನೆಯೇ ಸಾಕಾಗಿತ್ತೆಂಬುದು ಕಂಡುಬರುವುದು; ಅವುಗಳ ಮಾತ್ರೆಯೂ ಸಮಾನವಾಗಿಲ್ಲವೆಂದೂ ತೋರುವುದು. ಆದುದರಿಂದ, ಸಂಸ್ಕೃತದಲ್ಲಿ ಮೊದಲು ಅಕ್ಷರ ಗಣಗಳು ಹುಟ್ಟಿ, ಅನಂತರ ಮಾತ್ರಾ ಗಣಗಳು ಹುಟ್ಟಿದುವೆಂದು ತಿಳಿಯಬೇಕಾಗುತ್ತದೆ. ಅದು ಹೇಗೂ ಇರಲಿ; ಆದಿಯ, ಎಂದರೆ ವೈದಿಕ ಬಂಧಗಳನ್ನು ಬಿಟ್ಟು, ಕಾವ್ಯ ಪುರಾಣ ಕಾಲಗಳ ಛಂದೋಬಂಧವನ್ನು ವಿಚಾರಿಸಿದರೆ, ಅಲ್ಲಿ ಸರ್ವತ್ರ ವಿರಾಜಿಸುವುದು ಅನುಷ್ಟುಪ್ ಶ್ಲೋಕ. ಕಾವ್ಯದ ಛಂದಸ್ಸಿನಲ್ಲಿ ವೈದಿಕ ಪದ್ಧತಿಯ ಛಂದಸ್ಸಿನ ಅವಶೇಷ ವಿದೆಂದು ಹೇಳಬಹುದು. ಏಕೆಂದರೆ, ಇದು ವೇದದಲ್ಲಿಯೂ ಇದೆ. ಆದರೆ ವೇದದ ಶ್ಲೋಕದಷ್ಟು ಕಾವ್ಯದ ಶ್ಲೋಕವು ಉಚ್ಛೃಂಖಲವಲ್ಲ. ದಿನ ದಿನಕ್ಕೆ ಅದರ ಬಂಧವು ಬಿಗಿಯಾಗುತ್ತ ಬಂದಿತೆಂದು ತೋರುತ್ತದೆ.

ಉದಾ :—ತದಹಂ ಭಕ್ತ್ಯುಪಹೃತ । ಮಶ್ನಾಮಿ ಪ್ರಯತಾತ್ಮನಃ ॥ (ಭಗವದ್ಗೀತೆ)

ಇಂತಹ ಶಿಥಿಲ ಬಂಧವು ಉತ್ತರ ಕಾಲ ಗ್ರಂಥಗಳಲ್ಲಿ ದುರ್ಲಭ. ಹಳೆ ಹಳೆಯ ಕಾವ್ಯಗಳಲ್ಲಿ ತೋರುವ ನಿರ್ಬಂಧಗಳಿಗಿಂತ ಅನಂತರ ಕಾಲೀನ ಕಾವ್ಯಗಳಲ್ಲಿ ಹೆಚ್ಚು ನಿರ್ಬಂಧಗಳಿಂದಿದನ್ನು ರಚಿಸಿರುತ್ತಾರೆ. ಹೀಗಿದು ರೂಪುಗೊಳ್ಳುತ್ತ ಕಾಳಿದಾಸಾದಿಗಳಿಂದಿತ್ತ ಒಂದು ನಿಷ್ಕೃಷ್ಟ ರೂಪವನ್ನು ಹೊಂದಿತು. ಆದರೂ, ಇಂದೂ ಒಂದು ಅನುಷ್ಟುಪ್ ಶ್ಲೋಕವನ್ನು ರಚಿಸುವುದಾದರೆ, ಅಕ್ಷರ ಗಣ ನಿಯಮವಾಗಲಿ, ಮಾತ್ರಾ ಗಣನೆಯಾಗಲಿ ಇದಕ್ಕೆ ಬೇಕಾಗಿಲ್ಲ; ಕೇವಲ ಪರಂಪರಾಗತವಾದ ಒಂದೆರಡು ನಿರ್ಬಂಧಗಳನ್ನು ತಪ್ಪದಿದ್ದರೆ ಸರಿ. ಇದರ ಬೆಳೆವಣಿಗೆಯನ್ನು ವಿಮರ್ಶಿಸುತ್ತ ಹೋದರೆ ಅದೇ ಒಂದು ದೊಡ್ಡ ಪ್ರಬಂಧವಾದೀತು; ಇರಲಿ, ಇದಾದ ಮೇಲೆ ಕಾವ್ಯ ಪುರಾಣಗಳಲ್ಲಿ ಮುಖ್ಯವಾಗಿರುವುದು 'ಉಪಜಾತಿ'. ಪಂಚ ಮಹಾ ಕಾವ್ಯಗಳ ಉಪಜಾತಿಯು ಇಂದ್ರವಜ್ರ, ಉಪೇಂದ್ರವಜ್ರಗಳ ಮಿಶ್ರಣವಾಗಿರುವುದಾದರೂ, ಪುರಾಣಗಳ ಉಪಜಾತಿಯಲ್ಲಿ ವಂಶಸ್ಥಾದಿಗಳ ಸಮ್ಮಿಶ್ರಣವೂ ಇದೆ. ಇನ್ನುಳಿದುವಾದರೂ ಹೆಚ್ಚಾಗಿ 'ಮಯರಸತಜಭನ'ಗಳ ನಿಯಮವನ್ನು ಪಾಲಿಸುವುವೇ. ಕೆಲ ಕೆಲವು ಮಾತ್ರಾ ಬಂಧಗಳೂ, ಅಕ್ಷರ ಬಂಧ ಮಾತ್ರಾ ಬಂಧಗಳ ಸಂಸೃಷ್ಟಿ, ಅಥವಾ ಸಂಕರಗಳೂ ಇವೆ. ತಾತ್ಪರ್ಯವೇನೆಂದರೆ, ಸಂಸ್ಕೃತದಲ್ಲಿ ಅಕ್ಷರ ಗಣನೆಗೇ ಪ್ರಾಮುಖ್ಯ ಹೊರತು ಮಾತ್ರೆಗಳಿಗೆ ಅಲ್ಲ; ಎಂದರೆ, ಅವು ಹೆಚ್ಚಾಗಿ ತಾಲ ಪ್ರಧಾನವಾದ ಬಂಧಗಳಲ್ಲ. ಮಾತ್ರೆಗಳಿಗೆ ಪ್ರಾಧಾನ್ಯವಿತ್ತ ಆರ್ಯೆ, ಗೀತಿಕೆ ಮೊದಲಾದುವು ಪ್ರಾಕೃತದಲ್ಲಿ ಪ್ರಾಬಲ್ಯವನ್ನು ಪಡೆದಿವೆ. ಇದರಿಂದ, ಧ್ರುವ ಗಾನಕ್ಕೆ ಎಂದರೆ, ತಾಲ ಬದ್ಧವಾದ ಹಾಡಿಗೆ, ಪ್ರಾಕೃತವೇ ಹೆಚ್ಚಾಗಿ ಉಪಯೋಗಿಸಲ್ಪಡುತ್ತಿತ್ತು; ಸಂಸ್ಕೃತವು ಹೆಚ್ಚಾಗಿ ಅಪಕೃಷ್ಟ, ಎಂದರೆ ತಾಲ ಬದ್ಧವಲ್ಲದೆ ಕೇವಲ ರಾಗ ಬದ್ಧವಾದ ಗಾನಕ್ಕೇ ವೈದಿಕ ಛಂದಸ್ಸಿನಂತೆ ಉಪಯುಕ್ತವಾಗಿತ್ತು. (ಇದಕ್ಕೆ ಒಂದೊಂದು ಅಪವಾದವಿರಬಹುದು; ಇದೆ. ಉದಾ.—ಗೋಪಿಕಾ ಗೀತೆ) ಎಂದು ತಿಳಿಯಬೇಕಾಗುತ್ತದೆ. ಇದಕ್ಕೆ ಆಧಾರವು ವಿಪುಲವಾಗಿ ದೊರೆಯುತ್ತದೆ. ರಘುವಂಶದಲ್ಲಿ ಉದಯ ರಾಗಕ್ಕೆ ವಸಂತ ತಿಲಕವನ್ನೇ ಕಾಳಿದಾಸನು ಉಪಯೋಗಿಸಿದ್ದಾನೆ; ಮಾಘನು ಮಾಲಿನಿಯನ್ನೇ ಹಾಡಿದ್ದಾನೆ. ನಾನು ತಿಳಿದ ಮಟ್ಟಿಗೆ ರೂಢಿಯ ಯಾವ ತಾಳವೂ ಇವಕ್ಕೆ ಹೊಂದಲಾರದು. ವೈದಿಕ ಋಷಿಗಳು ಈಶ್ವರ ಸ್ತೋತ್ರ ಪ್ರಿಯರೂ ಧ್ಯಾನ ಮಗ್ನರೂ ಆಗಿದ್ದುದರಿಂದ, ಮೆಯ್ಯನ್ನು ಕುಣಿಸುವ ಧ್ರುವ ಗಾನಕ್ಕಿಂತ ಮನಸ್ಸನ್ನು ಕಣ್ಣು ತೂಗಿಸಿ (?) ಉಪಶಮಿಸುವ ಅಕ್ಷರದಿಂದ ಅಕ್ಷರಕ್ಕೆ ಸುಸೂಕ್ಷ್ಮವಾದ ಲಯ ಗತಿ ಇರುವ, ಅನಿಯತ ಸ್ಥಾನದಲ್ಲಿ ವಿರಮಿಸುವ, ಒಮ್ಮೊಮ್ಮೆ ಮೃದಂಗ ವೀಣಾದಿಗಳಲ್ಲಿ ತೋರಿಸಲ್ಪಡುವ ವಿಷಮ ತಾಳದ 'ಗತ್ತು'ಗಳಂತಿರುವ ರಾಗದ ಮಾಧುರ್ಯಕ್ಕೆ ಮೀಸಲಾದ, ಗಂಭೀರವಾದ ಅಪಕೃಷ್ಟ ಗಾನದಲ್ಲಿಯೇ ಆಸಕ್ತರಾಗಿ ತಲ್ಲೀನರಾಗುತ್ತಿದ್ದರು. ಅದೇ ಪರಂಪರೆ ಸಂಸ್ಕೃತ ಭಾಷೆಗೂ ಬಂತು. ಆದರೆ ಸಾಮಾನ್ಯ ಜನತೆಗೆ ತಾಲ ಬದ್ಧವಾದುದೇ ಇಷ್ಟವಾದುದರಿಂದ, ಪ್ರಾಕೃತದಲ್ಲಿ ತಾಲಕ್ಕೆ, ತದುಪಜೀವಿಯಾದ ಮಾತ್ರಾ ಬಂಧಕ್ಕೆ ಉದಾರಾಶ್ರಯವು ದೊರೆಯಿತು. ಸಂಸ್ಕೃತ ಭಾಷೆಯಲ್ಲಿ ವಿಷಮಾಂತರಗಳಲ್ಲಿ ವಿಶ್ರಮಿಸುವ ಅಪಕೃಷ್ಟ ಗಾನ ಪದ್ಧತಿಯ ಪ್ರಭಾವವು ಎಷ್ಟರ

ಮಟ್ಟಿಗೆ ತಾಲಬದ್ಧವಾದ ಧ್ರುವಬಂಧಗಳಲ್ಲಿಯೂ ಪರಿಣಾಮವನ್ನುಂಟುಮಾಡಿದೆ ಯೆಂಬುದಕ್ಕೆ ಇದೊಂದು ಉದಾಹರಣೆ ಕೊಡುತ್ತೇನೆ:—

ಮಣಿಭಂಗಮೇಚಕಾಂಗೀಂ । ಮಾತಂಗೀಂ ನೌಮಿ ಸಿದ್ಧ ಮಾತಂಗೀಂ ॥
ಯವ್ವನವನಸಾರಂಗೀಂ । ಸಂಗೀತಾಂಭೋರುಹಾಸುಭವ ಭೃಂಗೀಂ ॥

ತಾಲಬದ್ಧವಾದ ಈ 'ಗೀತಿಕೆ'ಯಲ್ಲಿ ಅನುಪ್ರಾಸಗಳು ಬಂದಿರುವ ಸ್ಥಳವನ್ನು ಸೂಕ್ಷ್ಮವಾಗಿ ಅವಲೋಕಿಸಬೇಕು. ಲಯ ಗತಿ ನಾಲ್ಕು ಮಾತ್ರೆಗೊಂದರಂತಿರುವ ಕಾರಣ ಧ್ರುವಗಾನದ ದೃಷ್ಟಿಯಲ್ಲಿ ಅಲ್ಲಲ್ಲಿಯೇ ಅನುಪ್ರಾಸವಿದ್ದರೆ ಶೋಭೆ. ಇಲ್ಲಿ ಯಾದರೂ ವಿಷಮಸ್ಥಾನಗಳಲ್ಲಿಯೂ ಅದು ಝೇಂಕರಿಸುತ್ತದೆ. ಧ್ರುವಗಾನವು ಪ್ರಧಾನವಾಗಿದ್ದ ಪರಂಪರೆಯ ಕವಿ ಪ್ರಯತ್ನಪೂರ್ವಕವಾಗಿ ಗಣಾಂತದಲ್ಲಿಯೋ, ಗಣಾದಿಯಲ್ಲಿಯೋ ತಪ್ಪದೆ ಅನುಪ್ರಾಸವಿಡುತ್ತಿದ್ದನು: ಉದಾ.—ಚೆನ್ನಬಸವ ಪುರಾಣದ

ತೋರ ಬೋರಿಗಳ ದುರುಕಾ ರವಂ ಗಳದ ಘಂ ।
ಟಾ ರವಂ ಪಶುಗಳಂಭಾ ರವಂ ಕರುಗಳಂ ।
ಭೇ ರವಂ ಕರೆವ ಭೋಭೋರ್ ರವಂ ಮಂಥಾನದಾ ರವಂ ಗೊಲ್ಲತಿಯರ॥—ಇತ್ಯಾದಿ.

ಆರ್ಯೆ ಮೊದಲಾದ ಪ್ರಾಕೃತ ಬಂಧಗಳು ಕೇವಲ ಗಾನಕ್ಕೇ ಉಪಯುಕ್ತ ವಾಗಿದ್ದುವೆಂಬುದರಲ್ಲಿ ಸಂದೇಹವಿಲ್ಲ. ಸಂಸ್ಕೃತ ನಾಟಕಗಳಲ್ಲಿ (ಉದಾ.—ಶಾಕುಂತಲ) ನಟಿ ಗಾನಮಾಡುವುದು ಆರ್ಯಾಜಾತಿಯ ಗೀತಿಯನ್ನು. ಆರ್ಯಾಛಂದಕ್ಕೆ 'ಗಾಥಾ' ಎಂಬ ಹೆಸರೂ ಇದೆ. 'ಗಾಥಾ' ಎಂದರೆ ಹಾಡು ಎಂಬುದೇ ಅರ್ಥ. ಅಲ್ಲದೆ, ಆಧುನಿಕನಾದ ಜಯದೇವನ 'ಗೀತಗೋವಿಂದ'ದಂತಹ ಒಂದೆರಡನ್ನು ಬಿಟ್ಟರೆ, ಪ್ರಖ್ಯಾತ ಛಂದೋಬಂಧಗಳಿಗೆ ಬಹಿರ್ಭೂತವಾದ ಗೀತಸಾಹಿತ್ಯವು ಸಂಸ್ಕೃತದಲ್ಲಿ ಇಲ್ಲವೆಂದರೂ ಸಲ್ಲುವುದು. ಇದರಿಂದ, ಆರ್ಯಾದಿ ಮಾತ್ರಾವೃತ್ತಗಳೇ ಸಂಸ್ಕೃತದ ಧ್ರುವಗಾನ ಸಾಹಿತ್ಯವಾಗಿದ್ದುವೆಂಬುದು ಸಿದ್ಧವಾಗುತ್ತದೆ. ಅಲ್ಲದೆ, ನನ್ನ ವಿಚಾರ ದಂತೆ, ಧ್ರುವಗಾನಸಾಹಿತ್ಯದ ಮುಖ್ಯ ಲಕ್ಷಣಗಳೆಲ್ಲ ಆರ್ಯಾದಿ ಬಂಧಗಳಲ್ಲಿ ಅನ್ವಯಿಸುತ್ತವೆ. ಅದನ್ನು ಸಂದರ್ಭೋಚಿತವಾಗಿ ಮುಂದೆ ಹೇಳುತ್ತೇನೆ.

ನಾಗವರ್ಮನ "ಕರ್ಣಾಟಕ ವಿಷಯ ಜಾತಿ"ಗಳ ಜೀವಾಳವಾದ ತ್ರಿಮೂರ್ತಿ ಗಣಗಳನ್ನು ನೋಡಿದರೆ, ಅವು ಕೇವಲ ಅಕ್ಷರಗಣಗಳೂ ಅಲ್ಲ, ಕೇವಲ ಮಾತ್ರಾ ಗಣಗಳೂ ಅಲ್ಲವೆಂದು ಹೊಳೆಯದಿರದು. ಸ್ವರ್ಗೀಯ 'ಕಿಟೆಲ್' ಸಾಹೇಬರು ಅವುಗಳನ್ನು "ಕನ್ನಡ ಮಾತ್ರಾಗಣಂಗಳ್" ಎಂದು ಮುದ್ರಿಸಿಬಿಟ್ಟುದನ್ನೇ ಇಂದೂ ಸಹ ವಿದ್ವಾಂಸರು ಅನುವದಿಸುತ್ತಿದ್ದಾರೆ. (ಉದಾ.—ಪಂಪಭಾರತದ ಉಪೋದ್ಘಾತ). ಅಲ್ಲದೆ, ಸಾಂಗತ್ಯ ಮೊದಲಾದ ಕನ್ನಡದ ಮುಕ್ಕಾಲೂ ಮೂರು ವೀಸ ಹಾಡುಗಳಿಗೂ, ನಾನು ಮುಂದೆ ತೋರಿಸುವಂತೆ ಷಟ್ಪದಿಗಳಿಗೂ ಕೂಡ ಮಾತ್ರಾ ಸ್ಥಾನದಲ್ಲಿರುವ ಈ ಛಂದೋಗಣಗಳ ವಿಚಾರವನ್ನು ಸರಿಯಾಗಿ ತಿಳಿಯಲು

ವಿದ್ವಾಂಸರು ಮನಸ್ಸು ತಾರದೆ ಸಾಂಗತ್ಯ ಮೊದಲಾದವುಗಳಿಗೆ ಯದ್ವಾ ತದ್ವಾ ಲಕ್ಷಣ ಗಳನ್ನು ಬರೆಯುವುದು ನಮ್ಮ ದುರ್ದೈವವೆಂದೇ ಹೇಳಬೇಕು. ಇರಲಿ, ಮಾತ್ರಾ ಗಣಗಳೂ ಅಲ್ಲದಿದ್ದರೆ, ಅಕ್ಷರ ಗಣಗಳೂ ಅಲ್ಲದಿದ್ದರೆ, ಅವಿನ್ನು ಎಂತಹ ಭೂತಗಣ ಗಳಪ್ಪಾ! ಎಂದರೆ, ಅವುಗಳಿಗೊಂದು ಹೆಸರಿಟ್ಟರೆ ಜನ್ಮ ಸಾರ್ಥಕವಾಯಿತೆಂದು ನನ್ನ ಅಭಿಪ್ರಾಯವಲ್ಲ; ಮಾತ್ರಾ ಗಣ ಎಂದರೆ, ಆವೊಂದು ಗುಂಪಿನ ಗಣಗಳಿಗೆಲ್ಲ ಸಮಾನ ಸಂಖ್ಯೆಯ ಮಾತ್ರೆ ಇರುವ ಗಣವೆಂಬ ಅರ್ಥವಾಗುತ್ತದೆ. ಅಕ್ಷರ ಗಣ ಎಂದರೆ, ಆವೊಂದು ಗುಂಪಿನ ಗಣಗಳಿಗೆಲ್ಲ ಸಮಾನ ಸಂಖ್ಯೆಯ ಅಕ್ಷರಗಳಿರುವು ವೆಂದು ಬೋಧವಾಗುತ್ತದೆ. ಆದರೆ, ಬ್ರಹ್ಮ ವಿಷ್ಣು ರುದ್ರ ಗಣಗಳಿಗೆ ಈ ಅರ್ಥವು ಹತ್ತುವುದಿಲ್ಲ. ಬ್ರಹ್ಮ ಗಣದಲ್ಲಿ ಕಡಿಮೆಯೆಂದರೆ ಎರಡು ಅಕ್ಷರಗಳು, ಹೆಚ್ಚೆಂದರೆ ಮೂರು ಅಕ್ಷರಗಳು ಇರುವುವು; ವಿಷ್ಣು ಗಣದಲ್ಲಿ ಕಡಿಮೆಯೆಂದರೆ ಮೂರು, ಹೆಚ್ಚೆಂದರೆ ನಾಲ್ಕು ಅಕ್ಷರಗಳು; ರುದ್ರ ಗಣದಲ್ಲಿ ಕಡಿಮೆಯೆಂದರೆ ನಾಲ್ಕು, ಹೆಚ್ಚೆಂದರೆ ಐದು ಅಕ್ಷರಗಳು ಇರಬಹುದು. ಆದುದರಿಂದ, ಇವು ಅಕ್ಷರ ಗಣಗಳಲ್ಲ. ಇನ್ನು, ಬ್ರಹ್ಮ ಗಣದಲ್ಲಿ ಅಕ್ಷರ ಗತವಾದ ಗುರು ಲಘು ದೃಷ್ಟಿಯಲ್ಲಿ, ಹೆಚ್ಚೆಂದರೆ ನಾಲ್ಕು ಮಾತ್ರೆ, ಕಡಿಮೆಯೆಂದರೆ ಮೂರು ಮಾತ್ರೆ; ವಿಷ್ಣು ಗಣದಲ್ಲಿ ಹೆಚ್ಚೆಂದರೆ ಆರು ಮಾತ್ರೆ, ಕಡಿಮೆಯೆಂದರೆ ನಾಲ್ಕು ಮಾತ್ರೆ; ರುದ್ರ ಗಣದಲ್ಲಿ ಹೆಚ್ಚೆಂದರೆ ಎಂಟು ಮಾತ್ರೆ, ಕಡಿಮೆಯೆಂದರೆ ಐದು ಮಾತ್ರೆಗಳು ಇರುವವು. ಹೀಗಿರುವುದರಿಂದ, ಇವು ಮಾತ್ರಾ ಗಣಗಳೂ ಅಲ್ಲ. ಇವಕ್ಕಿನ್ನು ಹೆಸರಾವುದೆಂದು ಕೇಳಿದರೆ, ಪೂರ್ವಿಕ ರಿಟ್ಟ ತ್ರಿಮೂರ್ತಿ ಸಂಜ್ಞೆಯೇ ಇದೆ; ಅಥವಾ ಕನ್ನಡ 'ಜಾತಿ'ಗಳಿಗೆ ಉಪಯುಕ್ತ ವಾದ ಗಣಗಳಿವಾದುದರಿಂದ, ನಾಮಕರಣ ಪ್ರಿಯರಿವನ್ನು ಕನ್ನಡ ಜಾತಿ ಗಣಗಳೆಂದು ಕರೆಯಬಹುದು. ಆದರೆ, ಇಲ್ಲೊಂದು ಪ್ರಶ್ನೆ ಉದ್ಭವಿಸುತ್ತದೆ: ಇವು ಇಷ್ಟು ಶಿಥಿಲ ಗಣಗಳಾಗಿರುವಾಗ, ಬ್ರಹ್ಮ ಗಣ ನಾಲ್ಕು, ವಿಷ್ಣು ಗಣ ಎಂಟು, ರುದ್ರ ಗಣ ಹದಿನಾರು—ಇವನ್ನು ಒಂದೊಂದು ವರ್ಗದವೆಂದು ಮಾಡುವ ಸಮಾನ ಧರ್ಮ ವೇನು? ಇದೇ ತಿಳಿಯತಕ್ಕ ವಿಷಯ.

ಈ ಗಣಗಳೆಲ್ಲ ತಾಳಕ್ಕೆ ಒಳಪಟ್ಟು ಇವೆ. ಯಾವುದಾದರೊಂದು ವರ್ಗದ ಮೊದಲನೆಯ ಗಣವನ್ನು ಉಚ್ಚರಿಸುವುದಕ್ಕೆ ಎಷ್ಟು ಮಾತ್ರಾ ಕಾಲ ಬೇಕೋ, ಉಳಿದುವನ್ನು ಉಚ್ಚರಿಸಲೂ ಅಷ್ಟೇ ಕಾಲವನ್ನು ವ್ಯಯಿಸಬೇಕು; ಎಂದರೆ, ಯಾವುದೊಂದು ವರ್ಗದ ತೃತೀಯ ಗಣವನ್ನು ಮೊದಲುಗೊಂಡು, ಉಳಿದೆಲ್ಲ ಗಣಗಳಲ್ಲಿ ಕೆಲವು ಲಘುಗಳನ್ನು ಎರಡು ಮಾತ್ರಾ ಕಾಲಗಳಲ್ಲಿ ಉಚ್ಚರಿಸಬೇಕು. ಆದರೆ ಗಣಾರಂಭದಲ್ಲಿ ಎರಡು ಲಘುಗಳಿದ್ದರೆ ಅವನ್ನು ಗುರು ಮಾಡದೆ, ಉಳಿದುವೆಲ್ಲ ಗುರು ವಾದರೆ ಹೇಗೋ ಹಾಗೆಯೇ ಉಚ್ಚರಿಸಬೇಕು; ಎಂದರೆ, ಅವು ಲಘುಗಳಾಗಿದ್ದರೂ ಗುರುಗಳೆಂದೇ ಗ್ರಹಣ. ಇದು ಸ್ವಲ್ಪ ವಿಚಿತ್ರವಾಗಿ ತೋರಬಹುದು. ಆದರೆ ವಿಚಾರಾಂತದಲ್ಲಿ ಹಾಗೆ ಕಾಣದು. ಪದ್ಯದ ಪದಾಂತದಲ್ಲಿರುವ ಲಘುವನ್ನು (ರಗಳೆ ಯಲ್ಲಿ ಹೊರತು) ಗುರುವೆಂದು ಗ್ರಹಣ ಮಾಡುವುದು ಛಂದಶ್ಶಾಸ್ತ್ರದ ಸಾಮಾನ್ಯ

ಪದ್ಧತಿ. ಇದೇಕೆ? ಎಂದರೆ, ಕೊನೆಯಲ್ಲಿ ಎಳೆದು ಹೇಳಬೇಕಾದ ಗಾನದ ಅನುಕೂಲ್ಯಕ್ಕೆ. (ಕಾಲಬದ್ಧ ಪದ್ಯಗಳಲ್ಲೆಲ್ಲ ಹೆಚ್ಚಾಗಿ ಕೊನೆಯ ಗಣ ಅಪೂರ್ಣವಾಗಿರುವುದೂ ಇದಕ್ಕಾಗಿಯೇ.) ಹಾಗೆಯೇ, ಈ ಗಣಗಳಲ್ಲಿಯೂ ಗಾನಕ್ಕಾಗಿ ಆ ಲಘುಗಳನ್ನು ಗುರುಗಳೆಂದೇ ತೆಗೆದುಕೊಳ್ಳಬೇಕು. ಹಾಗಾದರೆ, ಮೊದಲಿನ ಎರಡು ಲಘುಗಳನ್ನು ಬೇಕಾದಂತೆ ಎಳೆಯಬಹುದಲ್ಲ? ಅಥವಾ, ಗುರುವನ್ನು ಲಘು ಮಾಡಿ, ಇಷ್ಟಬಂದ ರೀತಿಯಲ್ಲಿ ಗುರು ಲಘೂಚ್ಚಾರಣೆ ಮಾಡಿ, ತಾಳ ತಪ್ಪದೆ ಹೇಳಿಬಿಡಬಹುದಲ್ಲ? ಈ ತ್ರಿಮೂರ್ತಿಗಳ ಬವಣೆಯೇಕೆ? ಎಂದರೆ, ಗಾನದಲ್ಲಿ ಸಾಮಾನ್ಯವಾಗಿ ಗಿಡ್ಡವಾದುದನ್ನು ಉದ್ದಮಾಡಬಹುದೇ ವಿನಾ, ಉದ್ದವಾದುದನ್ನು ಗಿಡ್ಡಮಾಡುವುದಕ್ಕಾಗುವುದಿಲ್ಲ; ಹಾಗೆ ಮಾಡಿದರೆ ಕೇಳುವವರಿಗೆ ಅರ್ಥವು ಸ್ಫುರಿಸುವುದಿಲ್ಲ. ಇದು ಮಾತಿನಿಂದ ಸಮರ್ಥನೀಯವಲ್ಲ, ಶ್ರವಣಾನುಭವಗಳಿಂದ ಮಾತ್ರ ತಿಳಿಯಲು ಸಾಧ್ಯ. ಇನ್ನು, ಪ್ರಥಮದ ಎರಡು ಲಘುಗಳನ್ನು ದೀರ್ಘ ಮಾಡಬಹುದೆಂದರೆ, ಎರಡನೆಯದನ್ನು ಗುರು ಮಾಡಿದೊಡನೆ ತ್ರಿಪುರುಷ ಗಣದ ಪ್ರಾಣವೇ ಹಾರಿಹೋಗುತ್ತದೆ. ಈ ಗಣಗಳ ಮುಖ್ಯ ನಿಯಮವೇ ಅದು. ಅದಕ್ಕಾಗಿ ಅಲ್ಲದಿದ್ದರೆ ಈ ಗಣಗಳ ನಿರ್ಮಾಣವೇ ಆಗುತ್ತಿದ್ದಿಲ್ಲ. ವಿಶುದ್ಧವಾದ ಕರ್ಣಾಟಕ ದೇಶ್ಯ ಬಂಧವಾವುದರಲ್ಲಿಯೂ ಯಾವುದೊಂದು ಗಣದ ಪ್ರಥಮಾಕ್ಷರವು ಲಘುವಾಗಿ ದ್ವಿತೀಯಾಕ್ಷರವು ಗುರುವಾಗಿರುವುದಿಲ್ಲ. ಮೊದಲನೆಯ ಲಘುವನ್ನು ಗುರು ಮಾಡಿ ಓದಿದರೆ, ಗಣಾರಂಭದಲ್ಲಿ ಕಾಲಾತಿಪಾತವಾಗಿ ಕೊನೆಯದನ್ನು ಲಘುವಾಗಿ ಉಚ್ಚರಿಸಬೇಕಾಗುತ್ತದೆ. ಇದೇ ಇದರಲ್ಲಿ ಮಾಡಬಾರದ ತಪ್ಪು. ಆದಿಯ ಲಘುವೆರಡನ್ನೂ ಗುರು ಮಾಡಿ ಓದುವ ಆವಶ್ಯವೇ ಬರುವುದಿಲ್ಲ. ಏಕೆಂದರೆ, ಹಾಗೆ ಮಾಡಿದರೆ ಗಣಕ್ಕೆ ಬೇಕಾದುದಕ್ಕಿಂತ ಒಂದಕ್ಷರವನ್ನು ಹೆಚ್ಚು ಉಪಯೋಗಿಸಿದಂತಾಗುತ್ತದೆ. ಇದಕ್ಕೆ ಕಾರಣವೇನೆಂದರೆ, ಆದಿ ಗುರುವಾದ ಬ್ರಹ್ಮ ವಿಷ್ಣು ರುದ್ರಗಳಲ್ಲೆಲ್ಲ ಅನುಕ್ರಮವಾಗಿ ಎರಡು ಮೂರು ನಾಲ್ಕೇ ಅಕ್ಷರಗಳು ಇರಬೇಕು; ಆದಿ ಲಘುವಾದುವುಗಳಲ್ಲಿ ಮಾತ್ರ ಅನುಕ್ರಮವಾಗಿ ಮೂರು, ನಾಲ್ಕು, ಐದು ಅಕ್ಷರಗಳಿರಬೇಕು. ಇರಲಿ, ಪ್ರತಿಯೊಂದು ಗಣದ ತುದಿಯೂ ಪಾದಾಂತದಂತೆ ದೀರ್ಘವೆಂದೇ ತಿಳಿಯಬೇಕು. ಇದರಿಂದಲೇ ಈ 'ಜಾತಿ'ಗಳಲ್ಲಿ ಪ್ರತಿ ಗಣಾಂತದಲ್ಲಿಯೂ ಯತಿ ಇರಬೇಕಾಗುತ್ತದೆ. ಹೀಗೆ ವಿಚಾರ ಮಾಡಿದರೆ, ಹರಿದುಹೋಗುವ ಹಾಡಿಗೆ ಗಣ ನಿರ್ಮಾಣ ಮಾಡಿದ ಕುಶಾಗ್ರ ಬುದ್ಧಿಯ ಕೌಶಲ್ಯಕ್ಕೆ ನಮ್ಮಲ್ಲುಂಟಾಗುವ ಬೆರಗೇ, ನಾವೀ ಗಣದ ವಿಷಯದಲ್ಲಿ ಮಾಡುವ ಆಕ್ಷೇಪಗಳಿಗೆ ಸಮರ್ಪಕವಾದ ಉತ್ತರವನ್ನು ಕೊಡುತ್ತದೆ. ಗಣಗಳ ಈ ರಹಸ್ಯವನ್ನರಿತರೆ ಆ 'ಜಾತಿ'ಗಳನ್ನೋದುವ ಕೆಲಸವು ಸುಸೂತ್ರವಾಗಿ ಸಾಗುತ್ತದೆ. 'ಆದರೆ ಇಂತಹ ಶಿಥಿಲ ಬಂಧವನ್ನು ಛಂದೋಬಂಧವೆಂದು ಹೇಗೆ ಹೇಳಲಿ? ಅದು ಸಾಹಿತ್ಯದ ಸೊತ್ತಾಗುವುದಕ್ಕೆ ಯೋಗ್ಯವಲ್ಲ; ಅರ್ಥ ಪ್ರಧಾನವಲ್ಲದ ಕೇವಲ ಸಂಗೀತಕ್ಕೆ ಅದು ಸಲ್ಲಲಿ!' ಎಂದು ಆಕ್ಷೇಪಿಸುವುದಾದರೆ, ಅನುಷ್ಟುಪ್ ಶ್ಲೋಕದಷ್ಟು ಇದು ಖಂಡಿತವಾಗಿಯೂ ಬಂಧನ ರಹಿತವಲ್ಲ. ಮಧ್ಯ ಮಧ್ಯದಲ್ಲಿ 'ಕಾಮ' (Comma) ಗಳನ್ನು ಹಾಕಿ ಅಕ್ಷರಗಳನ್ನು ಲೋಪಿಸಿ ಹೇಗೂ ಛಂದಕ್ಕೆ ಸರಿಯಾಗಿ

ಬರೆದಿದ್ದೇನೆಂದು ತೋರಿಸುವ ಅನ್ಯ ಭಾಷೆಗಳ ಬಂಧವನ್ನು ಛಂದವೆಂದು ಹೇಳುವುದಾದರೆ, ಇದು ನಿಜವಾಗಿಯೂ ಅವಕ್ಕಿಂತ ಚಂದ.

'ಅಕ್ಷರ ದೃಷ್ಟಿಯಲ್ಲಿ ಇದು ಗುರು ಲಘುವಿನ ಲೆಕ್ಕದಿಂದ ಮಾತ್ರಾ ಗಣಗಳ ಲೆಕ್ಕಕ್ಕೆ ಸಿಕ್ಕದಿದ್ದರೂ ಹಾಡುವಾಗ, ಮಾತ್ರಾ ನಿಯಮಕ್ಕೊಳಪಟ್ಟ ಕಾಲಾವಧಿ ಯಲ್ಲಿಯೇ ಹೇಳಬೇಕಾಗುವುದರಿಂದ, ಮಾತ್ರಾ ಗಣಗಳೆಂಬ ಹೆಸರು ಸಾಧುವಾಗು ವುದಲ್ಲಾ!' ಎಂದು ಕೇಳಿದರೆ, ಇತರ ಮಾತ್ರಾ ಗಣಗಳ ಸ್ವಭಾವಕ್ಕೆ ಇದು ಹೊಂದದೆ ಅವೆರಡು ರೀತಿಯ ಗಣಗಳ ಭೇದವು ಕಣ್ಮರೆಯಾಗುವ ಸಂಭವವಿದೆ; ಹಾಗಾಗಿದೆ. ಅಲ್ಲದೆ, ಬೇಕಾದಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಮಾಡುವುದೊಂದು ಅನುಕೂಲತೆ ವಿಶುದ್ಧ ಮಾತ್ರಾ ಬಂಧಕ್ಕಿಲ್ಲದೆ, ಇದಕ್ಕೆ ಇರುವುದರಿಂದ, ಆರು ಮಾತ್ರೆಯ ತಾಳದಲ್ಲಿರು ವುದೊಂದು ಬಂಧವನ್ನೇ ಲಯ ಚಮತ್ಕೃತಿಯನ್ನು ತೋರಿಸುವುದಕ್ಕಾಗಿ ಐದು ಮಾತ್ರೆಯ ತಾಳದಲ್ಲಿ ಹಾಡಲು ಸಾಧ್ಯವಾಗುತ್ತದೆ. ಹೀಗೆ ಬದಲಿಸಿ ಹಾಡುವುದಕ್ಕೆ 'ಯಕ್ಷ ಗಾನ' ಪಂಡಿತರ ಪರಿಭಾಷೆಯಲ್ಲಿ 'ಕೋರೆ' ಎಂಬ ಹೆಸರು. ಹೀಗಿದಕ್ಕೆ ಹಾಡುವಾಗಲೂ ಮಾತ್ರಾ ಗಣನೆಯಲ್ಲಿ ವ್ಯತ್ಯಾಸವುಂಟಾಗುವುದರಿಂದ, ಮಾತ್ರಾ ಗಣವೆಂಬ ಹೆಸರು ಏನೂ ಒಪ್ಪುವುದಿಲ್ಲ.

ಈ ಗಣಗಳು ಸಂಸ್ಕೃತದಿಂದ ಹುಟ್ಟಿದುವೆಂದು ಹೇಳುವುದಕ್ಕೆ, ಸಂಸ್ಕೃತ ಛಂದಶ್ಶಾಸ್ತ್ರಗಳಲ್ಲಿಯಾಗಲಿ, ಕೇವಲ ರಚನೆಗಳಲ್ಲಾಗಲಿ, ಈ ಜಾತಿಯನ್ನು ಹೋಲುವ ಬಂಧಗಳಿರುವಂತೆ ಕಂಡುಬರುವುದಿಲ್ಲ. ಅಲ್ಲದೆ, ಸಂಸ್ಕೃತ ಬಂಧಗಳಲ್ಲಿ 'ಜಗಣ'ದ ಮತ್ತು 'ಯಗಣ'ದ ಪ್ರಭಾವವು ಹೆಚ್ಚು. ಪ್ರಥಮ ಲಘುವಾಗಿ ದ್ವಿತೀಯ ಗುರು ವೆಂದರೆ ಸಂಸ್ಕೃತ ಕವಿಗಳಿಗೆ ಬಹಳ ಪ್ರೀತಿ. ಇದಕ್ಕೆ ಆ ಭಾಷೆಯ ಶಬ್ದ ಸ್ವರೂಪವೂ ಕಾರಣವಾಗಿರಬಹುದು; ಅಲ್ಲದೆ, ವಿಷಮ ಗತಿಯ ಲಯ ಬಂಧದಲ್ಲಿಯೇ ಸಂಸ್ಕೃತಕ್ಕೆ ಆದರವು ಹೆಚ್ಚೆಂಬುದನ್ನು ಹಿಂದೆಯೇ ಹೇಳಿದ್ದೇನೆ. ಪಂಚ ಮಹಾ ಕಾವ್ಯಗಳಲ್ಲಿ ಮೂರು 'ಜಗಣ'ದಿಂದಲೇ ಆರಂಭವಾಗಿದೆ: "ಶ್ರಿಯಃ ಕುರೂಣಾಮಧಿಪಸ್ಯ" (ಕಿರಾತಾರ್ಜುನೀಯ), "ಶ್ರಿಯಃಪತಿಃ ಶ್ರೀಮತಿ" (ಶಿಶುಪಾಲ ವಧ), "ನಿಪೀಯ ಯಸ್ಯ ಕ್ಷಿತಿ ರಕ್ಷಿಣಃ ಕಥಾಂ" (ನೈಷಧೀಯ ಚರಿತ). ಅಲ್ಲದೆ, ಸಂಸ್ಕೃತದ ಅತ್ಯಂತ ಮನೋಹರವಾದ ವೃತ್ತಗಳಲ್ಲಿ ಹಲವೆಲ್ಲ ಹೀಗೆಯೇ ಮೊದಲಾಗುತ್ತವೆ: ಉದಾ.—ಶಿಖರಿಣೀ ವೃತ್ತ, ಪೃಥ್ವೀ ವೃತ್ತ. ಈ ವೃತ್ತಗಳಲ್ಲಿ ವಿಕಟ ಬಂಧದ ಪರಮಾವಧಿಯ ಸೌಂದರ್ಯವನ್ನು ನೋಡಬಹುದು. ಒಟ್ಟಾರೆ ಹೇಳುವುದಾದರೆ, 'ಜಗಣ' 'ಯಗಣ'ಗಳು ಪದ್ಯ ಬಂಧಕ್ಕೊಂದು ಭೂಷಣವೆಂದೇ ಸಂಸ್ಕೃತ ಕವಿಗಳು ತಿಳಿದಿರುವರು. ಅವು ಬಂಧಕ್ಕೊಂದು ಕುಣಿತವನ್ನು ತರುತ್ತವೆಂಬುದರಲ್ಲಿ ಸಂದೇಹ ವಿಲ್ಲ. ಆದರೆ ಕನ್ನಡ 'ಜಾತಿ'ಗಳ ಜೀವವನ್ನೇ ಹೀರುವ ಗಣಗಳವು. ಪ್ರಸಿದ್ಧ ವಾದ ನಾಗವರ್ಮನ ಹತ್ತು ಜಾತಿಗಳು ಮಾತ್ರ ಈ ನಿಯಮಕ್ಕೆ ಒಳಪಟ್ಟುವಲ್ಲ. ಯಾವ ಷಟ್ಪದಿಯ ಯಾವ ಗಣವನ್ನು ತೆಗೆದರೂ ಈ ನಿಯಮಕ್ಕೆ ಒಂದೇ ಒಂದು ಅಪವಾದವಿಲ್ಲ. ಕನ್ನಡದಲ್ಲಿಯೇ ಹುಟ್ಟಿ ಬೆಳೆದ, ಎಂದರೆ ಅನ್ಯ ಭಾಷೆಯ ಸಾಹ

ಹರ್ಷದ ಫಲವಾಗಿ ಅಲ್ಲದೆ, ನಿರ್ಮಿತವಾದ ಯಾವುದಾದರೂ ಗಣ ಬಂಧಕ್ಕೆ ಹೊಂದುವ ಯಾವುದೊಂದು ಕನ್ನಡ ಹಾಡಿನಲ್ಲಿಯೂ ಇದೇ ನಿಯಮ. ವಿಶುದ್ಧ ಕನ್ನಡ ಛಂದೋ ಬಂಧಗಳಾವುವೆಂದು ನಿರ್ಣಯಿಸುವುದಕ್ಕೆ ಇದೊಂದು ಒರೆಗಲ್ಲೆಂದರೂ ಹೆಚ್ಚಾಗ ಲಾರದು. ಇದರ ಸಂಸ್ಕಾರವು ಎಷ್ಟರ ಮಟ್ಟಿಗೆ ಕನ್ನಡ ಹಾಡುಗಾರರಲ್ಲಿ ಉಂಟಾ ಗಿದೆಯೆಂದರೆ, ತಾಳ ಜ್ಞಾನವು ಸಾಮಾನ್ಯವಾಗಿರುವ ಯಕ್ಷಗಾನ ಭಾಗವತರಲ್ಲಿ, "ತನ್ನ ಹೆಂಡತಿ । ಗರ-ತಿಯೆಂದು । ತವರ್ಮನೆಯೊಳಗೆ ಬಿಡಬಾರದು ॥" ಎಂದು ಹಾಸ್ಯಗಾರನು ಹಾಡಿ ಕುಣಿಯುವಾಗ, 'ಗರ-ತಿ' ಎಂದು ವಿಷಮ ಗತಿ, ಎಂದರೆ 'ಜಗಣ'ವು ಬರುವಲ್ಲಿ ತಾಳ ತಪ್ಪಿ ಹೊಡೆಯುವವರೇ ಬಹು ಮಂದಿ. ಇದು ಅಂಥವರ ಲಯ ಜ್ಞಾನ ಶೂನ್ಯತೆಯನ್ನು ತೋರ್ಪಡಿಸುತ್ತದಾದರೂ, ಕನ್ನಡಿಗ ಸಾಮಾನ್ಯರಿಗೆ ಪ್ರಥಮ ಲಘ್ವನಂತರ ಗುರುವೆಷ್ಟು ಅಪರಿಚಿತವೆಂಬುದನ್ನು ಸೂಚಿಸುತ್ತದೆ.

ಈ ನಿಯಮವು ಕನ್ನಡಕ್ಕೆ ಮಾತ್ರವಿರುವುದಿಲ್ಲ; 'ತುಳು' ಹಾಡುಗಳಲ್ಲಿಯೂ ಈ ನಿರ್ಬಂಧವಿರುವಂತೆ ತೋರಿಬರುತ್ತದೆ. ಅಲ್ಲದೆ, ಎಷ್ಟೋ 'ತುಳು' ಹಾಡು ಗಳಿಗೆ, ತ್ರಿಮೂರ್ತಿ ಗಣದ ಸಮನ್ವಯವಾಗುತ್ತದೆ. ಉದಾ.—

ಕಜ್ಜೊಗ್ಲೋ ಕಜ್ಜೊಗ್ಲೋ ಮಾಯಿತಾ ಪುಣ್ಣಮೆ ।
ಕಜ್ಜೊಗ್ಲು—ಪುಟ್ಟ್‌ನೆ—ಕರಿಯಬ—ಡೆಕ್ಕಾಯಿ ॥

ಇಲ್ಲಿ, ಪ್ರತಿ ಪಾದದಲ್ಲಿಯೂ ನಾಲ್ಕು ವಿರುದ್ಧ ವಿಷ್ಣು ಗಣಗಳಿವೆ, ಆದುದರಿಂದ, ಇವು ಕನ್ನಡ ಮೊದಲಾದ ದ್ರಾವಿಡ ಭಾಷೆಗಳ ಸಹಜ ಬಂಧಗಳೆಂದು ಹೇಳಬೇಕಾಗು ತ್ತದೆ.

'ಜಾತಿ' ಎಂಬ ಪದಕ್ಕೆ ಸಂಸ್ಕೃತದಲ್ಲಿ ಮಾತ್ರಾ ವೃತ್ತವೆಂಬ ಅರ್ಥವಿದೆ. ಆದರೆ, ಮಾತ್ರಾ ಬಂಧವು ಇಲ್ಲಿ ಸರಿಯಾಗಿ ಹೊಂದುವುದಿಲ್ಲವಾದುದರಿಂದ ಆ ಹೆಸರು ಇದಕ್ಕೆ ಉಚಿತವಲ್ಲವೆಂದು ತೋರಬಹುದು. ಆದರೂ, ಇದಕ್ಕೆ ಆ ಹೆಸರನ್ನು ಮೊದಲಿನವರು ಇಟ್ಟಿರುವುದರಿಂದಲೂ, ಮಾತ್ರಾ ವೃತ್ತಗಳನ್ನು ಕನ್ನಡ ದಲ್ಲಿ 'ಜಾತಿ'ಯೆಂದು ಕರೆಯುವ ರೂಢಿ ಇಲ್ಲದಿರುವುದರಿಂದಲೂ, ಈ ಹೆಸರಿಂದ ಅನವಸ್ಥೆಯಾಗುವಂತಿಲ್ಲ. ಅಲ್ಲದೆ, ಮಾತ್ರಾ ವೃತ್ತಗಳಿಗೆ ಈ ಹೆಸರು ಬರುವುದಕ್ಕೆ ನನಗೆ ಈ ಕಾರಣ ತೋರುತ್ತದೆ:—ದೇಶ್ಯ ಬಂಧಗಳಿಗೆ, ಸಂಸ್ಕೃತದಂತೆ ಅಕ್ಷರ ನಿಯಮವಿಲ್ಲದೆ ಮಾತ್ರಾ ವೃತ್ತಗಳನ್ನು ಹೋಲುವ ಎಂದರೆ, ತಾಳಕ್ಕೆ ಅಳವಡುವ ಸ್ವಭಾವವಿದ್ದುದರಿಂದ, ಮೊದಲು ಕೇವಲ ಒಂದು 'ವರ್ಗ' ಎಂಬರ್ಥದಲ್ಲಿದ್ದು ಪ್ರಯುಕ್ತವಾಗಿ, ಅನಂತರ ಮಾತ್ರಾ ವೃತ್ತ ಸಾಮಾನ್ಯಕ್ಕೆ ಈ ಪದವು ರೂಢವಾ ಗಿರಲೂ ಬಹುದು. ಏಕೆಂದರೆ, ಶಬ್ದ ಶಕ್ತಿಯನ್ನು ನೋಡುವಾಗ 'ಮಾತ್ರಾ ಬಂಧ' ವೆಂಬ ಅರ್ಥವು 'ಜಾತಿ' ಎಂಬ ಶಬ್ದದಲ್ಲಿ ಅಡಗಿದಂತೆ ಭಾಸವಾಗುವುದಿಲ್ಲ.

ಸಂಸ್ಕೃತದ 'ಮ ಯ ರ ಸ ತ ಜ ಭ ನ'ಗಳಿಗೆ ತಾಳವು ತಗಲುವುದಿಲ್ಲ. ಕಾರಣವೇನೆಂದರೆ, ಅವುಗಳೊಳಗೆ ಮಾತ್ರೆಗಳ ಮೇಳವಿಲ್ಲ. ಅವುಗಳಿಂದಾದ ವೃತ್ತ

ಗಳಲ್ಲಿ ತಾಳಕ್ಕೆ ಅಳವಡದವುಗಳನ್ನು ಮಾತ್ರಾ ಕಾಲದಲ್ಲಿ ಸಮ ವಿರಾಮವಾಗುವಂತೆ ಎಳೆದೋದುವ ಪದ್ಧತಿಯೂ ಇಲ್ಲ. ಆದುದರಿಂದ, ಈ ಗಣಗಳಿಂದ ತ್ರಿಮೂರ್ತಿ ಗಣದ ಜನ್ಮವಾಯಿತೆಂದು ಹೇಳುವುದಕ್ಕೆ ಆಧಾರವಿಲ್ಲ. ಸಂಸ್ಕೃತದ ಮಾತ್ರಾ ಗಣಗಳು ಮುಖ್ಯವಾಗಿ ನಾಲ್ಕು ಮಾತ್ರೆಯವು. ಇದರಲ್ಲಿ ಪ್ರಥಮ ಲಘುವಿನ ಮೇಲೆ ಗುರುವಿಗೆ ನಿಷೇಧವಿಲ್ಲ; ಇದುಮಾತ್ರವಲ್ಲ, ಆರ್ಯಾದಿ ಬಂಧಗಳ ವಿಶಿಷ್ಟ ಸ್ಥಳಗಳಲ್ಲಿ ಅವಶ್ಯವಾದುದು. ಕಂದವು ಈ ಜಾತಿಗೆ ಸೇರಿದುದು. ಅದರಲ್ಲಿ ಸಮ ಗಣಗಳಲ್ಲಿ 'ಪುರಾರಿ' ಎಂಬ ಜಗಣವು ಬರಬಹುದು; ಅಲ್ಲದೆ, ಆರನೆಯ ಗಣದಲ್ಲಿ ಸರ್ವ ಲಘುವಲ್ಲದಿದ್ದರೆ ಅದೇ ಬರಬೇಕು. ಕಂದದ ಪ್ರಸಾರವು ಕನ್ನಡದಲ್ಲಿ ನಿರರ್ಗಳವಾಗಿ ಆದರೂ, ಅನಂತರ ಹುಟ್ಟಿರಬಹುದಾದ ಕನ್ನಡ ಜಾತಿ ಬಂಧಗಳಲ್ಲಿ ಸಹ (ಉದಾ.—ಷಟ್ಪದಿ, ಸಾಂಗತ್ಯ) 'ಜಗಣ'ವನ್ನು ಸೇರಿಸಲು ಆದರಿಂದ ಸಾಧ್ಯವಾಗಲಿಲ್ಲವೆಂಬುದನ್ನು ಪರಾಮರ್ಶಿಸಿದರೆ, ಪ್ರಥಮ ಲಘ್ವನಂತರದ ಗುರು ವಿರೋಧವು ಕನ್ನಡದ ಹುಟ್ಟುಗುಣವಾಗಿತ್ತೆಂಬುದು ತಿಳಿಯುವುದು. ಇರಲಿ, ಸಂಸ್ಕೃತದ ಚತುರ್ಮಾತ್ರಾ ಗಣದಿಂದ ತ್ರಿಮೂರ್ತಿ ಗಣಗಳು ಹುಟ್ಟಿದ್ದರೆ, ಗುರು ಲಘು ಶುದ್ಧಿಯಿಂದೊಡಗೂಡಿದ ಮಾತ್ರಾ ಗಣನೆ ಇಲ್ಲದೆ ಅದರ ರಚನೆಯೇ ಮೊದಲಾಗುತ್ತಿದ್ದಿಲ್ಲ; 'ಜಗಣ'ಕ್ಕೆ ಬಹಿಷ್ಕಾರವೂ ಬರುತ್ತಿದ್ದಿಲ್ಲ. ಇವಲ್ಲದೆ ಬೇರೆ ಯಾವುದಾದರೂ ಸಂಸ್ಕೃತ ಮಾತ್ರಾ ಗಣಗಳಿಂದ ಇವು ಹುಟ್ಟಿರಬಹುದೆಂಬುದಕ್ಕೆ ಆಧಾರವಿಲ್ಲ; ವೈದಿಕ ಛಂದಸ್ಸಿನಿಂದ ಹುಟ್ಟಿರಬಹುದೆಂದರೆ, ಅದರಲ್ಲಿರುವಂತೆ ಕನ್ನಡ ಜಾತಿಗಳಲ್ಲಿ ಅಕ್ಷರ ಗಣನೆ ಇಲ್ಲ. ಅಲ್ಲದೆ, ವೈದಿಕ ಬಂಧಗಳಲ್ಲಿಯೂ ಜಗಣ ಯಗಣಗಳಿಗೆ ಕಾವ್ಯದ ಸಂಸ್ಕೃತದಂತೆಯೇ ಬಹಳ ಪುರಸ್ಕಾರವಿದೆ. (ಉದಾ.—"ಹಿರಣ್ಯ ಗರ್ಭಃ ಸಮವರ್ತತಾಗ್ರೇ", "ಸಹಸ್ರ ಶೀರ್ಷಾ ಪುರುಷಃ", "ನಮಸ್ತೇ ರುದ್ರ ಮನ್ಯವ ಉತೋತ ಇಷವೇ ನಮಃ"). ಅಲ್ಲದೆ, ಕನ್ನಡ ಪದ್ಯಗಳು ಸಂಸ್ಕೃತದ 'ಸಕಲಿ' ಗಳಲ್ಲವೆಂದು ತೋರಿಸುವುದಕ್ಕೆ ಛಂದೋಗತವಲ್ಲದಿದ್ದರೂ ಪದ್ಯಗತವಾದೊಂದು ಆಧಾರವಿದೆ. ಸಾಮಾನ್ಯವಾಗಿ ಕನ್ನಡದಲ್ಲಿ ಪದ್ಯದ ಮಧ್ಯದಲ್ಲಿ ವ್ಯಂಜನ ರಹಿತವಾದ ಕೇವಲ ಸ್ವರವು ಉಪಯುಕ್ತವಾಗುತ್ತಿರಲಿಲ್ಲ. ಹಾಗೆ ಬಂದರೆ ಅದೊಂದು ಕೊರತೆಯೆಂದೇ ತಿಳಿಯಲ್ಪಡುತ್ತಿತ್ತು. ಈ ಸ್ವರ ವಿರೋಧವು ತುಳುವಿನಲ್ಲಿ ಇನ್ನೂ ಒಂದು ಮೆಟ್ಟಿಲು ಮುಂದೆ ಹೋಗಿದೆ. ಹಾಡಿನ ಆದಿಯಲ್ಲಿ ಬರುವ ಸ್ವರಕ್ಕೆ ಯಾವುದಾದರೂ ವ್ಯಂಜನವನ್ನು ಕೂಡಿಸಿ ಹಾಡುವರು: 'ಆಸರ್' ಎಂದಿದ್ದುದನ್ನು 'ಜಾಸರ್' ಎಂದೂ, 'ಅಪ್ಪೆ' ಎಂಬುದನ್ನು 'ಲಪ್ಪೆ' ಎಂದೂ ಎತ್ತುವರು. ಕಾವ್ಯ ಸಂಸ್ಕೃತದಲ್ಲಾಗಲಿ, ವೈದಿಕ ಭಾಷೆಯಲ್ಲಾಗಲಿ, ಈ ಸ್ವರ ವಿರೋಧವು ಇಲ್ಲವೇ ಇಲ್ಲ. ಇರಲಿ, ಈ ಎಲ್ಲಾ ಕಾರಣಗಳಿಂದ, ತ್ರಿಮೂರ್ತಿ ಗಣಗಳಿಂದ ಘಟಿತವಾದ 'ಕನ್ನಡ ಜಾತಿ'ಗಳು ಸ್ವತಂತ್ರ ಛಂದೋಬಂಧಗಳೆಂದು ಸಿದ್ಧವಾಗುತ್ತದೆ. (ಈ ವಿಷಯದಲ್ಲಿ ಸಹೃದಯರಾರಾದರೂ ನನ್ನ ಮತವನ್ನು ಆಧಾರ ಪೂರ್ವಕವಾಗಿ ಖಂಡಿಸಿದರೆ ನಾನವರ ಮತವನ್ನು ಕೃತಜ್ಞತೆಯಿಂದ ಸ್ವೀಕರಿಸುವೆನು.) ನನ್ನ ವಿಚಾರದಂತೆ, ಕನ್ನಡಿಗರ ಮೋರೆಯಲ್ಲಿ ಮೀಸೆ ಹೇಗೆ ಸ್ವಾಭಾವಿಕವಾಗಿ ಪರ

ಸಾಹಾಯ್ಯವಿಲ್ಲದೆ ಮೊಳೆಯಿತೋ, ಹಾಗೆಯೇ 'ಕನ್ನಡ ಜಾತಿ'ಗಳು ಹುಟ್ಟಿದುವು; ಅವುಗಳೊಳಗೆ ಸೂತ್ರಬದ್ಧವಾಗಿದ್ದ ಲಕ್ಷಣಗಳನ್ನು ಪರಿಶೀಲಿಸಿ, ಸೂಕ್ಷ್ಮ ಬುದ್ಧಿಗಳು ತ್ರಿಮೂರ್ತಿಗಳ ಕಲ್ಪನೆಯನ್ನು ಮಾಡಿದರು—ಎಂದು ಹೇಳದೆ ನಿರ್ವಾಹವಿಲ್ಲ.

ಅಕ್ಕರಗಳೇ ಮೊದಲಾದ ಹತ್ತು 'ಜಾತಿ'ಗಳಲ್ಲಿ ತ್ರಿಪದಿ ಷಟ್ಪದಿಗಳನ್ನು ಬಿಟ್ಟರೆ ಉಳಿದುವಕ್ಕೆ ನಾಲ್ಕು ಪಾದಗಳಿವೆ. ಇದರಿಂದ, ಇವು ಸಂಸ್ಕೃತಜನ್ಯವೆಂದಾಗವು. ಹಾಗೆ ಹೇಳುವುದಾದರೆ, ಇಂಗ್ಲಿಷ್ ಮೊದಲಾದ ಅನ್ಯಭಾಷೆಗಳ ಎಷ್ಟೋ ಬಂಧಗಳನ್ನು ಸಂಸ್ಕೃತಜನ್ಯವೆಂದು ಹೇಳಬೇಕಾದೀತು. ಹಿಂದೆ ಉದಾಹರಿಸಿದ 'ಕಜತ್ತೊಗ್ಗಳೋ' ಎಂಬ ತುಳು ಹಾಡಿಗೂ, ಲೀಲಾಶುಕನ—

ಅಂಗನಾಮಂಗನಾಮಂತರೇ ಮಾಧವೋ ।
ಮಾಧವಂ ಮಾಧವಂ ಚಾಂತರೇಣಾಂಗನಾ ॥
ಇತ್ಥಮಾ ಕಲ್ಪಿತೇ ಮಂಡಲೇ ಮಧ್ಯಗಃ ।
ಸಂಜಗೌ ವೇಣುನಾ ದೇವಕೀ ನಂದನಃ ॥

ಎಂಬೀ ಪದ್ಯಕ್ಕೂ ಲಯಸಾಮ್ಯವಿರುವುದಷ್ಟೆ! ಈ ಕಾರಣದಿಂದ, ಇಂತಹ ಸಂಸ್ಕೃತ ವೃತ್ತಗಳಿಂದ, ತುಳು 'ನಲಿಕೆ'ಯವರ (ಇವರು ಪಂಚಮರು) ಹಾಡು ಹುಟ್ಟಿತೆಂದೂ ಹೇಳಬೇಕಾಗುವುದು. ಹಾಗಾದರೆ, ಸರ್ವಭಾಷೆಗಳೂ ಸಂಸ್ಕೃತದಿಂದಲೇ ಜನ್ಮಿಸಿದುವೆಂಬ ನಮ್ಮ ಹಿರಿಯರ ಅಭಿಪ್ರಾಯಕ್ಕೆ ನಿದರ್ಶನಕೊಟ್ಟಂತಾಗುವುದು. ಇದನ್ನೊಪ್ಪದೆ, ಅವನ್ನೆಲ್ಲ ಸಂಸ್ಕೃತಜನ್ಯವೆಂದು ಹೇಳಲಾಗುವುದಿಲ್ಲ. ಇಂತಹ ಸಾದೃಶ್ಯಕ್ಕೆ ಕಾರಣವೇನೆಂದರೆ, ಲಯಗತಿ ಪ್ರಕೃತಿಯ ಸೊತ್ತು; ಅದು ಸಕಲ ದೇಶಗಳಲ್ಲಿಯೂ ಭಾಷೆಗಳಲ್ಲಿಯೂ ತನ್ನ ಸಾಮಾನ್ಯ ಗುಣವನ್ನು ತೋರಿಸದೆ ಉಳಿಯಲಾರದು. 'ನಾಲ್ಕು', ಎಂದರೆ 'ಚತುರಸ್ರತೆ' ಸಂಗೀತದ ಪೂರ್ಣತೆಗೆ ಅವಶ್ಯ. ಅಲ್ಲದೆ, ಪಾದಾಂತದ ಗಣವು ಹೆಚ್ಚಾಗಿ ಅಪೂರ್ಣವಾಗಿರುವುದೂ ಎಲ್ಲಾ ಭಾಷೆಗಳಲ್ಲಿದೆ. ಉದಾ.—

Twinkle । twinkle । little । star-।
How I '। wonder । what you । are-।
Up a-।-bove the । world so । high-।
Like a । diamond । in the । sky-॥

(ತುಳು) ಕೂಲಿಗ್ । ಮಜಿ । ಪಾಡೊಂ । ಡೊ—।
ಕುದ್ಪೆತ । ತಂಞಞೂ । ಉಂಡೊಂ । ಡೊ—।
ಹಾಂ । ಹೂಂ । ಪಂಡೊಂ । ಡೊ—।
ದೆಂಡ್‌ಗ್ । ಕಯಿ । ಕೊರೊಂ । ಡೊ—॥

ಕನ್ನಡದ ಈ ಗಣಚೌಪದಿಗೂ, ಪಾದಾಂತದಲ್ಲಿ ಅಪೂರ್ಣಗಣವಿದೆ. ನಾಲ್ಕು ಸಮಪಾದಗಳ ತಾಲಬದ್ಧ ಬಂಧಗಳಲ್ಲೆಲ್ಲ ಹೆಚ್ಚಾಗಿ ಹೀಗೆಯೇ ಇದೆ. (ಕೆಲವು ಬಂಧಗಳಲ್ಲಿ

ಒಂದೇ ಪಾದದಲ್ಲಿ ಎಂಟು ಖಂಡವಿದೆ) ಪಾದದೊಳಗೆ ಮೂರು ಪೂರ್ಣ ಖಂಡಗಳು, ನಾಲ್ಕನೆಯದು ಅಪೂರ್ಣ ಖಂಡ. ಅಪೂರ್ಣ ಖಂಡದ ಪ್ರಯೋಜನವು ಏನೆಂದರೆ, ಇಡಿಯ ಬಂಧವನ್ನು ತಾಳ ತಪ್ಪದೆ ಹಾಡುವಾಗ, ಬಂಧದಲ್ಲಿಯೇ ಉಸಿರ್ದಾಣವೂ, ಗಾನದ ರಂಜನೆಗಾಗಿ ಎಡೆಯೂ ಇರಬೇಕೆಂಬುದೇ ಆಗಿದೆ. ಪಾದಾಂತದಲ್ಲಿ ವಿರಾಮಕ್ಕಾಗಿ ಅಪೂರ್ಣವಾದ ಖಂಡವಿರುವುದು ಹಾಡೆಂಬುದರ ಪ್ರಕೃತಿ. ಅರ್ಧ ಸಮವಾದ ಹಾಡುಗಳಲ್ಲಿ ಇದೇ ಇನ್ನೊಂದು ರೂಪವನ್ನು ತಾಳಿದೆ. ವೃತ್ತಾರ್ಧದಲ್ಲಿ ಸಾಮಾನ್ಯವಾಗಿ ಎಂಟು ತಾಲ ಖಂಡಗಳಿದ್ದು ಎಂಟನೆಯ ಖಂಡವು ಅಪೂರ್ಣವಾಗಿದೆ; ಅಲ್ಲಿ ಎಳೆದು ನಿಲ್ಲಿಸುವುದಕ್ಕಾಗಿ ಈ ನಿಯಮವು ಪ್ರಕೃತಿಯ ಪ್ರೇರಣೆಯಿಂದಲೇ ಉಂಟಾಗಿದೆ. ಕೆಲವು ಬಂಧಗಳಲ್ಲಿ ಏಳನೆಯ ಸ್ಥಾನದಲ್ಲಿಯೇ ನಿಲ್ಲಿಸಲ್ಪಡುತ್ತದೆ. ಆದರೆ, ಎಂಟು ಸ್ಥಾನಗಳನ್ನು ಹಾಡುವುದಕ್ಕೆ ಎಷ್ಟು ಸಮಯ ಬೇಕೋ ಅಷ್ಟನ್ನು ವಿರಾಮದಿಂದ, ಅಥವಾ ಆಲಾಪದಿಂದ ಕಳೆದೇ ಮುಂದಿನ ಅರ್ಧವನ್ನು ಎತ್ತಬೇಕಾಗುತ್ತದೆ. ಇದಕ್ಕೆ ಈ ಕೆಳಗಿನ ಉದಾಹರಣೆಗಳು ಸಾಕು :—

ಸಂಸ್ಕೃತ ಗೀತಿಕೆ || ಓಂಕಾ | ರ ಪಂಜ | ರ ಶುಕೀ |
ಮುಪನಿಷ | ದುದ್ಯಾ | ನಕೇಲಿ | ಕಲಕಂ | ಠೀಂ—||
ಆಗಮ | ವಿಪಿನ ಮ | ಯೂರೀ |
ಮಾರ್ಯಾ | ಮಂತ | ರ್ವಿಭಾವ | ಯೇ ಗೌ | ರೀಂ—||

Tell me | not in | mournful | numbers |
Life is | but an | empty | dream-|
For the | soul is | dead that | slumbers |
And things | are not | what they seem-||

ಸಾಂಗತ್ಯ || ಪರಮ ಪ | ರಂಜ್ಯೋತಿ | ಕೋಟಿ ಚಂ | ದ್ರಾದಿತ್ಯ |
ಕಿರಣ ಸು | ಜ್ಞಾನ ಪ್ರ | ಕಾಶಾ—||
ಸುರರ ಮ | ಕುಟ ಮಣಿ | ರಂಜಿತ | ಚರಣಾಬ್ಜ |
ಶರಣಾಗು | ಪ್ರಥಮ ಜ | ನೇಶಾ—||

ಷಟ್ಪದಿಗಳೂ ಈ ನಿಯಮಕ್ಕೆ ಒಳಪಟ್ಟಿವೆ. ಆದರೆ ಅವುಗಳಲ್ಲಿ ಪಾದ ಆರಿದ್ದರೂ, ಹಾಡಿನ ದೃಷ್ಟಿಯಿಂದ ನಾಲ್ಕೇ ಪಾದಗಳು. ಪದ್ಯಾರ್ಧದಲ್ಲಿ ಎಂಟು ಖಂಡಗಳು; ಕೊನೆಯ ಖಂಡ ಅಪೂರ್ಣ. ಉದಾ.—

ಈಶನ | ಕರುಣೆಯ | ನಾಶಿಸು | ವಿನಯದಿ ||
ದಾಸನ | ಹಾಗೆಯೆ | ನೀ ಮನ | ವೇ—||—ಇತ್ಯಾದಿ.

ಹೀಗೆ ಹಲವು ಭಾಷೆಗಳಲ್ಲಿಯೂ ಕಾಣುವ ಸಾಮ್ಯಕ್ಕೆ ಪ್ರಕೃತಿ ಎಂದಲ್ಲದೆ ಬೇರಾವ ಕಾರಣವನ್ನು ಹೇಳಲು ಸಾಧ್ಯವಿದೆ? ಇದೇ ಪ್ರಕೃತಿ ಸಂಗೀತ ಶಾಸ್ತ್ರದಲ್ಲಿ ತಾಲ ನಿರ್ಣಯವನ್ನು ಮಾಡಿದೆ. ಆದಿ ತಾಳವೆಂಬುದು, ಚತುರಸ್ರ ಜಾತಿ ತ್ರಿಪುಟ ತಾಳ

ವಾದರೂ, ಅದಕ್ಕೆ ಆ ಹೆಸರು ಬರಲು ಕಾರಣವೇನೆಂದರೆ, ಅದು ಪ್ರಕೃತಿ ಸಹಜವಾಗಿ, ಸುಲಭ ಗ್ರಾಹ್ಯವಾದ ತಾಳ. ಅದಕ್ಕೆ ಎಂಟು ಮಾತ್ರೆಗಳಿವೆ. ಇದಕ್ಕಿಂತಲೂ ಸುಲಭ ವಾದ ತಾಳವೆಂದರೆ ಏಕ ತಾಳ. ಅದರಲ್ಲಿ ಚತುರಸ್ರ ಜಾತಿಗೆ ನಾಲ್ಕು ಮಾತ್ರೆ. ಆದರೆ 'ಸರಿಗಮ ಪಧನಿಸ' ಎಂದು ಎಂಟು ಅಕ್ಷರಗಳನ್ನು (ಸ್ವರವು ಏಳೇ ಇದ್ದರೂ, ತಾರಸ್ಥಾಯಿಯ ಚತುರಸ್ರತೆಗಾಗಿ 'ಸ' ವೊಂದನ್ನು ಕೂಡಿಯೇ ಕಲಿ ಯುವರು). ನಾಲ್ಕು ಮಾತ್ರೆಯ ಏಕ ತಾಳದಲ್ಲಿ ತುಂಬಲಾರದೆ, ಅದರ ಎರಡು ಆವರ್ತಗಳನ್ನು ತೆಗೆದುಕೊಂಡು, ಆದಿ ತಾಳವನ್ನು ಮಾಡಿದರೆಂದು ಹೇಳಬೇಕಾಗು ತ್ತದೆ. ಅಲ್ಲಿ ನಾಲ್ಕು ಮಾತ್ರೆ, ಅಥವಾ ಎಂಟು ಮಾತ್ರೆ ಎಂದು ವಿಧಿಸಿದ ಪ್ರಕೃತಿಯೇ ಹಾಡುಗಳಿಗೆ ನಾಲ್ಕು ಪಾದಗಳನ್ನು ಕಲ್ಪಿಸಿತು; ಪಾದವೊಂದರಲ್ಲಿ ನಾಲ್ಕು ಖಂಡ ಗಳನ್ನು ಕಲ್ಪಿಸಿತು. ಇದರಿಂದ ಸಂಗೀತವು ಛಂದಸ್ಸೆಂಬ ಬಟ್ಟೆಯ ಹಾಸು ಹೊಕ್ಕಾ ಗಿದೆಯೆಂಬುದು ಸ್ಪಷ್ಟವಾಗುವುದಲ್ಲದೆ, ಇದು ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಸಕಲು ತೆಗೆದೇ ಹೋಗಬೇಕೆಂದಿಲ್ಲ; ಸ್ವತಂತ್ರವಾಗಿಯೇ ಸ್ಫುರಿಸುವುದು ಸ್ವಾಭಾವಿಕವೆಂದೂ ತಿಳಿಯುತ್ತದೆ.

ಸೇಡಿಯಾಪು ಕೃಷ್ಣಭಟ್ಟರು.

(ಮುಂದುವರಿಯುವುದು)

———

ಶ್ರೀಃ

## ಕರ್ಣಾಟಕ

# ಭರ್ತೃಹರಿ ನಿರ್ವೇದ ನಾಟಕಂ

---

ವೃ॥ ಆದಂ ಶೈತ್ಯೋಪಚಾರಕ್ಕಭವನಿರದೆ ತಾಳ್ದಭ್ರ ಗಂಗೇಂದುಗಳ್ ತಾಂ
ಮಾದೇವಂಗಾದ ತಾಪಕ್ಕಗಿದಿಱಿಯದಿರಲ್ ಮೌಳಿಯಿಂ ಜೀವಿತಾಶೋ।
ನ್ಮಾದಂಗೊಂಡುಂಡ ಭೀಕೃದ್ಗರಮುದು. ಕೊರಲೊಳ್ ನಿಲ್ತಿರಲ್ ಬೇಗೆವೆರ್ಚಿಂ
ಮೋದುಂಡಂಗೊಂಡ ಕಾಂತಾ ವಿರಹಮನುಗಿದಾ ಶಾಂತಿಯಿಂದಕ್ಕೆ ಭದ್ರಂ
॥ ೧ ॥

[ಇಂತು ನಾಂದಿಯಾದ ಬೞಿಕ್ಕಂ]

ಸೂತ್ರಧಾರಂ—ಸಾಲ್ಗುಮತಿವಿಸ್ತರದಿಂದಮೇಂ? ಸಭಾಸದರ್ಕಳಿರ! ಶ್ರೀ ಹರಿಹರೋಪಾಧ್ಯಾಯಂ ಸಕ್ಕದ ಬಾಸೆಯೊಳ್ ಸಮೆದಿರ್ಪ ಶಾಂತಿ ರಸ ಪ್ರಧಾನಮಪ್ಪ ಭರ್ತೃಹರಿ ನಿರ್ವೇದಮೆಂಬ ನಾಟಕಮಂ ಗುಡಿಬಂಡಾಭಿಧಾನ ಪತ್ತನದೊಳ್ಮೆಱೆವ ಆಂಗ್ಲ ಕರ್ಣಾಟ ಶಾಲೆಯ ಪ್ರಧಾನಾಧ್ಯಾಪಕಂ ಕೇಶವಂ ಕನ್ನಡಿಸಿರ್ಪಂ. ಆನದ ನೀಗಳಭಿನಯಿಸಲೆಳಸಿರ್ಪುದಱಿಂ ಪೂಜ್ಯರಾದ ನೀಂ ಸಾವಧಾನ ಮನಸ್ಕರಾಗಿರವೇೞ್ಕುಮೆಂದು ಬೇೞ್ಪೆಂ. ಏತರ್ಕೆಂದೊಡೆ—

ವೃ॥ ನಾನಾ ಜನ್ಮ ವಿತಾನ ಮಾನಿತ ನಿತಂಬಿನ್ಯಾದಿ ತದ್ದೀಪಕಾ
ನೂನ ಪ್ರಾರ್ಜಿತಮುಜ್ಜ್ವಲಾದಿ ರಸವಾಸಂ ತೋರ್ಕುಮೋರೊರ್ಚಣಂ।
ಪೀನಂ ಕಾಣ್ಗುಮನಂತರಂ ಗತ ಸುಖಂ ತಾನಂತಱಿಂ ಶಾಂತಮೇ
ನೂನಂ ಬ್ರಹ್ಮ ಚಿದೈಕ್ಯ ನಿತ್ಯ ಸುಖದಂ ವಿಶ್ರಾಂತಮುಶ್ರಾಂತಮುಂ ॥ ೨ ॥

ಅದಱಿಂದೆನ್ನ ಪೆಂಡತಿಯುಂ ಕರೆದು ಮುಂತಣುಜ್ಜುಗದ ಕಜ್ಜಂಗಳಂ ಸಜ್ಜುಗೊಳಿಪೆಂ. (ಎಂದು ಜವನಿಕೆಯತ್ತಲ್ ನಿಟ್ಟಿಸಿ) ಆರ್ಯೆ! ಇತ್ತಲೈತಾರ!

ನಟಿ—[ರಂಗಮಂ ಸಾರ್ದು] ಆರ್ಯ! ಇದೆ ಇತ್ತಲಿರ್ಪೆಂ.

ಸೂತ್ರ.—ಆರ್ಯೆ! ಇದೇಂ? ಬೆಬ್ಬಳಮನೊಂದಿದಂತೆ ತೋಱುತಿರ್ದಪೆ?

ನಟಿ—ಪಲ ಕಾಲಂಬರಂ ನೀಂ ಕಣ್ಗೆ ಪೊಲನಾಗದಿರ್ದುದಱಿಂದಿಂತಾಂ ಬೆಬ್ಬಳಕ್ಕೊಳಗಾಗಿರ್ದಪೆಂ.

ಸೂತ್ರ.—ಆರ್ಯೆ! ಜೋಯಿಸಿಗನೊರ್ವನೊಂದು ಪೊಲ್ಲ ಸೊಲ್ಲನಾಡಿದುದಱಿಂದಮದರ್ಕೆ ಶಾಂತಿಯುಂಗೆಯಲೆಂವೋಜನ ಸನಿಯಮಂ ಸಾರ್ದಿರ್ದೆಂ. ಅದಱಿಂದಿಂತು ತಳ್ವಿದೆಂ.

ನಟಿ—ಶಾಂತಿಕರ್ಮಮದು ಮುಗಿದುದೇಂ?

ಸೂತ್ರ.—ಮತ್ತೇಂ?

ಕಂ॥ ಶಾಂತಿಯ ಕರ್ಮಂ ಮುಗಿಯಲೊ
ಡಂ ತವೆ ಸಂತಸಮನಾಂತು ನಿನ್ನಂ ಸಾರ್ದೆಂ।
ಕಾಂತೆಯೆ ಭರ್ತೃಹರಿ ಧರಾ
ಕಾಂತನಿವಂ ಭಾನುಮತಿಯು ಸಾರ್ದಪ್ಪೊಲಿಂದಾಂ ॥ ೩ ॥

[ಎಂದು ತೆರಳ್ದರ್]

[ಇಂತಿದು ಪ್ರಸ್ತಾವನೆ]

[ಬಱಯುವಾಗಡೆ ಸಾರ್ತಂದ ದೊರೆಯುಂ ಚಿಂತೆಯಿಂ ಬಾಡಿದ ಮೊಗದ ಭಾನುಮತಿಯುಂ ಮಿತ ಪರಿವಾರಂ ಬೆರಸು ಪುಗುವರ್]

ರಾಯಂ—(ಭಾನುಮತಿಯಂ ನಿರುಕಿಸಿ ತನ್ನೊಳ್) ಇದೇನೀ ಯೆನ್ನ ಕಾಂತೆ ನಿತಾಂತ ಚಿಂತೆಯಾಂತಿರ್ಪಂತೆ ತೋರ್ದಪಳ್! ನಿಕ್ಕುವಮಿವಳಿಂತು ಚಿಂತಿಪಳಕ್ಕುಂ.

* ವೃ॥ ಪರಿಯದು ಜೂದಿನೊಳ್ ಪತಿಯ ಮಾನಸಮಿಾಕ್ಷಿಸದಾಹ! ಬೇಂಟೆಯಾ
ಪರಿಯಸದೆತ್ತಲೆನ್ನಯ ವಿಯೋಗವ ನಾಂತಿರಲಿಷ್ಟ ಗೋಷ್ಠಿಯೊಳ್।
ಸರಸತೆ ಭರ್ತೃವಿಂಗಹಹ! ಚಾರುತರಾಕೃತಿ ವಕ್ರ ಪಕ್ಷ್ಮ ಭಾ
ಸುರ ದೃಶೆ ಕಳ್ದಳಕ್ಕುಮುಱಿ ಜಾಣ್ಮೆಯೊಳಾತನ ಚಿತ್ತ ವೃತ್ತಿಯಂ॥ ೪ ॥

[ಮತ್ತ ನಿರುಕಿಸಿ]

ಕಂ॥ ಮಱಿತು ಪಲಕಾಲದಿಂದಂ
ಕಿಱುನಗೆಯನಳುಂಬಮೆತ್ತಿ ತೋರ್ಪಾ ಪುರ್ವಿಂ।
ನೇಱಿದೆರ್ದೆಯೊಳಿರ್ಪ ದುಗುಡುವ
ನೊಱಿವುದು ಗಡಮೆನ್ನ ಗೆಳತಿಯಾ ಮೊಗವಿಾಗಳ್ ॥ ೫ ॥

[ಸನಿಯಮಂ ಸಾರ್ದು]

ಪ್ರಿಯೆ! ಏನಿದೆನಸುಂ ಮನದೊಳುಮ್ಮಳವನಾಂತಿರ್ಪಂತೆ ತೋರ್ಕುಂ?

ಕಂ॥ ನಿನ್ನ ಗುಣಂಗಳಿನಾಂ ಕ್ರೀ
ತನ್ನನ್ನಿಯಿದೆನ್ನ ಚೆನ್ನೆ ನಿನಗನುಚರನೆಂ।
ಇನ್ನುಂ ಕೆನ್ನಂ ದುಮ್ಮಾ
ನನ್ನಮೆಯಿಸುತಿರ್ಕುಮೇಂ ಮನಮುಸಬ್ಜಾಕ್ಷೀ ॥ ೬ ॥

[ಎಂದು ತಱ್ಕೈಸೆಳೆಸುವಂ]

ಭಾನು.—ಆರ್ಯಪುತ್ರ! ಇಂತು ಬಱಿಸಾರಲಾಂ ತಕ್ಕಳಲ್ತು.

* (ಪಾಠಾಂತರಂ)
ಅಕಟಾ! ಮತ್ತತಿಯಾ ಮನಂ ರಮಿಸದೆಂದುಂ ಜೂದಿನೊಳ್ಬೇಂಟೆಯಾ
ಡಿಕೆಯೊಳ್ ಮದ್ವಿರಹಾಪ್ತಿಯೊಳ್ ತನಗದೆತ್ತಣಿಷ್ಟ ಗೋಷ್ಠೀ ರಸಂ।
ಅಕಲಂಕಾತ್ಮನ ಚಿತ್ತಮಂ ಕುಟಿಲ ಪಕ್ಷ ಭ್ರಾಜಮಾನಾಕ್ಷಿ ಜಾ
ಣೆ ಕಲಾ ಸೋಭಿತೆ ಕಳ್ದಳಕ್ಕುಮನವದ್ಯಾಕಾರೆ ತಾನಾವಳೋ ॥ ೪ ॥

ರಾಯಂ—ಕೆಳದಿ! ಏನಿಂತುಸಿರ್ದಪೆ?

ವೃ || ಲಲನೆಯೆ ನೀನೆ ಸೇವಧಿ ಗೃಹಕ್ಕೆ ಕುಲಕ್ಕೆ ನಿತಾಂತ ಭದ್ರ ಶ್ರೈ
ವಲಿನಿ ನವಾಮೃತ ಪ್ರಕಟ ಸೇಚನ ಸತ್ಕ್ರಿಯೆ ದೃಷ್ಟಿಗಳ್ಗೆ ನಿ।
ರ್ಮಲ ಘನಸಾರ ಸಮ್ಮಿಳಿತ ಚಂದನವಂಗಕೆ ನೋಡೆ ನಿತ್ಯಮಂ
ಗಲ ರತಿ ಶಿಲ್ಪ ಕಲ್ಪ ಲತೆ ಪಟ್ಟಿಕ್ಕಿಗೆಯಿಂತಿರೆ ನೀನೆ ಸರ್ವಮುಂ || ೭ ||

ಮತ್ತಂ,

ವೃ || ನಿನ್ನಯ ಕಾಂತಿಯಿಂದೆ ನಯನಂಗಳಿವೊಲ್ಲವು ಜೊನ್ನದಂದಮಂ
ನಿನ್ನ ತನು ಪ್ರಸಂಗದೊಸಗೆರ್ಗಿಂ ಬಿದುಗಲ್ ವರ ವಾರಿ ಪೂರಮಂ।
ಕನ್ನಮುಮಾಜಮಿಕ್ಕುಮಮರ್ದಂ ಸಲೆ ನಿನ್ನಯ ಮಾತಿನಿಂತಿದಂ
ಚೆನ್ನೆಯೆ ಪುಣ್ಯದಾಂತೆನಿದಱಿಂ ಪಿರಿದೇಂ ಸಿರಿಯಾಣ್ಮನಾ ಗೃಹಂ || ೮ ||

ಭಾನು.—ಆರ್ಯಪುತ್ರ! ಇದಳೀಕಮಲ್ತೆ? ಅಲ್ಲದಿರ್ದೊಡಿಂತು ಮರುಕದೆನಕ ಮಿನಿಸುಮಿಲ್ಲದಿನಿತು ಕಾಲಂಬರಮೆತ್ತೆತ್ತಲೊ ತೆರಳ್ದಿಂತು ತಳ್ವುತಿರ್ದಯ್? ಎನ್ನೀ ಪರಣಮೊಂದು ಚಣಮಾಡೊಡಂ ನಿನ್ನ ಬರಮಮಂ ಸೈರಿಸಲಾಱದೆಂಬುದನಱಿಯೆಯೇಂ?

[ಎಂದಟ್ಟುಪಳ್]

ರಾಯಂ—ದೇವಿ! ಸೈರಿಸು ಸೈರಿಸು. ಒರ್ವ ಜೋಯಿಸಿಗನುಸಿರ್ದ ಪ್ರತಿಕೂಲಮಂ ಶಮಿಸಲೆಂದು ಇತ್ತಣಿಂ ತೆರಳ್ದು ಭಾಗೀರಥೀ ತೀರಮಂ ಸಾರ್ದಿರ್ದೆಂ. ಅತ್ತಲಾನೇರಿದರ ಬಸದೊಳಿರ್ದುದಱಿಂ ತಡೆಪಮಾದುದಲ್ಲದೆ ದಯಾಹೀನತೆಯಿಂದಲ್ತು. ನೋಡು—

ವೃ || ಕಡೆಗಣಿಸುತ್ತೆ ಕೈರವಿಣಿ ಮಾಟ್ಟುಪಚಾರಮನಿಂದುವೆಂದಿಗಾ
ದೊಡಮುಱದಪ್ಪನೇ ಸ್ವ ಕರ ಸತ್ಪರಿರಂಭಣದೊಲ್ಮೆಯುಳ್ಳಡಂ।
ಎಡರಡಸಿರ್ದೊಡಲ್ಲದೆ ಯೆಲಾ ಮದಿರಾಕ್ಷಿ ಯುಗಲ್ಕೆಯಿಂತಿದಾ
ಕಡು ಪಗೆಯಪ್ಪ ದೈವದ ನಿಯೋಗದೊಳಾದುದೆನುತ್ತೆ ಭಾವಿಸಾ || ೯ ||

ಭಾನು.—ಆರ್ಯಪುತ್ರ! ಕೈರವಿಣಿಯುವಳ್ ಪತಿ ವಿಯೋಗಾವಸರದೊಳ್ ಅಂತಪ್ಪನನ್ಯಾದೃಶ ಸ್ನೇಹಮನಾರೊಳಿರಿಸಿ ಪೊಟ್ಟುಗಳೆವಳ್? ಅಂತಲ್ಲದಿರ್ದೊಡವಳೆನ್ನಂತೆವೊಲಾಣ್ಮನ ಬರವಂ ಪಾರುತೆ ಪರಣಮಂ ಪಿಡಿದಿರ್ದಪಳೊ?

ರಾಯಂ—ದೇವಿ! ಅದಿಂತು, ಲಾಲಿಸು—

ವೃ || ವರನೆಯ್ದುಂದಪನೀಗಳಾಗಳೆನುತಂ ಪ್ರತ್ಯಾಶೆಯಿಂ ನಲ್ಲರಾ
ವಿರಹಾಧಿಕ್ಯಮನೆಂತೊ ಸೈರಿಸುತೆ ತಾಮಿರ್ದಪ್ಪರಾಶಾ ವಶರ್।
ಪರಣಂಬಾಳ್ದಿ ಯದಲ್ಲದಿರ್ದೊಡೆ ವಿಮಸ್ವದ್ಭಾಸಮಂ ಜಿಟ್ಟು ತಾ
ವರೆ ಶುಭ್ರಾಂಶು ಮರೀಚಿಯಂ ತೊಱೆದು ನೆಯ್ದಿಲ್ ತಾನದೆಂತಿರ್ಕುಮೋ
|| ೧೦ ||

[ತೆರೆಯೊಳೆಕ್ಕತುಳಂ ಕಳಕಳಮುಂ ವಾದ್ಯಧ್ವನಿಯುಮಕ್ಕುಂ. ಇರ್ವರುಂ ಜಾಲ ಮಾರ್ಗದೊಳ್ನಿಳ್ಕಿ ನಿರುಕಿಸಿದಪರ್]

ರಾಯಂ—(ಸವಿಸ್ಮಯಂ) ದೇವಿ! ನೀನೆ ಗೆಲ್ದೆ. ಇದೆ ಕೊಳ್. ಈ ಪೆಣ್ಬಣಿ ಪಿರಿಯುವ ಬೇಗೆಯುಂ ಸೈರಿಸಲಾಱದೆ ಅಱಿದಾಣ್ಮನೊಡನೆ ತಾನುಮುಱಿಯಲೆಳಸಿ ಅಗಿನಿಯುಂ ಪುಗಲ್ ಪೋಗುತಿರ್ದಪಳ್. ಆಹ! ಹದಿಬದೆಯರ ಕಾದಲ್ಮೆಯ ಮೈಮೆ ಯೆನಿತು ಪೆಸಕಮನೇವೊಗೞ್ವುದೊ!

ವೃ॥ ಚಿತಿ ಕ್ರಮಮುದಾರ ತಲ್ಪದ ಪದಂಪನಾನ್ಗುಂ ಮಹಾ
ಹುತಾಶನ ಶಿಖಾ ಚಯಂ ಮಲಯ ಜೋದದಂತಿರ್ಕುಗುಂ।
ಕೃತಾಂತನುಮನಂಗ ವಿಭ್ರಮಕರಂ ಪರಂ ರಾಜಿಕುಂ
ಸತೀ ಪ್ರಣಯಮಿಂತಿದೇಂ ಜಗಕೆ ಚಿತ್ರಮಂ ತೋರ್ಕುಮೋ ॥ ೧೧ ॥

ಭಾನು.—ಆರ್ಯಪುತ್ರ! ತುಱಿಪದುರಿಪುತೆ ಬರುತಿರ್ಪ ವಿರಹಾಗ್ನಿಯಂ ತೊಱೆದು ಚಿತಾಗ್ನಿಯಂ ಬಯಸುತಿರ್ಪ ಕತದಿಂದಿವಳ ವ್ಯವಸಾಯಮಿದು ನಿಜ ಪ್ರಣಯಕ್ಕೆ ತಕ್ಕುದಲ್ಲುತ್ತು.

ರಾಯಂ—(ತನ್ನೊಳ್) ಅಮಮ! ಇದೇನೆನ್ನೀ ರಮಣಿಯ ನಿಶ್ಚಯಮಿನ್ನುಂ ದೂರಮಾರೂಢಮಾಗಿರ್ಕುಂ! ಅಂತಲ್ಲದಿರಲಿದು ವಿಪ್ರಲಂಭಮೋ!

ಕಂ॥ ಲಲನೆಯರ ವಿಪ್ರಲಂಭದ
ಬಲೆಗಳಿವೇ ಅಕ್ಕುಮಱಿಯಲೆಳವರಯದವರ್।
ಸಲೆ ಹರಿಣಂಗಳ ಪರಿಯಿಂ
ದಲಂಪುಱಿದು ಸಿಲ್ಕಿ ಯುಮಱಿಕೊಳಲುತ್ತಿರ್ಪರ್ ॥ ೧೨ ॥

(ಪ್ರಕಾಶಮಾಗಿ) ದೇವಿ! ನಿನ್ನ ನಿಶ್ಚಯಮಿದೆಂತುಟಪ್ಪುದು?

ಭಾನು.—ಆರ್ಯಪುತ್ರ! ನಿನ್ನಗಲ್ಕೆಯ ತಡೆಯಲಾಱದೆನ್ನೆರ್ದೆಗಿಡುವ ನಿಶ್ಚಯಂ.

ರಾಯಂ—(ತನ್ನೊಳ್) ಇವಳ ನಿಶ್ಚಯಂ ತಿಳಿಯಲ್ತಕ್ಕುದಾಗಿರ್ಕುಂ. ಇರ್ಕೆ. ಈಗಳ್ ಬೇಂಟೆಗೆ ತಳರ್ವೊಂದುಜ್ಜುಗಮಿರ್ಪುದಲ್ತೆ! ಅದಱಿಂದಿವಳನಿಂತು ಕೇಳ್ವೆಂ. (ಪ್ರಕಾಶಂ) ದೇವಿ! ಪಲ ದಿವಸಂಗಳಿಂದಮುಂ ಪಡೆಯಿಲರ್ ಬೇಂಟೆಯನೆಳಸಿಯೆನ್ನಂ ಬೇಡಿಕೊಳುತಿರ್ದಪರ್. ನಿರವಿಸಿದೊಡೆ ಪೋಗಿ ಬೇಗನೆ ಮಗುಟ್ದು ನಿನ್ನಂ ಸಂಭಾಷಿಸುವೆಂ.

ಭಾನು.—(ಕಂಬನಿದುಂಬಿ) ಆರ್ಯಪುತ್ರ! ನಿರವಿಸಲಾನಾರ್ತೆನಲ್ಲಂ.

[ರಾಯಂ ತೆರಳಲುಜ್ಜುಗಿಪಂ]

ಭಾನು.—(ಕಣ್ಣೀರಿಡುತೆ ಬೞಸಂದು) ಆನಾದೊಡೆ ಆರ್ಯಪುತ್ರನ ಬರವಂ ಪಾರುತೆ ಬಾಗಿಲ ಕಂಬಮಂ ನೆಮ್ಮಿರ್ದಪೆಂ.

[ಎಲ್ಲರುಂ ತೆರಳ್ವರ್]

**ಇಂತು ಮೊದಲನೆಯ ಅಂಕಂ**

---

## ಎರಡನೆಯ ಅಂಕಂ

[ತೆರೆಯಂ ಪಾಱಿಸಿಕೊಂಡೞುತೆಯ್ತಂದೆರ್ದೆಯಂ ಮೋದಿಕೊಳುತೆ]

ಚೇಟಿ—ಹಾ! ಕೆಟ್ಟೆಂ! ಮಂದ ಭಾಗ್ಯೆಳೆಂ!

ಮತ್ತೊರ್ವಳ್—(ಪ್ರವೇಶಿಸಿ) ಗೆಳತಿ! ಅಂತವುರದೊಳಂತಪ್ಪ ಗಾವರಮೇಂ?

ಪ್ರಥಮೆ—(ಅೞುತೆ) ಎಲೆ ಸಖಿ! ಆವಳೆಮ್ಮ ಪೊೞಲ್ಕನ್ನೆಗೆ ಬಯ್ತಲೆ ಮಾಣಿಕ ಮಾಗಿರ್ದಳೊ ಆವಳಾದೊಡೆಮ್ಮೆಲ್ಲರ್ಗಂ ಬೇಡಿದುದ ನೀಡುತಿರ್ದಳೊ ಸಂಟರ ಮನದಿಚ್ಚೆಗಳ್ಗಾವಳ್ ಕಲ್ಪಲತೆಯಂತಿರ್ದಳೊ ರಾಯನೆರ್ದೆಯೊಳಾವಳಮಂದಾ ನಂದಮನೊಂದಿಸುತ್ತಿರ್ದಳೊ ಆ ರಾಣಿ ರಾಯನಾ ಪೞಿವತ್ತಲೊಂದು ಕಾೞ್ಮಿಗ ದತ್ತಣಿನೞಿದನೆಂಬಳೀಕ ವಚನಮಂ ಕೇಳ್ದು ಪರಣಂದೊಱೆದಳ್.

ದ್ವಿತೀಯೆ—(ನಡುಗುತೆ ಕಂಬನಿಯಂ ಸುರಿಸುತೆ) ಅಕಟಕಟ! ಆವ ಹತಾಶನಿಂತು ಪುಸಿವೇೞ್ದಂ?

ಪ್ರಥಮೆ—ರಾಯನ ಬೞಿಯಿಂದೆೞ್ತಂದ ದುರಾಖ್ಯಾಯಿಯಂತುಸಿರ್ದು ಬೞಿಕ್ಕಳೀಕಮಿದೆಂದೊಡಂ ದೇವಿಯೆೞ್ಚರಲಿಲ್ಲಂ.

ಇರ್ವರುಂ—(ಗೋೞಿಡುತೆ ಮಱುಗಿ)

ಕಂ॥ ಎಲೆ ದೇವಿ! ಪುಸಿಯ ಮಾತಿಂ
ನೆಲೆಗೆಟ್ಟಂತೞಿದ ನಿನ್ನ ಪೊಸ ಜಸದಿಂದಂ।
ಅಲಘುತರಮೆನಿಸಿ ಕೃತಿಯೊಳ್
ಸಲೆಯುೞಿಪಿದುದಾತ್ಮ ದುರ್ಯಶಮನಾ ಪ್ರಣಯಂ　　॥ ೧೩ ॥

[ತೆರೆಯೊಳ್ ಕಳಕಳಮಕ್ಕುಂ]

ಇರ್ವರುಂ—ಅಕಟ! ಪೊೞಲತ್ತಣಿಂ ದೇವಿಯನೆಂತುಯ್ದಪುದೊ? ಇದೆ! ಈ ದುರಾಖ್ಯಾಯಿ ಬೇಂಟೆಯಿಂ ಮಗುೞ್ದು ಬರುತಿರ್ಪ ರಾಯನ ಸಮೀಪಕೆ ಸಾರ್ದಪಂ. ಅದಱಿಂದಾಮಿರ್ವರುಮಾ ದೇವಿಯಂ ಬೞಿಸಂದನಪರಾಧಿನಿ ಗಳಾಗುವಂ.

[ಎಂದು ತೆರಳ್ದರ್]

[ಇಂತಿದು ಪ್ರವೇಶಕಂ]

[ಬೞಿಕ್ಕಂ ಬೇಂಟೆಯಿಂ ಪೆಡಮಗುೞ್ದು ರಾಯಂ ಪರಿಜನಂ ಬೆರಸು ಪುಗುವಂ]

ರಾಯಂ—(ಎಡಗಣ್ ಪೊಡರ್ವುದಂ ತೋರ್ದು) ಇದೇನೆನ್ನೀ ಯೆಡಗಣ್ಣಳ್ಳಿಱಿಯು ತಿರ್ಕುಂ. ಅಚ್ಚರಿಯುಚ್ಚರಿ!

ಕಂ॥ ತನಗಪ್ಪ ಹಿತಾಹಿತಮಂ
ಜನಮಱಿಯಲ್ಕಾರ್ತುದಿಲ್ಲ ಜಡಮಾದೊಡಮಿಂ।
ತನುವಿಂ ಪೇೞ್ದಪುದಂಗಂ
ನೆನೆಯಲ್ ಮುನ್ನಱಿತು ಭಾವಿ ಫಲ ಮಂಡಲಮಂ　　॥ ೧೪ ॥

(ಚಿಂತೆಯಿಂ ಸಂತಾಪಮನಾಂತು) ಇಂತೀ ಯೆಡದಾಲಿ ಪೊಣ್ಚಱುವುದೆನ್ನ ಬನ್ನದ ಪರಿಯನಱಿತಿರ್ಪುದು ನಿಕ್ಕುವಂ.

ವೃ ॥ ಮಸುಳ್ದು ಬಿರಯುದಾಂತತ್ಯಂತ ಸಂತಾಪಮುಂ ತ
ನ್ನಸುವನುೞಿಯೆ ಸಲ್ಲಳ್ ನಿಶ್ಚಯಂಗೆಯ್ದುಳಕ್ಕುಂ ।
ಎಸೆವ ಗುಣದೆ ದೋಷಾರೋಪಮುಂ ಗೆಯ್ದ ಜಾಲ್ಮಂ
ಗಸುರ್ದೆಸಗಸುರೂಪಂ ತಾಪಮುಂ ಪ್ರಾಪ್ಯಮಲ್ತೆ ॥ ೧೫ ॥

[ದುರಾಖ್ಯಾಯಿ ನಡ ನಡುಗುತೆ ಪುಗುವಂ]

ದುರಾ.—ದೇವ! ದೇವಿಯು—(ಎಂದರೆವಾತಿಂ ವಾಚಾಸ್ತಂಭಮನಭಿನಯಿಸುವಂ)

ರಾಯಂ—(ತಲ್ಲಣಂಗೊಂಡು) ಏಂ ದೇವಿಯು—? ಅದೇನುಸಿರ.

ದುರಾ.—ದೇವನಾಣತಿಯಂತೆ 'ರಾಯಂ ಕಾಡ್ಕಿಗದಿಂ ಪರಾಸುವಾದ ನೆಂದುಸಿರ್ದೀಯೆನ್ನ ನುಡಿ ಕೊಡಂಕೆಯನೆಡೆಗೊಳಲೊಡಂ ದೇವಿಯು—

[ಎಂದು ಮಗುಟ್ದುರ್ಘೋಕ್ತಿಯಿಂ ತಲೆವಾಗಿರ್ದಪಂ]

ರಾಯಂ—(ಖೇದಮುಂ ವಿತರ್ಕಮುಂ ಮುಂಬರಿಯೆ) ಏಂ ?

ವೃ ॥ ದೇವಿಯ ಮಾನಸಂ ಕೆಡೆದುದೇಂ ಗಡ ವಿಸ್ಮೃತಿ ಕಾಳ ಗರ್ತದೊಳ್

ದುರಾ.—ದೇವನ ಬರ್ಪ ದಾರಿಯನೆ ಪಾರುತೆ ದ್ವಾರಸ್ತಂಭಮನವಲಂಬಿಸಿರ್ದ ದೇವಿಯು—

[ಎಂದು ಮತ್ತಮುಸಿಕಮಿರ್ಪಂ]

ರಾಯಂ—(ಕಂಬನಿಯಿಡುತ ಗದ್ಗದ ಸ್ವರದಿಂ) ಏನಂ ಪೇೞಲಧ್ಯವಸಾಯಮುಮಂ ಗೆಯ್ಯುತಿರ್ಪೆ ?

ವೃ ॥ ದೈವ ಹತಂಗೆ ತೋರ್ಕುವೊ ಜಗತ್ರಯಮುಮಂ ತಿಮಿರ ಪ್ರಸಾರಿತಂ

ದುರಾ.—ಇಂ ಪೇೞ್ವುದೇಂ? ದೇವಿಯು ಸರಿದುಸಿರ್ಗಳಿನ್ನೆವರಂ ತಿರುಗಲಿಲ್ಲಂ.

[ರಾಯಂ ಮೂರ್ಛೆಗೊಂಡು ನೆಲದೊಳ್ ಬಿಟ್ದಪಂ]

ದುರಾ.—ದೇವ! ಸೈರಿಸು! ಸೈರಿಸು!!

ರಾಯಂ—(ಇನಿಸೆಚ್ಚತ್ತು) ಏಂ? ದೇವಿಯು ಸರಿದುಸಿರ್ಗಳಿನ್ನೆವರಂ ತಿರುಗ ಲಿಲ್ಲಮೆ? ಹಾ!

ವೃ ॥ ದೇವಿಯ ಜೀವಮೊಂದೆ ತನುವಿಂದೆ ವಿನಿರ್ಗತಮಾಗಲಿಲ್ಲ ಹಾ !
ಭಾವಿಸೆ ಪೋಯ್ತು ಭರ್ತೃಹರಿಯಾ ನಿಖಿಲೋತ್ಸವಮುಂ ನಿಶಾಂತದಿಂ ॥೧೬॥

[ಎನುತುಂ ಮಗುಟ್ದುಂ ಮುಚ್ಛೆಗೆ ಸಂದಪಂ. ಪರಿಜನಂ ಸಂತೈಸುಗುಂ]

ರಾಯಂ—(ಚಿರ ಕಾಲಕೆ ಲಬ್ಧ ಸಂಜ್ಞನಾಗಿ) ಎಂತೆಂತು? ಆ ಲಲಿತ ವಿಲಾಸಂಗಳುಂ ದೇವಿಯನುೞಿದು ಪೋದುವೇಂ? ಅಕ್ಕಟ!

ಕಂ ॥ ಎಂತುೞಿದುದು ತಾವರೆಯೆಸ
ಳಂತಿರ್ದಕ್ಷಿಗಳನೆಸಕಮೆಸೆವಾ ನೋಟಂ ।

ಅಂತು ನಗೆಯುಗುವ ಮೊಗಮನ
ದೆಂತುಱಿದುದು ಪೇೞಿ ಸೊದೆಯನೊದವಿಪ ನುಡಿಗಳ್ ॥ ೧೭ ॥

(ಸೋತ್ಕಂಠಂ) ಪೇೞಿ! ಈಗಳೆತ್ತಲಿರ್ದಪಳ್ ದೇವಿ?

ದುರಾ.—ಪೊೞಲಿಂ ಪೊಱಗುಯ್ವಾಗಳಾಂ ಕಂಡೆಂ ದೇವಿಯಂ.

ರಾಯಂ—(ಪಿಂದುಮುಮ್ಮಳಂಗೊಂಡು) ಏಂ? ಸಂಟರವರೆಂತೆನ್ನ ಕಾಂತೆಯಂ ಚಿತಾಂತದೊಳಿಟ್ಟು ಸುಡಲೊಪ್ಪಿರ್ದಪರ್?

[ಮರುಳ್ಪನದವತೆಗೆ ಸಂದು ಅತ್ತಲಿತ್ತಲ್ ತಿರುಗುತೆ ಕಿಸುಗಣ್ಣಿ]

ಅಕಟ! ಸಂಟರಿರ! ಅಂತೆಸಗವೇಡ.

ವೃ॥ ಚಾರು ಶಿರೀಷ ಕೇಸರ ಶಿಖಾ ಮೃದುಳಾಂಗ ಮಿದೀಗಳೀ ತೆಱಿಂ
ಘೋರ ಸಮುಜ್ಜ್ವಲ ಜ್ಜ್ವಲನ ಕಾಷ್ಠ ಚಿತಾಂತದೆ ನೀಡಲರ್ಹಮೇಂ।
ಆರಯೆ ಮದ್ಭುಜಾ ಪಿಹಿತಮಂ ಹಿತಮೆಂದು ನಿಜಾಂಗಮಂ ಶುಭಾ
ಕಾರೆಯೆ ಬೇಳ್ಪಳಿಂದು ಮಿಗೆ ನೇಹದೆ ಪೆರ್ಚಿದ ಕಾಮ ವಹ್ನಿಯೊಳ್ ॥ ೧೮ ॥

[ಮಗುಟ್ದು ತೊಳಲುತ್ತಲಿತ್ತಲ್ ನೋಡಿ]

ಹಾ! ಕಷ್ಟಂ! ಕಷ್ಟಂ!! ಇದೆ ಎನ್ನ ಪ್ರಾಣೇಶ್ವರಿಯಿತ್ತಲೀ ಮಸಣದೊಳಿರ್ಪಳ್. ತೆಗಱ್ ತೆಗಱಿನ್ನ ಬಾಱಿಕ್ಕಿಯಂ.

ವೃ॥ ಅರೆ ಬೆಂದಿರ್ಪ ಪೆಣಂಗಳಂ ಸೆಳೆಯುತೊಲ್ದೀಡಾಡುತಾವಾರ್ಗ ಭಯಂ
ಕರ ಗೋಮಾಯುಗಳಿಂ ಭ್ರಮದ್ಬಹುಲ ಗೃಧ್ರ ವ್ರಾತದಿಂ ನಾಸಿಕಂ।
ಬಿರಿಯಲ್ ಕಣ್ಕಿಡೆ ಪೂತಿ ಗಂಧಮೆಸಪುದ್ಯದ್ಧೂಮದಿಂ ಬೂದಿಯಿಂ
ನೆರೆದಿರ್ಪೀ ಮಸಣಂ ಮದೀಯ ಗೃಹಲಕ್ಷ್ಮೀ ದೇಹ ಕಿಂಬಾದುದೇ ॥ ೧೯ ॥

[ಇಂತೞಲ್ದು ಮೈಮಱದಪಂ]

[ತೆರೆಯೊಳ್ ಗಾವರ ಮಕ್ಕಂ]

ಪರಿಜನಂ—(ರಾಯನನೆತ್ತಿಪಿಡಿದು) ಎಲೆ ರಾಯ! ಈ ನಿನ್ನ ಸಂಟರೆಲ್ಲರುಂ ನಿನ್ನವತೆಯ ಕಂಡೞಲ್ದುಱುತ್ತುಮಿರ್ದಪರ್ ನೋಡ!

ರಾಯಂ—(ಎಚ್ಚತ್ತು) ಸಂಟರಿರ! ಈ ಭರ್ತೃಹರಿಯಿನ್ನುಮೆಂತು ಬರ್ದುಕಿರ್ಪನೆಂದು ತಿಳಿದಿರ್ಪಿರ್? ಕೇಳಿಂ.

ಕಂ॥ ಪುಸಿಯಱಿವನಾಲಿಸಿ ತನ
ತ್ತ್ರಸುವಂ ಕಸದಂತೆ ತೊಱೆದ ಸತಿಯಂ ನೋಡು।
ತ್ತುಸಿರ್ಗಳನಾಂತಿರ್ಪನಿವಂ
ನಿಸದಮಿದು ನಿರಾಶನಾಗಿ ಬರ್ದುಕಿದನಲ್ಲಂ ॥ ೨೦ ॥

[ಬೞಸಾರ್ದು ಜವನಿಕೆಯುತ್ತಲ್ ದಿಟ್ಟಿಸಿ ಮರುಕದಿಂ]

ಎಲೆ ದೇವಿ! ಏನಿದು?

ಕಂ ॥ ಕುಂಕುಮವಿಡೆ ಕಂದುವ ಪೂ
ವಂ ಕಯ್ಗುಯ್ಯಲ್ಪಱಿಲ್ವ ಜೊನ್ನಕೆ ತಸುವಂ ।
ಕೊಂಕಿಪ ನೀನೆಂತಿರ್ದಪೆ
ಸಂಕಟಕರ ದಾರು ಭಸಿತ ಚಿತೆಯ ಗಹನದೊಳ್ ॥ ೨೧ ॥

ಪರಿಜನಂ—(ಜವನಿಕೆಯತ್ತಲ್ ನಿಟ್ಟಿಸಿ) ಅದೆ! ಮಹತ್ತರಕಂ ದೇವತಿಲಕಂ ಬರುತಿರ್ದಪಂ.

ದೇವತಿಲಕಂ—(ಪ್ರವೇಶಿಸಿ) ದೇವ! ಸೈರಿಸು.

ರಾಯಂ—ಸೈರಿಪುದೆಂತು?

ಕಂ ॥ ಉಱಿದು ವಿಧಿ ಹತನನೆನ್ನಂ
ಬಱಿಸಂದುದು ಸತಿಯನೆನ್ನ ಸೈರಣೆ ಜಗದಿಂ ।
ಬಱಿಸಲೆ ಮತ್ಪ್ರಾಣಂಗಳ
ನಱಿ ಬಿದಿ ತಡೆದಪ್ಪುದೇವೆನಿನ್ನ ಕಟಕಟಾ ॥ ೨೨ ॥

ಇಂ ಪೇೞ್ವುದೇಂ? ಒಲ್ದಳಂ ವಂಚಿಸಿ ಯೆನ್ನಿನಾನೆ ಈ ವಿಪತ್ತಿಗೊಳಗಾದೆಂ.

ವೃ॥ ಆಗೆಯಿಸಿ ಕೂಪಮಂ ಮತಿ ವಿಹೀನತೆಯಿಂದವಱಲ್ಲಿ ಬಿೞ್ದವೊಲ್
ಬಗೆದುರಗಾಸ್ಯಮಂ ತೆಱೆದು ಚುಂಬಿಸಿದಂದದೆ ಬಾಳ್ಗೆ ಗೋಣನಿ ।
ಟ್ಟೊಗುವಮಗೆ ಪೋೞ್ದುಕೊಂಡ ಬಗೆಯಿಂದೊಳಗಿರ್ದುರ್ ಕೃಶಾನುವಂ ಗೃಹ
ಕ್ಕಗಿಯದೆ ನೀಡಿಕೊಂಡ ತೆಱನಾಯ್ತಿದು ದುರ್ವಿಧಿಯೇಂ ಬಲೀಯಮೋ
॥ ೨೩ ॥

ದೇವತಿಲಕಂ—ರಾಯ! ಪಿರಿದುಂ ದುಃಖವೊದವಿದಾಗಳ್ ಮನಮಂ ದುರ್ಬಲಮನಾಗಿಸಿ ಮಹಾಂತರ್ ಸಮಾಧಾನಮಂ ಪಡೆವರ್.

ರಾಯಂ—ಎಲೆ ದೇವತಿಲಕ!

ಕಂ ॥ ಸರಸಿಜ ನಯನೆಯೊಳಿನಿಸೊಂ
ದಿರೆ ವಿಗುಣತೆ ಮನಮುಮುಕ್ಕುಮಾಗಳ್ ಶಿಥಿಲಂ ।
ಇರೆ ಗುಣ ಲವಮಾದೊಡಮೆಂ
ತಿರೆ ಶಿಥಿಲಮದಕ್ಕುಮೆಂತು ಸೈರಣೆಯುಕ್ಕುಂ ॥ ೨೪ ॥

ದೇವ.—ರಾಯ! ನಿಕ್ಕುವ ಮಂತಿರ್ದೊಡಂ ವಿಪತ್ತಿಯೊಳ್ ಧೈರ್ಯಮೆ ಅವಲಂಬನಮಕ್ಕುಂ.

ಕಂ ॥ ನಿಂದಿತನಾಗಿರ್ಪನಗೇ
ನಿಂದಕ್ಕುಂ ಧೈರ್ಯದಿಂದೆ ಬಿರಯದಿನೆನಸುಂ ।
ದಂದುಗವೊದವಿರೆ ಯಿನ್ನೇಂ
ಬಂದಪುದೋ ಪೇೞ್ ಪ್ರತೀಪ ದಶೆ ಭೂತಲದೊಳ್ ॥ ೨೫ ॥

[ಶವ ಡೋಲಾಲೋಕನಮನಭಿನಯಿಸಿ ಮರುಳ್ಗೊಂಡು]

ದೇವಿ ! ದೇವೀ !!

ಕಂ॥ ಎಮಗಿರ್ವರ್ಗಮಗಾಧಂ
ರಮಣೀ! ಸ್ನೇಹಾಬ್ಧಿ ಸಾರ್ದ ನೀಂ ತತ್ತಟಮಂ।
ಅಮಮಾ! ಬಿಟ್ಟಾನದಱೊಳ್
ಸಮಂತು ಮುೞುಗುತ್ತೆ ಮೋಹಮಂ ತಾಳ್ದಿರ್ಪೆಂ ॥ ೨೬ ॥

ಹಾ ! ದೇವಿ !

ವೃ॥ ಈಗಳನಂಗ ಮಂಗಳ ಕಳಾ ಕುಳಕಾರಯಲಿಕ್ಕೆಯಾದೆ ನೀ
ನೀಗಳಪಾರ ಸೌಖ್ಯನೆನಿಸಿರ್ದನನಂತ ಮದಾಂಧನಾದೆ ನಾಂ।
ಈಗಳೆ ನಾಡೆ ಪೋೞ್ದುದೆನತೀ ಯೆರ್ದೆ ದಾರುಣಮಾಗೆ ಮತ್ತಮಾ
ನೀಗಳೆ ಜೀವಲೋಕದಿನಹಾ! ಜಗುೞ್ದಿಂ ಹತ ಸರ್ವ ಸಂಪದಂ ॥ ೨೭ ॥

(ತೆರೆಯೊಳ್) ದೇವ! ದೇವಿಗೆ ಅಗ್ನಿ ಸಂಸ್ಕಾರಮಂ ಗೆಯಲಾಣತಿಯನೀಯ!

ರಾಯಂ—(ಕೇಳ್ದು) ಅಕ್ಕಟ! ಅಂತೆನಗವೇಡ. (ಕೋಪದಿಂ) ನಂಟರಿರ! ನೀಮೆಂ ತಿಂತಾನೊಲ್ಲದ ಕಜ್ಜಕುಜ್ಜುಗಿಸಿದಪಿರ್?

ದೇವ.—ರಾಯ! ಸಾಲ್ಗುಂ. ಈ ನಿರ್ಬಂಧಮನಿಂ ಬಿಡು.

ರಾಯಂ—ಇದು ನಿರ್ಬಂಧಮೆ ಅಪ್ಪುದು.

ಕಂ॥ ಎನ್ನಂ ವಿಧಿ ಹತನಂ ನೀ
ಮನ್ನೆಯದಿಂ ವಂಚಿಸುತ್ತೆ ಮಡದಿಯ ವಪುವಂ।
ಇನ್ನುರಿಪಲೆಳಸುವೊಡೆ ಕೇ
ಳಿನ್ನಿನದಂ ಬರ್ಪೆನಾನೆ ಸೈರಿಸಲಾಱೆಂ ॥ ೨೮ ॥

[ಎಂದುನ್ಮಾದದಿಂ ಚಿತಾಭಿಮುಖಂ ಪರಿವಂ]

ದೇವ.—ಅಕ್ಕಟ! ಆಮುಂ ತೆರಳ್ದೀ ರಾಯನಂ ಪಿಡಿದು ಸಂತೈಸುವಂ.

(ಎಲ್ಲರುಂ ತೆರಳ್ವರ್)

ಇಂತು ದ್ವಿತೀಯಾಂಕಂ

---

## ತೃತೀಯಾಂಕಂ

ಕಂಚುಕಿ—(ಪ್ರವೇಶಿಸಿ ಸ್ಖಲನಮನಭಿನಯಿಸಿ) ಆಃ ! ಕೆಟ್ಟವತನದಿಂದಮುಮಟಿಲಿಂದಮುಮಭಿಭೂತನಾದೆನಗೆ ದಂಡಕಾಷ್ಠಮಿದುವುಮಾಲಂಬನಮಾಗದು. ಏತರ್ಕೆನೆ—

ಕಂ ॥ ಮೊದಲೆ ಜರೆಯಿಂ ಪರಾಹತ
ಮಿದು ತನು ಮೇಣೀಗಳವನಿಪಂಗೀ ದುಗುಡಂ।
ಒದವಿರೆ ಕುಬ್ಜಿಗದ ತನುಗಿ
ರ್ಪುದೆ ಯಿಂತು ವಿಕಾರ ವಿಕಲಕಿದಕವಲಂಬಂ ॥ ೨೯ ॥

[ಎಂದತಿ ಪ್ರಯಾಸದಿಂದೆಟ್ಟು]

ರಾಯಂಗಾದುಮ್ಮಳಮಂ ಪರಿಹರಿಪೆನೆಂದಾ ಜೋಗಿ ಪೂಣ್ದಿರ್ಪುದನಮಾತ್ಯಂಗೆ ಬಿನ್ನವಿಸೆ ಪೋಪೆಂ [ಎಂದತ್ತಲಿತ್ತಲ್ ನಡೆದು ನೋಡಿ] ಇದೆ! ಅಮಾತ್ಯನಿತ್ತಲೆ ಬರುತಿರ್ದಪಂ.

ದೇವ.—(ಪ್ರವೇಶಿಸಿ ಚಿಂತಿಸುತ್ತೆ)

ಕಂ ॥ ಮರಣಮೆ ಲೇಸೆಂದಱಿತಿ
ರ್ಪಿರೆಯಾಣ್ಮನ ಶೋಕಮಿಾಗಳಟ್ಟುಗಳುಂಬಂ।
ಅರರೆ! ಪರಸ್ಪರ ರೂಢೋ
ತ್ಕರ ತತ್ಪ್ರಣಯಂ ಸಮಂತು ವಿಸ್ಮಯಮಿಾಗುಂ ॥ ೩೦ ॥

[ಎಂದು ನಡೆತರುತಿರ್ಪನಿತರೊಳ್]

ಕಂಚುಕಿ—(ವಿನಯಮಂ ಸಾರ್ದು) ಅಮಾತ್ಯ! ಯೋಗೀಶ್ವರನೊರ್ವಂ ರಾಯಂಗೊದವಿರ್ಪ ದುಗುಡಮಂ ಪರಿಹರಿಪೆಂ ಎಂದು ಪೂಣ್ದಿರ್ದಪಂ.

ದೇವ.—(ಸಂತಸದಿಂ) ಅಕ್ಕೆ. ಅಂತಪ್ಪೊಡೆ ರಾಯನಿತ್ತಲಿರ್ಕೆ. ಆಂ ತೆರಳ್ದು ಯೋಗಿಯಂ ಕಂಡಪೆಂ.

[ಎಂದು ತೆರಳ್ದರ್]

[ಇಂತಿದು ವಿಷ್ಕಂಭಕಂ]

[ಬಟಿಯಂ ಪುಗುವಂ ಸೋನ್ಮಾದಂ ರಾಯಂ]

ರಾಯಂ—ಎಲೌ ಕಾಂತೆ! ಕಾಶಿ ರಾಜ ತನೂಜೆ!

ವೃ ॥ ಕಿವಿಯೊಳ್ ಬೀಟಿಲೊಡಂ ಪ್ರಿಯ ಪ್ರಲಯಮಾಹಾ! ಪ್ರಾಣಮಂ ಬಿಟ್ಟೆ ನೀಂ
ಭುವನ ವ್ಯಾಪಿನಿಯಾದುದೌ ಸತಿಯರಾ ಸತ್ಕೀರ್ತಿ ಯಾನಿಂದು ಶೋ।
ಕವನಾಂತೀ ತನುವಂ ವಿಸರ್ಜಿಸದಿರಲ್ಕೇಂ ಸಾರದಿರ್ದಪ್ಪುದೇ
ಯುವ ದುಷ್ಕೀರ್ತಿ ವಿಶಾಲ ದುಂದುಭಿ ರವಂ ದುರ್ವಾರ್ಯಮತ್ಯೂರ್ಜಿತಂ॥೩೧॥

ಇವಳಂ ತೊಡೆಯೊಳ್ ಮಲಂಗಿಸಿಕೊಂಡು ಪರಣಮಂ ತೊಱೆಸಿದೊಡೆ ಇವಳನೆ ನೆನೆಯುತಿರ್ದುದಱಿಂದೆನಗೆ ಮುಂಬುಟ್ಟಿನೊಳಾದೊಡಮಿವಳೊಡವೆರೆದಿರ್ಪ ಸೈಪು ದೊರೆಕೊಳ್ಳುಗ್ಗುಮೆಂಬ ಪ್ರತ್ಯಾಶೆಯೇ ಪ್ರಬಲಮಾಗಿರ್ಕುಂ. ಅದಱಿಂದಂತುಗೆಯ್ವೆಂ.

(ತೆರೆಯೊಳ್)

ಹಾ! ಡಿಬ್ಬಿಕೆಯೇ! ಎತ್ತಲೆಯ್ದಿದೆ? ಹಾ! ವಿಧಿ! ಕರಂ ಪ್ರತಿಕೂಲತೆಯಿಂ ದೆನ್ನನಿಂತು ವಂಚಿಸಿ ಯೆನ್ನ ಡಿಬ್ಬಿಕೆಯಂ ಕಳೆದೆಯಲ್ತೆ!

[ಎಂದು ಮರುಟ್ಟನದಿನಟ್ಟಪಂ]

ರಾಯಂ—(ಕೇಳ್ದು) ಇದೇಂ? ಎನ್ನವೊಲತಿ ಶೋಕಕ್ಕೊಳಗಾದನ ಆರ್ತ ನಾದಂ ಕೇಳಿಬರ್ಕುಂ. ಅಕ್ಕೆ. ಅತ್ತಲ್ ತೆರಳ್ದು ನಿರುಕಿಪೆಂ [ಎಂದು ತೆರಳ್ದಪಂ. ಪರಿಜನಮು ಮನುಸರಿಸಿ ಪೋಕುಂ]

ರಾಯಂ—(ವಿಲೋಕಿಸಿ) ಇದೇಂ? ಜೋಗಿಯಿವಂ ತನತು ಕಮಂಡಲುವೊಡೆ ದುದಕಿಂತು ಸಂತಾಪಮಾಂತು ಬಿಟ್ಟಿಪಂ. ಅಕ್ಕೆ. ಆಸೀತನಂ ಸಂತವಿಸಿಡಪೆಂ.

[ಬೞಿಕ್ಕಂ ಯಥಾ ನಿರ್ದಿಷ್ಟಂ ಯೋಗಿ ಪೊಕ್ಕಪಂ]

ಯೋಗಿ—ಹಾ! ಡಿಬ್ಬಿಕೆಯೆ! [ಎಂದು ಮೊದಲಂತುಸಿರ್ದು ರೋದಿಪಂ]

ರಾಯಂ—ಯೋಗಿಯೆ! ಸೈರಿಸು! ಸೈರಿಸು!!

ಯೋಗಿ—(ನಿಟ್ಟುಸಿರಂ ಬಿಡುತ) ಅಕ್ಕಟ! ಎಂತು ಸೈರಿಪೆಂ? ನಾಡು ನಾಡುಗಳಂ ತೊಳಲ್ವೆನಗೆ ಬಹು ಗುಣವತಿಯಾದ ಗೆಳತಿಯಂತಿರ್ದ ಈ ಡಿಬ್ಬಿಕೆಯಿಂದಿಂತು ಭಗ್ನ ಮಾದುದು.

ರಾಯಂ—(ಮರುಕಂಗೊಂಡು ತನ್ನೊಳ್)

ಕಂ॥ ಗಣಿಸಲ್ ಪ್ರಿಯ ವಿಷಯಂ ತಾ
　　ನಣುವಾದೊಡಮಕಟ! ಯೋಗಿಯಂ ತಾಪದೊಳಿಂ।
　　ತೊಣಗಿಸುಗುಂ ತನತಱಿವಿಂ
　　ದಣಮಿನ್ನೆನ್ನನ್ನರಿರವನೇಂ ಬಣ್ಣಿಪುದೋ　　॥ ೨೨॥

ಆದೊಡಮೀ ಯೋಗಿಯನಾನಿಂತು ಬೋಧಿಸಿದಪೆಂ: ಎಲೈ ಯೋಗಿಯೆ! ಅಱಿದುದಕ್ಕಿದರ್ಕೇತರ್ಕಿಂತಱಿಲ್ದಪಯ್?

ಯೋಗಿ—(ಕಂಬನಿವಿಡುತ) ನೀನಾರ್? ಇಂತು ಬೆಟ್ಟನೆ ನುಡಿವೆಯದೇಂ? ಅಂತಲ್ಲದಿರೆ ಇದಱ ಗುಣಂಗಳನಱಿಯದಿರ್ಪುದಱಿಂದಿಂತುಸಿರ್ದಪೆಯೋ!

ರಾಯಂ—ಆವುವಿದಱ ಗುಣಂಗಳ್?

ಯೋಗಿ—ಅಕಟ! ಇದಱ ಗುಣಂಗಳೊಳವೆನಿತ್ತೆನಿತ್ತೊ. ಆದೊಡಂ ಪಲವು ಗುಣಂಗಳನೊರೆವೆನಾಲಿಸ!

ವೃ॥ ನೆರೆಪೆ ಕುರುಳ್ಗಳಂ ದಹನಮಂ ತರಲಂಬುವ ತುಂಬೆ ಬಿಕ್ಕೆಯಂ
　　ತಿರಿಯಲಿಡಲ್ ತಿನಲ್ ಪಯುವನೀಂಟಲಿಡಲ್ ಪುರುಳೋಳಿಯಂ ಸಮಂ।

ತಿರದುಪಧಾನವಮಂ ಗೆಯಲುಮುಕ್ಕುಮೆನತ್ತಿದಮತ್ರಮಾರಯಲ್
ಸುರ ಮಣಿಯುಂದದಿಂ ಚಿರ ಫಲ ಪ್ರದಮಿಂತಿದು ಭಗ್ನಮಾಯ್ತು ಹಾ! ॥೩೩॥

ರಾಯಂ—ಅದಿಂತಕ್ಕುಂ :

ಕಂ ॥ ತಿರೆಯೊಳ್ ಗಣಿಸಲ್ಕಾರಱ
ರ್ಪರಿಸ್ಪವಸ್ತುವ ಗುಣಂಗಳಂ ಸ್ನೇಹದಿನಿಂ।
ತಿರೆಯುಪಹೃತಂಗಳಪ್ಪುವು
ಕರಮವಱತೊಳೆ ಸೌಖ್ಯ ಕಾರಣಂಗಳವಕ್ಕುಂ ॥ ೩೪ ॥

ಅಂತಾದೊಡಂ ಪ್ರತೀಕಾರಮನೆಸಗಲ್ಕಾಗದೆ ನಷ್ಟಮಾದ ವಸ್ತುವಿನ ವಿಷಯದೊಳನುತಾಪಂಬಟ್ಟೊಡಮಿಂ ಪಳಮೇಂ? ಸಾಲ್ಗುಂ.

ಯೋಗಿ—ಅಯ್ಯಾ! ಪೇೞ್ವುದೇಂ? ಅದಱ ದಿಡತನಮಂ ಪರಿಕಿಸಲ್ ಬಗೆದಾನೆ ಅದಂ ಕೆಡಪಿಯೊಡೆದುದಱಿಂದಿಂತು ದುರಂತ ಸಂತಾಪಕ್ಕೆ ಪಕ್ಕಾಗಿರ್ಪೆಂ

ರಾಯಂ—(ಪಿರಿದುಮ್ಮಳದಿಂ) ಅಕ್ಕಟ! ತಾನೆ ಅೞ್ಗಿಸಿದ ಪ್ರಿಯಮಾದ ವಸ್ತುವಿನ ವಿಷಯದೊಳಾದ ಸಂತಾಪಕ್ಕೆ ವಿಶ್ರಾಂತಿಯೆ ಇಲ್ಲಂ. ಏತರ್ಕೆಂದೊಡೆ—

ಕಂ ॥ ಅದಪಟಿಲನಾಂತಪುದು ಗಡ!
ಹಿದಯಂ ಮಿಗೆಯುೞಿವ ವಸ್ತುವಂ ಕಾಣಲೊಡಂ।
ಅದಯುತೆಯಿಂ ತಾನೆ ಅೞಿಯಿ
ಸಿದುದಂ ತಿಳಿದೆಂತು ಬರ್ದುಕುಗುಮೊ ಸಿಹತಾಶಂ ॥ ೩೫ ॥

[ಎಂದು ಕಣ್ಣೀರಿಟ್ಟು ಧೈರ್ಯಮನವಲಂಬಿಸಿ]

ಅಂತಾದೊಡಮೆಲೆ ಜೋಗಿಯೆ!

ಕಂ ॥ ಘಟನಾಘಟನ ವಿಚಾರದೆ
ಪಟುವಪ್ಪಾ ಬಿದಿಯು ಗೆಯ್ತುಮಿದಮಂ ಹಿತಮುಂ।
ಘಟಿಯಿಪನೊರ್ವ ಯಹಿತಮುಂ
ಘಟಿಯಿಪನಿನ್ನೊರ್ವ ದೋಷಮೇನೊಳದಿದಱತೊಳ್ ॥ ೩೬ ॥

[ಯೋಗಿಯಾ ರಾಯನ ನುಡಿಗೆ ಕಿವಿಗುಡದೆ ಆ ಕರ್ಪರಮನೆರ್ದೆಯೊಳಿಟ್ಟಳ್ತಪಂ]

ರಾಯಂ—ಯೋಗಿಯೆ! ಅೞ್ವುದನಿಂ ಬಿಡು. ಇದಱಿಂ ಪಿರಿದಾಗಿ ಮಣ್ಣಿಂದಮೊ ಅಚ್ಚ ವೆಳ್ಳಿಯಿಂದಮೊ ಪೊಸ ಮಿಸುನಿಯಿಂದಮೊ ಸಮೆಯೆ ವಟ್ಟಿರ್ಪ ಕಪ್ಪರೆಯನೊಂದನಿತ್ತಪೆಂ.

ಯೋಗಿ—(ಕಿವಿಗಳಂ ಮುಚ್ಚಿ) ಶಾಂತಂ ಪಾಪಂ! ರಾಯ! ಮಿಸುನಿ ವೆಳ್ಳಿಗಳ ಪೊಸಗಪ್ಪರೆಯುದಂತಿರ್ಕೆ. ಮಿತ್ತಿಗೆಯ ಕಪ್ಪರೆಯೆ ಪರಿಣತಿಯೊಳೀತಪ್ಪ ಪಿರಿದನರ್ಘಮನೆಸಗಿದುದೆನೆ ಬಿಂಗಾರದ ಬಂಗಿಯನಿಂ ಪೇೞ್ವುದೇಂ? ಮತ್ತಂ—

ವೃ ॥ ಉರು ಮದಮೆಂಬ ನಕ್ರಕುಲದಿಂ ಭಯಮೆಂಬ ತಿಮಿಂಗಿಲಾಳಿಯಿಂ
ತರಲತೆಯೆಂಬ ವೀಚಿ ಚಯದಿಂ ಪಗೆಯೆಂಬ ಜಲಭ್ರಮಂಗಳಿಂ।

ನೆರೆಯಲಸರ್ಥ ವಾರಿನಿಧಿಯಾಯ್ತೆನಸರ್ತವಿದಲ್ಪಮಾದೊಡಂ
ತುರಿಹದೆ ಬಿಚಿಕ್ಕಿನಿಂದು ಜಗುಲ್ಟಿಂತು ಮಹದ್ವಿಪದಂಬು ಮಧ್ಯದೊಳ್ || ೩೭ ||

ಅಂತಲ್ಲದೆ ಇದಱಿಂ ಪಿರಿದನೀವೆನೆಂದನೃತಮುಮನಪ್ರಿಯಮುಮನೊರೆಯುತಿರ್ದಪೆ. ಇದಲ್ತೆ ನುಣ್ಪುವಡೆದು ರಮಣೀಯಾಕೃತಿಯನಾಂತು ಆಗಲಿತಾಗಿಯುಮಾಳವಾಗಿಯುಮೆನಸುಂ ದೃಢ ಪ್ರಕೃತಿಯುಮಾಗಿರ್ಕುಂ. ಪೆಱತೇನಿಂತು ಸಂಭಾವ್ಯಮೇಂ?

ರಾಯಂ—[ನಿರಾಶೆಯಿಂ ಮನದೊಳ್]

ಕಂ || ಸುತಗುಣವಸ್ತು ಪರಶ್ಯತ
ಮತಿ ಸುಲಭಂ ಮೆಱೆಗೆ ಜಗದೆ ತಾಪವನೀಗುಂ।
ವಿತತ ಪ್ರಣಯಾಸ್ಪದಮೆನಿ
ಸುತಮಿರ್ಪಾ ಪುರುಳದೊಂದೆ ತನತಱವಿಂದಂ || ೩೮ ||

(ಪ್ರಕಾಶಂ)

ಎಲೈ ಯೋಗಿಯೆ!

ಕಂ || ಕರಮುಂ ಪ್ರಿಯಮಿದೆನತ್ತೆಂ
ಬುರು ಮತಿ ವಸ್ತುವಿನ ಚೆಲ್ವಿನಿಂದಾಗದು ಕೇಳ್।
ತಿರೆಯೊಳ್ ಮೋಹ ಧನಂ ಸ್ನೇ
ಹ ರಸಂ ತಾಂ ಗುಣಮನೆಳಪುದಲ್ತಿದು ನಿಸದಂ || ೩೯ ||

ಯೋಗಿ—ಎಲೆ ಮೂಢ! ಅಲ್ತು ಕೇವಲಂ ಸ್ನೇಹಂ. ಮೆಯ್ಬುಳವಿಯುಮಿಪಱಿಂದಮೆ ಆಗುತಿರ್ದುದು.

ರಾಯಂ—ಅಕ್ಕೆ. ಈಗಳಿದು ಭಗ್ನಮಾಗದಿರ್ದೊಡಮಿನ್ನೆನ್ನೆವರಮಿರ್ಕುಂ?

ಕಂ || ಶತ ಕೋಟಿ ಕಲ್ಪಮೋ ಮೇಣ್
ಶತ ಕಲ್ಪಮೊ ಕಲ್ಪಮೊಂದೊ ಕಲ್ಪಾರ್ಧಮೊ ಸು।
ಸ್ಥಿತಿಯಿಂದಿರ್ಪೊಡೆ ಶೋಕಮು
ಚಿತಮಕ್ಕುಂ ದ್ವಿ ತ್ರಿ ದಿನದೊಳಱವುದಕಱಲೇಂ || ೪೦ ||

ಇಂ ಬಿಡು. ಮೆಯ್ಬುಳವಿಯುನಱಯಿಪ ಪಶ್ಚಾತ್ತಾಪದಿನೇಂ? ಏತರ್ಕೆಂದೊಡೆ—

*ವೃ|| ಆವ ಪುರುಳ್ಗಳೀ ತನುವಿಗಾರಯೆ ನಾಡೆ ಹಿತಂಗಳಕ್ಕುಮಾ
ಭಾವಿತ ವಸ್ತುಗಳ್ ವಿರಹಿತಂಗಳವಪ್ಪೊಡೆ ದುಃಖಮಾಗುಮಂ।
ತೀ ವಿಧದೆಲ್ಲಮುಂ ಮನದ ವಿಭ್ರಮಮಾಪದಗಾರ ಗಾತ್ರಮುಂ
ತೀವಿ ಕರಾಂಬು ಸಂಗತ ಪರಿಭ್ರಮಮೆಂಬಿನಮಿರ್ಕುಮೊರ್ಚಣಂ || ೪೧ ||

* (ಪಾಠಾಂತರ)
ಕಂ|| ಆಪದ್ಗೇಹಂ ದೇಹಂ। ತಾಪ ಪ್ರಕರಾವಹಂ ಪದಾರ್ಥ ವ್ಯೂಹಂ ||
ಈ ಪರಿಯುನಱಯದಿಂತು ವಿ || ಲಾಪಿಪುದಕಟಕಟ ಚಿತ್ತ ವಿಭ್ರಮಮಲ್ತೇ || ೪೧ ||

ಯೋಗಿ—ಅಂತಪ್ಪೊಡೀ ಲೋಕಮಪ್ರಿಯಮನುಳಿದು ಪ್ರಿಯಮನನುವರ್ತಿಪು ದೇತರ್ಕೆ ?

ರಾಯಂ—ಭ್ರಾಂತಿಯಿಂದೆ. ಆಲಿಸ—

ವೃ॥ ಎಂತೆಂತಾನುಗ್ಗಮೊ ವಸ್ತು ಸೌಖ್ಯಮದಿನುರ್ಕಂ ಸೊರ್ಕನಂತಂತು ತಾ
ನಾಂತಾಂತುಮ್ಮಳಿಕುಂ ಪರಂಪರೆಯ ಕಷ್ಟಾನಿಷ್ಟದಿಂ ಮಾನವಂ।
ಇಂತೀ ಮೋಹದ ಭೇದದಿಂ ಲಭಿಸುಗುಂ ಸಂಪದ್ವಿಪತ್ತಿ ದ್ವಯಂ
ಸಂತೋಷಂ ಪರಿತಾಪಮಪ್ರಿಯಮುಮತ್ಯಂತ ಪ್ರಿಯಂ ಧಾತ್ರಿಯೊಳ್ ॥೪೫॥

ಯೋಗಿ—ಅಪ್ಪುದು. ನೀನೊರೆದುದನೆಲ್ಲಮಂ ಸಮಂತೊಪ್ಪಿದೆಂ. ಆದೊಡ ಮೆನ್ನ ಮನಮಪ್ರತೀಕಾರಂ ವ್ಯಥೆಯೊಳಬ್ಬಿಗ್ಗಂ.

ರಾಯಂ—ವಸ್ತು ವಿಚಾರಮೊಂದಿಲ್ಲದಿರೆ ಮತ್ತಾವುದು ಪ್ರತೀಕಾರಂ ?

ಯೋಗಿ—ಮರಣಮೆ ಪ್ರತೀಕಾರಂ. ಏತರ್ಕೆಂದೊಡೆ ಈ ದಿಬ್ಬಿಕೆಯನೆರ್ದೆ ಯೊಳಿಟ್ಟು ಈಗಳ್ ಬರ್ದುವನಾಂತೊಡೆ ಜನ್ಮಾಂತರದೊಳ್ ಮತ್ತೆ ಪಡೆವೆನಲ್ತೆ !

ರಾಯಂ—(ನಕ್ಕು) ಮಹಾಮೋಹಮಿದುವೆ ಸಂಸಾರಮೂಲಂ. ಇಂತಪ್ಪ ದುಃಖಂಗಳೆಲ್ಲಂ ಇದಱ ದುರ್ವಿಲಾಸಂಗಳ್.

ಯೋಗಿ—(ಗಹಗಹಿಸಿ ನಕ್ಕು)

ಕಂ॥ ಗಾಂಪಂ ಪೆಱರ್ಗುಪದೇಶಿಪೊ
ಡಾಂಪಂ ಪಾಂಡಿತಿಯನೆಂದು ಬುಧ ತತಿಯೊರೆಗುಂ।
ತಾಂ ಪಡೆದುಂ ತಮಪಂ ದೀ
ಪಂ ಪೆಱರ್ಗೆಸಗುಗುಮತಿ ಪ್ರಕಾಶಮನಿಳೆಯೊಳ್ ॥ ೪೬ ॥

ರಾಯಂ—[ಅಚ್ಚರಿಗೊಂಡಧೋಮುಖನಾಗಿ ಚಿಂತಿಸಿದಪಂ]

ಯೋಗಿ—ರಾಯ ! ಏತರ್ಕಿಂತು ಚಿಂತಿಸಿದಪಯ್ ?

ರಾಯಂ—ಪೂಜ್ಯರೆ ! ಮತ್ತೇಂ ? ಎನ್ನ ನುಡಿಗಳಿಂದಮೆ ಎನಗಿಂತುಪದೇಶಂ ಗೆಯ್ದು ಎನ್ನದಪಱಲನಿಂತು ತವಿಸಿದಿರ್.

ಯೋಗಿ—ವಿಂಧ್ಯ ವಾಸಿನಿಯಂ ಭಗವತಿಯಂ ಸಂದರ್ಶಿಸಿ ಪಿಂದಿರುಂಗಿದವಸರ ದೊಳ್ ನಿನ್ನೀ ಪರಿಯಂ ತಿಳಿದು ಸಾತ್ವಿಕರ್ಗೆ ಸುಲಭಮಾದ ಮರುಕದಿಂ ನಿನ್ನನಿಂತು ಪ್ರಬೋಧಿಸಿದೆಂ.

ರಾಯಂ—ಅಂತಪ್ಪೊಡೆ ನೀಂ ಪೂಜ್ಯರಾದ ಗೋರಕ್ಷನಾಥರೆಂದು ನಿಶ್ಚಯಿಸುವೆಂ.

ಯೋಗಿ—ನಿಕ್ಕುವಂ.

ರಾಯಂ—ಪೂಜ್ಯರೆ! ಅಂಥ ಕೂಪದಿಂದೆನ್ನನಿಂದಿಂತು ಸಮಂತುದ್ಧರಿಸಿದಿರ್.

[ಎಂದು ಅಡಿಗಳೊಳ್ ಬಿೞ್ದಪಂ. ಗೋರಕ್ಷನಾಥನೆೞ್ಪುವಂ]

ರಾಯಂ—(ಸಾಂಜಲಿಯಾಗಿ) ಇಲ್ಲಿಂ ಮುಂದಾನಿಂತನರ್ಥ ಪರಂಪರೆಗೆ ಸಿಲ್ಕ ದಂದದಿಂ ಗುರುಗಳನುಗ್ರಹಿಸಿ ಉಪದೇಶಂಗೆಯಲ್ವೇೞ್ಕುಮೆಂದು ಬೇೞ್ಪೆಂ.

ಗೋರಕ್ಷಂ.—ಒಳ್ಳಿತು. ಪೆರ್ಚಿದ ದಂದುಗದಿಂದೊದವಿದ ಪರಾಭವಮೆಂಬ ನೇಗಿಲಿಂದುೞ್ಕೆವಡೆದು ವಸ್ತು ವಿವೇಕಮೆಂಬ ನೀರಿಂ ನಾಂದಿರ್ಪ ನಿನ್ನ ಚಿತ್ತ ಭೂಮಿಯಿದೀಗಳೞಿವೆಂಬ ಬಿತ್ತಂ ಬಿತ್ತಲ್ತಕ್ಕುದಾಗಿರ್ಕುಂ. ಇನ್ನೊರೆವೆನಾಲಿಸ!

ವೃ || ಸಂಕಲ್ಪೋದಿತಮಿಂತವಿದ್ಯೆಗೆಡೆಯಾದೀ ಸರ್ವ ಸಂಸಾರಮುಂ
ನೂಂಕಲ್ಕಿಚ್ಛಿ ಪೊಡಿಂತಿದಂ ಭರದೆ ಕೀೞ್ ತನ್ಮೂಲಮಂ ಚಿಂತಿಸಾ।
ತಂಕಂಗೊಳ್ಳದೆ ಸಚ್ಚಿದಾತ್ಮಕಮನೇಹಸ್ಸ್ಥಾನ ಭೇದಾತಿರಿ
ಕ್ತಂ ಕಾಂತಂ ದಲೆನಿಪ್ಪ ಬೊಮ್ಮಮನೆ ನೀನಂದಾಂಪೆ ಕೈವಲ್ಯಮಂ || ೪೪ ||

ರಾಯಂ—ಪೂಜ್ಯರೆ! ಆಶಾಪರ ಪರ್ಯಾಯಂಗಳಪ್ಪ ಸಂಕಲ್ಪಂಗಳನೀಗಳಾಂ ತೊೞಿದೆನಲ್ತೆ? ಒಳ್ಳಿತೊಳ್ಳಿತು.

ವೃ || ದೆಸೆದೆಸೆಯೊಳ್ ಮುಗುಳ್ತ ಮೊದಲಾವುದೞಾ ಸಱಿಗಂಪು ಮೋಹಮಂ
ಪೊಸತೆಸೆ ಪುಟ್ಟಿಕುಂ ಫಲಿಸೆ ಪಣ್ಣವಿ ಕೂರ್ಸ್ಕೆಯನೀಗುಮಾವಗಂ!
ಆಸವಸದಿಂದಮೀಗಳದನಾಸೆಯನಾಂ ಬಿಸವಳ್ಳಿಯಂದದಿಂ
ದೊಸೆದುಗಿದೊಂದಿದೆಂ ಜಯುವನಿನ್ನಪವರ್ಗಮುದೊಂವೆ ವಾಂಛಿತಂ || ೪೫ ||

ತತ್ತ್ವ ಚಿಂತನಮನೆಂತೆಸಗಲ್ವೇೞ್ಕುಂ? ನಿರವಿಸ!

ಗೋರಕ್ಷಂ.—

ಕಂ || ಬಿಸಯಂಗಳತ್ತಣಿಂ ಮರ
ಲಿಸಿ ಮನಮಂ ನಿರ್ವಿಕಲ್ಪದೊಳ್ ನೆಲೆಗೊಳಿಸಾ।
ಮಸುಳದೆ ನಿಚ್ಚಂ ತಾನಾ
ಗೆಸೆವಾನಂದ ಸ್ವರೂಪಮಂ ಸಾರ್ದಪೆ ನೀಂ || ೪೬ ||

ರಾಯಂ—ಅಂತಕ್ಕೆ. ಇತ್ತಲ್ ಸನಿಯದೊಳ್ ಪೊಳೆವ ಬನದೊಂದೆಡೆಯೊಳಿಕ್ಕಟಮಿರ್ದು ತತ್ತ್ವಮಂ ಚಿಂತಿಪೆಂ.

[ಇಂತೆಲ್ಲರುಂ ತೆರಳ್ವರ್]

ಇಂತು ತೃತೀಯಾಂಕಂ

ಎ. ಕೇಶವಯ್ಯ.

(ಮುಂದುವರಿಯುವುದು)

---

# ಜೈಮಿನಿ ಭಾರತ (ಆಶ್ವಮೇಧಿಕ ಪರ್ವ)

## *ಸಂಸ್ಕೃತ ಜೈಮಿನಿ ಭಾರತದ ಕನ್ನಡದ ಅನುವಾದ

---

### ಮೂವತ್ತೊಂದನೆಯ ಅಧ್ಯಾಯ

ಬಳಿಕ ಜೈಮಿನಿಯನ್ನು ಕುರಿತು ಜನಮೇಜಯನು, "ಅಯ್ಯಾ ಮುನಿಯೇ! ಲವನನ್ನು ಸೆರೆಹಿಡಿದುಕೊಂಡು ಹೋಗಲು, ಯುದ್ಧವು ಹೇಗೆ ಘೋರವಾಯಿತು? ಕುಶನು ಎಲ್ಲಿ ಹೋದನು? ಸೀತೆಗೆ ಈ ಸಂಗತಿಯು ಗೊತ್ತಾಗಲಿಲ್ಲವೆ? ಪಾವನ ವಾದ ಕುಶನ ಸತ್ಕಥೆಯೆಲ್ಲವನ್ನೂ ತಿಳಿಸು" ಎಂದು ಕೇಳಲು, ಜೈಮಿನಿಯು, "ಎಲೈ ರಾಜನೇ! ಕೇಳಿದ ಮಾತ್ರಕ್ಕೆ ಸ್ತ್ರೀ ಪುರುಷರ ಪಾಪವು ತೊಲಗುವ ಆ ಕುಶನ ಮಹಾ ಚರಿತ್ರೆಯನ್ನು ಹೇಳುವೆನು ಕೇಳು: ಕುದುರೆಯು ಅಲ್ಲಿಂದ ಹೊರಡಲು, ಲವನನ್ನು ಮಹಾರಥರು ಸೆರೆ ಹಿಡಿದುಕೊಂಡು ಹೋದರು. ಆಗ ಮುನಿ ಪುತ್ರರೆಲ್ಲರೂ ಕಣ್ಣೀರನ್ನು ಸುರಿಸುತ್ತ ಸೀತೆಯ ಬಳಿಗೆ ಬಂದು, 'ಅಮ್ಮಾ! ಲವನು ಒಬ್ಬ ದೊರೆಯ ಕುದುರೆಯನ್ನು ಬಲಾತ್ಕಾರದಿಂದ ಹಿಡಿದು ಕಟ್ಟಿದನು; ಅವನಿಗೂ ಆ ದೊರೆಯ ಸೇನೆಗೂ ಯುದ್ಧವಾಯಿತು; ಲವನು ಆ ಸೈನ್ಯವನ್ನು ಕೊಂದು ಬಳಲಿದನು; ಯಾವನೋ ಒಬ್ಬ ಶೂರನು ಲವನ ಕೈಯಲ್ಲಿದ್ದ ಬಿಲ್ಲನ್ನು ಕತ್ತರಿಸಿ ಅವನನ್ನು ಹಿಡಿದುಕೊಂಡು ತಮ್ಮ ಪಟ್ಟಣಕ್ಕೆ ಹೋದನು' ಎಂದು ಹೇಳಿದರು.

"ಸೀತಾದೇವಿಯು ಆ ಮಾತನ್ನು ಕೇಳಿ, ಗುಡುಗಿನ ಶಬ್ದವನ್ನು ಕೇಳಿದ ಹುಡುಗಿಯಂತೆಯೂ, ಒಡವೆಯೆಲ್ಲವನ್ನೂ ಕಳೆದುಕೊಂಡ ಧನಿಕನಂತೆಯೂ ಸ್ತಬ್ಧಳಾಗಿ ಚಿತ್ರಗತಳಾದ ದೇವತಾ ಸ್ತ್ರೀಯಂತೆ ಇದ್ದಳು. ಆಗ ಆಕೆಯು, 'ನಾನು ಕರಣ ತ್ರಯದಲ್ಲಿಯೂ ರಾಮ ತತ್ಪರಳಾಗಿಯೇ ಇರುವುದು ಸತ್ಯವಾದರೆ ನನ್ನ ಮಗನಾದ ಲವನಿಗೆ ಯುದ್ಧದಲ್ಲಿ ಕುಶಲವಾಗಲಿ; ನನ್ನ ಜ್ಯೇಷ್ಠ ಪುತ್ರನು ಬರುವ ವರೆಗೂ ಆ ಲವನು ಬದುಕಿರಲಿ; ಪಾಪಿಷ್ಠರಾದ ಆ ಮಹಾರಥರು ಏಕಾಕಿಯಾದ ಬಾಲಕನನ್ನು ಹೊಡೆದರು' ಎಂದು ಹೇಳುತ್ತ ಪುತ್ರ ಶೋಕದಿಂದ ಪೀಡಿತಳಾಗಿ ಬಹಳವಾಗಿ ರೋದಿಸಿದಳು: 'ಎಲೈ ಲವನೇ! ನನ್ನ ಆಜ್ಞೆಯನ್ನು ಮೀರದವನು ನನ್ನನ್ನು ಕೇಳದೆ ಹೋಗಿದ್ದೀಯೆ; ಚಂದ್ರ ಬಿಂಬಕ್ಕೆ ಸಮಾನವಾದ ನಿನ್ನ ಮುಖವು ಬಾಣಗಳಿಂದ ಭೇದಿಸಿಹೋಯಿತು; ತೀಕ್ಷ್ಣಗಳಾದ ಬಾಣಗಳಿಂದ ದೇಹವು ಚೂರು ಚೂರಾಯಿತು; ನೀನು ಹನ್ನೆರಡು ವರ್ಷಗಳಿಂದ ಕಂದ ಮೂಲ ಫಲಗಳನ್ನು ಭಕ್ಷಿಸುತ್ತ ವಿಚಕ್ಷಣ

---

* ಕ. ಸಾ. ಪರಿಷತ್ಪತ್ರಿಕೆಯ ೧೭ನೆಯ ಸಂಪುಟದ ೪ನೆಯ ಸಂಚಿಕೆಯ ೩೪೭ನೆಯ ಪುಟದಿಂದ ಮುಂದುವರಿದುದು.

ನಾಗಿದ್ದೆ; ಬಾಲಕನಾದ ನಿನ್ನ ಮೇಲೆ ಯುದ್ಧ ಮಾಡುವುದಕ್ಕೆ ನಿರ್ದಯರಾದ ಆ ಪಾಪಿಗಳಿಗೆ ಹೇಗೆ ಕೈ ಬಂದಿತು? ಈಗ ತಂದೆಯಾದ ವಾಲ್ಮೀಕಿಯೂ ಬಲಶಾಲಿಯಾದ ಕುಶನೂ ಇಲ್ಲಿಲ್ಲವಲ್ಲಾ! ಈ ಕ್ರೂರವಾದ ದುಃಖವನ್ನು ಯಾರೆದುರಿಗೆ ಹೇಳಿಕೊಳ್ಳಲಿ!' ಎಂದು ಹಂಬಲಿಸುತ್ತಿದ್ದಳು.

"ಅಷ್ಟರಲ್ಲಿ ಕುಶನು ಸಮಿತ್ಕುಶಗಳನ್ನು ತೆಗೆದುಕೊಂಡು ಕಾಡಿನಿಂದ ಹಿಂದಿರುಗಿದನು. ಬರುತ್ತಿರುವ ಆ ಕುಶನಿಗೆ ದಾರಿಯಲ್ಲಿ ಮನೋವ್ಯಥೆಯುನ್ನುಂಟು ಮಾಡುವ ಅನೇಕ ದುಶ್ಶಕುನಗಳಾದುವು: ಮೃಗಗಳು ಭಯಂಕರವಾಗಿ ಕೂಗುತ್ತ ಬಲಕ್ಕೆ ಹೋದುವು. ರಘೂದ್ವಹನಾದ ಕುಶನು ದುಃಖಾಕ್ರಾಂತನಾಗಿ ವಿಘ್ನ ನಾಶಕನಾದ ಶ್ರೀಮನ್ನಾರಾಯಣನನ್ನು ಮನದಲ್ಲಿ ನೆನೆದನು. ಹೀಗೆ ಚಿಂತಾಕ್ರಾಂತನಾದ ಅವನ ಬಾಹುಗಳು ಬಹಳವಾಗಿ ಹಾರಿದುವು; ಕಣ್ಣುಗಳಿಂದ ತಾನಾಗಿ ನೀರು ಸುರಿಯುತ್ತ ವ್ಯಥೆಪಡಿಸಿತು. ಹೀಗೆ ಕುಶನು ಆಶ್ರಮದ ಬಾಗಿಲಿಗೆ ಬಂದು, 'ಲವನು ಏಕೆ ಬೇಗನೆ ನನ್ನೆದುರಿಗೆ ಬರಲಿಲ್ಲ? ಪ್ರಾತಃಕಾಲದಲ್ಲಿ ಬರುತ್ತಿದ್ದ ಅವನನ್ನು ನಾನು ತಡೆದು ನಿಲ್ಲಿಸಿದೆನು. ಆದಕಾರಣ ಕೋಪದಿಂದ ಅವನು ಬರಲಿಲ್ಲವೋ? ಅಥವಾ, ಯಾರಾದರೂ ಅವನನ್ನು ಹಿಡಿದುಕೊಂಡರೋ?' ಎಂದು ಚಿಂತಿಸುತ್ತ ಬಂದು ತಮ್ಮ ತಾಯಿಯನ್ನು ಕಂಡು, ಆಕೆಗೆ ನಮಸ್ಕರಿಸಿ, 'ಅಮ್ಮಾ! ಏಕೆ ಹೀಗೆ ಪ್ರಲಾಪಿಸುತ್ತಿದ್ದೀಯೆ? ಲವನೆಲ್ಲಿ ಹೋದನು?' ಎಂದು ವಿನಯದಿಂದ ಕೇಳಿದನು.

"ಅದಕ್ಕೆ ಸೀತೆಯು, 'ಮಗುವೇ! ನೀನು ಹಣ್ಣುಗಳನ್ನು ತರಲು ಕಾಡಿಗೆ ಹೋದ ಬಳಿಕ ಲವನು ಮುನಿಪುತ್ರರೊಡನೆ ಆಟವಾಡುವುದಕ್ಕಾಗಿ ಉದ್ಯಾನದ ಬಳಿಗೆ ಹೋದನು. ಯಾವನೋ ಒಬ್ಬ ದೊರೆಯ ಕುದುರೆಯು ಸ್ವೇಚ್ಛೆಯಾಗಿ ಸಂಚರಿಸುತ್ತ ಅಲ್ಲಿಗೆ ಬರಲು, ಲವನು ಅದನ್ನು ಬಲಾತ್ಕಾರವಾಗಿ ಹಿಡಿದು ಕಟ್ಟಿ, ತನ್ನ ಶಕ್ತ್ಯನುಸಾರ ಯುದ್ಧ ಮಾಡಿ ಯುದ್ಧದಲ್ಲಿ ಮೂರ್ಛೆಯನ್ನು ಹೊಂದಿದನು. ಶತ್ರುಗಳು ಅವನನ್ನು ಹಿಡಿದು ತಮ್ಮ ಪಟ್ಟಣಕ್ಕೆ ತೆಗೆದುಕೊಂಡು ಹೋದರು. ಅವನು ಜೀವದಿಂದಿರುವನೋ ಇಲ್ಲವೋ ಗೊತ್ತಿಲ್ಲ. ಸ್ಮರಿಸಿದ ಮಾತ್ರಕ್ಕೆ ತನ್ನ ಭಕ್ತನನ್ನು ಸಂಸಾರ ಬಂಧದಿಂದ ಬಿಡಿಸುವ ವಿಷ್ಣುವಿನಂತೆ, ನಿನ್ನನ್ನು ಬಿಟ್ಟರೆ ಆ ಬಾಲಕನನ್ನು ಬಿಡಿಸಿ ತರುವುದಕ್ಕೆ ಮತ್ತೆ ಯಾರಿರುವರು?' ಎಂದು ಹೇಳಿದಳು. ಆಕೆಯ ಮಾತನ್ನು ಕೇಳಿ ಕುಶನು ಹುಬ್ಬುಗಳನ್ನು ಮೂರು ಕವಲಾಗಿ ಗಂಟಿಕ್ಕಿ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು, 'ಅಮ್ಮಾ! ಈಗ ನನ್ನ ಬಾಣಗಳು ಸೀಳುವ ಶತ್ರುಗಳ ರಕ್ತವನ್ನು ನೆಲವು ಕುಡಿಯಲಿ; ಸೂರ್ಯ ಕಿರಣಗಳು ನಸು ಬಿಸುವಾದ ಅವರ ರಕ್ತವನ್ನು ಹೀರಲಿ; ಶತ್ರುಗಳಿಗೆ ಇಂದ್ರ, ವರುಣ, ಕುಬೇರ, ಯಮ, ಯಕ್ಷ, ಗಂಧರ್ವರಲ್ಲಿ ಯಾರಾದರೂ ಸಹಾಯಕರಾಗಿರಲಿ; ಅವರೆಲ್ಲರೂ ದೇವತೆಗಳೋ ಸಾಧ್ಯರೋ ಮರುದ್ಗಣಗಳೋ ಯಾರಾದರೂ ಆಗಿರಲಿ; ಅವರನ್ನು ಯುದ್ಧದಲ್ಲಿ ಜಯಿಸಿ ಲವನನ್ನು ಬಿಡಿಸುವೆನು. ಅಮ್ಮಾ! ಇದೋ ಹೊರಟೆನು. ಬತ್ತಳಿಕೆಗಳನ್ನೂ

ಧನುವನ್ನೂ, ಕತ್ತಿ ಗುರಾಣಿಗಳನ್ನೂ ಕಿರೀಟವನ್ನೂ ಕವಚವನ್ನೂ ತಂದು ಕೊಡು' ಎಂದನು.

"ಆಗ ಸೀತಾದೇವಿಯು ಮಗನ ಮಾತನ್ನು ಕೇಳಿ ಬೇಗನೆ ಮನೆಗೆ ಹೋಗಿ ಬತ್ತಳಿಕೆ, ಬಿಲ್ಲು, ಗುರಾಣಿ, ಕತ್ತಿ, ಕಿರೀಟ, ಕವಚ—ಇವುಗಳನ್ನು ತಂದುಕೊಡಲು, ಅವುಗಳನ್ನು ತೆಗೆದುಕೊಂಡು ಕವಚ ಖಡ್ಗ ಚಾಪ ಬಾಣಗಳನ್ನು ಧರಿಸಿ ಯುದ್ಧ ಸನ್ನದ್ಧನಾಗಿ ಯೌವನಸ್ಥನಾದ ಕುಶನು ತನ್ನ ತಾಯಿಗೆ ನಮಸ್ಕರಿಸಿ ಹೊರಟನು. ಸೀತೆಯು ಕುಶನಿಗೆ ಆಶೀರ್ವಾದ ಮಾಡಲು, ಬಲಿಷ್ಠನಾದ ಅವನು ತೋಳುಗಳನ್ನು ತಟ್ಟುತ್ತ ಕ್ರೂರವಾದ ಧನುವನ್ನು ಟಂಕಾರ ಮಾಡಿ, ಮದಿಸಿದ ಆನೆಗಳೆದುರಿಗೆ ನಿರ್ಭಯವಾಗಿ ನುಗ್ಗುವ ಸಿಂಹದ ಮರಿಯಂತೆ, ಬೇಗನೆ ಹೊರಟನು. ಮುಂದೆ ಹೋಗುತ್ತಿರುವ ಶತ್ರುಗಳನ್ನು ನೋಡಿ ದೂರದಿಂದಲೇ, 'ಶತ್ರುಗಳೆಲ್ಲರೂ ಶಕ್ತಿ ಯಿದ್ದರೆ ನಿಲ್ಲಿರಿ; ಇಲ್ಲದಿದ್ದರೆ ನಮ್ಮ ಬಂಧುವನ್ನು ಬಿಡಿ, ಅಥವಾ ಯುದ್ಧಮಾಡಿರಿ. ವೀರನಾದ ಕುಶನನ್ನು ಜಯಿಸದೆ ಮುಂದಕ್ಕೆ ಹೋಗಲು ನೀವು ಶಕ್ತರಲ್ಲ' ಎಂದು ಕೂಗಿ ಕರೆದನು. ಶತ್ರು ಯೋಧರು ಆ ಘೋರ ವಾಕ್ಯವನ್ನು ಕೇಳಿ, 'ಕತ್ತಿ ಗುರಾಣಿ ಗಳನ್ನು ಧರಿಸಿ ಬರುತ್ತಿರುವ ಶೂರನಾದ ಈ ಯೌವನಸ್ಥನು ಯಾರಿರಬಹುದು? ಶರ ಚಾಪ ಕಿರೀಟ ಕವಚ ಯುಕ್ತನಾಗಿ ಬರುತ್ತಿರುವ ಈ ಶೂರನು ನಿಜವಾಗಿಯೂ ನಮಗೆಲ್ಲರಿಗೂ ಯಮನಾಗುವಂತೆ ತೋರುತ್ತಿದೆ' ಎಂದು ಭಯ ವಿಹ್ವಲರಾಗಿ ಹೇಳಿಕೊಳ್ಳುತ್ತಿದ್ದರು. ಗಾಳಿ ಬಡಿದ ಮರಗಳಂತೆ ಧ್ವಜಗಳು ಕಣ ಕಣ ಶಬ್ದ ಮಾಡು ತ್ತಿದ್ದುವು. ಆಕಾಶದಿಂದ ಹಾರಿ ಬಂದು ಹದ್ದುಗಳು ಶೂರರ ಕಿರೀಟಕ್ಕೆರಗು ತ್ತಿದ್ದುವು. ಆಗ ಬಾಣಗಳು ತಾವಾಗಿ ಬತ್ತಳಿಕೆಗಳಿಂದ ಬಿದ್ದುಹೋಗು ತ್ತಿದ್ದುವು. ಕತ್ತಿಗಳು ತಾವೇ ಒರೆಯಿಂದ ಜಾರಿ ಬೀಳುತ್ತಿದ್ದುವು. ಮರಗಳನ್ನು ಬೇರು ಮುಟ್ಟ ಉರುಳಿಸುವ ಬಿರುಗಾಳಿಯು ಧ್ವಜಗಳನ್ನು ಮುರಿದುರುಳಿಸುತ್ತ ಬೀಸುತ್ತಿದ್ದಿತು. ಸೂರ್ಯನು ಕಾಣಿಸದಂತೆ ಧೂಳಿಯು ಆಕಾಶವನ್ನು ಕವಿದಿದ್ದಿತು.

"ಸ್ವಲ್ಪ ಕಾಲದ ಮೇಲೆ ಧೂಳಿಯಡಗಲು, ಶೂರರು ಆ ಕುಶನನ್ನು ಕಂಡರು. ಬರುತ್ತಿರುವ ಆ ಕುಶನನ್ನು ನೋಡಿ ಶತ್ರುಘ್ನನು ಸೇನಾಪತಿಯನ್ನು ಕುರಿತು, 'ಎಲೈ ಸೇನಾಪತಿಯೇ! ಬೇಗನೆ ಹೋಗಿ ಆ ಬಾಲಕನನ್ನು ತಡೆದು, ನಾವು ಸೇನೆ ಯನ್ನು ಕೂಡಿಸಿಕೊಂಡು ಬರುವ ವರೆಗೂ ಯುದ್ಧಮಾಡುತ್ತಿರು' ಎಂದು ಹೇಳಿ ದನು. ಶೂರನಾದ ಸೇನಾಪತಿಯು, 'ಎಲೈ ಸುವ್ರತನೇ! ನಿನ್ನ ಅನುಗ್ರಹದಿಂದ ಇವನನ್ನು ಕೊಲ್ಲುವೆನು' ಎಂದು ಹೇಳಿ ಅಲ್ಲಿಂದ ಹೊರಟು,'ನಿಲ್ಲು, ನಿಲ್ಲು!' ಎಂದು ಹೇಳುತ್ತ ಕುಶನನ್ನು ಹತ್ತು ಬಾಣಗಳಿಂದ ಹೊಡೆದನು. ಕುಶನು ಅವುಗಳನ್ನು ಕತ್ತರಿಸಿ ಸೇನಾಧಿಪತಿಯನ್ನು ಹೊಡೆದು, ಕುಪಿತನಾಗಿ ಅವನ ನಾಲ್ಕು ಕುದುರೆಗಳನ್ನು ನಾಲ್ಕು ಬಾಣಗಳಿಂದ ಕೊಂದನು; ಸಾರಥಿಯ ತಲೆಯನ್ನು ನಗು ನಗುತ್ತ ಹಾರಿಸಿದನು; ಹಾಗೆಯೇ ಅವನ ರಥವನ್ನೂ ತಿಲಶಃ ಚೂರು ಚೂರು ಮಾಡಿ, ಸೇನೆಯ ಹಿಂದಿದ್ದ ಸಾರಥಿಗಳನ್ನು ಕೊಂದು, ಸೇನಾಪತಿಯ ಬಿಲ್ಲನ್ನೂ ಶುಭ್ರ ವಾದ ಕವಚವನ್ನೂ ಕತ್ತರಿಸಿ, ಆ ದುಷ್ಟನ ಕೈಗಳನ್ನೂ ಕಾಲುಗಳನ್ನೂ ಎರಡು ಬಾಣ

ಗಳಿಂದ ತುಂಡಿಸಿ, ಬಲವಾಗಿದ್ದ ಅವನ ತೊಡೆಗಳನ್ನೂ ಕಡಿದುಹಾಕಿದನು ; ಹೊಳೆವ ಕುಂಡಲಗಳಿಂದಲೂ ಮೀಸೆಗಳಿಂದಲೂ ಕೂಡಿದ ಮುಖವನ್ನು ಕೊರಲಿನಿಂದ ಹಾರಿಸಿದನು. ಸೈನ್ಯಾಧಿಪತಿಯು ಸಾಯಲು, ಬಹಳ ಹಾಹಾಕಾರವುಂಟಾಯಿತು.

"ಅವನು ಮೃತನಾದುದನ್ನು ಕಂಡು ಅವನ ಸಹೋದರನಾದ ನಗನೆಂಬವನು ಆನೆಯನ್ನೇರಿ ಬಂದು ಕುಶನನ್ನು ಶಕ್ತ್ಯಾಯುಧದಿಂದ ಹೊಡೆದನು. ಬೆಂಕಿಯಂತೆಯೂ ಸಿಡಿಲಿನಂತೆಯೂ ಉರಿಯುತ್ತಿದ್ದ ಆ ಶಕ್ತಿಯನ್ನು ಮಹಾ ಬಲನಾದ ಸೀತಾ ಪುತ್ರನು ಐದು ಬಾಣಗಳಿಂದ ಖಂಡಿಸಿ ಆನೆಯ ನಾಲ್ಕು ಕಾಲುಗಳನ್ನೂ ಕತ್ತರಿಸಲು, ಆ ನಗನು ಕಾಲು ಕತ್ತರಿಸಿದ ಆ ಆನೆಯಿಂದ ಹಾರಿ ವಿಚಿತ್ರವಾದ ದೊಡ್ಡ ಗದೆಯನ್ನು ಹಿಡಿದು ಕುಶನ ಮೇಲೆ ಬಂದನು. ಗದೆಯನ್ನು ಹಿಡಿದಿದ್ದ ಅವನ ಸರ್ಪಸದೃಶವಾಗಿದ್ದ ಹಸ್ತವನ್ನು ಕುಶನು ಕತ್ತರಿಸಿದನು. ಆಗ ಅವನು ನೆಲದಲ್ಲಿ ಬಿದ್ದಿದ್ದ ಚಕ್ರವನ್ನು ಎಡಗೈಯಿಂದ ಬೇಗನೆ ತೆಗೆದುಕೊಳ್ಳಲು, ಚಕ್ರವನ್ನು ಹಿಡಿದಿದ್ದ ಆ ಕೈಯನ್ನೂ ಕುಶನು ಕತ್ತರಿಸಿದನು ; ಹಾಗಾದರೂ ನಗನು ಓಡುತ್ತಿರಲು, ಅವನ ಕಾಲುಗಳನ್ನು ಕತ್ತರಿಸಿದನು. ಬಲಿಷ್ಠನಾದ ನಗನು ಕೈಕಾಲುಗಳು ಕತ್ತರಿಸಿ ಹೋಗಿದ್ದರೂ, ರಕ್ತದಿಂದ ನೆನೆದು ಧೂಳಿ ಮುಚ್ಚಿದ ದೇಹವುಳ್ಳವನಾಗಿ, ಆಕಾಶದಲ್ಲಿ ರಾಹುವು ಸೂರ್ಯನ ಮೇಲೆ ಬೀಳುವಂತೆ ತನ್ನ ಮುರಿದ ತೋಳುಗಳಿಂದಲೇ ಗದೆಯನ್ನು ತೆಗೆದುಕೊಂಡು ಕುಶನ ಮೇಲೆ ಪ್ರಯೋಗಿಸಲು, ಕುಶನು ಅದರ ಏಟಿಗೆ ತಾನಿದ್ದ ಸ್ಥಳದಿಂದ ಹಜ್ಜೆಯನ್ನಾದರೂ ಕದಲಿಸದೆ ನಗನ ಪ್ರತಾಪಕ್ಕೆ ಸಂತೋಷಪಟ್ಟು, ಅವನನ್ನು ಸಂಹರಿಸಲು ಹರಿತವಾದ ಬಾಣವನ್ನು ಬಿಟ್ಟನು. ಆ ಬಾಣದಿಂದ ಅವನ ತಲೆಯು ಕತ್ತರಿಸಿ ಆಕಾಶಕ್ಕೆ ಹಾರಿ ಅಲ್ಲಿ ಅದೃಶ್ಯವಾಯಿತು. ಈಶ್ವರನು ಆ ತಲೆಯನ್ನು ತನ್ನ ರುಂಡ ಮಾಲೆಗಾಗಿ ತೆಗೆದುಕೊಂಡನು. ಹೀಗೆ ನಗನು ಮೃತನಾದನು.

"ಕುಶನು ದಂಡ ಧರನಾದ ಯಮನಂತೆ ಕೋಪಾವಿಷ್ಟನಾಗಿ ಬಾಣಗಳಿಂದ ಶತ್ರುಸೈನ್ಯವನ್ನು ಕೊಂದನು ; ಪರ್ವತ ಸದೃಶವಾದ ಆನೆಗಳನ್ನು ಇಂದ್ರನಂತೆ ಸೀಳಿಹಾಕಿದನು. ವೀರರೆಲ್ಲರೂ ರಕ್ತದಿಂದ ನೆನೆದ ಬಟ್ಟೆಯುಳ್ಳವರಾಗಿ ಬಹಳವಾಗಿ ದುಃಖಿಸುತ್ತ, ಹೂ ಬಿಟ್ಟಿರುವ ಮುಳ್ಳು ಮುತ್ತುಗದ ಗಿಡಗಳಂತಾದರು. ಬಲವಾಗಿ ಬೀಳುತ್ತಿರುವ ಬಾಣಗಳಿಂದ ದೊಡ್ಡ ಬೆಂಕಿಯು ಹುಟ್ಟಿ ರಥಗಳು ಆನೆಗಳೆಂಬ ಕಟ್ಟಿಗೆಯಿಂದ ಅಭಿವೃದ್ಧಿಯನ್ನು ಹೊಂದಿ ಪ್ರಜ್ವಲಿಸುತ್ತಿರುವಂತೆ ಆ ಬಾಲಕನು ಪ್ರತಾಪದಿಂದ ವೃದ್ಧಿಹೊಂದುತ್ತಿದ್ದನು. ಬೀಳುತ್ತಿರುವ ಮದದಾನೆಗಳಿಂದ ಮಹಾ ರಥರು ಮೃತರಾದರು. ರಥಗಳೂ ಚಕ್ರಗಳೂ ಧ್ವಜಗಳೂ ತಾವಾಗಿ ಮುರಿದು ಬೀಳುತ್ತಿದ್ದುವು. ಬಾಣಗಳಿಂದ ಭೇದಿಸಿದ ದೇಹವುಳ್ಳವರಾಗಿ ಕುದುರೆಯ ರಾವುತರು ಪ್ರಾಣಗಳನ್ನು ಬಿಟ್ಟರು. ವಿಷ್ಣು ಭಕ್ತಿಯಿಲ್ಲದೆ ಸಂಸಾರದಲ್ಲಿ ಬಿದ್ದುಹೋಗುವ ಅಧಮರಂತೆಯೂ ಕನ್ಯಾ ಶುಲ್ಕದಿಂದ ಬದುಕುವವನ ಪಿತೃಗಳಂತೆಯೂ ಆನೆ ಕುದುರೆ ತೇರುಗಳ ಗುಂಪೂ ಪದಾತಿ ಸೈನ್ಯವೂ ನೆಲಕ್ಕೆ ಬಿದ್ದುಹೋದುವು. ಹೀಗೆ ರಥ ಗಜಗಳಿಂದ

ಯುಕ್ತವಾದ ಸೈನ್ಯವನ್ನು ಶೂರನಾದ ಕುಶನು, ಸ್ವಧರ್ಮವು ಪಾಪವನ್ನು ನಾಶಮಾಡುವಂತೆ, ಧ್ವಂಸ ಮಾಡಿದನು.''

ಇಂತು ಕುಶ ಯುದ್ಧ ವರ್ಣನವೆಂಬ ಮೂವತ್ತೊಂದನೆಯ ಅಧ್ಯಾಯವು.

---

## ಮೂವತ್ತೆರಡನೆಯ ಅಧ್ಯಾಯ

ಬಳಿಕ ಮಹಾ ಬಾಹುವಾದ ಶತ್ರುಘ್ನನು ಬಿಲ್ಲನ್ನು ಒದರುತ್ತ ಬಂದು ಕೋಪದಿಂದ ಒಂಬತ್ತು ಬಾಣಗಳನ್ನು ಕುಶನ ಮೇಲೆ ಎಸೆದನು. ಬಲಿಷ್ಠನಾದ ಕುಶನು ಕುದುರೆಯೊಡನೆ ಅವನ ರಥವನ್ನು ಪುಡಿ ಪುಡಿ ಮಾಡಿ ಬಲವಾಗಿ ಹೂಡಿದ ಬಾಣದಿಂದ ಅವನ ಎದೆಗೆ ಹೊಡೆದು ಪುನಃ ಅರುವತ್ತು ಬಾಣಗಳನ್ನು ಎದೆಯ ಮಧ್ಯಕ್ಕೆ ಹೊಡೆಯಲು ಶತ್ರುಘ್ನನು ಏಟಿನಿಂದ ಬಹಳ ನೊಂದು, ಮದಿಸಿದ ಆನೆಯು ಪರ್ವತದಲ್ಲಿ ಎಡಹಿ ಬೀಳುವಂತೆ, ರಥದಲ್ಲಿ ಬಿದ್ದುಹೋದನು. ಕಳೆದುಳಿದ ಯೋಧ ರೆಲ್ಲರೂ ಬೇಗನೆ ಅಯೋಧ್ಯೆಗೆ ಓಡಿಹೋದರು. ಅಷ್ಟರಲ್ಲಿ, ಮೂರ್ಛಿತನಾಗಿದ್ದ ಲವನು ಎಚ್ಚತ್ತು ತನ್ನ ಅಣ್ಣನನ್ನು ಕಂಡು ಎದ್ದುಬಂದು ಅವನನ್ನು ಆಲಿಂಗಿಸಿ ಸಂತುಷ್ಟ ನಾಗಿ, 'ಅಣ್ಣಾ! ಕುದುರೆಯನ್ನು ಹಿಡಿದಿದ್ದೇನೆ' ಎಂದು ಹೇಳಲು, ಕುಶನು ಅದಕ್ಕೆ ಅನುಮತಿಕೊಟ್ಟನು. ಆಗ ಲವನು ಕುದುರೆಯನ್ನು ಮತ್ತೆ ಕಟ್ಟಿಹಾಕಿ, ಅಣ್ಣ ತಮ್ಮಂದಿರಿಬ್ಬರೂ ವಾಯು ವಹ್ನಿಗಳಂತೆ ಸೇರಿಕೊಂಡು ವೀರರ ಬರುವಿಕೆಯನ್ನು ನಿರೀಕ್ಷಿಸುತ್ತ ಬಲವಾಗಿ ನಿಂತರು.

ಸತ್ತುಳಿದ ಯೋಧರು ಬಂದು, ಜಿಂಕೆಯ ಕೊಂಬನ್ನೂ ರುರು ಚರ್ಮವನ್ನೂ ದಂಡ ಮೇಖಲೆಗಳನ್ನೂ ಧರಿಸಿ ಯಜ್ಞದೀಕ್ಷಿತನಾಗಿ, ಇಬ್ಬರು ತಮ್ಮಂದಿರೊಡನೆಯೂ ಮುನಿಗಳೊಡನೆಯೂ ಸೇರಿ ಎಳ್ಳು ತುಪ್ಪ, ಇವುಗಳ ಹೋಮದಿಂದುಂಟಾದ ಹೊಗೆ ಯಿಂದ ಕೆಂಪಾದ ಕಣ್ಣುಗಳುಳ್ಳವನಾಗಿ, ಸುವರ್ಣ ಸೀತಾ ಸಮೇತನಾಗಿ ಮಂಡಪದಲ್ಲಿ ಕುಳಿತಿದ್ದ ಶ್ರೀರಾಮನನ್ನು ಕುರಿತು, ''ಎಲೈ ರಾಮನೇ! ನಿನ್ನ ಕುದುರೆಯು ಭೂಲೋಕ ವನ್ನೆಲ್ಲ ಸಂಚರಿಸುತ್ತ ಹೋಗಲು, ಅದನ್ನು ಯಾವ ಶೂರನೂ ಕಟ್ಟಲಿಲ್ಲ; ನಿನ್ನ ಹಾಗೆಯೇ ಇರತಕ್ಕ ಒಬ್ಬ ಹುಡುಗನು ಅದನ್ನು ಕಟ್ಟಿದನು. ಅವನಿಂದ ನಮ್ಮ ಬಲವೆಲ್ಲ ನಾಶವಾಯಿತು. ನಿನ್ನ ತಮ್ಮನಾದ ಶತ್ರುಘ್ನನು ಅವನ ಧನುವನ್ನು ಕತ್ತರಿಸಿ ಅವನು ಮೂರ್ಛಿತನಾಗುವಂತೆ ಮಾಡಿ ಹೇಗೋ ಅವನನ್ನು ಸೆರೆ ಹಿಡಿದನು. ಅವನ ಮತ್ತೊಬ್ಬ ಬಂಧುವು ಮಹಾ ಬಲಶಾಲಿಯಾಗಿ ಧನುಃಖಡ್ಗಗಳನ್ನು ಹಿಡಿದು ಅಲ್ಲಿಗೆ ಬಂದು ಉಳಿದ ನಿನ್ನ ಸೈನ್ಯವೆಲ್ಲವನ್ನೂ ಸೇನಾಪತಿ ಸಹಿತವಾಗಿ ಕೊಲ್ಲಲು, ಸೇನಾಧಿ ಪತಿಯು ಮೃತನಾದುದನ್ನು ನೋಡಿ ಉಳಿದ ಸೈನ್ಯವು ಕಂಗೆಟ್ಟು ದಿಕ್ಕು ದಿಕ್ಕುಗಳಿಗೂ ಓಡಿತು'' ಎಂದು ಹೇಳಿದರು.

ಅವರ ಮಾತನ್ನು ಕೇಳಿ ರಾಮನು ಆಶ್ಚರ್ಯ ಹೊಂದುತ್ತ, ''ಇದೇನು ನಿಮ್ಮ ಹರಟೆ! ನಿಮಗೆ ಭ್ರಮೆಯೋ! ಪಿಶಾಚವು ಹಿಡಿದಿದೆಯೋ! ಶತ್ರುಘ್ನನನ್ನು

ಕೆಡಹುವವನಾರು?" ಎಂದನು. ಅದಕ್ಕೆ ಯೋಧರು, "ಎಲೈ ರಾಜೇಂದ್ರನೇ! ನಾವು ಹರಟುವವರಲ್ಲ, ನಮಗೆ ಭ್ರಾಂತಿಯೂ ಇಲ್ಲ, ಪೈಶಾಚ್ಯವೂ ಇಲ್ಲ; ನಿನ್ನ ಸ್ಮರಣೆಯನ್ನು ಒಂದು ಸಲ ಮಾಡಿದವರಿಗೆ ಹರಟೆಯೂ ಪಿಶಾಚತ್ವವೂ ಭ್ರಾಂತಿಯೂ ನಾಶವಾಗಿ ಉತ್ತಮ ಜ್ಞಾನವುಂಟಾಗುವುದು. ಹೀಗಿರುವಲ್ಲಿ, ನಿನ್ನನ್ನು ಪ್ರತ್ಯಕ್ಷವಾಗಿ ನೋಡುತ್ತಿರುವ ನಮಗೆ ಅವು ಹೇಗೆ ಸಂಭವಿಸುವುವು? ಆ ಶತ್ರುಘ್ನನು ಬಾಲಕನ ಬಾಣಗಳಿಂದ ವ್ಯಥೆಪಡುತ್ತ ಯುದ್ಧದಲ್ಲಿ ಬಿದ್ದುಹೋಗಿರುವನು" ಎಂದರು. ಬಳಿಕ ರಾಮನು ಬಹಳ ದುಃಖಿತನಾಗಿ ಗೋಳಾಡುತ್ತ, "ಬ್ರಾಹ್ಮಣ ಶತ್ರುವಾದ ಲವಣಾಸುರನನ್ನು ತೀಕ್ಷ್ಣ ಬಾಣಗಳಿಂದ ಕೊಂದ ಆ ಶತ್ರುಘ್ನನು ನನ್ನ ಮಾತಿನಂತೆ ನಡೆಯುವವನಾಗಿ ಬಾಲಕರಿಂದ ಬಾಧೆಗೊಳಗಾದನು. ನನ್ನ ತಮ್ಮನು ಯಾವ ದೋಷದಿಂದ ಅಂತಹ ಅವಸ್ಥೆಗೀಡಾದನೋ! ಎಲೈ ಲಕ್ಷ್ಮಣನೇ! ಇಲ್ಲಿ ಬಾ. ನಿನಗೆ ಮಂಗಳವಾಗಲಿ. ನನ್ನ ಮಾತನ್ನು ಕೇಳು: ನಾನು ದೀಕ್ಷಿತನಾಗಿರುವುದರಿಂದ ಯುದ್ಧ ಮಾಡುವುದು ಸರಿಯಲ್ಲ. ನೀನು ದೊಡ್ಡ ಸೈನ್ಯವನ್ನು ತೆಗೆದುಕೊಂಡು ನಿನ್ನ ಸಹೋದರನಿರುವೆಡೆಗೆ ಹೋಗಿ ಯುದ್ಧಮಾಡಿ ಅಸಹಾಯನಾಗಿರುವ ಆ ಶತ್ರುಘ್ನನನ್ನೂ ಕುದುರೆಯನ್ನೂ ಬಿಡಿಸು" ಎಂದು ಹೇಳಿದನು.

ಅವನ ಮಾತನ್ನು ಕೇಳಿ ಲಕ್ಷ್ಮಣನು ಸೇನಾ ಸಮೇತನಾಗಿ ಬೇಗ ಹೊರಟನು. ಬಳಿಕ, ಮದಿಸಿದ ಆನೆಗಳೂ ಸುವರ್ಣಾಲಂಕಾರವುಳ್ಳ ರಥಗಳೂ ಅಶ್ವಾರೋಹಕರೂ ಪದಾತಿಗಳೂ ಪಟ್ಟಣದಿಂದ ಹೊರಟುವು. ರಕ್ತವರ್ಣ ಪತಾಕೆಗಳೂ ರಕ್ತವಸ್ತ್ರ ಧ್ವಜಗಳೂ ಉಳ್ಳವರಾಗಿಯೂ, ಚಂದನವನ್ನು ಲೇಪಿಸಿದ ದೇಹವುಳ್ಳವರಾಗಿಯೂ, ಧ್ವನಿ ಮಾಡುತ್ತಿರುವ ಕಂಕಣಗಳಿಂದಲಂಕೃತರಾಗಿಯೂ, ವೀರಲಕ್ಷ್ಮೀ ಪರಿಣಯವುಳ್ಳವರಾಗಿಯೂ, ಪುಷ್ಪ ಮಾಲಿಕೆಯನ್ನು ಮುಡಿದ ಮುಡಿಯುಳ್ಳವರಾಗಿಯೂ, ಪ್ರತ್ಯಕ್ಷವಾದ ಯಮನ ಅವತಾರದಂತಿರುವರಾಗಿಯೂ, ಯುದ್ಧ ಗೋಷ್ಠಿಯನ್ನು ಬಯಸುವ ಯೌವನಸ್ಥರಾಗಿಯೂ, ಶ್ಮಶ್ರು ರೇಖೆಯುಳ್ಳವರಾಗಿಯೂ, ವೀರರಾಗಿಯೂ ಯುದ್ಧ ಪ್ರವೀಣರಾಗಿಯೂ, ಆಯುಧ ಪಾಣಿಗಳಾಗಿಯೂ, ಶ್ವೇತಾಂಬರ ಧಾರಿಗಳಾಗಿಯೂ, ಶ್ವೇತವಸ್ತ್ರ ಪತಾಕೆಗಳುಳ್ಳವರಾಗಿಯೂ, ಏಕಪತ್ನೀ ವ್ರತಸ್ಥರಾಗಿಯೂ, ಧರ್ಮಿಷ್ಠರಾಗಿಯೂ, ಜಿತೇಂದ್ರಿಯರಾಗಿಯೂ ಇರುವ ಶತ ಸಹಸ್ರ ಯೋಧರು ಪಟ್ಟಣದಿಂದ ಹೊರಟರು. ಬಲಶಾಲಿಯಾದ ಲಕ್ಷ್ಮಣನು ಸೇನೆಗೆ ಪ್ರಮುಖನಾದನು. ಧರ್ಮಿಷ್ಠನೂ ಬ್ರಾಹ್ಮಣ ಪ್ರಿಯನೂ ಆದ ಕಾಲಜಿತ್ತೆಂಬವನು ಸೇನಾಧಿಪತಿಯಾದನು. ಹೀಗೆ ಹೋಗುತ್ತಿರುವ ಸೇನೆಯಿಂದ ಸಮುದ್ರ ಸಂಗಮವಾಗುವ ನದಿಗಳೆಲ್ಲವೂ ಬತ್ತಿದುವು; ಕುದುರೆಗಳ ಬಲವಾದ ಕಾಲ ಗೊರಸುಗಳಿಂದ ಪರ್ವತಗಳು ಪುಡಿ ಪುಡಿಯಾದುವು; ಕಾಡೆಲ್ಲವೂ ಸಮ ಭೂಮಿಯಾಯ್ತು; ಶತ್ರುಗಳು ಬಾಯಲ್ಲಿ ಹುಲ್ಲುಕಡ್ಡಿಯನ್ನು ಕಚ್ಚಿಕೊಂಡರು. ಆ ಸೈನ್ಯಗಳಿಂದ ನದಿಗಳ ನೀರಲ್ಲದೆ, ರಥ ಚಕ್ರಗಳಿಂದಲೂ ಕುದುರೆಗಳ ಗೊರಸುಗಳಿಂದಲೂ ಎದ್ದ ಧೂಳಿಯು ಮೇಘಗಳ ಮೇಲೆ ಬಿದ್ದು ಕೆಸರಾಯ್ತು. ಆ ಕೆಸರಿನಿಂದ ಮೇಘಗಳು ಘನೀ ಭಾವವನ್ನು ಹೊಂದಿದುವು. ಎತ್ತರವಾದ ಆನೆಗಳ ದಂಡಾಕಾರವಾದ ಸೊಂಡಿಲಿನ ಏಟಿಗೆ ಕೆಸರಿನ ಭಾರದಿಂದ ಜಗ್ಗಿ

ತ್ತಿರುವ ಮೇಘಗಳು ಮೆಲ್ಲಗೆ ಓಡುತ್ತಿದ್ದುವು. ಕತ್ತಿ ಗುರಾಣಿಗಳನ್ನು ಹಿಡಿದವರು ಮುಂದೆ ನೆಗೆದಾಡುತ್ತಿದ್ದರು. ಕುದುರೆಯ ರಾವುತರು ಕುದುರೆಯ ಬಗೆ ಬಗೆಯ ಗತಿ ವಿಶೇಷಗಳಿಂದ ಕುಣಿದಾಡುತ್ತಿದ್ದರು. ಗುಡುಗಿನಂತೆ ಶಬ್ದ ಮಾಡುತ್ತ ರಥಗಳು ನಡೆಯುತ್ತಿದ್ದುವು. ಭೂಮಿಯನ್ನು ನಡುಗಿಸುತ್ತ ಆನೆಗಳು ಪರ್ವತಗಳಂತೆ ನಡೆದುವು. ಆನೆಗಳು ಬೃಂಹಿತವನ್ನೂ ಕುದುರೆಗಳು ಹೇಷಿತವನ್ನೂ ಚಕ್ರಗಳಿಂದ ರಥಗಳು ಗರ್ಜನೆಯನ್ನೂ ಪದಾತಿಗಳು ಸಿಂಹನಾದವನ್ನೂ ಮಾಡುತ್ತ ಹೊರಟು, ಭಯಂಕರವಾದ ಆ ಲಕ್ಷ್ಮಣನ ಸೈನ್ಯವು ಶತ್ರುಘ್ನನು ಸೇನಾ ಸಹಿತನಾಗಿ ಮೂರ್ಛೆ ಬಿದ್ದಿದ್ದ ಸ್ಥಳವನ್ನು ಸೇರಿತು. ಅನಂತರದಲ್ಲಿ ಲಕ್ಷ್ಮಣನು ಕಾಲಜಿತ್ತಿನೊಡನೆ ಮುಂದೆ ಹೊರಟು ಏಕಲನಾಗಿಯೂ ಸುಕೇಶನಾಗಿಯೂ ಅಲ್ಪ ಜೀವಾವಶಿಷ್ಟನಾಗಿಯೂ ಇದ್ದ ವೀರನಾದ ಶತ್ರುಘ್ನನನ್ನು ಕಂಡನು.

ಇಂತು ಲಕ್ಷ್ಮಣಾಗಮನವೆಂಬ ಮೂವತ್ತೆರಡನೆಯ ಅಧ್ಯಾಯವು.

---

## ಮೂವತ್ತಮೂರನೆಯ ಅಧ್ಯಾಯ

ಶತ್ರುಭಯಂಕರನಾದ ಕುಶನು ಆ ಭಯಂಕರವಾದ ಸೈನ್ಯವನ್ನೂ ಅದಕ್ಕೆ ಪ್ರಮುಖನಾದ ಲಕ್ಷ್ಮಣನನ್ನೂ ನೋಡಿ ಹೆದರದೆ, "ಎಲೈ ಲವನೇ! ಸೈನ್ಯವು ಬಂದಿದೆ. ಈಗ ಏನು ಮಾಡಬೇಕು? ಆನೆಗಳೂ ರಥಗಳೂ ಎಣಿಸಲಸಾಧ್ಯವಾಗಿವೆ" ಎಂದನು. ಅದಕ್ಕೆ, "ಅಣ್ಣಾ! ಮಹಾ ಬಾಹುವಾದ ಕುಶನೇ! ಈಗ ಯುದ್ಧವನ್ನು ಮಾಡಲೇ ಬೇಕು; ಕುಂಬಳ ಕಾಯನ್ನೊಡೆದಂತೆ ಈ ಸೈನಿಕರನ್ನು ಕೊಲ್ಲಬೇಕು; ಮಾವಿನ ಹಣ್ಣನ್ನು ಸೀಳುವಂತೆ ರಥಗಳನ್ನು ಚೂರು ಚೂರಾಗಿ ಮುರಿದುಹಾಕಬೇಕು; ಕಳಿತ ಹಣ್ಣುಗಳಂತೆ ತಲೆಗಳನ್ನು ನೆಲಕ್ಕೆ ಕೆಡಹಬೇಕು. ನಿನ್ನ ಸಂಪೂರ್ಣ ಶಕ್ತಿಗೆ ಈ ಸೈನ್ಯವು, ಅಗಸ್ತ್ಯನಿಗೆ ಸಮುದ್ರವು ಎಂತು ಅಂತೆ, ಈಡಲ್ಲ. ಸಿಂಹದ ಎದುರಿಗೆ ನರಿಗಳ ಸಾಲು ಬರಬಲ್ಲುದೆ? ಪುಣ್ಯಕರವಾದ ಗಂಗಾ ನದಿಯನ್ನು ನೋಡಿದ ಮಾತ್ರದಿಂದಲೇ ನಾಶವಾಗುವ ಪಾಪ ರಾಶಿಯಂತೆ ಯುದ್ಧದಲ್ಲಿ ನಿನ್ನನ್ನು ನೋಡಿದ ಮಾತ್ರಕ್ಕೇ ಈ ಸೇನೆಯು ನಾಶವಾಗುವುದು. ನಿನ್ನನ್ನು ಶ್ರೋತ್ರಿಯರು ಮಾತ್ರ ಹಿಡಿಯ ಬಲ್ಲರಲ್ಲದೆ ಸೈನಿಕರು ಹಿಡಿಯಬಲ್ಲರೆ? ನಾನೂ ಸಹ ಈ ಸೇನೆಯ ವೇಗಕ್ಕೆ ಎಂದಿಗೂ ಮುರಿದುಹೋಗುವವನಲ್ಲ. ಏಳು! ಧನುವನ್ನೆತ್ತಿ ಬೇಗನೆ ಬಾಣಗಳನ್ನು ಹೂಡು. ನಾನು ಈ ಸೈನ್ಯವನ್ನು ತೀಕ್ಷ್ಣ ಬಾಣಗಳಿಂದ ಆವರಿಸುವೆನು. ಆದರೆ ಏನುಮಾಡಲಿ? ನನ್ನ ಬಿಲ್ಲು ಮುರಿದುಹೋಯಿತು" ಎಂದು ಹೇಳಿ, ಲವನು ಧನುವನ್ನು ಅಪೇಕ್ಷಿಸಿ, ನಿಶ್ಚಲ ದೃಷ್ಟಿಯಿಂದ ಸೂರ್ಯನನ್ನು ನೋಡುತ್ತ ಮನದಲ್ಲಿ ಹೀಗೆ ಸ್ತೋತ್ರ ಮಾಡಿದನು :—

"ಸವಿತೃ ನಾಮಕನಾದ ಸೂರ್ಯನಿಗೆ ನಮಸ್ಕಾರ! ತೇಜೋವಂತನಾದ ಪೂಷನಿಗೆ ನಮಸ್ಕಾರ! ಏಳು ಕುದುರೆಗಳುಳ್ಳವನಾಗಿ ನಿತ್ಯವೂ ಆಕಾಶದಲ್ಲಿ ತಿರುಗುವವನಿಗೆ

ನಮಸ್ಕಾರ! ಪ್ರತಿ ಮಾಸದಲ್ಲಿಯೂ ಮೇಷಾದಿ ರಾಶಿಗಳಿಗೆ ಅಧೀಶನಾಗುವವನಿಗೆ ನಮಸ್ಕಾರ! ಎರಡು ಅಯನಗಳನ್ನುಂಟುಮಾಡುವ ಪ್ರಕಾಶ ರೂಪನಿಗೆ ನಮಸ್ಕಾರ! ಮೂಗರು, ಕುರುಡರು, ಕಿವುಡರಿಗೆ ವಾಕ್ಕನ್ನೂ ಕಣ್ಣನ್ನೂ ಕಿವಿಯನ್ನೂ ಕೊಡುವವನಾಗಿಯೂ, ತಲೆ ನೋವು, ಶೂಲೆ, ಕುಷ್ಠ, ಇವುಗಳನ್ನು ನಾಶಮಾಡುವವನಾಗಿಯೂ ಇರುವ ನಿನಗೆ ನಮಸ್ಕಾರ! ಸುವರ್ಣ ವರ್ಣನಾಗಿಯೂ ಸಹಸ್ರ ಕಿರಣನಾಗಿಯೂ ಲೋಕಕ್ಕೆ ನೇತ್ರ ಸ್ವರೂಪನಾಗಿಯೂ ಇರುವ ಭಾಸ್ಕರನಾದ ನಿನಗೆ ನಮಸ್ಕಾರ! ದಿವಾಕರನೂ ಪಿಂಗನೂ ಜಲವನ್ನು ಸೃಜಿಸುವ ಮೇಘನೂ ಆಗಿರುವ, ಪರ್ಯಾಯದಿಂದ ಸೃಷ್ಟಿ ಸ್ಥಿತಿ ಸಂಹಾರ ಕಾರಣನಾದ, ಋಗ್ವೇದ ಸ್ವರೂಪನೂ ಬ್ರಾಹ್ಮಣ ರೂಪನೂ ಆದ ನಿನಗೆ ನಮಸ್ಕಾರ! ಯಜುಸ್ಸಾಮಾಥರ್ವಣ ವೇದಗಳ ಕರ್ತನಾಗಿಯೂ, ಪುರಾಣಾಗಮ ಕರ್ತನಾಗಿಯೂ, ಗಾಥೇತಿಹಾಸಗಳ ಕರ್ತನಾಗಿಯೂ, ಬ್ರಹ್ಮ ಸ್ವರೂಪನಾಗಿಯೂ ಇರುವವನಿಗೆ ನಮಸ್ಕಾರ! ವಿಷ್ಣು ಸ್ವರೂಪನಿಗೆ ನಮಸ್ಕಾರ! ರುದ್ರ ರೂಪನಿಗೆ ನಮಸ್ಕಾರ! ಲೋಕಕ್ಕೆ ಇಷ್ಟಾರ್ಥ ಪ್ರದನೂ ಮನೋಹರನೂ ವಿಶ್ವೇಶ್ವರನೂ ಪುರುಷನೂ ಸರ್ವದಾ ನಿರ್ಮಲನೂ ಹಂಸನೂ ತೀಕ್ಷ್ಣ ಕಿರಣನೂ ರತ್ನ ಕುಂಡಲನೂ ಆದ ನಿನಗೆ ನಮಸ್ಕರಿಸುತ್ತೇನೆ. ಯುದ್ಧದಲ್ಲಿ ಜಯ ಪ್ರದವಾದ ಧನುವು ಈಗ ನನಗೆ ಹಸ್ತಗತವಾಗಲಿ.''

ಈ ಸ್ತೋತ್ರದಿಂದ ಸಂತುಷ್ಟನಾದ ಸೂರ್ಯನು ಸೌರ ಸ್ತೋತ್ರವನ್ನು ಹೇಳುತ್ತಿದ್ದ ಲವನಿಗೆ ದಿವ್ಯ ಧನುವನ್ನು ಕೊಟ್ಟು ಶ್ರೇಯೋವಂತನನ್ನಾಗಿ ಮಾಡಿದನು. ಮಹಾಬಾಹುವಾದ ಲವನು ಸುವರ್ಣ ಪಟ್ಟಿಯಿಂದ ಬಿಗಿದಿರುವ ಗಟ್ಟಿಯಾದ ಪೌರ್ವಿಯುಳ್ಳ ಧನುವನ್ನು ಪಡೆದು ಕುಶನನ್ನು ಕುರಿತು, "ಅಣ್ಣಾ! ನಮ್ಮ ಗುರುವಾದ ವಾಲ್ಮೀಕಿ ಮುನಿಯು ನನಗೆ ಉಪದೇಶಿಸಿದ್ದ ಸೌರ ಸ್ತೋತ್ರವನ್ನು ಪಠಿಸಿದುದರಿಂದ ನನಗೆ ಧನುವು ಪ್ರಾಪ್ತವಾಯಿತು. ಉತ್ತಮವಾದ ಅಸ್ತ್ರಗಳೆಲ್ಲವನ್ನೂ ನಾನು ಪಡೆದೆನು" ಎಂದು ಹೇಳಿದನು.

ಬಳಿಕ ಆ ಶೂರರಿಬ್ಬರೂ ಸೈನ್ಯಾರಣ್ಯವನ್ನು ಸುಡುವುದಕ್ಕಾಗಿ ಬಂದಿರುವ ಅಗ್ನಿ ವಾಯುಗಳೋ ಎಂಬಂತೆ ಬಂದು ಲಕ್ಷ್ಮಣನ ರಕ್ಷಣೆಯಲ್ಲಿದ್ದ ಘೋರವಾದ ಸೈನ್ಯವನ್ನು ಹೊಕ್ಕು, ಪರ್ವತದ ಮೇಲೆ ಎರಡು ಮೇಘಗಳು ಮಳೆಯನ್ನು ಸುರಿಸುವಂತೆ, ಕ್ರೂರವಾದ ಬಾಣದ ಮಳೆಯನ್ನು ಸುರಿಸಿದರು. ಸೇನೆಯನ್ನು ಹೊಕ್ಕ ಅವರಿಬ್ಬರಿಂದ, ಮೈನಾಕ ಮಂದರಗಳು ಕಡೆದಾಗ ಸಮುದ್ರದಲ್ಲಿ ಹುಟ್ಟಿದಂತೆ, ಸೇನೆಯಲ್ಲಿ ದೊಡ್ಡ ಸುಳಿಯುಂಟಾಯಿತು. ಅವರಿಬ್ಬರ ಸಿಂಹ ನಾದಕ್ಕೆ ಸೈನ್ಯವು ಅರ್ಧ ಯೋಜನದ ದೂರ ಹಿಮ್ಮೆಟ್ಟಿತು. ಕಾಲಜಿತ್ತೂ ಲಕ್ಷ್ಮಣನೂ ಕೋಪಗೊಂಡು ಕುಶನನ್ನು ಬಾಣಗಳಿಂದ ಆವರಿಸಿದರು. ಮಹಾ ಪೌರುಷಶಾಲಿಯಾದ ಲವನನ್ನು ಲಕ್ಷ್ಮಣನ ಸೇನೆಯು ಮುತ್ತಿಕೊಂಡಿತು.

ನೂರು ಆನೆಗಳಿಗೆ ಒಂದು ಭ್ರಮಿ (ಮಂಡಲಾಕಾರವಾದ ಗತಿವಿಶೇಷವುಳ್ಳ ಗುಂಪು) ಯಂತೆ, ನೂರಕ್ಕೆ ನೂರರಷ್ಟು ಭ್ರಮಿಗಳು ಹೆಚ್ಚುತ್ತಿದ್ದುವು. ನೂರು ಆನೆ

ಗಳಿಗೂ, ಆನೆಯೊಂದೊಂದಕ್ಕೆ ಹತ್ತರಂತೆ ಸಾವಿರ ರಥಗಳೂ, ರಥವೊಂದೊಂದಕ್ಕೆ ನೂರರಂತೆ ಕುದುರೆಗಳೂ (೧,೦೦,೦೦೦), ಕುದುರೆಯೊಂದೊಂದಕ್ಕೆ ನೂರರಂತೆ ಪದಾತಿಗಳೂ (೧,೦೦,೦೦,೦೦೦), ಹೀಗೆ ನೂರು ಭ್ರುಮಿಗಳು, ಬಾಲನೂ ಏಕಾಕಿಯೂ ಆದ ಲವನನ್ನು ಸುತ್ತಿಕೊಂಡು ಬಾಣಗಳಿಂದಲೂ, ವಜ್ರಾಯುಧ, ಮುದ್ಗರ, ಪ್ರಾಸ, ಗದೆ, ಅಸಿ, ಶಕ್ತಿ, ಯಷ್ಟಿ, ಪರಶ್ವಥ, ಕುಂತ, (ಹಿಡಿದು ಆಕರ್ಷಿಸುವ) ಪಾಶ ಮೊದಲಾದ ಆಯುಧಗಳಿಂದಲೂ ಹೊಡೆದರು. ಸಂಭ್ರಮಗೊಳ್ಳುತ್ತಿರುವ ಕುದುರೆಗಳ ಮೇಲೆ ಕುಳಿತು ತನ್ನನ್ನು ಮುತ್ತಿರುವ ಅಸಂಖ್ಯಾತರಾದ ಯೋಧರನ್ನು ಲವನು ಹರಿತವಾದ ಬಾಣಗಳಿಂದ ಹೊಡೆಯಲು, ಅವರ ತಲೆಗಳು ನೆಲಕ್ಕೆ ಉರುಳುತ್ತಿದ್ದುವು. ಹೀಗೆ ಲವನು ರಭಸದಿಂದ ಯುದ್ಧ ಕ್ರಿಯೆಯನ್ನು ಮಾಡುತ್ತ ಪ್ರಲಯಾಂತಕನಾದ ಯಮನಂತೆ ಗರ್ಜಿಸುತ್ತಿದ್ದನು; ನೂರು ಮಂದಿ ವೀರರಿಗೆ ನೂರು, ಇನ್ನೂರು ಜನಕ್ಕೆ ಇನ್ನೂರು, ಐನೂರಕ್ಕೆ ಐನೂರು, ಸಾವಿರಕ್ಕೆ ಸಾವಿರ, ಲಕ್ಷಕ್ಕೆ ಲಕ್ಷ—ಈ ರೀತಿಯಾಗಿ ಬಾಣಗಳನ್ನು ಬಿಟ್ಟು ವೀರರನ್ನು ಕೊಲ್ಲುತ್ತಬಂದನು.

ಹೀಗೆ ಆನೆಗಳ ನಾಲ್ವತ್ತು ಭ್ರುಮಿಗಳನ್ನು ಕೊಂದ ಸಿಂಹ ವಿಕ್ರಮನಾದ ಲವನು ಶತ್ರುಗಳ ಬಾಣಗಳಿಂದ ಸೀಳಿಹೋದ ದೇಹವುಳ್ಳವನಾಗಿ ಎಲ್ಲ ದಿಕ್ಕುಗಳನ್ನೂ ನೋಡಿದನು. ಒಂದು ಕಡೆಯಲ್ಲಿ ರಥ ಗಜಗಳ ಗುಂಪಿನೊಡನೆ ಸೈನ್ಯವು ನಡೆಯುತ್ತ ಖಡ್ಗ ಕಾಂತಿಯಿಂದಲೂ ಆನೆಗಳಿಂದಲೂ ಕಪ್ಪಗೆ ಘೋರವಾಗಿ ಕಾಣಿಸುತ್ತಿದ್ದಿತು. ಲವನು ಹಿಂದೆ ಕುಶನನ್ನು ಕಾಣಲಿಲ್ಲ. "ನಮ್ಮಣ್ಣನು ಎಲ್ಲಿ ಹೋದನು?" ಎಂದು ಬಹಳ ಹೊತ್ತು ಚಿಂತಿಸುತ್ತಿದ್ದನು. ಆಗ ಅವನ ಉತ್ತಮವಾದ ಧನುವನ್ನು, ಲವಣಾಸುರನ ಸೋದರ ಮಾವನಾದರೂ ರಾಮನಲ್ಲಿ ಶರಣಾಗತನಾಗಿದ್ದ, ರುಧಿರಾಕ್ಷನೆಂಬ ರಾಕ್ಷಸನು ಅಪಹರಿಸಿಕೊಂಡು ಬರುತ್ತಿದ್ದನು. ಧನುವನ್ನು ತೆಗೆದುಕೊಂಡು ಬೇಗನೆ ಓಡಿ ಹೋಗುತ್ತಿದ್ದ ರಾಕ್ಷಸನನ್ನು ಕುರಿತು ಲವನು, "ನನ್ನಿಂದ ಬದುಕಿ ಎಲ್ಲಿ ಹೋಗುವೆ? ನಿಲ್ಲು ನಿಲ್ಲು" ಎಂದು ಕೂಗುತ್ತ ಚಕ್ರವನ್ನು ತೆಗೆದುಕೊಂಡು, ತಾಯಿಯ ಪಾದಗಳನ್ನು ಮನದಲ್ಲಿ ಧ್ಯಾನಿಸುತ್ತ, ಗಿಡುಗನು ತನ್ನ ಆಹಾರವನ್ನು ಹಿಡಿದು ಆಕಾಶದಲ್ಲಿ ಹಾರುವಂತೆ ಹಾರಿ, ರಕ್ತಲಿಪ್ತ ದೇಹನಾಗಿರುವುದರಿಂದ ಅಗ್ನಿಮೂರ್ತಿಯಂತೆಯೂ ಸಾಕ್ಷಾತ್ ಚಕ್ರಪಾಣಿಯಂತೆಯೂ ಪ್ರಕಾಶಿಸಿದನು. ಯೋಧರು ಆಕಾಶದಲ್ಲಿದ್ದ ಲವನನ್ನು ನೋಡಿ, "ಮೇಲೆ ಬೀಳುವನೋ ಏನೋ?" ಎಂದು ಹೆದರಿ ಧನುವಿನಲ್ಲಿ ಬಾಣಗಳನ್ನು ಸಂಧಾನ ಮಾಡಿದರು. ಕೆಲವರು ತಮ್ಮ ತಲೆಗೆ ಮರೆಯಾಗುವಂತೆ ಗುರಾಣಿಗಳನ್ನು ಗಟ್ಟಿಯಾಗಿ ಹಿಡಿದುಕೊಂಡರು. "ಈ ಶೂರನು ನಮ್ಮ ಮೇಲೆ ಬೀಳುವುದರಲ್ಲಿ ಸಂದೇಹವಿಲ್ಲ" ಎಂದು ತಿಳಿದು ಕೆಲವರು ರಥದ ಕೆಳಗೆ ಅವಿತುಕೊಂಡರು. ಬಾಣಗಳಿಂದ ದೇಹವು ಸೀಳಿಹೋಗಿ ನೆಲದಲ್ಲಿ ಬಿದ್ದಿದ್ದ ಆನೆಗಳ ಹೊಟ್ಟೆಗಳ ಕೆಳಗೆ ಕೆಲವರು ಮಹಾ ರಥರು ಅಡಗಿಕೊಂಡರು.

ಹೆದರಿದ ಶೂರರೆಲ್ಲರೂ ಹೀಗಾಗಲು, ಉಳಿದಿದ್ದ ಮಹಾ ಶೂರರಾಗಿದ್ದ ದಶರಥನ ಮಂತ್ರಿಯಾದ ಸುಜ್ಞನ ಮಕ್ಕಳು ಜಿತಶ್ರಮ, ಧಾರ್ಮಿಕ, ಸುಕೇತು, ಶತ್ರುಸೂದನ,

ಚಂದ್ರ, ಮದ, ಶಲ, ಕಾಲ, ಮಲ್ಲ, ಸಿಂಹ ಎಂಬ ಹತ್ತು ಮಂದಿ ಮಾತ್ರ ಹೊರಟು, ಆಕಾಶದಲ್ಲಿ ಚಕ್ರಹಸ್ತನಾಗಿದ್ದ ಲವಸನ್ನು ತೀಕ್ಷ್ಣವಾದ ಬಾಣಗಳಿಂದ ಹೊಡೆದರು. ಹತ್ತು ಹತ್ತು ಬಾಣಗಳನ್ನೆತ್ತಿ ಹೊಡೆದು ಅವರು ಲವಸ ಕೈಯಲ್ಲಿದ್ದ ಚಕ್ರವನ್ನು ಕತ್ತರಿಸಲು, ಲವನು ಬೇಗನೆ ಕೆಳಕ್ಕೆ ಬಂದು ಪರಿಘವನ್ನು ತೆಗೆದುಕೊಂಡು ನಗುತ್ತ ಆ ಮಂತ್ರಿಪುತ್ರರನ್ನು ಹೊಡೆದನು. ಅವರು ಹರಿದುಹೋದ ಕವಚಗಳೂ ಗುರಾಣಿಗಳೂ ಉಳ್ಳವರಾಗಿ ರಕ್ತದಿಂದ ನೆನೆದುಹೋಗಿ, ವೇದ ಬಾಹ್ಯರೂ, ಅಲ್ಪ ಶಾಸ್ತ್ರಗಳನ್ನೋದಿದವರೂ, ವಿಷ್ಣು ಭಕ್ತಿ ರಹಿತರೂ, ತಂದೆತಾಯಿಗಳಲ್ಲಿ ಭಕ್ತಿಯಿಲ್ಲದವರೂ ಆದ ನಾಸ್ತಿಕರು ರೌರವವೆಂಬ ನರಕದಲ್ಲಿ ಬೀಳುವಂತೆ, ಬಿದ್ದುಹೋದರು. ಅಷ್ಟರಲ್ಲಿ ಆ ರುಧಿರಾಕ್ಷನೆಂಬ ರಾಕ್ಷಸನು ಗದೆಯನ್ನು ತೆಗೆದುಕೊಂಡು ಬಂದು ಲವನ ತಲೆಯ ಮೇಲೆ ಬಲವಾಗಿ ಹೊಡೆದನು. ಆ ಬಾಲನು ಮೂರ್ಛಿತನಾಗಿ ಮುಹೂರ್ತ ಮಾತ್ರ ನೆಲಕ್ಕೆ ಬಿದ್ದನು; ಬಳಿಕ ಮೂರ್ಛೆಯಿಂದೆಚ್ಚತ್ತು ಗಜೇಂದ್ರನಂತೆ ನಿಂತು ನೆಲದ ಮೇಲಿದ್ದ ಕುಂತಾಯುಧವನ್ನು ತೆಗೆದುಕೊಂಡು ಆ ರಾಕ್ಷಸನ ಮೇಲೆ ಬಿದ್ದು ಅವನ ಜುಟ್ಟನ್ನು ಹಿಡಿದೆಳೆದುಕೊಂಡು ಆ ದುಷ್ಟನ ತಲೆಯನ್ನು ಕುಂತಾಯುಧದಿಂದ, ಕಡಿದನು; ಬಳಿಕ ತನಗೆ ಸೂರ್ಯನು ಕೊಟ್ಟಿದ್ದ ಧನುವನ್ನು ತೆಗೆದುಕೊಂಡು ಸಿಂಹನಾದ ಮಾಡುತ್ತ ಸೇನೆಯನ್ನು ನಾಶ ಮಾಡುವ ಅನೇಕವಾದ ತೀಕ್ಷ್ಣ ಬಾಣಗಳನ್ನು ಬಿಟ್ಟನು. ಮತ್ತೆ ಸೈನ್ಯವು ಅವನನ್ನು, ಗರ್ಭಸ್ಥವಾದ ಜಂತುವು ಹೊರಕ್ಕೆ ಬಂದ ಕೂಡಲೆ ಅಜ್ಞಾನವು ಅದನ್ನು ಸುತ್ತಿಕೊಳ್ಳುವಂತೆ, ಸುತ್ತಿಕೊಂಡಿತು. ಬೆಂಕಿಯನ್ನು ಆವರಿಸಿದ ಹುಲ್ಲನ್ನು ಆ ಬೆಂಕಿಯು ಹೇಗೆ ಸುಡುವುದೋ ಹಾಗೆ ಕೋಪದಿಂದ ಆ ಸೈನ್ಯವನ್ನು ಲವನು ಸುಟ್ಟುಹಾಕಿದನು.

ಇಂತು ಲವ ಯುದ್ಧ ವಿಜಯ ವರ್ಣನವೆಂಬ ಮೂವತ್ತಮೂರನೆಯ
ಅಧ್ಯಾಯವು.

———

# ಪತ್ರ ವ್ಯವಹಾರ

---

## ಕೇಶಿರಾಜನು ಜೈನನೇ?

ಡಾ॥ ಶಾಮಶಾಸ್ತ್ರಿಗಳವರು ಮಿಥಿಕ್ ಸೊಸಯಟಿಯ ತ್ರೈಮಾಸಿಕದ ೨೨ನೆಯ ಸಂಪುಟದ ೧ನೆಯ ಸಂಚಿಕೆಯಲ್ಲಿ, ಶಬ್ದಮಣಿದರ್ಪಣಕಾರನಾದ ಕೇಶಿರಾಜನು ಜೈನನಾಗಿರದೆ ಸ್ಮಾರ್ತ ಬ್ರಾಹ್ಮಣನೆಂದು ಸಾಧಿಸಲು, ಮ॥ ಪಂಡಿತ ಶ್ರೀನಿವಾಸ ರಂಗಾಚಾರ್ಯರ ಸಂಶೋಧನೆಯ ಮೇಲಿಂದ, ಎಂಟು ಆಧಾರಗಳನ್ನು ಕೊಟ್ಟಿರುವರು. ಅವುಗಳ ಮೇಲಿಂದ, ಕೇಶಿರಾಜನು ಸ್ಮಾರ್ತ ಬ್ರಾಹ್ಮಣನೆಂದು ನಿರ್ಣಯವಾಗಲಿ, ಅಥವಾ ಆಗದಿರಲಿ, ಆ ಲೇಖವು ಇಂಗ್ಲೀಷಿನಲ್ಲಿರುವುದರಿಂದ ಕನ್ನಡವನ್ನರಿಯದವರ ಸಲುವಾಗಿ ಬರೆಯಲಾಗಿದ್ದಿತೆಂದು ಬಗೆದು, ಅದೇ ವಿಷಯದ ಮೇಲೆ ನಾನು ಮತ್ತೊಂದು ಪ್ರಬಂಧವನ್ನು ಬರೆದು ಧಾರವಾಡದ ಕರ್ನಾಟಕ ಇತಿಹಾಸ ಸಂಶೋಧಕ ಮಂಡಲಿಯ ಸಭಾಸದರ ಮುಂದೆ ೧೯೩೨ನೆಯ ಅಕ್ಟೋಬರ ತಿಂಗಳಲ್ಲಿ ಓದಿದೆನು. ಅದು ಆ ಮಂಡಲಿಯ ಪತ್ರಿಕೆಯಲ್ಲಿ ಪ್ರಕಟವಾಗಬಹುದು. ಆದರೆ ಇಷ್ಟರಲ್ಲಿ, ಮ॥ ಶ್ರೀನಿವಾಸ ರಂಗಾಚಾರ್ಯರು ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆಯ ೧೭ನೆಯ ಸಂಪುಟದ ೩ನೆಯ ಸಂಚಿಕೆಯಲ್ಲಿ (ಪುಟ ೨೦೫–೨೩) "ಕೇಶಿರಾಜನು ಜೈನನಲ್ಲ, ಬ್ರಾಹ್ಮಣನು" ಎಂಬ ಹೆಸರಿನಿಂದ ಒಂದು ಲೇಖವನ್ನು ಬರೆದಿರುವರು. ಇದರಲ್ಲಿ, ಡಾ॥ ಶಾಮಶಾಸ್ತ್ರಿಗಳವರ ಆಧಾರಗಳಲ್ಲಿ ಮಾರ್ಪಾಟುಗಳಾಗಿವೆ. ನಾವು ಇಲ್ಲಿ ಡಾ॥ ಶಾಮಶಾಸ್ತ್ರಿಗಳವರ ಆಧಾರಗಳನ್ನು ಕ್ರಮಶಃ ಸಂಕ್ಷೇಪವಾಗಿ ಕೊಡುವೆವು. ಇವೆರಡರಲ್ಲಿಯ ಮಾರ್ಪಾಟನ್ನು ಓದುಗರು ತಾವೇ ಕಂಡುಹಿಡಿಯಬೇಕು.

ಡಾ॥ ಶಾಮಶಾಸ್ತ್ರಿಗಳ ಆಧಾರಗಳು.—

೧. ಗ್ರಂಥಾವತಾರದಲ್ಲಿ ಕೇಶಿರಾಜನು ಹೇಳುವ

ಶ್ರೀ ವಾಗ್ದೇವಿಗೆ ಶಬ್ದದಿ
ನಾವಾವಿಂದ್ರಿಯದ ವಿಷಯಮಂ ಶ್ರೋತ್ರದೊಳು।
ದ್ಭಾವಿಪ ನಿರ್ಮಲ ಮೂರ್ತಿಗಿ
ಳಾ ವಂದ್ಯೆಗೆ ಶಾಸ್ತ್ರಮುಖದೊಳವನತನಪ್ಪೆಂ॥

ಎಂಬ ಪದ್ಯದಲ್ಲಿ ಸರಸ್ವತಿಯ ಸಾಕಾರ ಮೂರ್ತಿಯನ್ನು ವರ್ಣಿಸಿರುವನೇ ಹೊರತು ಪಂಪ ಆಂಡಯ್ಯ ಭಟ್ಟಾಕಳಂಕರಂತೆ ತೀರ್ಥಂಕರರ ವಾಣಿಯೇ ಸರಸ್ವತಿಯೆಂದು ವರ್ಣಿಸಿಲ್ಲ. ತೀರ್ಥಂಕರರ ವಾಣಿಯು ನಿರಾಕಾರವೇ ಹೊರತು ಸಾಕಾರವಲ್ಲ. ಆದುದರಿಂದ ಕೇಶಿರಾಜನು ಜೈನನಲ್ಲ.

೨. ಅನುಕೂಲ ಪವನನಿಂ ಜೀ
ವನಿಷ್ಟದಿಂ ನಾಭಿಮೂಲದೊಳ್ ಕಹಳೆಯ ಪಾಂ ||
ಗಿನವೊಲ್ ಶಬ್ದದ್ರವ್ಯಂ
ಜನಿಯಿಸುಗುಂ ಶ್ವೇತಮದರ ಕಾರ್ಯಂ ಶಬ್ದಂ ||

ಎಂಬ ಸೂತ್ರದಲ್ಲಿ, 'ಶಬ್ದದ್ರವ್ಯಂ ಶ್ವೇತಂ' ಎಂದು ಹೇಳಿರುವುದರಿಂದ, "ಕೇಶಿರಾಜನು ಜೈನನೆಂದು ಸಿಟ್ಟೂರು ಸಂಜಯ್ಯನವರು ಊಹಿಸಿದುದು" ಯುಕ್ತಿಯುಕ್ತವಾಗದು. ಏಕೆಂದರೆ, 'ವೇದಾಂತ ದೇಶಿಕ'ರ 'ನ್ಯಾಯಸಿದ್ಧಾಂಜನ'ದಲ್ಲಿ ಶಬ್ದಕ್ಕೆ ನಾನಾ ಬಣ್ಣಗಳಿವೆಯೆಂದು ಹೇಳಿದೆ. ಭಟ್ಟೋಜಿ ದೀಕ್ಷಿತ, ನಾಗೋಜಿ ದೀಕ್ಷಿತ ಮುಂತಾದವರು ಇದೇ ಅಭಿಪ್ರಾಯವನ್ನು ತಮ್ಮ ವ್ಯಾಕರಣಗಳಲ್ಲಿ ವ್ಯಕ್ತಗೊಳಿಸಿರುವರು. ಸ್ಫೋಟ ವಾದದಲ್ಲಿಯೂ ರಂಗ ರಾಮಾನುಜರ 'ಪ್ರತಿತಂತ್ರ ಪ್ರಕ್ರಿಯೆ' ಯಲ್ಲಿಯೂ ಶಬ್ದವನ್ನು ದ್ರವ್ಯವೆಂದು ತಿಳಿಯಬೇಕೆಂದು ಹೇಳಿದೆ. ಆದುದರಿಂದ ಕೇಶಿರಾಜನು "ಶಬ್ದದ್ರವ್ಯಂ ಶ್ವೇತಂ" ಎಂದು ಹೇಳಿದ ಮಾತ್ರಕ್ಕೆ ಜೈನನಾಗನು.

೩. ವ್ಯಾಕರಣದಿಂದೆ ಪದಮಾ
ವ್ಯಾಕರಣದ ಪದದಿನರ್ಥಮರ್ಥದೆ ತತ್ತ್ವ ||
ಲೋಕಂ ತತ್ತ್ವಾಲೋಕದಿ
ನಾಕಾಂಕ್ಷಿಪ ಮುಕ್ತಿಯಕ್ಕುಮದೆ ಬುಧರ್ಗೆ ಫಲಂ ||

ಎಂಬ ಪದ್ಯದಲ್ಲಿ ಕೇಶಿರಾಜನು ಬ್ರಾಹ್ಮಣ ವೈಯಾಕರಣಿಗಳನ್ನು ಅನುಸರಿಸಿರುವುದರಿಂದ ಆತನು ಜೈನನಲ್ಲ. ಭರ್ತೃಹರಿಯ ವಾಕ್ಯಪದೀಯವೆಂಬ ಗ್ರಂಥದೊಳಗಣ

ಅರ್ಥ ಪ್ರವೃತ್ತಿ ತತ್ತ್ವಾನಾಂ ಶಬ್ದ ಏವ ನಿಬಂಧನಂ
ತತ್ತ್ವಾವ ಬೋಧಶ್ಶಬ್ದಾನಾಂ ನಾಸ್ತಿ ವ್ಯಾಕರಣಾದೃತೇ ||
ತದ್ದ್ವಾರಮಪವರ್ಗಸ್ಯ ವಾಙ್ಮಲಾನಾಂ ಚಿಕಿತ್ಸಿತಂ
ಪವಿತ್ರಂ ಸರ್ವ ವಿದ್ಯಾನಾಮಧಿವಿದ್ಯಂ ಪ್ರಕಾಶತೇ ||

ಈ ಶ್ಲೋಕಗಳಿಗೂ ಮೇಲೆ ಉದಾಹರಿಸಿದ ಕೇಶಿರಾಜನ ಪದ್ಯಕ್ಕೂ ಅಂತರವಿಲ್ಲ.

೪. ಕೇಶಿರಾಜನು ವೇದಶಾಸ್ತ್ರಗಳನ್ನರಿತಿದ್ದನು. ಆದುದರಿಂದಲೇ ಅವನು

ಕವಿತಾ ಪ್ರೌಢಿಯೊಳಬ್ಜಸಂಭವನೆ ಕರ್ತಾರಂ ಕ್ರಿಯಾ ಕೌಶಲಂ
ಸ್ತವನೀಯಂ ತದಧೀನವಾದಖಿಳ ಶಾಸ್ತ್ರಾಮ್ನಾಯಮುಂ ಕೂಡೆ ಬ |
ಲ್ಲವರಿಲ್ಲೆನ್ನದಿರೊರ್ವನಿಂದಭಿನವ ಬ್ರಹ್ಮಂ ಗಡೆಂಬಂತೆ ತೋ
ಱುವನಾತ್ಮೀಯ ವಚೋವಿಚಿತ್ರತರ ವಿದ್ಯಾವೇಶವಂ ಕೇಶವಂ ||

ಎಂದಿರುವನು. ಈ ಪದ್ಯದಲ್ಲಿ ಆಮ್ನಾಯ ಶಬ್ದದ ಅರ್ಥವು ವೇದವೆಂದಾಗುತ್ತದೆ. ಜೈನರು ತಮ್ಮ ಧಾರ್ಮಿಕ ಗ್ರಂಥಗಳಿಗೆ ಆಗಮಗಳು, ಶ್ರುತಿಗಳು ಎನ್ನುವ ವಾಡಿಕೆಯಿದ್ದರೂ ಅವುಗಳಿಗೆ ವೇದ, ಆಮ್ನಾಯ, ಶ್ರುತಿ (?) ಎಂಬ ಪ್ರತಿಶಬ್ದಗಳು ಎಲ್ಲಿಯೂ

ಉಕ್ತವಾಗಿಲ್ಲ. ಅವರು ವೇದಗಳು ಮಿಥ್ಯವೆನ್ನುವುದರಿಂದ ಅವುಗಳನ್ನು ಓದರು. ಕೇಶಿರಾಜನು ಇವುಗಳ ಅಭ್ಯಾಸ ಮಾಡಿದುದು ಕಂಡುಬರುವುದರಿಂದ ಜೈನನಾಗಲಾರನು.

೫. ಕೇಶಿರಾಜನು ವೇದಗಳಿಂದ ಲಕ್ಷ್ಯಗಳನ್ನು ತೆಗೆದುಕೊಂಡಿರುವನು.

೬. ಕೇಶಿರಾಜನು ಪಾಣಿನಿಯನ್ನು ಆದರಪೂರ್ವಕವಾಗಿ ಅನುಸರಿಸಿರುವನು. ಭಟ್ಟಾಕಲಂಕದೇವನು ಪಾಣಿನಿಯನ್ನು ಮನಸೋಕ್ತವಾಗಿ ನಿಷೇಧಿಸುವನು. (ಶಬ್ದಾನು. ಸೂ. "ಅವಧೌ", "ಅಪೇಯ" ಮು.)

೭. ಡಾ॥ ವೆಂಕಟಸುಬ್ಬಯ್ಯನವರು ತಮ್ಮ 'ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ'ದಲ್ಲಿ ಕೇಶಿರಾಜ, ಮಲ್ಲಿಕಾರ್ಜುನ, ಕವಿ ಸುಮನೋಬಾಣರು ಸ್ಮಾರ್ತ ಬ್ರಾಹ್ಮಣರೆಂದು ಹೇಳಿದ್ದಾರೆ. ರಾ॥ ಬ॥ ಆರ್. ನರಸಿಂಹಾಚಾರ್ಯರು ಈ ಮೂವರೂ ಜೈನರೆಂದು 'ಕರ್ಣಾಟಕ ಕವಿಚರಿತೆ'ಯ ಮೊದಲನೆಯ ಭಾಗದಲ್ಲಿ ಹೇಳಿದ್ದಾರೆ. ಮಲ್ಲಿಕಾರ್ಜುನನ ಹೆಸರು ಚಿದಾನಂದ ಮಲ್ಲಿಕಾರ್ಜುನನೆಂದಿದೆ. ಜನ್ನನು ಕವಿ ಸುಮನೋಬಾಣನ ಮಗನಾಗಿರದೆ ಆತನ ಶಿಷ್ಯನಾಗಿರಬಹುದು. ಆತನು ಕಮ್ಮೆ ವಂಶದ ಶಂಕರನ ಮಗನು; ಧರ್ಮಾಂತರದಿಂದ ಜೈನನಾಗಿರಬಹುದು. ಆದುದರಿಂದ ಕೇಶವ ಮಲ್ಲಿಕಾರ್ಜುನ ಸುಮನೋಬಾಣರು ಸ್ಮಾರ್ತ ಬ್ರಾಹ್ಮಣರು.

೮. ಹಾಸನ ಡಿಸ್ಟ್ರಿಕ್ಟ್ ಚೆನ್ನರಾಯಪಟ್ಟಣದ ೨೪೨, ೨೪೪ನೆಯ ಶಾಸನಗಳಿಂದ ಕೇಶಿರಾಜನು ಬ್ರಾಹ್ಮಣನೆಂದು ಸಿದ್ಧವಾಗುತ್ತದೆ.

ಕೊನೆಯಲ್ಲಿ, ಜೈನರು ಯುದ್ಧ ಮಾಡುವುದು ಅಹಿಂಸಾ ತತ್ತ್ವಕ್ಕೆ ವಿರೋಧವಾಗಿರುವುದರಿಂದ ಯಾದವ ಕಟಕಾಚಾರ್ಯ ಕವಿ ಸುಮನೋಬಾಣನ ದೌಹಿತ್ರನಾದ ಕೇಶಿರಾಜನು ಜೈನನಲ್ಲವೆಂದು ಧಾರಾಳವಾಗಿ ಸಿದ್ಧವಾಗುವುದು.

---

ಡಾ॥ ಶಾಮಶಾಸ್ತ್ರಿಗಳವರ ಮೇಲಿನ ಎಂಟು ಆಧಾರಗಳು ನಮಗೆ ಮನದಟ್ಟಾಗುವಂತಿಲ್ಲ. ಅವರ ಪ್ರತಿಯೊಂದು ಆಧಾರದಲ್ಲಿ ನಮಗೆ ಸಂದೇಹಗಳು ತೋರಿಬರುತ್ತಿವೆ. ಅವುಗಳನ್ನು ನಾವು ಕೆಳಗೆ ಕ್ರಮವಾಗಿ ಕೊಡುವೆವು :—

೧. ಜೈನರ ಸರಸ್ವತಿಯು, ಅಥವಾ ವಾಣಿಯ ಕಲ್ಪನೆಗೆ ಮೂಲಾಧಾರವೆಂದರೆ ಜೈನಾಗಮವು. ಪರ್ಯಾಯವಾಗಿ ಹೇಳುವುದಾದರೆ ಸರಸ್ವತಿಗೆ ಕೊಟ್ಟ ಅನೇಕ ಹೆಸರುಗಳೆಲ್ಲ ಶ್ರುತ ಜ್ಞಾನವನ್ನವಲಂಬಿಸಿರುವುವು. ಅದರಿಂದ ಸರಸ್ವತಿಯು ಶ್ರುತ ದೇವಿಯು. ಶ್ರುತ ಜ್ಞಾನವನ್ನು ಸಂಗ್ರಹಿಸಿದ ಹೊತ್ತಿಗೆಗಳಿಗೂ ಶ್ರುತ ದೇವತೆಯೆಂಬ ಹೆಸರು ಜೈನರಲ್ಲಿ ರೂಢವಾಗಿದೆ. ಪುಸ್ತಕ ಪೂಜೆಯು ಶ್ರುತ ಪೂಜೆಯು.

ಸಮವಸರಣ ಕಾಲದಲ್ಲಿ ತೀರ್ಥಂಕರರ ಮುಖದಿಂದ ಧರ್ಮೋಪದೇಶ ಪರವಾಗಿ ಹೊರಡುವ ಸರ್ವಾರ್ಧ ಮಾಗಧೀ ಭಾಷೆಗೆ ಜೈನರು ವಾಣಿಯೆನ್ನುವರು. ಇದನ್ನೇ ಅನುಸರಿಸಿ ಭಟ್ಟಾಕಲಂಕದೇವನು ಶಬ್ದಾನುಶಾಸನದಲ್ಲಿ ಹೀಗೆಂದಿರುವನು :—

ನಮಃ ಶ್ರೀ ವರ್ಧಮಾನಾಯ ವಿಶ್ವವಿದ್ಯಾ ವಿಭಾಸಿನೇ ।
ಸರ್ವ ಭಾಷಾಮಯಿೀ ಭಾಷಾ ಪ್ರವೃತ್ತಾ ಯನ್ಮುಖಾಂಬುಜಾತ್ ॥

ಈ ಶ್ಲೋಕದ ವೃತ್ತಿಯಲ್ಲಿ ಹೀಗೆ ಹೇಳಿದೆ:—

ಭಾಷಾ ಇತಿ–ಭಾಷತ ಇತಿ, ಭಾಷ್ಯತೇ ಅನಯೇತಿ, ಭಾಷಣಮಿತಿ ವಾ ಭಾಷಾ ಸರಸ್ವತೀ ; 'ಬ್ರಾಹ್ಮೀತಿ ಭಾರತೀ ಭಾಷಾ ಗೀರ್ವಾಗ್ವಾಣೀ ಸರಸ್ವತೀ' ಇತ್ಯಭಿಧಾನಾತ್.

ಅಯಮತ್ರ ಸಾಮಯಿಕೋऽರ್ಥಃ–ಅನೇಕ ದುಃಖ ದಾವ ಸ್ಕಂಧಾನುಬಂಧ ಸಂಸಾರ ಘೋರಾಟವೀ ಪರ್ಯಟನ ಪರಿಕ್ಲೇಪ ಚೇಕ್ಲಿಷ್ಯಮಾಣ ವರಾಕೋದ್ಧರಣ ಪರಿಣತಾಂತಃಕರಣ ಸ್ವಭಾವ ಭಾವಿತ ವ್ಯಸ್ತ ಸಮಸ್ತ ದೃಗ್ವಿಶುದ್ಧ್ಯಾದಿ ಭಾವನಾ ಸಂಭಾವಿತ ತೀರ್ಥಕರ ಪುಣ್ಯ ಪ್ರಭಾವಾವಿರ್ಭಾವಿತ ಶ್ರಾವ್ಯ ನವ್ಯ ದಿವ್ಯ ವಾಣೀ ಇತಿ.

ಆದಿ ಪಂಪ, ನಾಗವರ್ಮ, ಆಂಡಯ್ಯ, ಅಗ್ಗಳ, ಕಮಲಭವ ಮುಂತಾದ ಜೈನ ಕವಿಗಳು ಈ ವಿಚಾರ ಸರಣಿಯನ್ನೇ ಅನುಸರಿಸಿರುವರು. ಆದರೆ ಎಲ್ಲ ಜೈನ ಕವಿಗಳೂ ಇದೇ ಸರಣಿಯನ್ನು ಅನುಸರಿಸಿರುವರೆಂದು ಹೇಳಲಾಗದು. ಕೆಲವರು ಆಲಂಕಾರಿಕವಾಗಿ ಸರಸ್ವತಿಗೆ ಸಾಕಾರ ರೂಪವನ್ನು ಕೊಟ್ಟಿದ್ದಾರೆ. ಕೆಲವರು ಸರಸ್ವತಿಯ ಸಾಕಾರ ರೂಪವನ್ನೇ ಭಾವಿಸಿದ್ದಾರೆ. ಕೆಳಗೆ ಉದಾಹರಿಸಿದ ಪದ್ಯ ಭಾಗಗಳನ್ನು ನೋಡಬಹುದು :—

೧. ..............ಸರ್ವಾಂಗ ಸುಂ ।
ದರಿ ವಿದ್ಯಾ ನಟಿ ನಾಟಕಂ ನಲಿಗೆ ಮತ್ಕಾವ್ಯಸ್ಥಳೀ ರಂಗದೊಳ್ ॥
(ರಾಮಚಂದ್ರ ಚರಿತ ಪುರಾಣ, ೧—೬)

೨. ..................ಸರಸ್ವತಿಯೆಂಬ ತುಂಬಿ ಬಂ
ದೆಱಗುಗೆ ನೇಮಿಚಂದ್ರನ ನವಸ್ಮಿತ ಜಾತ ಮುಖಾಂಬುಜಾತದೊಳ್ ॥
(ಲೀಲಾವತೀ ಪ್ರಬಂಧ, ೧—೬)

೩. ಡಾ|| ಶಾಮಶಾಸ್ತ್ರಿಗಳವರು ತಾವೇ ಪ್ರಕಟಿಸಿದ ನಯಸೇನನ 'ಧರ್ಮಾಮೃತ'ದಲ್ಲಿ ಶ್ಲೇಷೆಯಿಂದ

ಕುಂದದ ಕೋಮಲಾಂಗ ರುಚಿಯಿಂ ಚೆಲುವಿಂಗೆಡೆಯಾಗಿ ವೃತ್ತದೊಂ
ದಂದದೊಳಿರ್ದ ಪೆರ್ಮೆಯಿನಂತೆಸೆದೊಪ್ಪುವನೇಕ ಛಂದದೊಂ ।
ದಂದದ ಯಾನದೊಂದು ರಮಣೀಯತೆಯಿಂ ಕಡು ಗಾಡಿವೆತ್ತ ವಾ
ಕ್ಸುಂದರಿ ಕೂರ್ತು ನಿಲ್ಕೆ ನಯಸೇನ ಮುನೀಂದ್ರ ಮುಖಾಬ್ಜ ಷಂಡದೊಳ್ ॥ ೧—೪

೪. ತರುಣೀ ಮಣಿ ಭಾರತಿ ಮನ್ಮತಿಗೀವುದು ಮಾಂಗಲ್ಯವನು ॥
(ಜಯನೃಪ ಕಾವ್ಯ, ೧—೭)

೫. ರತಿ ಪಾರ್ವತಿ ರಮೆ ರಾಜೀವೋದ್ಭವ
ಸತಿಯರ್ಕುಳ್ಳಿರ್ಪುರು ಪೀಠಗಳೆನೆ—(ಜಯನೃಪ ಕಾವ್ಯ, ೧—೫೫)

೬. ಪರಮ ಜಿನೇಂದ್ರ ವಾಣಿಯ ಸರಸ್ವತಿ ಬೇಱದು ಪೆಣ್ಣ ರೂಪಮಂ
ಧರಿಯಿಸಿ ನಿಂದುದಲ್ಲದುವೆ—(ಆದಿ ಪುರಾಣ, ೧—೯)

೭. ಮ॥ ಬಿ. ಸಿ. ಭಟ್ಟಾಚಾರ್ಯರವರು 'Malaviya Commemoration Volume' ದಲ್ಲಿ—

ಓಂ ಹ್ರೀಂ ನಮೋ ಭಗವತಿ ಬ್ರಹ್ಮಾಣಿ ವೀಣಾ ಪುಸ್ತಕ ಪದ್ಮಾಸನ — — ಹಂಸ ವಾಹನೇ ಶ್ವೇತ ವರ್ಣೇ ಇಹ ಷಷ್ಠೀ ಪೂಜನೇ ಆಗಚ್ಛ—(ಆಚಾರದಿನಕರ ಪ್ರತಿಷ್ಠಾ ವಿಧಿ) Ms. R. B.

ಈ ಆವತರಣವನ್ನು ಕೊಟ್ಟಿರುವುದಲ್ಲದೆ ಬಿಕಾನೇರ ಸಂಸ್ಥಾನದೊಳಗಿನ ಒಂದು ಬಹು ಸುಂದರವಾದ ಸರಸ್ವತೀ ಮೂರ್ತಿಯ ಛಾಯಾ ಚಿತ್ರವನ್ನು ಕೊಟ್ಟಿದ್ದಾರೆ.

೮. ಉತ್ತರ ಕರ್ನಾಟಕದಲ್ಲಿ ಜೈನರು ಸರಸ್ವತಿಯ ಮೂರ್ತಿಯನ್ನು ಪೂಜಿಸುವುದು ಪೂರ್ವದಿಂದ ಈವರೆಗೆ ನಡೆದುಬಂದ ಸಂಗತಿಯಾಗಿದೆ.

ಸಾರಾಂಶವೇನೆಂದರೆ, ಸರಸ್ವತಿಯ ಸಾಕಾರ ಮತ್ತು ನಿರಾಕಾರ ರೂಪದ ಸ್ತುತಿಯು ಜೈನರಲ್ಲಿದೆ. ಆದುದರಿಂದ ಆ ದೇವಿಯ ಸಾಕಾರ ಮೂರ್ತಿಯ ವರ್ಣನೆಯು ಜಾತಿ ನಿರ್ಣಾಯಕವಾಗದೆಂದು ನಮ್ಮ ಆಕ್ಷೇಪಣೆ.

೨. (ಅ) ನಿಟ್ಟೂರು ಸಂಜಯ್ಯನವರು "ಶಬ್ದದ್ರವ್ಯಂ ಶ್ವೇತಂ" ಎಂಬ ಪದದ ಮೇಲಿನ ತಮ್ಮ ಟಿಪ್ಪಣೆಯಲ್ಲಿ ಇದು ಜೈನರ ವಿಚಾರವೆಂದು ಹೇಳಿದುದು ಅವರ ಪ್ರಾಮಾಣಿಕ ಅಭಿಪ್ರಾಯವು. ಅದು ನಿಜವಾಗಿದೆಯೆಂದು ತೋರುತ್ತಿದೆ. ಏಕೆಂದರೆ ಜೈನರಿಗಿಂತಲೂ ಪೂರ್ವದಲ್ಲಿ ಆವ ಬ್ರಾಹ್ಮಣ ಮೀಮಾಂಸಕಾರನೂ ಶಬ್ದವು ದ್ರವ್ಯವೆಂದು ಹೇಳಿದಂತೆ ತೋರುವುದಿಲ್ಲ. ಭಟ್ಟೋಜಿ ದೀಕ್ಷಿತನು ಈ ವಿಷಯವನ್ನು ತನ್ನ ವ್ಯಾಕರಣದಲ್ಲಿ ಎತ್ತಿರುವನು. ಆದರೆ ಡಾ॥ ಬೆಳವಳಕರವರು ತಮ್ಮ "Systems of Sanskrit Grammar" ಎಂಬ ಗ್ರಂಥದಲ್ಲಿ, 'ಇವನು ಹೇಮಚಂದ್ರನ ಶಬ್ದಾನುಶಾಸನವನ್ನು ಅನುಸರಿಸಿರುವನು' ಎಂದು ಸ್ಪಷ್ಟವಾಗಿ ತೋರಿಸಿರುವರು. (Bhattoji's Kaumudi was largely modelled upon Hemachandra's Śabdānuśāsana, P. 46) ಹೇಮಚಂದ್ರನು ಶ್ವೇತಾಂಬರ ಜೈನನೆಂದು ಬೇರೆ ಹೇಳುವ ಕಾರಣವಿಲ್ಲ. ನಾಗೋಜಿಯು ಭಟ್ಟೋಜಿಯ 'ಮನೋರಮೆ'ಯನ್ನು ಪೂರ್ಣಗೊಳಿಸಿರುವನು. ಆದುದರಿಂದ ಇವರಿಬ್ಬರೂ "ಶಬ್ದವು ದ್ರವ್ಯ"ವೆಂದು ಹೇಳುವುದು ಜೈನರ ವಿಚಾರ ಸರಣಿಯನ್ನನುಸರಿಸುವುದೇ ಹೊರತು ಬ್ರಾಹ್ಮಣರ ವಿಚಾರ ಸರಣಿಯನ್ನು ಅನುಸರಿಸುವುದಿಲ್ಲ.

(ಆ) ಧ್ವನಿಯು ಗೋಡೆಯನ್ನು ಒಡೆಯುತ್ತದೆಂದು ಕಂಡುಬಂದಿರುವುದರಿಂದ ಅದನ್ನು ದ್ರವ್ಯವೆಂದು ತಿಳಿಯಬೇಕು; ಮತ್ತು ಈ ತತ್ತ್ವದ ಮೇಲೆಯೇ ಸ್ಫೋಟ ವಾದವು ಅವಲಂಬಿಸಿದೆಯೆಂದು ಡಾ॥ ಶಾಮಶಾಸ್ತ್ರಿಗಳವರು ಹೇಳುವ ಮಾತು ನಮಗೆ ಸಮಂಜಸವೆಂದು ಕಂಡುಬರುವುದಿಲ್ಲ. ಏಕೆಂದರೆ ಕೊಂಡಭಟ್ಟನ 'ವೈಯಾಕರಣ ಭೂಷಣ ಸಾರ'ದಲ್ಲಿ ಸ್ಫೋಟ ಶಬ್ದದ ವ್ಯಾಖ್ಯೆಯು ಹೀಗಿದೆ:—

ಸ್ಫುಟ್ಯತೆ ವ್ಯಜ್ಯತೆ ವರ್ಣೈಃ ಇತಿ ಸ್ಫೋಟಃ ।
ಅಥವಾ ಸ್ಫುಟತಿ ಅರ್ಥಃ ಅಸ್ಮಾತ್ ಇತಿ ಸ್ಫೋಟಃ । (ಪುಟ ೨೧೨)

ಎಂದರೆ, ಸ್ಫೋಟ ಶಬ್ದದ ಅರ್ಥವು ಸ್ಪಷ್ಟವಾಗು ಎಂದಾಗುವುದೇ ಹೊರತು ಒಡೆ ಎಂದಾಗುವುದಿಲ್ಲ. ಇದಕ್ಕೆ ಪತಂಜಲಿಯ ಮಹಾಭಾಷ್ಯದೊಳಗಣ ಕೆಳಗಣ ಉದಾಹರಣೆಯು ಕೊಡಲಾಗಿದೆ:—

ಅಥ ಗೌಃ ಇತ್ಯತ್ರ ಕಃ ಶಬ್ದಃ । ಯೇನೋಚ್ಚಾರಿತೇನ ಸಾಸ್ನಾ ಲಾಂಗೂಲ
ಕಕುದ ಖುರ ವಿಷಾಣಾನಾಂ ಸಂಪ್ರತ್ಯಯೋ ಭವತಿ ಸಃ ಶಬ್ದ ಉಚ್ಯತೆ.

'ಸರ್ವದರ್ಶನ ಸಂಗ್ರಹ' ದಲ್ಲಿ ಈ ಶಬ್ದದ ವ್ಯಾಖ್ಯೆಯು ಹೀಗಿದೆ:—

ಸ್ಫೋಟೋ ವರ್ಣಾತಿರಿಕ್ತೋ ವರ್ಣಾಭಿವ್ಯಂಜ್ಯೋಽರ್ಥ ಪ್ರತ್ಯಾಯಕೋ ನಿತ್ಯಃ
ಶಬ್ದಃ । (ಪುಟ ೩೦೦)

ಪಂಡಿತ ಶ್ರೀನಿವಾಸ ರಂಗಾಚಾರ್ಯರು ತಮ್ಮ ಪ್ರಬಂಧದಲ್ಲಿ ಈ ಭಾಗವನ್ನು ಬಿಟ್ಟುಬಿಟ್ಟಿರುವಂತೆ ತೋರುತ್ತಿದೆ.

ಪಂಡಿತ ಶ್ರೀನಿವಾಸ ರಂಗಾಚಾರ್ಯರ ಪೂರ್ವಜರಾದ ರಂಗರಾಮಾನುಜರ 'ಪ್ರತಿತಂತ್ರ ಪ್ರಕ್ರಿಯೆ'ಯು ನಮ್ಮ ಕೈಗೆ ಬಂದಿಲ್ಲ. ಇದನ್ನೇ ಆಧಾರವಾಗಿಟ್ಟುಕೊಂಡು ಡಾ॥ ಶಾಮಶಾಸ್ತ್ರಿಗಳವರು ಸ್ಫೋಟ ಶಬ್ದದ ವ್ಯಾಖ್ಯೆಯನ್ನು ಕೊಟ್ಟಿದ್ದಾರೆ. ಆದರೂ ರಂಗರಾಮಾನುಜರು ಕೇಶಿರಾಜನಷ್ಟು ಪೂರ್ವದವರೋ ಎಂಬುದೊಂದು ನಮ್ಮ ಆಕ್ಷೇಪ.

(ಇ) ಕುಮಾರಿಲ ಭಟ್ಟನ ಅನುಯಾಯಿಗಳಾದ ಭಾಟ್ಟ ಮೀಮಾಂಸಕರು ಶಬ್ದವನ್ನು ದ್ರವ್ಯವೆಂದು ಹೇಳುವರು. ಆದರೆ ಕುಮಾರಿಲ ಭಟ್ಟನ ಪೂರ್ವದವರಾದ ಕುಂದಕುಂದಾಚಾರ್ಯರು 'ಪಂಚಾಸ್ತಿಕಾಯ' ಗ್ರಂಥದಲ್ಲಿ ಶಬ್ದವನ್ನು ದ್ರವ್ಯವೆಂದು ಹೇಳಿದ್ದಾರೆ. ಅದನ್ನೇ ಭಾಟ್ಟ ಮೀಮಾಂಸಕರು ಒಂದು ವೇಳೆ ಅಂಗೀಕರಿಸಿರಬಹುದು.

(ಈ) 'ನ್ಯಾಯ ಸಿದ್ಧಾಂಜನ' ದಲ್ಲಿ ವೇದಾಂತ ದೇಶಿಕರು ಶಬ್ದಕ್ಕೆ ಕೆಂಪು, ಹಳದಿ, ಬಿಳಿದು ಮುಂತಾದ ಬಣ್ಣಗಳಿರುವುವೆಂದು ಹೇಳಿದ ಹಾಗೆ ಡಾ॥ ಶಾಮಶಾಸ್ತ್ರಿಗಳವರು ಪೂರ್ವ ಪಕ್ಷ ಮಾಡಿರುವರು. ಆದರೆ "ಶಬ್ದದ್ರವ್ಯಂ ಶ್ವೇತಂ" ಎಂದು ಕೇಶಿರಾಜನು ಹೇಳುವಲ್ಲಿ ಶ್ವೇತ ವರ್ಣವು ಮಾತ್ರ ಉಕ್ತವಾಗಿದೆ; ಉಳಿದ ವರ್ಣಗಳಲ್ಲ.

ಜೈನೇಂದ್ರೀಂ ವಚನಾವಲೀಂ ಮುನಿ ಮುಖಾಂಭೋಜ ಸ್ಥಿತಾಂ ಸಂಯಜೇ ।
ಸಂಪ್ರೀತ್ಯಾ ಪರಿಪೂಜಯಾಮಿ ಧವಲಾಂ ಜೈನೇಶ್ವರೀಂ ಭಾರತೀಂ ॥ (ಶ್ರುತಾಷ್ಟಕ)

ಎಂದಿರುವುದರಿಂದ ತೀರ್ಥಂಕರ ಮುಖ ನಿರ್ಗತವಾದ ವಾಣಿಯು ಪಾವಿತ್ರತೆಯ ಮೂಲಕವಾಗಿಯೂ ಮೋಕ್ಷ ದಾಯಿಯಾಗಿಯೂ ಇರುವುದರಿಂದ ಜೈನರು **ವಾಣಿಯು ಧವಲಾ,** ಎಂದರೆ ಶ್ವೇತ ವರ್ಣದವಳೆಂದು ಭಾವಿಸಿರುವರು. ಅಂತೆಯೇ ಜೈನಾಗಮದ ಟೀಕೆಯನ್ನೊಳಗೊಂಡ, ಪರಮ ಪೂಜ್ಯವೆಂದು ತಿಳಿದ ಗ್ರಂಥಗಳಿಗೆ ಧವಲ ಗ್ರಂಥಗಳೆಂದು ಹೆಸರಿರಬಹುದಾಗಿದೆ. ಇದನ್ನನುಸರಿಸಿ **ಶಬ್ದವು** ಮೋಕ್ಷ ದಾಯಿಯಾಗಿರುವುದರಿಂದ **ಶ್ವೇತವು.** ಮಿಕ್ಕ ಕೆಂಪು, ಹಳದಿ ಮುಂತಾದ ಆವ ಬಣ್ಣಗಳೂ ಅದಕ್ಕೆ ಇಲ್ಲವೆಂದು ಕೇಶಿರಾಜನ ಅಭಿಪ್ರಾಯವು.

೩. ಸರಸ್ವತಿಯು ಜೈನರಿಗೂ ಬ್ರಾಹ್ಮಣರಿಗೂ ಸಾಧಾರಣವಾಗಿರುವಂತೆ ಅವೆರಡೂ ಧರ್ಮದವರಿಗೆ ಶಬ್ದಶಾಸ್ತ್ರವು ಮೋಕ್ಷದಾಯಕವಾಗಿದೆ. ಏಕೆಂದರೆ ಯಕ್ಷವರ್ಮನ (ಈತನು ಜೈನನು) ಶಾಕಟಾಯನ ವ್ಯಾಕರಣದ ಚಿಂತಾಮಣಿಯೆಂಬ ಟೀಕೆಯಲ್ಲಿ

ಶಬ್ದಾನುಶಾಸನಂ ಸರ್ವಮರ್ಹಚ್ಛಾಸನವತ್ಪರಂ ॥—(ಆರಂಭದ ಪದ್ಯಗಳಲ್ಲಿ ಐನೆಯದು)— ಎಂದಿರುವನು. ಅರ್ಹಚ್ಛಾಸನವೆಂದರೆ ಜಿನಾಗಮವು.

ಮತ್ತೆ, ಕೆಳಗಣ ಪದ್ಯವನ್ನು ನೋಡಿರಿ:—

ಧರ್ಮಾರ್ಥ ಕಾಮ ಮೋಕ್ಷೇಷು ತತ್ತ್ವಾರ್ಥಾವಗತಿರ್ಯತಃ ।
ಶಬ್ದಾರ್ಥ ಜ್ಞಾನ ಪೂರ್ವೇತಿ ವೇದ್ಯಂ ವ್ಯಾಕರಣಂ ಬುಧೈಃ ॥

ಅರ್ಥ—ಧರ್ಮಾರ್ಥ ಕಾಮ ಮೋಕ್ಷಗಳ ಡೆಶೆಯಿಂದ ಆವಶ್ಯಕವಾದ ತತ್ತ್ವಾರ್ಥ ಜ್ಞಾನವು ಶಬ್ದಾರ್ಥ ಜ್ಞಾನ ಪೂರ್ವಿಯಾಗಿರುವುದರಿಂದ ವ್ಯಾಕರಣ ವನ್ನೋದುವುದು ಅವಶ್ಯವಾಗಿದೆ.

ಈ ರೀತಿಯಾಗಿ ಜೈನ ಗ್ರಂಥಕಾರರು ಹೇಳುತ್ತಿರುವಾಗ, ಕೇಶಿರಾಜನು ಹೇಳಿದ

ವ್ಯಾಕರಣದಿಂದೆ ಪದಮಾ
ವ್ಯಾಕರಣದ ಪದದಿನರ್ಥಮರ್ಥದೆ ತತ್ತ್ವಾ ॥
ಲೋಕಂ ತತ್ತ್ವಾಲೋಕದಿ
ನಾಕಾಂಕ್ಷಿಪ ಮುಕ್ತಿಯಕ್ಕುಮದೆ ಬುಧರ್ಗೆ ಫಲಂ ॥

ಎಂಬ ಪದ್ಯವು ಭರ್ತೃಹರಿಯ 'ವಾಕ್ಯಪದೀಯ'ವೆಂಬ ಗ್ರಂಥದ

ಅರ್ಥಪ್ರವೃತ್ತಿ ತತ್ತ್ವಾನಾಂ ಶಬ್ದಾ ಏವ ನಿಬಂಧನಂ
ತತ್ತ್ವಾವಬೋಧಶ್ಶಬ್ದಾನಾಂ ನಾಸ್ತಿ ವ್ಯಾಕರಣಾದೃತೇ ॥
ತದ್ವಾರಮಪವರ್ಗಸ್ಯ ವಾಙ್ಮಲಾನಾಂ ಚಿಕಿತ್ಸಿತಂ
ಪವಿತ್ರಂ ಸರ್ವ ವಿದ್ಯಾನಾಮಧಿವಿದ್ಯಂ ಪ್ರಕಾಶತೇ ॥—

ಈ ಕಾರಿಕೆಗಳಿಗೆ ಸರಿಹೋಗುತ್ತಿರುವುದರಿಂದ ಕೇಶಿರಾಜನು ಬ್ರಾಹ್ಮಣನಾಗಬಹುದೇ? ಬೇರೆ ಬೇರೆ ದರ್ಶನಗಳಲ್ಲಿ ವಿಚಾರ ಸಾಮ್ಯವಿರಕೂಡದೇಕೆ?

೪. ಕವಿತಾ ಪ್ರೌಢಿಯೊಳಬ್ಜಸಂಭವನೆ ಕರ್ತಾರಂ

ಎಂಬ ಪದ್ಯದಲ್ಲಿ ಕೇಶಿರಾಜನು **ಆಮ್ನಾಯ**ವೆಂಬ ಶಬ್ದವನ್ನು ಉಪಯೋಗಿಸಿದುದು ನಿಜ. ಆದರೆ **ಆಮ್ನಾಯ** ಶಬ್ದವನ್ನು ಜೈನರು ಉಪಯೋಗಿಸಕೂಡದೇಕೆ? ಆ ಶಬ್ದವು ತಮ್ಮದೆಂದು ಬ್ರಾಹ್ಮಣರು ಎಷ್ಟು ಅಧಿಕಾರವನ್ನು ತೋರಿಸಬಹುದೋ ಅಷ್ಟೇ ಅಧಿಕಾರವನ್ನು ಜೈನರೂ ತೋರಿಸಬಹುದಲ್ಲವೇ? ಜೈನರು ತಮ್ಮ ಶಾಸ್ತ್ರಗಳನ್ನು **ಆಗಮಗಳು, ಶ್ರುತಿಗಳು** ಎಂದು ಹೇಳೇ ಹೇಳುವರು. ಅವುಗಳನ್ನು **ಆಮ್ನಾಯ**ವೆಂದೂ ಹೇಳುವ ರೂಢಿಯಿದೆ. ಉದಾಹರಣೆಗಾಗಿ, ನೇಮಿಚಂದ್ರನ 'ಅರ್ಧನೇಮಿ ಪುರಾಣ'ದೊಳಗಣ ಈ ಪದ್ಯವನ್ನು ನೋಡಿರಿ:—

ಆಯತಿಯಂ ನಿಮಿರ್ಚುವರುಹಂತರ ಕೇವಲ ಬುದ್ಧಿ ಸಿದ್ಧರಿಂ
ದಾಯತ ಬೋಧ ಸಿದ್ಧಿ ವರ ಸೂರಿಗಳುತ್ತಮ ವೃತ್ತಿ ಸಂದುಪಾ ।
ಧ್ಯಾಯರ ಪಾವನ ಪ್ರತಿಭೆ ಸಾಧುಗಳಿರ್ದ ವಿಶುದ್ಧ ದರ್ಶನಾ
ಮ್ನಾಯ ಮತಿ ಪ್ರಕರ್ಷಮೆಮಗೀಗೆ ಸಮಸ್ತ ಮತಿ ಪ್ರಕಾಶಮಂ ॥ (೧—೭)

ಇಲ್ಲಿ ಕವಿಯು **ಆಮ್ನಾಯ** ಶಬ್ದವನ್ನು ಸ್ವಾಭಾವಿಕವಾಗಿ ಉಪಯೋಗಿಸಿರುವನು. ನೇಮಿಚಂದ್ರನು ಧರ್ಮಾಂತರ ಮಾಡಿದವನಲ್ಲ. ಆದುದರಿಂದ ಪೂರ್ವ ಸಂಸ್ಕಾರ ಮೂಲಕವಾಗಿ ಈ ಶಬ್ದವು ಉಪಯೋಗವಾಗಿದೆಯೆಂದು ಹೇಳಲು ಬರುವಂತಿಲ್ಲ. ಅಥವಾ, ವಾದ ಸಂದರ್ಭದಲ್ಲಿಯೂ ಆತನು ಈ ಶಬ್ದವನ್ನು ಉಪಯೋಗಿಸಿಲ್ಲ. ಆದುದರಿಂದ ಈ ಶಬ್ದವು ಹನ್ನೆರಡನೆಯ ಶತಮಾನದಲ್ಲಿ ಜೈನರಲ್ಲಿ ರೂಢವಾಗಿದ್ದಿತೆಂದು ಹೇಳಬಹುದಲ್ಲವೇ?

ಜೈನ ಭಟ್ಟಾರಕರಲ್ಲಿ ಅನೇಕರಿಗೆ "ಮಹಾವಾದ ವಾದೀಶ್ವರ, ವಾದೀಭ ಕಂಠೀರವ, ವಾದಿ ಗಿರಿ ವಜ್ರ" ಮುಂತಾದ ಬಿರುದುಗಳಿದ್ದವೆಂದು ಶಾಸನಗಳಿಂದ ತಿಳಿದುಬರುತ್ತಿದೆ. ಇತ್ಯರ್ಥವೇನೆಂದರೆ, ಆ ಕಾಲದಲ್ಲಿ ಧಾರ್ಮಿಕ ವಾದಗಳು ಅಲ್ಲಲ್ಲಿ ನಡೆಯುತ್ತಿದ್ದುವು. ಮತ್ತು ಅವರು ಪರ ಪಕ್ಷದವರ ಪೂರ್ವ ಪಕ್ಷವನ್ನು ವಾದದಲ್ಲಿ ಗೆಲ್ಲಬೇಕಾದರೆ ಅವರ ಧರ್ಮಶಾಸ್ತ್ರಗಳನ್ನು ಓದಿ ಮನನ ಮಾಡಿಕೊಳ್ಳಬೇಕಾಗುತ್ತಿತ್ತು. ಇಲ್ಲದಿದ್ದರೆ ಎದುರುಗಾರನ ಪಕ್ಷವು ವಾದಿಗೆ ತಿಳಿಯದೆ ಹೋಗಬಹುದಿತ್ತು. ಜೈನರಲ್ಲಿ ಇಂತಹ ಎಷ್ಟೋ ಜನರು ವೇದ ಶಾಸ್ತ್ರಗಳನ್ನು ಕಲಿತಿದ್ದರೆಂಬ ಬಗ್ಗೆ ಉದಾಹರಣೆಗಳನ್ನು ಕೊಡಬಹುದು. ವಿಸ್ತಾರ ಭಯದಿಂದ ಒಂದೇ ಒಂದು ಉದಾಹರಣೆಯನ್ನು ಕೊಡುವೆವು: "ಬ್ರಹ್ಮಶಿವನು (೧೧೫೦) ವತ್ಸ ಗೋತ್ರದವನು, ಜೈನ ಕವಿಯು. ಇವನು ಸೌಳ, ಕೌಳೋತ್ತರ, ವೇದ, ಸ್ಮೃತಿ ಮೊದಲಾದವುಗಳನ್ನು ಓದಿ ಅವುಗಳ ಅಸಾರತೆಯನ್ನು ತಿಳಿದಿದ್ದನು". (ಕ. ಕವಿಚರಿತೆ, ಭಾಗ ೧, ಪುಟ ೧೩೧). 'ಸಮಯ ಪರೀಕ್ಷೆ' ಯೆಂಬ ಜೈನ ಶಾಸ್ತ್ರ ಗ್ರಂಥವನ್ನು ಬರೆದ ಈ ಕವಿಯು (ಕೇಶಿರಾಜನು 'ಆಮ್ನಾಯ' ಶಬ್ದವನ್ನು ಉಪಯೋಗಿಸಿದುದರಿಂದ ಬ್ರಾಹ್ಮಣನು ಎಂಬ ವಿಚಾರ ಸರಣಿಯನ್ನನುಸರಿಸಿ) ಬ್ರಾಹ್ಮಣನಾಗಬಹುದೇ? ಮತ್ತೆ ಕೇಶಿರಾಜನು ಲಕ್ಷ್ಯಕ್ಕೆಂದು ಒಂದು ಉದಾಹರಣೆಯನ್ನು ಕೊಟ್ಟರೆ ಆತನು ಸ್ಮಾರ್ತ ಬ್ರಾಹ್ಮಣನು ಹೇಗಾಗುವನು?

ಅಲ್ಲಿಯೂ, "ಈ ತತ್ಸವಿತುರ್ವರೇಣ್ಯರಬಿದರ್ ತ್ರೈಲೋಕ್ಯ ಚೂಡಾಮಣೀ" ಎಂಬ ಉದಾಹರಣೆಯ ಕೂಡ "ನಮೋಸ್ತುಗಳಿರ್ಪಂದದಿನಿರ್ದಂ" ಎಂಬ ಎರಡನೆಯ ಉದಾಹರಣೆಯನ್ನು ಒಂದೇ ಸೂತ್ರದ ಕೆಳಗೆ ಕೊಟ್ಟಿರುವನು. ಹೀಗಿರಲು, "ತತ್ಸವಿತುರ್ವರೇಣ್ಯ" ರೆಂಬ ವೇದಮಂತ್ರವನ್ನು ಹೇಳುವ ಸ್ಮಾರ್ತ ಬ್ರಾಹ್ಮಣ ಕೇಶಿರಾಜನು ನಮೋಸ್ತುಗಳೆಂದ ಕೂಡಲೆ ಜೈನನಾಗಬಹುದೇ? "ಗೊರವ, ತ್ರಿಣೇತ್ರ, ಮಾಕೊರಲ ಭೈರವ, ನೊಸಲ ಕಣ್ಣ ದೇವ, ಪುರಹರ" ಮುಂತಾದ ಶಂಕರ ವಾಚಿ ಶಬ್ದಗಳನ್ನು ಉಪಯೋಗಿಸುವ ಕೇಶಿರಾಜನು ಸ್ಮಾರ್ತ ಬ್ರಾಹ್ಮಣನಾದ ಪಕ್ಷದಲ್ಲಿ ಅಂತಹ ಪದಗಳನ್ನೇ ಉಪಯೋಗಿಸುವ ಆಂಡಯ್ಯನೂ ಸ್ಮಾರ್ತ ಬ್ರಾಹ್ಮಣನಾಗಿರ ಬೇಕಲ್ಲವೇ?

ಹೋತೃವೆಯಾನ್, ಅಧ್ವರಿಯೈ ಭ್ರಾತೃವೆ ನೀನ್, ಉಜುದ ಋತ್ವಿಜರ್

ಎಂಬ ಶ. ಮ. ದರ್ಪಣದ (ಸೂ. ೫೫, ಪುಟ ೪೪) ಪ್ರಯೋಗಕ್ಕೆ ಪಂಪ ಭಾರತದೊಳಗಿನ

ಬ್ರಹ್ಮಾಧ್ವರ್ಯಾಗ್ನೀಧ್ರ ಮೈತ್ರಾವರುಣಾಗ್ನಿ ಪರಿಚಾರಕೋದ್ಗಾತೃ ನೇತೃ
ಹೋತೃ ಜಮದಗ್ನ್ಯಾದಿಗಳಪ್ಪ ಷೋಡಶರ್ತ್ವಿಜರ್ಕಳಿಂ ಬೇಳಲ್ವೇಱ್ದು ಧರ್ಮಪುತ್ರಂ
ಸಪತ್ನಿ ಯಜಮಾನನಾಗಿರ್ದಾಗಳ್—

ಚಾರುತರ ಯಜ್ಞ ವಿದ್ಯಾ
ಪಾರಗರ ರವಂಗಳಿಂ ಸ್ವಧಾಕಾರ ವಷ ॥
ಟ್ಕಾರ ಸ್ವಾಹಾಕಾರೋಂ
ಕಾರ ಧ್ವನಿ ನೆಗೞ್ ನೆಗೞ್ದುದಾಹುತಿ ಧೂಮಂ ॥ (೬–೩೪)

ಎಂಬ ಬ್ರಾಹ್ಮಣರಿಗುಚಿತವಾದ ಯಾಜ್ಞಿಕ ಪರಿಭಾಷೆಯ ಪ್ರಯೋಗಗಳನ್ನು ಹೋಲಿಸಿ ನೋಡಿರಿ. ಇಂತಹ ಪ್ರಯೋಗಗಳಿಂದ, ಮೇಲಿನ ವಿಚಾರ ಸರಣಿಯನ್ನನು ಸರಿಸಿ ಆದಿಪುರಾಣಕಾರನಾದ ಪಂಪನು ಬ್ರಾಹ್ಮಣನಾಗುವನು.

ಶ. ಮ. ದ. ದ ೧೦೩ನೆಯ ಸೂತ್ರದ ಕೆಳಗೆ, "ಗುರು ಮುನಿಜನಂಗಳ್ಗೆ—
ಗುರುಗಳ್—

ಶ್ರೀಮತ್ಸಮಂತಭದ್ರ
ಸ್ವಾಮಿಗಳ ಜಗತ್ಪ್ರಸಿದ್ಧ ಕವಿ ಪರಮೇಷ್ಠಿ ॥
ಸ್ವಾಮಿಗಳ ಪೂಜ್ಯಪಾದ
ಸ್ವಾಮಿಗಳ ಪದಂಗಳೀಗೆ ಶಾಶ್ವತ ಪದಮಂ ॥

ಎಂದು ಲಕ್ಷ್ಯಗಳನ್ನು ಕೊಟ್ಟಿರುವನು. ಗೌರವಾರ್ಥದ ಬೇರೆ ಲಕ್ಷ್ಯಗಳೇ ಇಲ್ಲ. ಆತನು ಸ್ಮಾರ್ತ ಬ್ರಾಹ್ಮಣನಾಗಿದ್ದ ಪಕ್ಷದಲ್ಲಿ ಜೈನಾಚಾರ್ಯರ ಹೆಸರುಗಳನ್ನು ಹೇಳುತ್ತಿದ್ದನೇ? ವ್ಯಾಸ, ವಾಲ್ಮೀಕಿ, ವಸಿಷ್ಠ, ಗೌತಮ, ಜಮದಗ್ನಿ, ವಿಶ್ವಾಮಿತ್ರ ರಂತಹ ತಪಸ್ವಿಗಳ ಮತ್ತು ವೇದ ದ್ರಷ್ಟರ ಹೆಸರುಗಳನ್ನು ಹೇಳಬಹುದಿತ್ತಲ್ಲವೆ?

ಇನ್ನೊಂದು ಲಕ್ಷ್ಯವನ್ನು ಈ ಸಂದರ್ಭದಲ್ಲಿ ಪರೀಕ್ಷಿಸುವ: "ಮಹೇಂದ್ರ ಮಹೈಶ್ವರ್ಯಂಗಳಿವೆಲ್ಲಮಧ್ರುವಂ" ಎಂಬಲ್ಲಿ ಮಹೇಂದ್ರನು ದೇವನಾದರೂ ಆತನಿಗೆ

ಆಯುಷ್ಯವಿದೆ, ಅದರ ಅವಸಾನದಲ್ಲಿ ತನ್ನ ಕರ್ಮಾನುಸಾರವಾಗಿ ಪುನರ್ಜನ್ಮ ಹೊಂದುವನು—ಇವೇ ಮುಂತಾದ ತತ್ತ್ವಗಳನ್ನು ಜೈನಾಗಮವು ಹೇಳುವುದು. ಇದನ್ನರಿತ ಕೇಶಿರಾಜನು ಬ್ರಾಹ್ಮಣನಾಗಬಹುದೋ ಜೈನನಾಗಬಹುದೋ ? ನಾವು ಇಲ್ಲಿ ತೋರಿಸಿದ ಆಧಾರಗಳು ಡಾ|| ಶಾಮಶಾಸ್ತ್ರಿಗಳವರು ತೋರಿಸಿದ ಆಮ್ನಾಯವೆಂಬ ಪದದಷ್ಟೇ ಬಲವಾದವುಗಳೆಂದು ಬೇರೆ ಹೇಳುವ ಕಾರಣವಿಲ್ಲ. ಇಂತಹ ಅನೇಕ ಆಧಾರಗಳನ್ನು ಉದ್ಧರಿಸಬಹುದಾಗಿದೆ.

೫. ಕೇಶಿರಾಜನು ವೇದಗಳಿಂದ ಲಕ್ಷ್ಯಗಳನ್ನು ಉದಾಹರಿಸಿರುವುದು ನಿಜ. ಇಷ್ಟರಿಂದಲೇ ಆತನು ಸ್ಮಾರ್ತ ಬ್ರಾಹ್ಮಣನಾಗಲಾರನೆಂದು ನಾವು ಮೇಲಿನ ವಿವೇಚನೆಯಲ್ಲಿ ತೋರಿಸಿ, ವೇದಗಳು ಮಿಥ್ಯವಾದರೂ ವಾದ ವಿವಾದದ ಅನುಕೂಲತೆಗೆಂದು ಜೈನರು ವೇದಾಭ್ಯಾಸ ಮಾಡುತ್ತಿದ್ದರೆಂದು ತೋರಿಸಿದ್ದೇವೆ. ಇದಕ್ಕೆ ಬ್ರಹ್ಮಶಿವನ ಆಧಾರವನ್ನು ಕೊಟ್ಟಿದ್ದೇವೆ. ಆದುದರಿಂದ ಅದೇ ವಿಷಯದ ಚರ್ವಿತ ಚರ್ವಣವನ್ನು ಮಾಡುವುದು ಉಚಿತವಲ್ಲ.

೬. "ಕೇಶಿರಾಜನು ಪಾಣಿನಿಯನ್ನು ಆದರ ಪೂರ್ವಕವಾಗಿ ಅನುಸರಿಸಿರುವನು (respectfully follows) ; ಭಟ್ಟಾಕಲಂಕ ದೇವನು ಪಾಣಿನಿಯನ್ನು ಮನಸೋಕ್ತವಾಗಿ ನಿಷೇಧಿಸಿರುವನು" ಎಂದು ಡಾ|| ಶಾಮಶಾಸ್ತ್ರಿಗಳವರ ಅಭಿಪ್ರಾಯವು. ಕೇಶಿರಾಜನ ದೃಷ್ಟಿಯೇ ಬೇರೆ, ಭಟ್ಟಾಕಲಂಕ ದೇವನ ದೃಷ್ಟಿಯೇ ಬೇರೆ. ಆ ಕಾಲದ ಅರಸರಲ್ಲಿನಂತೆ ಕೇಶಿರಾಜನಲ್ಲಿ ಧರ್ಮ ಸಹಿಷ್ಣುತೆಯು ಒಡೆದು ಕಾಣುತ್ತಿದೆ; ಭಟ್ಟಾಕಲಂಕದೇವನ ದೃಷ್ಟಿಯು ಜೈನ ದರ್ಶನದಲ್ಲಿ ಏಕಾಗ್ರವಾಗಿದೆ. ಆದುದರಿಂದ ಜೈನ ವ್ಯಾಕರಣಕಾರರಲ್ಲಿ ಭಟ್ಟಾಕಲಂಕದೇವನು ಆದರ್ಶವಾಗಲಾರನು.

ಕೇಶಿರಾಜನು ಪಾಣಿನಿಯನ್ನು ಅನುಸರಿಸುವ ಕಾರಣವಿಲ್ಲ. ಸಂಸ್ಕೃತ ವ್ಯಾಕರಣಕ್ಕೂ ಕನ್ನಡ ವ್ಯಾಕರಣಕ್ಕೂ ಸಂಬಂಧವಿಲ್ಲ. ಕೇಶಿರಾಜನು ಯಾರನ್ನಾದರೂ ಅನುಸರಿಸಿದರೆ ಅವರು ಕನ್ನಡ ವೈಯಾಕರಣಿಗಳಾಗಿರಬೇಕು. ಈ ಸಂಗತಿಯಾದರೂ ನಿಜವೇ. ಏಕೆಂದರೆ ರಾ|| ಬ|| ಆರ್. ನರಸಿಂಹಾಚಾರ್ಯರು ೧೯೦೩ರಲ್ಲಿ ಪ್ರಕಟಿಸಿದ ನಾಗವರ್ಮ ವಿರಚಿತ "ಕಾವ್ಯಾವಲೋಕನಂ ಮತ್ತುಂ ತತ್ಕವಿ ಕೃತ ಕರ್ಣಾಟಕ ಭಾಷಾಭೂಷಣಂ" ಎಂಬ ಗ್ರಂಥದ ಅಂತ್ಯದಲ್ಲಿರುವ ಮೂರನೆಯ ಮತ್ತು ನಾಲ್ಕನೆಯ ಪರಿಶಿಷ್ಟಗಳನ್ನು ನೋಡಿದರೆ, ಶಬ್ದಮಣಿದರ್ಪಣದ ಸೂತ್ರಗಳಲ್ಲಿಯೂ, ಲಕ್ಷ್ಯಗಳನ್ನು ಆಯ್ದುಕೊಳ್ಳುವಲ್ಲಿಯೂ ಕೇಶಿರಾಜನು ನಾಗವರ್ಮನನ್ನು ಆರಂಭದಿಂದ ಅಂತ್ಯದ ವರೆಗೆ ಒಂದೇ ಸವನೆ ಅನುಸರಿಸಿರುವನೆಂದು ಸ್ಪಷ್ಟವಾಗುವುದು. ಈ ಸಂದರ್ಭದಲ್ಲಿ ಕೇಶಿರಾಜನು ನಾಗವರ್ಮನನ್ನು ಆದರ ಪೂರ್ವಕವಾಗಿ ಅನುಸರಿಸಿರುವನೇ ಹೊರತು ಪಾಣಿನಿಯನ್ನಲ್ಲ. ನಾಗವರ್ಮನು ಜೈನನು; ಆತನು ಪಾಣಿನಿಯನ್ನು ಅನುಸರಿಸಿದ್ದಾನೆಂದು ಸಿದ್ಧವಾಗುತ್ತಿದ್ದರೆ ಅದು ಅಪ್ರಸ್ತುತ. ಉದಾಹರಣೆಗೆಂದು ಮೂರನೆಯ ಪರಿಶಿಷ್ಟದೊಳಗಿನ ಕೆಲವು ಭಾಗವನ್ನು ಕೊಡುವೆವು.

| ಕಾವ್ಯಾವಲೋಕನ, ಸೂ. ಸಂಖ್ಯೆ | ಭಾ. ಭೂ., ಸೂ. ಸಂಖ್ಯೆ | ಶ. ಮ. ದ., ಸೂ. ಸಂಖ್ಯೆ |
|---|---|---|
| ೧ | ೩, ೬ | ೬, ೧೩ |
| ೨ | ೪ | ೧೦ |
| ೩ | .. | ೯ |
| ೪ | ೭ | ೧೩ |
| ೯೧ | ೨೧೫, ೨೧೯ | ೨೨೯ |
| ೯೨ | ೨೧೬, ೨೨೧ | ೨೩೦ |
| ೯೩ | ೨೨೪, ೨೨೫ | ೨೩೪, ೨೩೬ |

ಈ ರೀತಿಯಾಗಿ ಕೇಶಿರಾಜನು ಜೈನ ನಾಗವರ್ಮನನ್ನು ಅನುಸರಿಸುವುದು ಡಾ॥ ಶಾಮಶಾಸ್ತ್ರಿಗಳವರ ವಿಚಾರ ಸರಣಿಗೆ ವಿಘಾತಕವಾಗುವುದಿಲ್ಲವೇ ?

೭. (ಅ) ಕೇಶಿರಾಜ ಮಲ್ಲಿಕಾರ್ಜುನ ಜನ್ನರು ಸ್ಮಾರ್ತ ಬ್ರಾಹ್ಮಣರೆಂದು ಹೇಳುವ ಸಂದರ್ಭದಲ್ಲಿ, ಮಲ್ಲಿಕಾರ್ಜುನನು ಚಿದಾನಂದನೆಂಬ ಉಪ ಪದವನ್ನಿಟ್ಟು ಕೊಂಡ ಮಾತ್ರಕ್ಕೆ ಆತನು ಬ್ರಾಹ್ಮಣನೆಂದು ಡಾ॥ ಶಾಮಶಾಸ್ತ್ರಿಗಳವರು ತಿಳಿದಂತೆ ತೋರುತ್ತಿದೆ. ಬ್ರಾಹ್ಮಣರಲ್ಲಿದ್ದಂತೆ ಜೈನರಲ್ಲಿಯೂ ಚಿದಾನಂದ ಎಂಬ ಪ್ರಯೋಗ ವಿರಕೂಡದೇಕೆ? ರತ್ನಾಕರವರ್ಣಿಯು ಜೈನನಾದರೂ ಆತನಿಗೆ **ನಿರಂಜನಸಿದ್ಧ, ಚಿದಂಬರ ಪುರುಷ** ಎಂಬ ಬಿರುದುಗಳಿದ್ದುವು. ಈ ಬಿರುದುಗಳಿದ್ದ ಮಾತ್ರಕ್ಕೆ ಆತನು ಬ್ರಾಹ್ಮಣನಾಗಲಾರನು. ಬೆಳಗಾವಿಯ ಮಹಾವೀರ ಪ್ರೆಸ್ಸಿನಲ್ಲಿ ೧೯೧೬ರಲ್ಲಿ ಅಚ್ಚಾದ ಸಮುದಾಯದ ಮಾಘಣಂದ್ಯಾಚಾರ್ಯರ 'ಶಾಸ್ತ್ರಸಾರ ಸಮುಚ್ಚಯ'ದ ೨೨೦ನೆಯ ಪುಟದಲ್ಲಿ **ಚಿದಾನಂದ** ಎಂಬ ಪದವು ಆ ಕಾಲದಲ್ಲಿ ಜೈನರಲ್ಲಿಯೂ ಇತ್ತೆಂದು ಕಂಠೋಕ್ತವಾಗಿ ಹೇಳಿದೆ. ಕೆಳಗಿನ ಅವತರಣವನ್ನು ನೋಡಿರಿ:—

"ಮತ್ತಂ ಪೂರ್ವ ಶ್ರುತ ಜ್ಞಾನಿಗಳುಂ ಯಥಾಖ್ಯಾತ ಶುದ್ಧ ಸಂಯಮೋಪೇತ ರಾಪ ಕ್ಷೀಣ ಕಷಾಯಮನುಳಿದ ಭಾಗದಲ್ಲಿ ಏಕತ್ವದಿಂ ನಿರ್ವಿಕಾರ ಸಹಜ ಸುಖಮಯ ವಾದ ನಿಜ ಶುದ್ಧ ಚಿದಾನಂದ ಸ್ವರೂಪವೊಂದನ್ನೇ ಭಾವಿಸುತ್ತಿರುವ ನಿರುಪಾಧಿ ಸ್ವ ಸಂವೇದನ ಜ್ಞಾನದಿಂದವಲಂಬಿಸಿ ಶ್ರುತಕ್ಕರ್ಥ ವ್ಯಂಜನ ಯೋಗಂಗಳ ಪರಾವರ್ತನವಿಲ್ಲ ದಿರುವುದು ಏಕತ್ವ ವಿತರ್ಕ ವಿಚಾರವೆಂಬೆರಡನೆಯ ಶುಕ್ಲ ಧ್ಯಾನವು."

ಮತ್ತೆ, ಜೈನರು ನಿತ್ಯವೂ ಅನ್ನುತ್ತಿರುವ ಸ್ತೋತ್ರದಲ್ಲಿ **ಚಿದಾನಂದ** ಪದವು ಬರುತ್ತಿದೆ.—

ಚಿದಾನಂದೈಕ ರೂಪಾಯ ಜಿನಾಯ ಪರಮಾತ್ಮನೇ
ಪರಮಾತ್ಮ ಪ್ರಕಾಶಾಯ ನಿತ್ಯಂ ಸಿದ್ಧಾತ್ಮನೇ ನಮಃ ॥

ಮತ್ತೆ, ಅಮೃತಚಂದ್ರನು ಕೆಳಗಿನ ಪದ್ಯದಲ್ಲಿ **ಚಿದ್ರೂಪವೆಂಬ** ಪದವನ್ನು ಪ್ರಯೋಗಿಸಿದ್ದಾನೆ.—

> ಸರ್ವ ವ್ಯಾಪ್ಯೈಕ ಚಿದ್ರೂಪ ಸ್ವರೂಪಾಯ ಪರಾತ್ಮನೇ
> ಸ್ವೋಪಲಬ್ಧಿ ಪ್ರಸಿದ್ಧಾಯ ಜ್ಞಾನಾನಂದಾತ್ಮನೇ ನಮಃ ॥

ಈ ಬಗ್ಗೆ ಡಾ॥ ಶಾಮಶಾಸ್ತ್ರಿಗಳವರು ಏನು ಹೇಳುವರು ?

ಮಲ್ಲಿಕಾರ್ಜುನನು ತನ್ನ 'ಸೂಕ್ತಿಸುಧಾರ್ಣವ'ದಲ್ಲಿ ಚಂದ್ರರಾಜ, ರುದ್ರಭಟ್ಟ, ದುರ್ಗಸಿಂಹ, ಹರಿಹರ ಮುಂತಾದ ಜೈನೇತರ ಕವಿಗಳ ಕಾವ್ಯಗಳಿಂದ ಪದ್ಯಗಳನ್ನು ಆಯ್ದುಕೊಂಡಿದ್ದರೂ, "ಜನ್ನನ ದೇಸೆ ಪಂಪನ ಗುಣಂ" ಎಂಬ ಪದ್ಯದಲ್ಲಿ ಆವ ಜೈನೇತರ ಕವಿಗಳ ಹೆಸರುಗಳನ್ನೂ ಹೇಳಿಲ್ಲ. ಆತನು ಬ್ರಾಹ್ಮಣನಾಗಿದ್ದರೆ ಇವರಲ್ಲಿ ಒಬ್ಬನ ಹೆಸರನ್ನಾದರೂ ಹೇಳಬಹುದಿತ್ತು.

(ಆ) ಜನ್ನನು 'ಯಶೋಧರ ಚರಿತೆ'ಯಲ್ಲಿ—

> ಭಾಳಲೋಚನಂ ಕವಿ ಸುಮನೋಬಾಣನ ಮಗನೆಂದಖಿಳ ಕ್ಷೋಣಿಗೆ ಪೆಸರಾಯ್ತು

ಎಂದು ಕಂಠೋಕ್ತವಾಗಿ ಹೇಳಿರುವಲ್ಲಿ, **ಮಗನು** ಎಂದರೆ **ಶಿಷ್ಯನು** ಎಂದು ಹೇಳುವುದು ಹೇಗೆ? ರಾಘವಾಂಕನು ಹರಿಹರನ ಸೋದರದಳಿಯನು, ಆವನ ಶಿಷ್ಯನು. "ಪರಮಾನಂದಾಬ್ಧಿ ಪಂಪಾಪುರದರಸ ವಿರೂಪಾಕ್ಷ ಸಾಕ್ಷಾತ್ಸುಪುತ್ರಂ" ಎಂದು ಹರಿಹರನು ತನ್ನನ್ನು ಹೊಗಳಿಕೊಂಡಿದ್ದಾನೆ. ಈತನು ಪವಾಡದ ಪುರುಷನು. ಆದುದರಿಂದಲೇ ರಾಘವಾಂಕನು ತನ್ನನ್ನು "ಹರೀಶ್ವರನ ವರ ಸುತಂ" ಎಂದು ಹೇಳಿಕೊಂಡಿದ್ದಾನೆ. ಜೈನಭಟ್ಟಾರಕರು ತಮ್ಮ ಶಿಷ್ಯರನ್ನು **ಮಕ್ಕಳು, ಸುತರು, ಪುತ್ರರು** ಎಂದು ಹೇಳಿರುವುದುಂಟು. ಆದರೆ ಶ್ರಾವಕರು ತಮ್ಮ ಮಕ್ಕಳನ್ನು ಮಾತ್ರ ಮಕ್ಕಳು, ಸುತರು, ಪುತ್ರರು, ನಂದನರು ಎಂದು ಕರೆಯುವರು. ಸುಮನೋಬಾಣನು ಮುನಿಯು, ಅಥವಾ ಭಟ್ಟಾರಕನು ಎಂದು ಎಲ್ಲಿಯೂ ಹೇಳಿಲ್ಲ. ಆದುದರಿಂದ ಆತನು ಶ್ರಾವಕನೇ ಇರಬೇಕೆಂದು ಊಹಿಸಿದರೆ ತಪ್ಪಾಗದು. ಹೀಗಿದ್ದ ಪಕ್ಷದಲ್ಲಿ ಜನ್ನನು ಸುಮನೋಬಾಣನ ಮಗನಾಗುವನೇ ಹೊರತು ಶಿಷ್ಯನಾಗಲಾರನು.

ಯದ್ಯಪಿ, 'ಯಶೋಧರ ಚರಿತೆ'ಯೊಳಗಿನ ಮೇಲಿನ ಪದ್ಯ ಭಾಗದಿಂದ, ಜನ್ನನು ಸುಮನೋಬಾಣನ ಶಿಷ್ಯನಾದರೆ, ಕೇಶಿರಾಜನು "ಮಲ್ಲಿಕಾರ್ಜುನ ಸುತನೆಂ" ಎಂದು ಹೇಳುವಲ್ಲಿ ಅವನು ಮಲ್ಲಿಕಾರ್ಜುನನ ಶಿಷ್ಯನಾಗಬೇಕಲ್ಲವೇ? "ಶಾಂತೀಶ ನಂದನಂ" ಎಂದು ಅಗ್ಗಳನು ತನ್ನನ್ನು ವಿಶೇಷಿಸಿಕೊಂಡಿರುವುದರಿಂದ ಅವನು ಶಾಂತೀಶನ ಶಿಷ್ಯನಾಗಬಹುದೇ ?

ಸುಮನೋಬಾಣನಿಗೆ ಶಂಕರನೆಂಬ ಹೆಸರು ಇದ್ದರೂ ಇರಬಹುದು. ಈ ಬಗ್ಗೆ ಸಾಕಷ್ಟು ಆಧಾರಗಳು ದೊರೆತಿಲ್ಲ. ಆದರೆ ಶಂಕರ, ಗಂಗೆ ಎಂಬ ಹೆಸರುಗಳ ಮೇಲಿಂದ ಭ್ರಮಿಸಿ ಅವರು ಬ್ರಾಹ್ಮಣರೆಂದು ಹೇಳುವುದು ಹೇಗೆ? ಜೈನರಲ್ಲಿಯೂ

ಶಂಕರ, ಗಂಗಾಧರ, ಗಂಗಪ, ನೀಲಕಂಠ, ಗಂಗೆ, ಕಾಳವ್ವೆ, ಶಿವದೇವಿ ಮುಂತಾದ ಹೆಸರುಗಳು ಪೂರ್ವದಿಂದ ಇಲ್ಲಿಯ ವರೆಗೆ ನಡೆಯುತ್ತ ಬಂದಿವೆ.

ಜನ್ನನು ಕಮ್ಮೆ ವಂಶದವನೂ ಕಾಶ್ಯಪ ಗೋತ್ರದವನೂ ಆದುದರಿಂದ ಬ್ರಾಹ್ಮಣನಾಗಬಹುದೇ? ಆಚಣ್ಣನು ಭಾರದ್ವಾಜ ಗೋತ್ರದವನು; 'ವರ್ಧಮಾನ ಪುರಾಣ'ವನ್ನು ಬರೆದಿದ್ದಾನೆ. ಭಾಸ್ಕರನು ವಿಶ್ವಾಮಿತ್ರ ಗೋತ್ರದವನು; 'ಜೀವಂಧರ ಚರಿತೆ'ಯನ್ನು ಬರೆದಿದ್ದಾನೆ. ರಟ್ಟಕವಿ, ಅಥವಾ ಅರ್ಹದ್ದಾಸನು ಭಾರದ್ವಾಜ ಗೋತ್ರದವನು. ಮಹಾಬಲ ಕವಿಯು ಭಾರದ್ವಾಜ ಗೋತ್ರದವನು. ಬ್ರಹ್ಮಶಿವನು ವತ್ಸ ಗೋತ್ರದವನು. ಇವರೆಲ್ಲರೂ ಜೈನರಾದರೂ ಬ್ರಾಹ್ಮಣರ ಗೋತ್ರಗಳಿಗೆ ಸರಿಹೋಗುವ ಗೋತ್ರಗಳು ಇವರಿಗಿವೆ.

(ಇ) "..................ಜನ್ನಂಗುಪಾಧ್ಯಾಯನಿಂ |
ದು ನೃಸಿಂಹ ಕ್ಷಿತಿಪಾಲನಲ್ಲಿ ಕಟಕೋಪಾಧ್ಯಾಯನಾರೆಂಬ ಸೂ
ಕ್ತಿ ನವೀನೋಜ್ವಲ ಬಾಣನಪ್ಪ ಸುಮನೋಬಾಣಂ ಕವಿ ಶ್ರೇಷ್ಠರೊಳ್ ||"

ಎಂಬ ಪದ್ಯದ ಮೇಲಿಂದ, ಜನ್ನನ ತಂದೆಯೂ ಗುರುವೂ ಬ್ರಾಹ್ಮಣರಾಗಿರಲು, ಜನ್ನನು ಮಾತ್ರ ಮತಾಂತರ ಮಾಡಿ ಜೈನನಾಗಿರಬೇಕೆಂದು ಡಾ|| ವೆಂಕಟಸುಬ್ಬಯ್ಯನವರು ಅಭಿಪ್ರಾಯಪಡುವಂತೆ ಡಾ|| ಶಾಮಶಾಸ್ತ್ರಿಯವರೂ ಅಭಿಪ್ರಾಯಪಟ್ಟಿದ್ದಾರೆ. ಜನ್ನನು ಧರ್ಮಾಂತರ ಮಾಡಿದುದು ನಿಜವಿದ್ದ ಪಕ್ಷದಲ್ಲಿ ಆ ವಿಷಯವನ್ನು ತನ್ನ ಗ್ರಂಥದಲ್ಲಿ ಆತನು ಹೇಳಲಿಲ್ಲವೇಕೆ? ಆದಿ ಪಂಪನು ತನ್ನ ಭಾರತದ ಅಂತ್ಯದಲ್ಲಿ ತನ್ನ ತಂದೆಯು ಅಭಿರಾಮ ದೇವನೆಂದೂ ಆತನು ಜಿನ ಧರ್ಮವನ್ನು ಅವಲಂಬಿಸಿದನೆಂದೂ ಹೇಳಿದ್ದಾನೆ. ಜನ್ನನೂ ಹೀಗೆ ಹೇಳಲು ಆತನಲ್ಲಿ ಧೈರ್ಯವಿರಲಿಲ್ಲವೇ? ಅಥವಾ, ದೇವಚಂದ್ರನು ರಾಜಾವಳೀ ಕಥೆಯಲ್ಲಿ, ರತ್ನಾಕರವರ್ಣಿಯು ಧರ್ಮಾಂತರ ಮಾಡಿದ ಸಂಗತಿಯನ್ನು ವಿವರಿಸಿದಂತೆ, ಜನ್ನನ ವಿಷಯವನ್ನೇಕೆ ಎತ್ತಲಿಲ್ಲ?

ಜನ್ನ, ಮಲ್ಲಿಕಾರ್ಜುನ, ಸುಮನೋಬಾಣ, ಕೇಶಿರಾಜ ಮುಂತಾದ ಕವಿಗಳ ಇತಿಹಾಸದ ಬಗ್ಗೆ ಬೇಕಾಗುವ ಪ್ರತ್ಯಕ್ಷ ಆಧಾರಗಳು ಇದುವರೆಗೂ ದೊರೆತಿಲ್ಲ; ದೊರೆತ ಅಪ್ರತ್ಯಕ್ಷ ಆಧಾರಗಳು ಅವರ ಇತಿಹಾಸ ನಿರ್ಣಯಕ್ಕೆ ಸಾಕಾಗುವಂತಿಲ್ಲ. ಆದುದರಿಂದ ಆವುದಾದರೊಂದು ನಿರ್ಣಯವನ್ನು ಕೊಟ್ಟರೆ ಅದು ಯುಕ್ತಿಯುಕ್ತವಾದೀತೆ?

೮. ಕೇಶಿರಾಜನು ಸ್ಮಾರ್ತ ಬ್ರಾಹ್ಮಣನೆಂದು ಹೇಳುವ ಸಂದರ್ಭದಲ್ಲಿ ಚೆನ್ನರಾಯಪಟ್ಟಣದ ೨೪೨ ಮತ್ತು ೨೪೪ ನಂಬರಿನ ಶಿಲಾ ಶಾಸನಗಳು ಬಲವತ್ತರವಾದ ಪ್ರಮಾಣಗಳೆಂದು ಡಾ|| ಶಾಮಶಾಸ್ತ್ರಿಗಳವರು ಹೇಳುವರು.

(ಅ) ಹಾಸನ ಡಿಸ್ಟ್ರಿಕ್ಟು ಚೆನ್ನರಾಯಪಟ್ಟಣದ ೨೪೪ನೆಯ ಶಾಸನದಲ್ಲಿ ಇಬ್ಬರು ಕೇಶವರಾಜರು ಉಕ್ತರಾಗಿರುವರು. ಮೊದಲನೆಯವನು ಬಿಟ್ಟರಸನ ಮಗನು:

ಅವರೊಳಗೆ ಬಿಟ್ಟರಾಜಂ
ಗವಾತನರ್ಧಾಂಗಲಕ್ಷ್ಮಿ ಲಕ್ಷ್ಮೀವಧುಗಂ ||

ಭುವನ ಸ್ತುತ್ಯರಗಸ್ತ್ಯ
ಪ್ರವರ ಪ್ರಖ್ಯಾತರೆಳ್ವರಾದರ್ ತನುಜರ್ ॥

ಹರಿಹರದೇವ ಮಾಧವ ಚಮೂವರನಾಚಣ ದಂಡನಾಥ ದಾ
ವರಸ ಜಗಜ್ಜನ ಪ್ರಣುತ ಕೇಶವ ಮಲ್ಲಪ ಮಾರಮಯ್ಯನೆಂ ।
ಬುರುತರ ತೇಜರೂರ್ಜಿತ ಯಶೋನಿಧಿಗಳ್ ಮಗಳೊರ್ವಳಾದಳಂ
ಬುರುಹ ದಳಾಕ್ಷಿ ಸಚ್ಚರಿತ ಸಂಯುತೆ ಕಂಚಲದೇವಿಯೆಂಬವಳ್ ॥

ಎರಡನೆಯವನು ಈ ಏಳು ಮಂದಿಯೊಳಗೆ ಆರನೆಯವನಾದ ಮಲ್ಲಪನ ಮಗನು:

ಮಲ್ಲ ಚಮೂವರಾಂಗನೆಗೆ ನಾಗಲದೇವಿಗೆ ಪುಟ್ಟಿದರ್ ಮಹೀ
ವಲ್ಲಭ ಮಂತ್ರಿ ಮುಖ್ಯರೆನಿಸಲ್ ವಿಭು ದಾವಣ ದಂಡನಾಥನುಂ ।
ಫುಲ್ಲ ಶರೋಪಮಾಕೃತಿಯ ಕೇಶವದೇವನುಮರ್ಥಿಗರ್ಥಮಂ
ನಿಲ್ಲದೆ ನಿಚ್ಚಲುಂ ಕೊಡುವ ಕೂರ್ಮೆಯ ಬೆಟ್ಟಚಮೂಪನೆಂಬನುಂ ॥

ಈ ಇಬ್ಬರು ಕೇಶವರಾಜರಲ್ಲಿ ಮೊದಲನೆಯವನ, ಎಂದರೆ ಬೆಟ್ಟರಸನ ಮಗನ ಬಗ್ಗೆ—

"ಮಹಾ ಪ್ರಧಾನನಧಿನಾಥ ಪ್ರಾಜ್ಯ ರಾಜ್ಯಕ್ಕೆ ತಾಂ ಪ್ರಾಕಾರಂ ತಾಂ ಪ್ರಭು ಕೇಶಿರಾಜಂ", "ಹೊಯ್ಸಳೋರ್ವೀಶ ಮಂತ್ರಿಗಳೊಳ್ ಕೇಶವ ದಂಡ ನಾಯಕಂ", "ಕೇಶವ ಚಮೂಪಂ", "ಮಂತ್ರಿ ಶಿಖಾಮಣಿ ಕೇಶಿರಾಜನಾ."

ಎಂದು ಹೇಳಿರುವುದರಿಂದ ಈತನು ಹೊಯ್ಸಳ ವೀರಬಲ್ಲಾಳನಲ್ಲಿ ಮಹಾ ಪ್ರಧಾನಿಯೂ ದಂಡನಾಯಕನೂ ಆಗಿದ್ದನು. ದತ್ತಿಯನ್ನು ಬಿಡುವ ಸಂದರ್ಭದಲ್ಲಿ

ಶ್ರೀಮನ್ಮಹಾ ಪ್ರಧಾನಂ ಬಾಹತ್ತರ ನಿಯೋಗಾಧಿಪತಿ ಕೇಶಿರಾಜ ಚಮೂಪತಿ
ಶಕ ವರ್ಷ ಸಾಸಿರದ ನೂರ ಮೂವತ್ತೊಂದನೆಯ ಶುಕ್ಲ ಸಂವತ್ಸರದ. . . . .

ಎಂದು ಹೇಳಿರುವುದರಿಂದ, ಇಲ್ಲಿ ಉಕ್ತನಾದ ಕೇಶಿರಾಜನು ಬೆಟ್ಟರಸನ ಐದನೆಯ ಮಗನೇ ಎಂಬುದು ಸಿದ್ಧ. ಎರಡನೆಯ ಕೇಶಿರಾಜನು ಮಲ್ಲಪನ ಮಗನು. ಇವನು "ಕೇಶವ ಚಮೂವರಂ" ಎಂದು ಮಾತ್ರ ಹೇಳಲಾಗಿದೆ. ಈ ಕೇಶಿರಾಜನ ವಿಷಯ ವಾಗಿ ಮತ್ತೆ ಏನೂ ಹೇಳಿಲ್ಲ; ಆದರೆ ಮೊದಲನೆಯ ಕೇಶಿರಾಜನ, ಎಂದರೆ ಬೆಟ್ಟರಸನ ಮಗನ ಸ್ತುತಿಯು ಬಹಳ ವಿಸ್ತಾರವಾಗಿದೆ:

ಗುರು ದೇವ ದ್ವಿಜ ಪೂಜೆಯೊಳ್ ಸತಿ ಹಿತ ವ್ಯಾಪಾರದೊಳ್ ಬಾಂಧವೋ
ತ್ಕರ ಸಂರಕ್ಷಣದೊಳ್ ಕಳಾ ವಿಭವದೊಳ್ ವಿಕ್ರಾಂತದೊಳ್ ತನ್ನೊಳಾ ।
ದ್ಧೊರೆಯೆಂಬುನ್ನತಿವೆತ್ತು ಕೇಶವ ಚಮೂಪಂ ವೀರಬಲ್ಲಾಳ ಭೂ
ವರನಾಸ್ಥಾನದೊಳಿರ್ದಪಂ ಮಣಿಗಳೊಳ್ ಮಾಣಿಕ್ಯಮಿರ್ಪಂದದಿಂ ॥

ಇದರ ಹೊರತು ಇವನನ್ನು ಹೊಗಳುವ ಆರು ಪದ್ಯಗಳಿವೆ. ಈ ಶಾಸನವು ಶಕ ವರ್ಷ ೧೧೩೧ರಲ್ಲಿ, ಕ್ರಿ. ಶ. ೧೨೦೯ರಲ್ಲಿ, ಬರೆಯಲಾದುದು. ಆದುದರಿಂದ ಈತನು ಶಬ್ದಮಣಿ ದರ್ಪಣಕಾರನಾಗಿರಲಾರನು.

ಚೆನ್ನರಾಯಪಟ್ಟಣದ ೨೪೨ನೆಯ ಶಾಸನವು ಕ್ರಿ. ಶ. ೧೨೫೨ರದು. ಇದರಲ್ಲಿಯೂ, ದತ್ತಿಯನ್ನು ಬಿಟ್ಟವನು ಕೇಶಿರಾಜನು. ಈ ಶಾಸನದ ಎರಡನೆಯ ಪದ್ಯದಲ್ಲಿ—

..................................ಪುಣ್ಯಾ
ಶ್ರಯವಿರ್ಪಂತಿರ್ದಪಂ ಶ್ರೀ ಶ್ರುತಿ ವಿಹಿತ ಪುರಾಣೋಕ್ತ ಮಾರ್ಗಕ್ಕೆ ॥

ಇವೇ ಮುಂತಾದ ವಿಶೇಷಣಗಳಿಂದ ಕೇಶವನನ್ನು ಹೊಗಳಿದೆ. ನಾಲ್ಕನೆಯ ಪದ್ಯದಲ್ಲಿ ಬೆಟ್ಟ ಚಮೂಪನನ್ನು ಹೊಗಳಿದೆ. ಬೆಟ್ಟಚಮೂಪನು ಕೇಶವ ದಂಡನಾಯಕನ ತಮ್ಮನು. ಇವರಿಬ್ಬರೂ ಮಲ್ಲಪನ ಮಕ್ಕಳು. ದತ್ತಿಯಲ್ಲಿಯೂ

ಶ್ರೀಮ....ಚಕ್ರವರ್ತ್ತಿ ವೀರ ಸೋಮೇಶ್ವರ ದೇವರಸರ ಪಾದ ಪದ್ಮೋಪ
ಜೀವಿಗಳಪ್ಪ ಶ್ರೀಮನ್ಮಹಾ ಪ್ರಧಾನಂ ಕೇಶೀರಾಜ ದಣ್ಣಾ....ಲ್ಲಯ್ಯ ದಣ್ಣಾಯಕ
ಬೆಟ್ಟಯ್ಯ ದಣ್ಣಾಯಕನವರ ಮಕ್ಕಳ್

ಎಂದು ಹೇಳಿರುವುದರಿಂದ, ದತ್ತಿಯ ಕಾಲಕ್ಕೆ ಬೆಟ್ಟಯ್ಯ ದಣ್ಣಾಯಕರು ಕಾಲವಾಗಿರಬೇಕೆಂದು ತೋರುತ್ತಿದೆ. ಏನೇ ಇರಲಿ, ಈ ದತ್ತಿಯು ೧೨೫೨ರಲ್ಲಿ ಬಿಡಲ್ಪಟ್ಟಿರುವುದರಿಂದಲೂ, ಕೇಶಿರಾಜ ದಣ್ಣಾಯಕರೂ ಬೆಟ್ಟಯ್ಯ ದಣ್ಣಾಯಕರೂ ಉಕ್ತರಾಗಿರುವುದರಿಂದಲೂ ಈ ದಣ್ಣಾಯಕ ದ್ವಯರು ೨೪೪ನೆಯ ಶಾಸನದಲ್ಲಿ ಹೇಳಿದ ಕೇಶಿರಾಜನ ತಮ್ಮನ ಮಕ್ಕಳೆಂಬುದು ಸಿದ್ಧ. ಈ ಕೇಶಿರಾಜನಿಗೆ ಮಹಾ ಪ್ರಧಾನನೆಂಬ ಬಿರುದೂ ಇರುವುದರಿಂದ, ೨೪೪ರಲ್ಲಿ ಉಕ್ತವಾದ ದತ್ತಿಯನ್ನು ಬಿಟ್ಟ ಕೇಶಿರಾಜನೇ ೨೪೨ರಲ್ಲಿಯೂ ಉಕ್ತನಾಗಿರುವನೆಂದು ಡಾ॥ ಶಾಮಶಾಸ್ತ್ರಿಗಳವರು ಭ್ರಮಿಸಿರುವರೋ? ಈ ವಿಷಯವನ್ನು ಅವರು ಸ್ಪಷ್ಟ ಮಾಡಿಲ್ಲ; ಈ ಕೇಶಿರಾಜನು ಶಬ್ದಮಣಿದರ್ಪಣಕಾರನು ಹೇಗೆ ಎಂದು ಸಿದ್ಧಮಾಡುವ ಗೋಜಿಗೂ ಅವರು ಹೋಗಿಲ್ಲ; ಇವರಿಬ್ಬರೂ ಒಂದೇ ಎಂದು ಗ್ರಹಿಸಿದಂತೆ ತೋರುತ್ತಿದೆ. ಇವರಿಬ್ಬರೂ ಹೇಗೆ ಒಂದೇ ಆಗುವರು? ಏಕೆಂದರೆ, ಉಕ್ತ ಎರಡೂ ಶಾಸನಗಳಲ್ಲಿಯ ಕೇಶಿರಾಜನಲ್ಲಿ ಒಬ್ಬನಾದರೂ ವೈಯಾಕರಣಿ, ಶಬ್ದ ಶಾಸ್ತ್ರಕಾರ, ಅಥವಾ ಗ್ರಂಥಕಾರ ಎಂದು ಹೇಳಿಲ್ಲ. ೨೪೪ರಲ್ಲಿ ಮಾತ್ರ, ದತ್ತಿಯನ್ನು ಬಿಟ್ಟ (ಕ್ರಿ. ಶ. ೧೨೧೯) ಕೇಶಿರಾಜನು "ಕಳಾ ವಿಭವದೊಳ್ ವಿಕ್ರಾಂತದೊಳ್ ತನ್ನೊಳಾರ್ದೊರೆ" ಎಂದು ಹೇಳಿದ ಮಾತ್ರಕ್ಕೆ ಆತನು ಗ್ರಂಥಕಾರನಾಗಲಾರನು. ಒಂದು ಪದ್ಯದಲ್ಲಿ, (ಕೇಶವನ ದೊಡ್ಡಪ್ಪ=ಗೌರಿಯರ ಮಗನು) ಮಾಣಿಕ್ಯ ದಂಡಾಧಿಪನು ಸಾಹಿತ್ಯದೊಂದಿರ್ಕೆಯೆಂದು ಉಕ್ತನಾಗಿದ್ದಾನೆ. ಈ ವಿಶೇಷಣವು ಕೇಶಿರಾಜನ ವಿಷಯವಾಗಿ ಉಕ್ತವಾಗಿದ್ದರೆ ಅವನು ಶಬ್ದಮಣಿದರ್ಪಣಕಾರನಿರಬಹುದೋ ಎಂಬ ಸಂಶಯಕ್ಕೆ ಕಾರಣವಾಗುತ್ತಿತ್ತು. ಈ ಕಾರಣಗಳಿಂದ, ಈ ಶಾಸನಗಳಲ್ಲಿ ಹೇಳಿದ ಇಬ್ಬರು ಕೇಶಿರಾಜರೊಳಗೆ ಒಬ್ಬನಾದರೂ ದರ್ಪಣಕಾರನಾಗಲಾರನು. ಇದೂ ಅಲ್ಲದೆ, "ಯಾದವ ಕಟಕಾಚಾರ್ಯ ಸುಮನೋಬಾಣನ ಗೌಹಿತ್ರನೆ ನಾಂ" ಎಂದು ಅಭಿಮಾನದಿಂದ ಹೇಳುತ್ತಿದ್ದ ಶಬ್ದಮಣಿದರ್ಪಣಕಾರನ ಮುತ್ತಜ್ಜನ ಹೆಸರು ಈ ಶಾಸನಗಳಲ್ಲಿ ಇಲ್ಲವೇ ಇಲ್ಲ. ಮತ್ತು ಮಲ್ಲಪನು

ಮಲ್ಲಿಕಾರ್ಜುನನಾಗಿದ್ದ ಪಕ್ಷದಲ್ಲಿ ಆತನಿಂದ ರಚಿತವಾದ ಸೂಕ್ತಿಸುಧಾರ್ಣವದ ಹೆಸರೂ ಈ ಶಾಸನಗಳಲ್ಲಿ ಬಂದಿಲ್ಲ.

ಡಾ॥ ಶಾಮಶಾಸ್ತ್ರಿಗಳವರು ವಿಷಯಾಂತರ ಮಾಡಿ, ರನ್ನನ 'ಗದಾಯುದ್ಧ' ವನ್ನು ತಿದ್ದಿದ ಕೇಶಿ ದಂಡನಾಯಕನು ಇದೇ ವಂಶದವನಾಗಿರಬಹುದು ಎಂದು ಹೇಳುವರು. ಆದರೆ ಈ ವಂಶದ ಮೂಲ ಪುರುಷ ರಾಮ ದಂಡಾಧಿಪನು ವಿನಯಾದಿತ್ಯ ಹೊಯ್ಸಳನ (೧೦೪೭–೧೦೭೬) ಕಾಲದವನೆಂದು ತಿಳಳನೆಯ ಶಾಸನದೊಳಗಣ

ವಿನಯಾದಿತ್ಯನ ಸಚಿವಂ
ವಿನೂತ ಶೌರ್ಯಾಬ್ಧಿ ರಾಮ ದಂಡಾಧಿಪನಾ ॥

ಎಂಬ ಪದ್ಯದಲ್ಲಿ ಹೇಳಿದೆ. ಇವನ ಮೊಮ್ಮೊಗನೊಬ್ಬನು ಕೇಶಿರಾಜನು. ಅವನು ರನ್ನನ 'ಗದಾಯುದ್ಧ' ವನ್ನು ತಿದ್ದಿರಲಾರನು. ಆದುದರಿಂದ ಈ ವಂಶದ ದಂಡನಾಯಕನೊಬ್ಬನು ರನ್ನನ ಗದಾಯುದ್ಧವನ್ನು ತಿದ್ದಿದನೆಂದು ಹೇಳುವುದು ಹೇಗೆ?

ಈ ಎರಡೂ ಶಾಸನಗಳಲ್ಲಿ ಕೇಶಿರಾಜನ ವಂಶದವರು ಬ್ರಾಹ್ಮಣರೆಂದು ಒಮ್ಮೆಯೂ ಹೇಳಿಲ್ಲ. ಹೀಗಿರಲು, ಕೇಶಿರಾಜನು ಬ್ರಾಹ್ಮಣನೆಂದೂ, ಬ್ರಾಹ್ಮಣರು ದಂಡನಾಯಕರಾಗಿ ಶೌರ್ಯವನ್ನು ತೋರಿಸಿದ್ದಾರೆಂದು ಅಭಿಮಾನಪಡುವುದೂ ಆಶ್ಚರ್ಯಕರವೇ. ಬ್ರಾಹ್ಮಣರು ಶೌರ್ಯ ಸಂಪನ್ನರೆಂದೆನ್ನಲು ಪರಶುರಾಮ, ದ್ರೋಣ, ಕೃಪ, ಅಶ್ವತ್ಥಾಮರ ಉದಾಹರಣೆಗಳಿಲ್ಲವೇ? ಆಧುನಿಕರಲ್ಲಿ ಪೇಶ್ವ ಬಾಜೀರಾಯ, ವಿಶ್ವಾಸರಾಯ, ರಘುನಾಥರಾಯ ಮುಂತಾದವರ ಉದಾಹರಣೆಗಳು ಸಾಕಿಲ್ಲವೇ?

೯. ಕೊನೆಯಲ್ಲಿ, ಜೈನರು ಯುದ್ಧಮಾಡುವುದು ಅಹಿಂಸಾ ತತ್ತ್ವಕ್ಕೆ ವಿರೋಧಕವಾಗುವುದರಿಂದ ಯಾದವ ಕಟಕಾಚಾರ್ಯ ಸುಮನೋಬಾಣನ ದೌಹಿತ್ರನಾದ ಕೇಶಿರಾಜನು ಜೈನನಲ್ಲವೆಂದು ಡಾ॥ ಶಾಮಶಾಸ್ತ್ರಿಗಳವರು ಹೇಳಿರುವರು. ಇದು ಯುಕ್ತಿಯುಕ್ತವಲ್ಲವೆಂದು ನಮಗೆ ತೋರುತ್ತಿದೆ. ಇಂತಹ ಅವರ ಗ್ರಹಿಕೆಯು ತಪ್ಪು ತಿಳಿವಳಿಕೆಯಿಂದ ಆಯಿತೆಂದು ನಾವು ಹೇಗೆನ್ನಬೇಕು? ತಮ್ಮ ಪಾಂಡಿತ್ಯದಿಂದ ಶಾಮಶಾಸ್ತ್ರಿಗಳವರು ಈ ಪೂರ್ವದಲ್ಲಿ ನಮ್ಮ ಕಣ್ಣು ಕುಕ್ಕಿಸಿರುವರು. ಆದುದರಿಂದ ಅವರ ಮೇಲೆ ಇಂತಹ ದೋಷವನ್ನು ನಾವು ಹೊರಿಸಲಾರೆವು. ಅವರ ವಿಚಾರಗಳಿಗೆ ಲೇಖನ ಸ್ವರೂಪವನ್ನು ಕೊಟ್ಟವರ ದೋಷವು ಇದು ಇರಬಹುದು. ಇರಲಿ, ಜೈನರ ಅಹಿಂಸಾ ತತ್ತ್ವವು ಯುದ್ಧಕ್ಕೆ ಪ್ರತಿಬಂಧಕವಲ್ಲ. ಜೈನ ಪುರಾಣಗಳಲ್ಲಿ ಜೈನ ರಾಜರು ಮಾಡಿದ ಯುದ್ಧಗಳ ವರ್ಣನೆಗಳಿವೆ. ಆದುದರಿಂದ ಅಹಿಂಸೆಯು ಯುದ್ಧಕ್ಕೆ ಪ್ರತಿಬಂಧಕವಲ್ಲೆಂತಲೇ ಸಿದ್ಧವಾಗುವುದು. ಮುನಿಗಳ ಅಹಿಂಸಾ ವ್ರತವು ಬೇರೆ, ಶ್ರಾವಕರ ಅಹಿಂಸಾ ವ್ರತವು ಬೇರೆ: ಒಂದು ಮಹಾ ವ್ರತವು, ಮತ್ತೊಂದು ಅಣು ವ್ರತವು. ಮುನಿಗಳ ಮಹಾ ವ್ರತದ ಮೇಲಿಂದ ಶ್ರಾವಕನ ಅಣು ವ್ರತವನ್ನು ಊಹಿಸುವುದು ಸರಿಯಾಗದು. ಪುರಾಣಗಳನ್ನುಳಿದರೆ ಜಿನಾಗಮದ ಬಗ್ಗೆ ಭಕ್ತಿ ವಿಶ್ವಾಸಗಳನ್ನುಳ್ಳ ಮತ್ತು ಅನೇಕ ಯುದ್ಧಗಳನ್ನು ಮಾಡಿದ ಜೈನ ರಾಜರು ಹಿಂದುಸ್ಥಾನದ

ಇತಿಹಾಸದಲ್ಲಿ ಅನೇಕಾನೇಕವಾಗಿ ಸಿಕ್ಕುವರು. ಮಹಾಮೇಘ ವಾಹನಖಾರವೇಲನು ಜೈನನು; ಆಶಾಶಾಹ, ವಿಮಲಶಾಹ, ವಸ್ತುಪಾಲ, ತೇಜಪಾಲ, ಕುಮಾರಪಾಲ, ಚಾವುಂಡರಾಯ, ಗಂಗರಾಜರು, ರಟ್ಟರಾಜರು, ಜಯನೃಪ ಕಾವ್ಯವನ್ನು ಬರೆದ ಮಂಗರಾಜನು ಮುಂತಾದವರೆಲ್ಲರೂ ಜೈನರು. ಇವರೆಲ್ಲರೂ ಯುದ್ಧಮಾಡಿದ ಸಂಗತಿಗಳು ಇತಿಹಾಸದಲ್ಲಿ ಪ್ರಸಿದ್ಧವಾಗಿವೆ.

ಮೇಲಿನ ನಮ್ಮ ಆಕ್ಷೇಪಗಳನ್ನು ಯಾರಾದರೂ ವಿದ್ವದ್ವರ್ಯರು ನಿವಾರಿಸಿದರೆ ಅವರಿಗೆ ನಾವು ಕೃತಜ್ಞತಾ ಪೂರ್ವಕವಾಗಿ ವಂದಿಸುತ್ತೇವೆ. ಮತ್ತೆ, ಪಂಡಿತ ಶ್ರೀನಿವಾಸ ರಂಗಾಚಾರ್ಯರು ಸಾಹಿತ್ಯ ಪರಿಷತ್ಪತ್ರಿಕೆಯ ೧೭ನೆಯ ಸಂಪುಟದ ೩ನೆಯ ಸಂಚಿಕೆಯಲ್ಲಿ ಪ್ರಕಟಗೊಳಿಸಿದ "ಕೇಶಿರಾಜನು ಜೈನನಲ್ಲ, ಬ್ರಾಹ್ಮಣನು" ಎಂಬ ತಲೆಕಟ್ಟುಳ್ಳ ಲೇಖದ ಮೇಲಿನ ನಮ್ಮ ಆಕ್ಷೇಪಗಳನ್ನು ಮತ್ತೊಂದು ಲೇಖದಲ್ಲಿ ಕೊಡುವೆವು.

ಮೇಲಿನ ವಿವೇಚನೆಯಲ್ಲಿ, ಹಸ್ತದೋಷದಿಂದ, ಅಥವಾ ಅಕುಂಚಿತ ಮತಿಯಿಂದ ದೋಷಗಳೇನಾದರೂ ಉಳಿದಿದ್ದರೆ ಅವು ನಮ್ಮವೇ ಎಂದು ನಾವು ಒಪ್ಪಿಕೊಳ್ಳುತ್ತೇವೆ. ಅವುಗಳಿಂದ ಆರೊಬ್ಬರ ಮನಃಕ್ಷೋಭವಾಗುವಂತಿದ್ದರೆ ಅವರಲ್ಲಿ ನಾವು ಕ್ಷಮಾಪಣೆಗಳನ್ನು ಬೇಡಿಕೊಳ್ಳುತ್ತೇವೆ. ನಮ್ಮ ಲೇಖವು ಹನುಮಂತನ ಬಾಲದಂತೆ ಬೆಳೆದುಹೋದುದರಿಂದ ಓದುಗರು ಬೇಸರಪಡಬಹುದು. ಆದರೆ "ವಾದೇ ವಾದೇ ಜಾಯತೇ ತತ್ತ್ವಬೋಧಃ" ಎಂಬ ಉಕ್ತಿಯಂತೆ ನನ್ನ ಆಕ್ಷೇಪಗಳಿಗೆ ಸರಿಯಾದ ಉತ್ತರಗಳು ದೊರೆತವೆಂದರೆ ಒಂದು ಸಿದ್ಧಾಂತವು ಸ್ಥಾಪಿತವಾಗುತ್ತದೆ ಎಂಬ ಅಂಶವನ್ನು ಗಣನೆಗೆ ತಂದು ಅವರು ನನ್ನನ್ನು ಕ್ಷಮಿಸಬೇಕು.

ಕೆ. ಜಿ. ಕುಂದಣಗಾರ.

---

# ವಿವಿಧ ವಿಷಯಗಳು

**ಮತ್ತೊಬ್ಬ ಪ್ರಸಿದ್ಧ ಕನ್ನಡ ಭಾಷಾ ಸೇವಕರ ನಿಧನ.**—ನಮ್ಮ ಹಿಂದಣ ಸಂಚಿಕೆಯಲ್ಲಿ, ಶ್ರೀಮಾನ್ ರಾಜಕವಿ ತಾತಾಚಾರ್ಯರವರ ಅಕಾಲ ಮರಣ ವನ್ನು ಕುರಿತು ವ್ಯಥೆಪಟ್ಟೆವು. ಈ ಸಂಚಿಕೆಯಲ್ಲಿ, ಮತ್ತೊಬ್ಬ ಪ್ರಸಿದ್ಧ ಭಾಷಾ ಸೇವಕರು ದಿವಂಗತರಾದುದನ್ನು ಕುರಿತು ವ್ಯಥೆಪಡಬೇಕಾಗಿದೆ. ಶ್ರೀಮಾನ್ ಗದಿಗೆಯ್ಯಾ ಹುಚ್ಚಯ್ಯಾ ಹೊನ್ನಾಪುರಮಠ—ಇವರು ಕಳೆದ ಜನವರಿ ೭ನೆಯ ತಾರೀಖಿನಲ್ಲಿ ಧಾರವಾಡದಲ್ಲಿ ತಮ್ಮ ೬೩ನೆಯ ವರ್ಷದಲ್ಲಿ ನಮ್ಮನ್ನಗಲಿ ಪರಲೋಕ ಗತರಾದುದು ಕನ್ನಡ ನಾಡಿನಲ್ಲೆಲ್ಲ ಕೇವಲ ವ್ಯಸನವನ್ನುಂಟುಮಾಡಿದೆ. ಈ ಮಹನೀಯರು ಬಹು ಕಾಲದಿಂದಲೂ ಕನ್ನಡಿಗರಿಗೆ ಚಿರಪರಿಚಿತರು ; ವಕೀಲ ವೃತ್ತಿಯಲ್ಲಿದ್ದರೂ ಭಾಷಾ ಸೇವೆ ಮಾಡುವುದಕ್ಕೆ ಸಮಯವನ್ನೊದಗಿಸಿಕೊಂಡು, 'ಚಂದ್ರೋದಯ 'ವೆಂಬ ಕನ್ನಡ ವಾರ ಪತ್ರಿಕೆಯನ್ನು ಬಹು ಕಾಲ ನಡೆಯಿಸಿ ದುದಲ್ಲದೆ, ಚರಿತ್ರೆ, ಕಥೆ, ನಾಟಕ, ಪುರಾಣ—ಇವೇ ಮೊದಲಾದ ವಿಷಯಗಳನ್ನು ಕುರಿತ ಅನೇಕ ಕನ್ನಡ ಗ್ರಂಥಗಳನ್ನು ಸುಲಭವಾದ ಶೈಲಿಯಲ್ಲಿ ಪ್ರಕಟಗೊಳಿ ಸಿರುವರು. ಮಡಿಕೇರಿಯಲ್ಲಿ ನಡೆದ ಕರ್ನಾಟಕ ಸಾಹಿತ್ಯ ಸಮ್ಮೇಳನದಲ್ಲಿ ಅಧ್ಯಕ್ಷ ಸ್ಥಾನವನ್ನು ವಹಿಸಲು ಇವರಿಗೆ ಔತಣವನ್ನು ಕಳುಹಿಸಿದ್ದೆವು ; ದೇಹಾಲಸ್ಯದಿಂದ ನಮ್ಮ ಔತಣವನ್ನು ಅವರು ಒಪ್ಪಿಕೊಳ್ಳಲಾಗಲಿಲ್ಲ. ನಮ್ಮ ನಮ್ಮಲ್ಲಿ ಆಗಾಗ ಹುಟ್ಟುವ ವೈಮನಸ್ಯಗಳನ್ನು ಮುರಿದುಹಾಕಿ, ಕನ್ನಡಿಗರನ್ನೆಲ್ಲ ಒಂದೇ ಮನೆಯವರಂತೆ ಒಟ್ಟುಗೂಡಿಸಲು ದಕ್ಷತೆಯುಳ್ಳ ಇಂತಹ ಅನುಭವಸ್ಥರಾದ ಮಹನೀಯರು ನಮ್ಮನ್ನಗಲಿ ಹೋಗುತ್ತಿರುವುದು ಕನ್ನಡಿಗರ ದುರ್ದೈವವೆಂದೇ ಹೇಳಬೇಕು.

**ಇಂಡಿಯಾ ದೇಶದ ವಿದ್ಯಾಭಿವೃದ್ಧಿ.**—'ವ್ಹಿಟಾಕರ್ಸ್ ಆಲ್ಮನಾಕ್' ಎಂಬ ಇಂಗ್ಲಿಷಿನ ವಾರ್ಷಿಕ ವಿವಿಧ ವಿಷಯ ಸಂಗ್ರಾಹಕ ಪುಸ್ತಕದಿಂದ, ಗ್ರೇಟ್ ಬ್ರಿಟನ್ನಿ ನಲ್ಲಿ ೧೯೩೧-೩೨ನೆಯ ಸಾಲಿನಲ್ಲಿ ಪ್ರಕಟವಾದ ಪುಸ್ತಕಗಳ ಸಂಖ್ಯೆ ೧೫,೫೬೮ ಎಂದೂ, ಜನರಲ್ಲಿ ಓದುವ ಅಭ್ಯಾಸವು ಹೆಚ್ಚುತ್ತಿದೆಯೆಂದೂ, 'ಫುಲ್ಹಂ' ಪುಸ್ತಕ ಭಾಂಡಾಗಾರದಿಂದ ಕಳೆದ ವರುಷ ವಾಚಕರಿಗೆ ದೊರೆತ ಪುಸ್ತಕಗಳ ಸಂಖ್ಯೆ ೬,೭೧,೮೮೮ ಎಂದೂ ತಿಳಿಯಬರುತ್ತದೆ.

ಇಂಡಿಯಾ ದೇಶದ ಈ ವಿಚಾರಗಳನ್ನು ಕೊಡುವ 'ಸ್ಟೇಟ್ಸ್‌ಮೆನ್ಸ್ ಇಯರ್ ಬುಕ್' ಎಂಬ ಪುಸ್ತಕದಿಂದ, ಇಂಡಿಯಾ ದೇಶದಲ್ಲಿ ೧೯೩೦-೩೧ನೆಯ ವರ್ಷದಲ್ಲಿ ೨,೩೩೨ ಪುಸ್ತಕಗಳು ಇಂಗ್ಲಿಷು, ಅಥವಾ ಇತರ ಯೂರೋಪು ಭಾಷೆಗಳಲ್ಲಿಯೂ, ೧೪,೮೧೫ ಪುಸ್ತಕಗಳು ದೇಶ ಭಾಷೆಗಳಲ್ಲಿಯೂ ಪ್ರಕಟವಾದಂತೆ ತಿಳಿಯಬರುತ್ತದೆ.

ಗ್ರೈಟ್ ಬ್ರಿಟನ್ ಮತ್ತು ಐರ್ಲೆಂಡಿನಲ್ಲಿರುವ ಜನಸಂಖ್ಯೆಗಿಂತಲೂ ಹತ್ತಾರು ಲಕ್ಷ ಹೆಚ್ಚಾಗಿರುವ ಬಂಗಾಳದಲ್ಲಿ, ೧೯೩೦-೩೧ನೆಯ ವರ್ಷದಲ್ಲಿ ಪ್ರಕಟವಾದ ಪುಸ್ತಕಗಳು ೩,೯೦೩, ಪತ್ರಿಕೆಗಳು ೧,೪೨೧. ಪುಸ್ತಕಗಳಲ್ಲಿ ಶಾಲಾ ವಿದ್ಯಾರ್ಥಿಗಳ ಉಪಯೋಗಕ್ಕಾಗಿಯೇ ಪ್ರಕಟವಾದುವು ೧,೭೫೬. ಇವನ್ನು ಕಳೆದುಳಿದ ಪುಸ್ತಕಗಳ ಸಂಖ್ಯೆಯು ಮೇಲೆ ಹೇಳಿದ ಸಂಖ್ಯೆಯಲ್ಲಿ ೭ರಲ್ಲಿ ಒಂದು ಭಾಗ ಮಾತ್ರವಾಗುವುದು.

೧೯೨೯-೩೦ನೆಯ ಸಾಲಿನಲ್ಲಿ ಇಂಡಿಯಾ ದೇಶದಲ್ಲಿ ಪ್ರಕಟವಾದ ನಿಯತ ಕಾಲಿಕ ಪತ್ರಿಕೆಗಳು ಮತ್ತು ವಾರ್ತಾ ಪತ್ರಿಕೆಗಳು.—ಮದರಾಸು ೩೮೯; ಮುಂಬಯಿ ೩೧೪; ಬಂಗಾಳಾ ೬೬೩; ಸಂಯುಕ್ತ ಪ್ರಾಂತಗಳು ೬೨೬; ಪಂಜಾಬು ೪೨೫; ಬರ್ಮ ೧೬೧; ಬಿಹಾರ್ ಮತ್ತು ಒರಿಸ್ಸಾ ೧೩೬; ಮಧ್ಯ ಪ್ರಾಂತಗಳು ಮತ್ತು ಬೆರಾರ್ ೫೫; ಅಸ್ಸಾಂ ೪೩; ಡೆಲ್ಲಿ ೮೮; ವಾಯುವ್ಯದ ಗಡಿ ಪ್ರಾಂತಗಳು ೧೩; ಒಟ್ಟು ೨,೮೩೩.

ಬ್ರಿಟಿಷ್ ಸಾಮ್ರಾಜ್ಯದ ಮತ್ತೊಂದು ದೇಶದೊಡನೆ ಹೋಲಿಸಿದರೆ, ಇಂಡಿಯಾ ದೇಶವು ಈ ವಿಷಯದಲ್ಲಿ ಎಷ್ಟು ಹಿಂದುಳಿದಿದೆಯೆಂಬುದನ್ನು ನೋಡಬಹುದು:— ಕೆನಡಾ ದೇಶದಲ್ಲಿ (ಜನ ಸಂಖ್ಯೆ ೧ ಕೋಟಿ; ಇಂಡಿಯಾದಲ್ಲಿ ೩೫ ಕೋಟಿ) ೧೯೩೦ನೆಯ ಇಸವಿಯಲ್ಲಿ ಪ್ರಕಟವಾದ ದೈನಂದಿನ ಪತ್ರಿಕೆಗಳು ೧೧೬; ತ್ರೈವಾರ (Tri-Weekly) ಪತ್ರಿಕೆಗಳು ೫; ವಾರ ಪತ್ರಿಕೆಗಳು ೯೬೬; ವಾರಾರ್ಧ ಪತ್ರಿಕೆಗಳು ೨೧; ಮಾಸ ಪತ್ರಿಕೆಗಳು ೩೮೮; ಪಕ್ಷ ಪತ್ರಿಕೆಗಳು ೬೬; ಇತರ ಪತ್ರಿಕೆಗಳು ೫೭; ಒಟ್ಟು ೧,೬೮೯.

ಅಮೆರಿಕದ ಸಂಯುಕ್ತ ಸಂಸ್ಥಾನಗಳಲ್ಲಿ (ಜನಸಂಖ್ಯೆ ೧೨.೨ ಕೋಟಿ; ಎಂದರೆ, ಇಂಡಿಯಾ ದೇಶದ ಸಂಖ್ಯೆಯು ೩ರಲ್ಲಿ ಒಂದು ಭಾಗಕ್ಕಿಂತ ಸ್ವಲ್ಪ ಹೆಚ್ಚು) ೧೯೩೦ರಲ್ಲಿ—ದೈನಂದಿನ ಪತ್ರಿಕೆಗಳು ೨,೪೯; ತ್ರೈವಾರ ಪತ್ರಿಕೆಗಳು ೬೫; ವಾರ ಪತ್ರಿಕೆಗಳು ೧೨,೮೨೫; ವಾರಾರ್ಧ ಪತ್ರಿಕೆಗಳು ೪೮೭; ಮಾಸ ಪತ್ರಿಕೆಗಳು ೩,೮೦೪; ಪಕ್ಷ ಪತ್ರಿಕೆಗಳು ೨೮೫; ಇತರ ಪತ್ರಿಕೆಗಳು ೯೫೫; ಒಟ್ಟು ೨೦,೭೨೪. ೧೯೩೧ನೆಯ ವರ್ಷದಲ್ಲಿ ದೈನಂದಿನ ಪತ್ರಿಕೆಗಳು ೨,೪೧೫; ವಾರ ಪತ್ರಿಕೆಗಳು ೧೧,೫೨೪; ಇತರ ಪತ್ರಿಕೆಗಳು ಸೇರಿ ಒಟ್ಟು ೨೧,೯೧.

ಪೌರ್ವಾತ್ಯ ದೇಶವಾದ ಜಪಾನನ್ನು ತೆಗೆದುಕೊಳ್ಳೋಣ:—ಈ ದೇಶದಲ್ಲಿ, ೧೯೨೯ನೆಯ ಇಸವಿಯಲ್ಲಿ, ೨೧,೧೧೧ ಮೂಲ ಗ್ರಂಥಗಳೂ ಇತರ ಪ್ರಕಟನೆಗಳೂ, ೯,೧೯೧ ನಿಯತ ಕಾಲಿಕ ಪತ್ರಿಕೆಗಳೂ ವಾರ್ತಾ ಪತ್ರಿಕೆಗಳೂ ಪ್ರಕಟವಾದುವು.

ಇಂಡಿಯಾ ದೇಶದಲ್ಲಿ ಅಕ್ಷರಸ್ಥರ ಸಂಖ್ಯೆ ಬಹಳ ಕಡಿಮೆ. ಆದುದರಿಂದಲೇ ಗ್ರಂಥ ಮತ್ತು ಪತ್ರಿಕಾ ಪ್ರಕಟನೆಯು ಇಷ್ಟು ಅಲ್ಪವಾಗಿರುವುದು. ಅಲ್ಲದೆ, ಪುಸ್ತಕ ಮೊದಲಾದುವನ್ನು ಕೊಂಡುಕೊಳ್ಳಬೇಕಾದರೆ ಜನರ ಆರ್ಥಿಕ ಸ್ಥಿತಿಯು ತೃಪ್ತಿಕರವಾಗಿರಬೇಕು. ನಮ್ಮ ದೇಶದ ಜನರು ಕೇವಲ ಬಡವರು; ಅವರಿಗೆ

ಪುಸ್ತಕಗಳಿಗೆ ಹಣ ಹಾಕಲು ಶಕ್ತಿಯಿಲ್ಲ. ಇದೂ ಅಲ್ಲದೆ, ಅನುಕೂಲ ಸ್ಥಿತಿಯಲ್ಲಿರುವವರು ಕೂಡ ಇತರರಿಂದ, ಅನೇಕ ಸಂದರ್ಭಗಳಲ್ಲಿ ತಮಗಿಂತಲೂ ಬಡವರಾದವರಿಂದ, ಪುಸ್ತಕ, ಪತ್ರಿಕೆ ಮೊದಲಾದುವನ್ನು ಎರವಲಾಗಿ ತೆಗೆದುಕೊಳ್ಳುವ ದುರಭ್ಯಾಸವುಳ್ಳವರಾಗಿರುವರು. ನಾನಾ ದೇಶಗಳಲ್ಲಿಯ ಅನಕ್ಷರಸ್ಥರ ಸಂಖ್ಯೆಯು ಜನ ಸಂಖ್ಯೆಯಲ್ಲಿ ಸೇಕಡ ಈ ಮೇರೆ ಇರುವುದು :— (ವ್ಹಿಟಾಕರ್ಸ್ ಆಲ್ಮನಾಕ್, ೧೯೩೩) ತುರ್ಕಿ (1927) ೯೧.೮; ಇಂಡಿಯ (1921) ೯೦.೦; ಈಜಿಪ್ಟ (1927) ೮೫.೭; ಬ್ರೆಜಿಲ್ (1920) ೬೭.೦; ಪೋರ್ಚುಗಲ್ (1920) ೬೫.೦; ಮೆಕ್ಸಿಕೊ (1921) ೬೪.೯; ಸೋವಿಯಟ್ ಸಂಯುಕ್ತ (1926) ೪೮.೭; ಸ್ಪೈಯಿನ್ (1920) ೪೩.೦; ಗ್ರೀಸ್ (1928) ೪೩.೦; ಪೋಲೆಂಡ್ (1921) ೩೨.೭; ಇಟಲಿ (1921) ೨೬.೮; ಅಮೆರಿಕದ ಸಂಯುಕ್ತ ಸಂಸ್ಥಾನಗಳು (1930)—ದೇಶಸ್ಥರಾದ ಬಿಳಿಯ ಮನುಷ್ಯರಲ್ಲಿ ೧.೫; ಪರದೇಶಸ್ಥರಾದ ಬಿಳಿಯ ಮನುಷ್ಯರಲ್ಲಿ ೯.೯; ನೀಗ್ರೋಗಳಲ್ಲಿ ೧೬.೩; ಇತರರಲ್ಲಿ ೨೫.[illegible]; ಒಟ್ಟು ಜನ ಸಂಖ್ಯೆಯಲ್ಲಿ (೧೦ ವರ್ಷ ವಯಸ್ಸಿನ ಮೇಲ್ಪಟ್ಟಿರುವವರಲ್ಲಿ) ಸೇಕಡ ೪.೩.

ಕೇವಲ ಪ್ರಾಚೀನವಾದ ನಾಗರಿಕತೆಯೂ ಸಾಹಿತ್ಯ ಭಾಂಡಾಗಾರವೂ ಉಳ್ಳ ಇಂಡಿಯಾ ದೇಶದಲ್ಲಿ, ಹಿಂದೆ ಪ್ರತಿ ಹಳ್ಳಿಯಲ್ಲಿಯೂ ಪಾಠಶಾಲೆಗಳಿದ್ದಂತೆ ತಿಳಿಯಬರುತ್ತಿದ್ದರೂ, ಈಗ ಕಂಡುಬರುವ ದುಃಸ್ಥಿತಿಯು ಕೇವಲ ಶೋಚನೀಯವಾದುದು. ೧೯೩೧ನೆಯ ಜನಗಣಿತಿಯಿಂದ, ಈ ದೇಶದಲ್ಲಿ ಅಕ್ಷರಸ್ಥರು ಸೇಕಡ ಲಕ್ಕೆ ಸ್ವಲ್ಪ ಕಡಿಮೆಯಿರುವಂತೆಯೂ, ಅನಕ್ಷರಸ್ಥರು ೯೨ಕ್ಕಿಂತಲೂ ಸ್ವಲ್ಪ ಹೆಚ್ಚಾಗಿರುವಂತೆಯೂ ತಿಳಿಯಬರುತ್ತದೆ. ಅಮೆರಿಕದಲ್ಲಿಯ ನೀಗ್ರೋ ಕಪ್ಪು ಜನರು, ೬೫ ವರ್ಷಗಳಲ್ಲಿ ಸೇಕಡ ೮೩.೭ರಷ್ಟು ಅಕ್ಷರಸ್ಥರಾಗಿರುವಾಗ, ಪ್ರಪಂಚದಲ್ಲ ಕೇವಲ ಪ್ರಮುಖ ನಾಗರಿಕರಾದ ಇಂಗ್ಲಿಷರ ಆಳಿಕೆಯಲ್ಲಿ ೧೫೦ ವರ್ಷಗಳು ನುರಿತ ನಾವು ಇಂತಹ ದುಃಸ್ಥಿತಿಯಲ್ಲಿರುವೆವೆಂದರೆ ಏನು ಹೇಳಬೇಕು?

ಬರೋಡಾ ದೇಶದ ಉದಾಹರಣೆಯನ್ನು ತೆಗೆದುಕೊಂಡರೆ, ಇಂಡಿಯಾ ದೇಶದಲ್ಲಿಯೂ ಅಕ್ಷರಸ್ಥರ ಸಂಖ್ಯೆಯನ್ನು ಬೇಗ ಬೇಗನೆ ಅಭಿವೃದ್ಧಿಗೊಳಿಸಬಹುದೆಂದು ತೋರುತ್ತದೆ. ೧೯೩೧ನೆಯ ಜನಗಣಿತಿಯಿಂದ, ಆ ದೇಶದಲ್ಲಿ ಅಕ್ಷರಸ್ಥರ ಸಂಖ್ಯೆಯು ಸೇಕಡ ೨೦ಕ್ಕಿಂತಲೂ ಹೆಚ್ಚಿರುವುದೆಂದು ತಿಳಿಯಬರುತ್ತದೆ.

*The Modern Review* for January 1933.

**ಜ್ಞಾನಾರ್ಜನೆಗೆ ದೇಶ ಭಾಷೆಯೇ ಸುಗಮವಾದ ಮಾರ್ಗ.**—ಈ ವಿಚಾರವನ್ನು ತರ್ಕ ಮಾಡುವ ಆವಶ್ಯಕತೆಯೇ ತೋರುವುದಿಲ್ಲ. ಆದರೆ ನಮ್ಮ ದೇಶದಲ್ಲಿ ಮಾತ್ರ ಇದು ವಿಪರೀತವಾಗಿರುವುದು. ಹೈದರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾನಿಲಯವನ್ನು ಬಿಟ್ಟರೆ ದೇಶ ಭಾಷೆಗೆ ಮತ್ತೆಲ್ಲಿಯೂ ಈ ಮಾನ್ಯತೆಯು ದೊರೆಯುವಂತಿಲ್ಲ. ಹೀಗಿರುವಾಗ, ವಾರಣಾಸಿಯ ಹಿಂದೂ ವಿಶ್ವವಿದ್ಯಾನಿಲಯದಲ್ಲಿ ಹಿಂದಿಯನ್ನು ಜ್ಞಾನಾರ್ಜನ ವಾಹಿನಿಯನ್ನಾಗಿ ಮಾಡುವ ಸಂಭವವಿದೆಯೆಂದು

ತಿಳಿದು ಕೇವಲ ಸಂತೋಷಪಡಬೇಕಾಗಿದೆ. ಈ ವಿಶ್ವವಿದ್ಯಾನಿಲಯದ ಉಪಾಧ್ಯಕ್ಷರಾದ ಪಂಡಿತ ಮದನ ಮೋಹನ ಮಾಲವ್ಯರು ತಮ್ಮ ಪಟ್ಟದಾನ ಮಹೋತ್ಸವ ಭಾಷಣವನ್ನು ಈ ವರ್ಷ ಇಂಗ್ಲಿಷಿನಲ್ಲಿ ಮಾಡದೆ, ಸಂಪ್ರದಾಯಕ್ಕೆ ವ್ಯತಿರಿಕ್ತವಾಗಿ, ಹಿಂದೀ ಭಾಷೆಯಲ್ಲಿ ಮಾಡಿದರೆಂದು ತಿಳಿಯಬರುತ್ತದೆ. ಈ ಭಾಷಣದಲ್ಲಿ, ಈ ವಿಶ್ವವಿದ್ಯಾನಿಲಯದ ಕೇಂದ್ರ ಹಿಂದೂ ಪಾಠಶಾಲೆಯಲ್ಲಿ ವಿದ್ಯಾರ್ಥಿಗಳ ಭಾಷೆಯ ಮೂಲಕವೇ ವಿದ್ಯಾಭ್ಯಾಸವು ನಡೆಯುತ್ತಿರುವುದೆಂದೂ, ಮುಂದಣ ವರ್ಷದಿಂದ 'ಇಂಟರ್ ಮೀಡಿಯೆಟ್' ತರಗತಿಗಳಲ್ಲಿಯೂ ಮಾತೃಭಾಷೆಯನ್ನೇ ಜ್ಞಾನ ವಾಹಿನಿಯನ್ನಾಗಿ ಉಪಯೋಗಿಸಲಾಗುವುದೆಂದೂ ಈ ಪಂಡಿತರು ಹೇಳಿರುತ್ತಾರೆ. ಪ್ರಪಂಚದ ಇತರ ದೇಶಗಳ ವಿಶ್ವವಿದ್ಯಾನಿಲಯಗಳಲ್ಲೆಲ್ಲ ಮಾತೃಭಾಷೆಯನ್ನೇ ಜ್ಞಾನ ವಾಹಿನಿಯನ್ನಾಗಿ ಉಪಯೋಗಿಸುತ್ತಿರುವಲ್ಲಿ, ನಮ್ಮ ದೇಶದಲ್ಲಿ ಮಾತ್ರ, ಒಂದು ವಿಶ್ವವಿದ್ಯಾನಿಲಯವನ್ನು ಬಿಟ್ಟು, ಮಿಕ್ಕ ಎಲ್ಲವುಗಳಲ್ಲಿಯೂ ಇಂಗ್ಲಿಷನ್ನೇ ಉಪಯೋಗಿಸುತ್ತಿರುವುದು ಎಷ್ಟು ವಿಷಾದಕರವಾದ ವಿಷಯ! ಈ ಎರಡು ವಿಶ್ವವಿದ್ಯಾನಿಲಯಗಳ ಮಾರ್ಗದರ್ಶಿಕತೆಯನ್ನು ನಮ್ಮ ದೇಶದಲ್ಲಿಯ ಇತರ ವಿಶ್ವವಿದ್ಯಾನಿಲಯದವರೂ ಬೇಗನೆ ಅಂಗೀಕರಿಸಿ ಅದೇ ಮೇರೆಗೆ ನಡೆಯುವರೆಂದು ಹಾರೈಸುತ್ತೇವೆ. ಈ ಮಾರ್ಗವನ್ನವಲಂಬಿಸಲು ತೊಂದರೆಗಳೇನೊ ಇರುವುವು; ಆದರೆ ಅವು ಅನಿವಾರ್ಯಹಗಳಲ್ಲ. ಜಡತ್ವದಿಂದಲೂ ಹಿಂದಿನಿಂದ ನಡೆದುಬಂದ ಪದ್ಧತಿಯನ್ನು ಬಿಡಲು ಮನಸ್ಸೊಪ್ಪದುದರಿಂದಲೂ ಈ ಸುಧಾರಣೆಯು ನಡೆಯದೆ ನಿಂತಿದೆ. ಪುಸ್ತಕಗಳದೇ ದೊಡ್ಡ ತೊಂದರೆ; ಆದರೆ ಉಸ್ಮಾನಿಯಾ ವಿಶ್ವವಿದ್ಯಾನಿಲಯದಲ್ಲಿ ಪುಸ್ತಕಗಳ ಭಾಷಾಂತರಕ್ಕಾಗಿಯೇ ಒಂದು ಇಲಾಖೆಯನ್ನೇರ್ಪಡಿಸಿ ಇದುವರೆಗೆ ಅನೇಕ ಪ್ರೌಢ ಇಂಗ್ಲಿಷು ಪುಸ್ತಕಗಳನ್ನು ಭಾಷಾಂತರ ಮಾಡಿಸಿರುತ್ತಾರೆ. ಆದುದರಿಂದ, ಮನಸ್ಸು ಮಾಡಿದರೆ ಇದು ಸಾಧ್ಯವಾಗುವುದರಲ್ಲಿ ಸಂಶಯವಿಲ್ಲ. ನಮ್ಮ ದೇಶದಲ್ಲಿ ಈ ರೀತಿಯಾಗಿ ನೈಜ ಜ್ಞಾನಾರ್ಜನೆಯಾಗುವ ಯುಗವು ಎಂದಿಗೆ ಬರುವುದೊ!

*The Modern Review* for February 1933.

---

# ಗ್ರಂಥ ವಿಮರ್ಶೆ

## ೧. ಕನ್ನಡ ಜ್ಞಾನೇಶ್ವರಿ

(ಎರಡನೆಯ ಭಾಗ)

ಅನುವಾದಕರು ಮತ್ತು ಪ್ರಕಾಶಕರು.—ರಾಘವೇಂದ್ರ ಸುಬ್ಬರಾವ ಮೂಡಕಟ್ಟೆ, ಬಿ.ಎ., ಕಾರವಾರ.

ಮುದ್ರಣಕಾರರು.—ಸೆಂಟ್ರಲ್ ಪ್ರಿಂಟಿಂಗ್ ಪ್ರೆಸ್, ಕಾರವಾರ.

ಕ್ರೌ೯ ಚತುಷ್ಪತ್ರ ಪುಟಗಳು ೧೩೦ರಿಂದ ೬೨೪+೭+೨೪ ; ಬೆಲೆ ೪ ರೂಪಾಯಿ ; ೧೯೩೨.

ಗೀತೆಯು ಉಪನಿಷತ್ಸಾರವೆಂದೂ ಮೋಕ್ಷ ಶಾಸ್ತ್ರವೆಂದೂ ಪ್ರಸ್ಥಾನ ತ್ರಯಗಳಲ್ಲಿ ಒಂದೆಂದೂ ಸಂಪ್ರದಾಯ ಶರಣರ ಮತ. ಆಚಾರ್ಯ ತ್ರಯವೂ ಪ್ರಸ್ಥಾನ ತ್ರಯವೆಂಬುದನ್ನೇ ಮುಖ್ಯವಾಗಿಟ್ಟುಕೊಂಡು ಭಾಷ್ಯವನ್ನು ರಚಿಸಿದ್ದಾರೆ. ಅವರ ಭಾಷ್ಯಗಳ ಮೇಲೆ ಹುಟ್ಟಿರುವ ವ್ಯಾಖ್ಯಾನಗಳೂ ಶಂಕಾ ಸಮಾಧಾನಗಳನ್ನು ಹೇಳಿಕೊಂಡು ಹೋಗುವ ರಾಜ ಮಾರ್ಗದಲ್ಲಿಯೇ ನಡೆದಿವೆ. ಈ ಮಾರ್ಗದ ಗಂಭೀರ ಗಮನದಲ್ಲಿ ಗೀತೆಯ ಅಂತರಾಂತರ ರಹಸ್ಯಗಳ ಉಲ್ಲೇಖವಿದ್ದರೂ, ಆಚಾರ್ಯ ಕೃಪಾ ಲಾಭವಾದಲ್ಲದೆ ಆ ರಹಸ್ಯಗಳ ಪರಿಚಯವಾಗುವುದು ಸಾಧ್ಯವೇ ಇಲ್ಲ. ಅದರಿಂದಲೇ ಈ ಗೀತಾ ಶಾಸ್ತ್ರಕ್ಕೆ ಇದುವರೆಗೂ ಮೇಲಿಂದ ಮೇಲೆ ವ್ಯಾಖ್ಯಾನಾದಿಗಳು ಸಹಸ್ರಶಃ ಹೊರಟಿವೆ.

ಹೀಗೆ ಭಕ್ತಾನುಗ್ರಹ ಬುದ್ಧಿಯಿಂದ ಗೀತೆಗೆ ವ್ಯಾಖ್ಯಾನವನ್ನು ಬರೆದಿರುವರಲ್ಲಿ ಜ್ಞಾನೇಶ್ವರ ಮಹಾರಾಜರೊಬ್ಬರು. ಇವರು ಶಂಕಾ ಸಮಾಧಾನ ಪೂರ್ವಕವಾಗಿ ನಿರೂಪಿಸುವ ಮಾರ್ಗಕ್ಕಿಂತಲೂ, ನಂಬಿರುವ ಭಕ್ತನಿಗೆ ಅನುಗ್ರಹ ಮಾಡುವುದನ್ನೇ ಹೆಚ್ಚು ಗೌರವಿಸಿರುವಂತೆ ಕಾಣುತ್ತದೆ. ಮಹಾರಾಷ್ಟ್ರದಲ್ಲಿ ಜ್ಞಾನೇಶ್ವರರು ಪ್ರಸಿದ್ಧರು ; ಕೋಣನಿಂದ ವೇದವನ್ನು ಹೇಳಿಸುವುದು ಮುಂತಾದ ಪವಾಡಗಳನ್ನು ಮೆರೆದ ಪರಮ ಜ್ಞಾನಿಗಳು. ಇವರ ಚರಿತ್ರೆಯು ಮಹೀಪತಿಯ 'ಭಕ್ತ ವಿಜಯ' ದಲ್ಲಿ ಪ್ರಸಿದ್ಧವಾಗಿದೆ. ಈ ಜ್ಞಾನೇಶ್ವರರ ಜ್ಞಾನ ಭಂಡಾರವನ್ನು ಕನ್ನಡಿಗರಿಗೆಂದು ತೆಗೆದು ಕೊಟ್ಟಿರುವ ಮೂಡಕಟ್ಟೆಯವರನ್ನು ಮನಃಪೂರ್ತಿಯಾಗಿ ಅಭಿನಂದಿಸುತ್ತೇವೆ.

ಮೂಡಕಟ್ಟೆಯವರು ಈ ಗ್ರಂಥವನ್ನು ಪಂಡಿತರಾಗಿ ಬರೆದಿರುವರೆನ್ನುವುದಕ್ಕಿಂತಲೂ ಭಾವಿಕರೂ ಭಕ್ತರೂ ಆಗಿ ಬರೆದಿರುವರೆನ್ನುವುದು ಸರಿಯೆಂದು ತೋರುವುದು. ಈ ಅರ್ಥವನ್ನು ಇವರೂ ಹದಿನೆಂಟನೆಯ ಅಧ್ಯಾಯದ ಕೊನೆಯಲ್ಲಿ ಬರೆದಿರುವ ೧೧೮೩, ೧೧೯೦, ೧೧೯೪, ೧೧೯೫ನೆಯ ಪದ್ಯಗಳಲ್ಲಿ ಹೇಳಿಕೊಳ್ಳುತ್ತಾರೆ. ಪದ್ಯಗಳ ಧಾಟಿಯೂ ವಿಷಯಗಳನ್ನು ಹೇಳುವ ಧೋರಣೆಯೂ ಉದಾತ್ತವಾಗಿವೆ;

ಶೈಲಿಯೂ ಸರಳವಾಗಿ ಸುಲಭವಾಗಿ ಎಲ್ಲರಿಗೂ ಅರ್ಥವಾಗುವಂತಿದೆ. ಗೀತೆಯ ಅನೇಕಾನೇಕ ರಹಸ್ಯಗಳನ್ನು ಈ ಗ್ರಂಥವು ಸುಲಭವಾಗಿ ಬೋಧಿಸುತ್ತದೆ.

ಹಿಂದೆ, ಪರಿಷತ್ಪತ್ರಿಕೆಯಲ್ಲಿ (ಸಂಪುಟ ೧೪, ಪುಟ ೩೩೭) ಈ ಗ್ರಂಥದ ಮೊದಲನೆಯ ಭಾಗವನ್ನು ವಿಮರ್ಶಿಸುತ್ತ, ಅಲ್ಲಲ್ಲಿರುವ ಪದ ವಾಕ್ಯ ದೋಷಗಳನ್ನು ಕೊಂಚವಾಗಿ ಗುರುತಿಸಲಾಗಿದ್ದಿತು. ಎರಡನೆಯ ಭಾಗದಲ್ಲಿಯೂ ಆ ಕೊರತೆಗಳು ಇದ್ದೇ ಇವೆ. ಆದರೆ ಕಾವ್ಯದಲ್ಲಿ ರಸೋಲ್ಲಾಸಕ್ಕಾಗಿ ಬರೆಯುವ ಶುದ್ಧ ಸುಂದರ ಶೈಲಿಯನ್ನು ಶಾಸ್ತ್ರದಲ್ಲಿಯೂ ಅಪೇಕ್ಷಿಸುವ ದೃಷ್ಟಿಯಿಂದ ಹೇಳಿದ ಮಾತಿದು. ಶಾಸ್ತ್ರಗಳು ವಿಷಯ ಪ್ರಧಾನವಾದವುಗಳೇನೊ ಅಹುದು; ಆದರೂ, ಪ್ರತಿಪಾದಿಸುವ ಶುದ್ಧ ವಿಷಯವನ್ನು ಶುದ್ಧ ಶೈಲಿಯಲ್ಲಿಯೇ ಹೇಳಿದರೆ ಇನ್ನೂ ಉತ್ತಮವಾಗುವುದು.

ಪರಿಶಿಷ್ಟದಲ್ಲಿ ಭಗವದ್ಗೀತೆಯ ಶ್ಲೋಕಗಳ ಅನುಕ್ರಮಣಿಕೆಯಿದೆ. ಮುದ್ರಣಾದಿಗಳು ಅಂದವಾಗಿವೆ. ಕೇವಲ ಭಕ್ತಿಯಿಂದ ಇಷ್ಟು ದೊಡ್ಡ ಗ್ರಂಥವನ್ನು ಬಹಳ ದ್ರವ್ಯ ವ್ಯಯ ಮಾಡಿ ಪ್ರಕಟಗೊಳಿಸಿರುವುದಕ್ಕಾಗಿ ಕನ್ನಡಿಗರು ಅನುವಾದಕರಿಗೆ ಕೃತಜ್ಞರಾಗಿರಬೇಕಲ್ಲದೆ ಆರ್ಥಿಕ ಸಹಾಯವನ್ನೂ ಮಾಡುವರೆಂದು ಹಾರೈಸುತ್ತೇವೆ.

---

## ೨. ಶ್ರೀ ಗೀತಾರ್ಥ ಬೋಧಿನಿ

ಲೇಖಕರು.—ಬಾ. ಮಾ. ಬೆಟಗೇರಿ, ನರೇಂದ್ರ.

ಪ್ರಕಾಶಕರು.—ರಾಮಚಂದ್ರ ಮಾರ್ತಾಂಡ ಪದಕಿ, ಅಮೀನಭಾವಿ.

ಮುದ್ರಣಕಾರರು.—ವಾಗ್ವಿಲಾಸ ಬುಕ್ ಡಿಪೋ, ಪವರ ಪ್ರಿಂಟಿಂಗ ಪ್ರೆಸ್, ಹುಬ್ಬಳ್ಳಿ.

ಕ್ರೌ. ೧೬ ಪುಟಗಳು ೧೨+೨೨೪; ಬೆಲೆ ೧೨ ಆಣೆ; ೧೯೩೨.

"ವ್ಯರ್ಥ ಕಾಲವ ಕಳೆಯಲಾರದೆ। ಪಾರ್ಥ ಕೃಷ್ಣರ ಕರ್ಮ ಸಂವಾದವನು ಪ್ರೇಮದಲಿ॥ ಅರ್ಥಿಯಿಂ ರಚಿಸಲ್ಕೆ ಮತಿಯನು। ಪ್ರಾರ್ಥಿಸುತ" ಭಾಮಿನಿ ಷಟ್ಪದಿಯಲ್ಲಿ, ಮನೆ ಮಾತಿನಲ್ಲಿ, ಗೀತಾರ್ಥವನ್ನು ಅನುವಾದಿಸಲು ಹೊರಟಿರುವ ಗ್ರಂಥವಿದು. ಅಧ್ಯಾಯಗಳನ್ನು ಬೇರೆ ಬೇರೆಯಾಗಿಟ್ಟುಕೊಂಡಿದ್ದರೂ, ಶ್ಲೋಕಗಳ ಅನುವಾದದಲ್ಲಿ ಶ್ಲೋಕಾರ್ಥವನ್ನೇ ಹಿಡಿದು ಹೋಗಬೇಕೆಂಬ ಪಟ್ಟು ಇಲ್ಲ. ಮೊದಲನೆಯ ಅಧ್ಯಾಯದಲ್ಲಿ ಮೂಲದಲ್ಲಿಯ ೪೭ ಶ್ಲೋಕಗಳನ್ನು ೧೯ ಷಟ್ಪದಿಗಳಲ್ಲಿ ಹೇಳಿದೆ.

ಕುಲಕ್ಷಯೇ ಪ್ರಣಶ್ಯಂತಿ ಕುಲ ಧರ್ಮಾಸ್ಸನಾತನಾಃ ।
ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ ॥
ಅಧರ್ಮಾಭಿಭವಾತ್ಕೃಷ್ಣ ಪ್ರದುಷ್ಯಂತಿ ಕುಲ ಸ್ತ್ರಿಯಃ ।
ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣ ಸಂಕರಃ ॥
ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।

ಪತಂತಿ ಪಿತರೋಹ್ಯೇಷಾಂ ಲುಪ್ತ ಪಿಂಡೋದಕ ಕ್ರಿಯಾಃ ||
ದೋಷೈರೇತೈಃ ಕುಲಘ್ನಾನಾಂ ವರ್ಣ ಸಂಕರ ಕಾರಕೈಃ |
ಉತ್ಸಾದ್ಯನ್ತೇ ಜಾತಿ ಧರ್ಮಾಃ ಕುಲ ಧರ್ಮಾಶ್ಚ ಶಾಶ್ವತಾಃ ||
ಉತ್ಸನ್ನ ಕುಲ ಧರ್ಮಾಣಾಂ ಮನುಷ್ಯಾಣಾಂ ಜನಾರ್ದನ |
ನರಕೇ ನಿಯತಂ ವಾಸೋ ಭವತೀತ್ಯನುಶುಶ್ರುಮ ||

ಎಂಬ ಶ್ಲೋಕಗಳಿಗೆ ಅನುವಾದವಾಗಿ ಈ ಕೆಳಗಿನ ಷಟ್ಪದಿಯೆಂದು ಕಾಣುತ್ತದೆ:—

ಕುಲ ಕ್ಷಯವಾದೊಡನೆ ಬಹು ವಿಧ
ಕುಲದ ಧರ್ಮಗಳೆಲ್ಲ ವಳಿವವು
ಸುಲಭದಿಂದಾ ಧರ್ಮ ಬೆಳೆಯುಲ್ ವಾರ್ಗದೋರುವುದು |
ಕುಲ ಲಲನೆಯರು ಶೀಲ ಬಿಡುವರು
ಹಲವು ಪಾಪದ ವರ್ಣ ಸಂಕರ .
ಗಲಭೆಯಿಂ ಜಲಜಾಕ್ಷ ನರಕವೆ ಪಲವು ಮಾತೇನು ||

ಇದು ಶ್ರೇಷ್ಠವಾದ ಉದ್ದೇಶದಿಂದ ಬರೆದಿರುವ ಗ್ರಂಥ.

---

## ೩. ಅಭಿನಯ ಗೀತಾವಳಿ

ಲೇಖಕರು.—ಜಿ. ಎನ್. ಲಕ್ಷ್ಮಣ ಪೈ, ಪುತ್ತೂರು.

ಪ್ರಕಾಶಕರು.—ಹರಿಹರ ಛಾಪಖಾನೆ ಮತ್ತು ಪುಸ್ತಕಾಲಯ, ಪುತ್ತೂರು.

ಕ್ರೌನ್ ಅಷ್ಟಪತ್ರ ಪುಟಗಳು VIII+೪೨; ೧೨ ಚಿತ್ರಗಳಿವೆ; ಬೆಲೆ ೩ ಆಣೆ; ೧೯೩೩.

ಮಕ್ಕಳ ಶಾಲೆಗಳ ಉಪಯೋಗಕ್ಕಾಗಿ ಬರೆದ ೨೯ ಗೀತಿಕೆಗಳನ್ನೊಳಕೊಂಡ ಗ್ರಂಥವಿದು.

ಮಕ್ಕಳ ಸಾಹಿತ್ಯವು ನಮ್ಮ ಕನ್ನಡ ನಾಡಿನಲ್ಲಿ ಇರಲಿಲ್ಲವೆನ್ನುವುದು ರೂಢಿಯ ಮಾತಾದರೂ, ಅದು ನಿಜವೇ? ಎಂಬ ಸಂದೇಹ ಹುಟ್ಟುವುದುಂಟು. ಪುಸ್ತಕ ರೂಪದಲ್ಲಿ ಪ್ರಕಟವಾಗದಿದ್ದರೂ ಈ ಸಾಹಿತ್ಯವು ಮನೆ ಮನೆಯಲ್ಲಿಯೂ ಹೆಣ್ಣು ಮಕ್ಕಳ ಸೊತ್ತಾಗಿ ಮಕ್ಕಳ ನಲವಾಗಿ ಮೆರೆಯುತ್ತಿದ್ದಿತು. ಪಶ್ಚಿಮ ದೇಶದಿಂದ ಹರಿದು ಬರುತ್ತಿರುವ ವಿದ್ಯಾಭ್ಯಾಸದ ಹೊಸ ಹೊಸ ರೀತಿ ನೀತಿಗಳನ್ನು ಇಲ್ಲಿಯೂ ನಡುವ ಅವಸರದಲ್ಲಿ, ಶಿಕ್ಷಣ ಸೂತ್ರಗಳನ್ನು ಕೈಯಲ್ಲಿ ಹಿಡಿದಿರುವ ನಮ್ಮ ಅಧಿಕಾರಿಗಳು ನಮ್ಮಲ್ಲಿ ಏನೇನಿದೆ ಎಂದು ನೋಡುವಷ್ಟು ಸಾವಧಾನತೆಯನ್ನು ಹೊಂದಿರಲಿಲ್ಲವಾಗಿ, ನಮ್ಮಲ್ಲಿ "ಆಕ್ಷನ್ ಸಾಂಗ್ಸ್", "ನಾನ್ಸೆನ'ಸ್ ರೈಮ್ಸ್" ಮೊದಲಾದುವು ಇಲ್ಲವೇ ಇಲ್ಲವೆಂದರು. ನಮ್ಮ ಮಕ್ಕಳು ಆಡುವ "ಸಾರಿಸಿ ಗುಡಿಸಿ" ಎಂಬ ಆಟ, "ಬಾಳೆಯ ಕಂಭದ ಆಟ," "ಕೋಲಾಟ" ಮೊದಲಾದುವುಗಳನ್ನು ನಮ್ಮ ಉಪಾಧ್ಯಾಯರುಗಳು ಕೂಡ ಗಮನಿಸದೆ ಅಧಿಕಾರಿಗಳನ್ನೇ ಅನುವರ್ತಿಸಿದರು,

ಈಗ ಹೊಸದಾಗಿ ಹುಟ್ಟಿ ಬರುತ್ತಿರುವ 'ಶಿಶು ಸಾಹಿತ್ಯ', 'ಬಾಲ ಸಾಹಿತ್ಯ' ಗಳಲ್ಲಿ ಮೊದಲನೆಯ ಪ್ರಯತ್ನವು ನಡೆದುದು ಮಂಗಳೂರು ಕಡೆಯೆಂದು ತೋರುವುದು. ನಮ್ಮ ಮುಂದಿರುವ ಗ್ರಂಥವು ಅಂತಹ ಶ್ರೇಷ್ಠ ಪ್ರಯತ್ನಗಳಲ್ಲೊಂದು.

ಶಿಶು ಗೀತಗಳನ್ನು ವಿಮರ್ಶಿಸುವಾಗ, ಜನತೆಯ ಸಂಸ್ಕೃತಿ, ಭಾವ ಭಾಷೆಗಳ ಸೌಲಭ್ಯ, ಮಾತು ಮಾತಿನಲ್ಲಿಯೂ ಇರಬೇಕಾದ ಭಾವವನ್ನು ಕ್ರಿಯೆಯನ್ನಾಗಿ ಮಾರ್ಪಡಿಸುವ ಶಕ್ತಿ, ನಿಸರ್ಗ ಸಿದ್ಧವಾದ ಸರಳತೆ, ಶಬ್ದ ಸಂಗೀತ—ಇವೇ ಮೊದಲಾದುವು ಅಳತೆಯ ಕೋಲಾಗಿರಬೇಕೆಂಬುದು ನಮ್ಮ ಮತ. ಈ ದೃಷ್ಟಿಯಿಂದ ನೋಡಿದರೆ, 'ಅಭಿನಯ ಗೀತಾವಳಿ'ಗೆ ಅಷ್ಟು ಹೆಚ್ಚು ಮನ್ನಣೆಯನ್ನು ಕೊಡಲಾಗುವುದಿಲ್ಲ. ಇದರಲ್ಲಿರುವ ೪೯ ಗೀತಗಳಲ್ಲಿ ಹಲವು, ಈಗ ಪ್ರಚಾರದಲ್ಲಿರುವ ಬೇರೆ ಬೇರೆ ಗೀತಗಳ ಅನುಕರಣಗಳು. 'ಬೆಕ್ಕು' (೨), 'ಕನ್ನಡಿಗರು' (೫)—ಇವು ಮೈಸೂರು ಬಾಲಬೋಧೆಯಲ್ಲಿರುವ 'ಎಲೆ ಬೆಕ್ಕೆ ರೂಪಿನಿಂದಲೆ', ಇಂಗ್ಲಿಷ್ ಗೀತಗಳ 'ಮೈಸೂರು ಮಕ್ಕಳು' ಎಂಬ ಹಾಡುಗಳ ರೂಪಾಂತರಗಳು. ಆದರೆ ಇಲ್ಲಿ ಅವು ಮಾತೃಕೆಯಲ್ಲಿರುವಷ್ಟು ಲಲಿತವಾಗಿಲ್ಲ.

ಹೀಗೆಯೇ, ಇತರ ಅನೇಕ ಗೀತಗಳು 'ಮಕ್ಕಳ ಪುಸ್ತಕ', 'ಮೈಸೂರು ಮಕ್ಕಳು' ಮೊದಲಾದುವುಗಳಲ್ಲಿಯ ಹಾಡುಗಳ ಅನುಕರಣಗಳಾಗಿವೆ.

ಈ ಪುಸ್ತಕದಲ್ಲಿಯ ಗೀತಗಳಲ್ಲಿ, 'ತಿರುಪತಿ ದಾಸರು' (೯), 'ಮಂಗನ ಮದುವೆ'(೨೧)—ಇವೆರಡೂ ಚೆನ್ನಾಗಿವೆ. 'ಹಣದ ಡಬ್ಬಿ' (೧೩) ಯಲ್ಲಿ ನಾಣ್ಯದ ಭೇದಗಳನ್ನೂ, ಬಳಗದವರ ಸಂಬಂಧಗಳನ್ನೂ ತೋರಿಸಿದೆ. ಬಳಗದವರೆಲ್ಲರೂ ಡಬ್ಬಿಗೆ ಹಾಕಲು ಹೆಚ್ಚು ಹೆಚ್ಚಾದ ಬೆಲೆಯುಳ್ಳ ನಾಣ್ಯಗಳನ್ನು ಕೊಟ್ಟರೂ, ತಂದೆಯು ಏನೂ ಕೊಡದೆ, "ಕಾಸಿಗೆ ಕಾಸನು ಕೂಡಿಡು ಮಗುವೇ, ಧನಿಯೆನಿಸುವೆ ನೀ ಲೋಕದಲಿ" ಎಂದು ಮಾಡಿದ ಉಪದೇಶವು ಅಷ್ಟು ಸಮರ್ಪಕವಾಗಿರುವಂತೆ ತೋರುವುದಿಲ್ಲ.

ಒಟ್ಟಿನಲ್ಲಿ, ಈ ಪುಸ್ತಕವು ಮಕ್ಕಳ ಉಪಯೋಗಕ್ಕೆ ತಕ್ಕುದಾಗಿದೆ.

---

## ೪. ಒಲುಮೆ

ಲೇಖಕರು.—ತೀ. ನಂ. ಶ್ರೀಕಂಠಯ್ಯನವರು; ಮೈಸೂರು.

ಪ್ರಕಾಶಕರು.—ಪ್ರೋಗ್ರೆಸ್ ಬುಕ್ ಸ್ಟಾಲ್, ಮೈಸೂರು.

ಮುದ್ರಣಕಾರರು.—ವೆಸ್ಲಿಯನ್ ಮಿಷನ್ ಪ್ರೆಸ್, ಮೈಸೂರು.

ಕ್ರೌನ್ ಅಷ್ಟಪತ್ರ ಪುಟಗಳು ೮+೪೮; ಬೆಲೆ ೮ ಆಣೆ; ೧೯೩೨.

ಇದೊಂದು ಖಂಡ ಕಾವ್ಯ ಗುಚ್ಛ. "ಭಾವವು ಪ್ರೇರಿಸಿದಾಗ....ನಾಲ್ಕು ಚರಣಗಳನ್ನು ಆಗಾಗ ಕೂಡಿಸಿ"ದ ಗೀತಾವಳಿಯ ಮೊದಲನೆಯ ಭಾಗ;

"ದಂತದ ಮೇಲಿನ ಚಿತ್ರಗೆಲಸ" ದಂತಿರುವ ಬೇರೆ ಬೇರೆ ಚಾಟು ಶ್ಲೋಕಗಳ ಅನುವಾದವು ಎರಡನೆಯ ಭಾಗ.

ಪೂರ್ವ ಭಾಗವು ಪಾದ ಬದ್ಧವಾದ ಉತ್ತಮ ಗದ್ಯ. ಅಲ್ಲಲ್ಲಿ ಭಾವಾಧಿಕ್ಯದಿಂದ ಪದ್ಯದಂತೆ ಕಾಣುವ

ಚೆಲುವೆಯೆಂದು ನುಡಿಯಲಾರೆ:
ಚದುರೆಯೇನೊ ತಿಳಿಯದು.
ಒಲಿದು ನನ್ನ ಹೃದಯವೆಂತು
"ಇವಳೆ ಸಾಕು" ಎಂದಿತು! (ಪುಟ ೩)
ಬಂದ ಮಿಂಚು ಮರಳಿತಿಷ್ಟೆ
ಸಾಕು ಪ್ರೇಮಕೆ.
ಹೊಂದಿ ಹೃದಯವೆರಡು ತಿಳಿಯ-
ಲೇಕೆ ನುಡಿಗಳು? (ಪುಟ ೮)

ಎಂಬ ಛಂದಗಳೂ,

ಪ್ರಥಮ ದರ್ಶನದ ರವಿಯುದಯದಲಿ ಬಿರಿದರಳಿತು.—
ಬೀಜವಿಲ್ಲದೆ ವೃಕ್ಷವೇಳುವುದು ಜಗದೊಳುಂಟೇ! (ಪುಟ ೫)

ಎಂಬ ಅನಿವಾರ್ಯವಲ್ಲದ, ಕಾವ್ಯ ಯೋಗ್ಯವಲ್ಲದ ದುಡುಕುಗಳೂ ಇವೆ. ಅನುವಾದವು ಮನಸ್ಸಿಗೊಪ್ಪುವಂತಿದೆ.

ಈ ಕಾವ್ಯದಲ್ಲಿ ಇನ್ನೊಂದು ಸೊಗಸಿದೆ: ಈಚಿನ ಕವಿಗಳು ಪ್ರಾಸವನ್ನು ನೂಕಿ ಬರೆಯುತ್ತಿರಲು, ಈ ಕಾವ್ಯದಲ್ಲಿ ಪ್ರಾಸ ಬದ್ಧವಾದ ಪದ್ಯಗಳೇ ಹೆಚ್ಚಾಗಿವೆ. "ಹೂವಿನ ಸರ"ದಲ್ಲಿ (ಪುಟ ೬) ೮ ಖಂಡಗಳಿವೆ. ನೋಡುವುದಕ್ಕೆ ಆರು ಪಾದಗಳಿದ್ದರೂ, ನಾಲ್ಕನೆಯ ಆರನೆಯ ಪಾದಗಳನ್ನು ತುಂಡುಗಳೆಂದು ಭಾವಿಸಿ, ಅವು ಮೂರನೆಯ ಎರಡನೆಯ ಪಾದಗಳ ಪ್ರಸಾರಣವೆಂದುಕೊಂಡರೆ, ಆ ಪದ್ಯ ಖಂಡದಲ್ಲಿ ಆದಿಪ್ರಾಸವು ಸ್ಪಷ್ಟವಾಗಿ ತೋರಿಬರುವುದು; ಅಥವಾ, ನಾಲ್ಕನೆಯ ಆರನೆಯ ಪಾದಗಳಿಗೇ ಬೇರೆಯ ಪ್ರಾಸವಿದೆಯೆಂದರೂ ಒಪ್ಪುವುದು. ಉದಾಹರಣೆಗಾಗಿ—

ಯಾರು ಬಂದರೆಂದು ನೋಡ-
ಲೋರೆಗಣ್ಣು ಹರಿಯಿತತ್ತ:
ಹಾರಿತೆದೆಯು, ಮೈಯ ಪುಳಕ
ಜುಮ್ಮನೆದ್ದಿತು;
ದೂರಕೊಡನೆ ಜಾರಿತಾಗ
ಸುಮ್ಮನಲಸಿಕೆ.

ಹೀಗೆಯೇ, ವಿಷಮ ಪಾದಗಳಲ್ಲಿ ಪ್ರಾಸವಿಟ್ಟು ಸಮ ಪಾದಗಳಲ್ಲಿ ಬಿಟ್ಟಿರುವುದೂ ಉಂಟು: 'ಪ್ರಥಮ ದರ್ಶನ' (ಪುಟ ೨), 'ಹಿಡಿದ ವ್ರತ'(೧೫), 'ಉಪೇಕ್ಷಿತೆ' (೧೮),

'ನಡೆದ ಸಂಗತಿ' (೩೦)—ಇವುಗಳಲ್ಲಿ, ಅಲ್ಲಲ್ಲಿ, ಎರಡನೆಯ ನಾಲ್ಕನೆಯ ಪಾದಗಳಲ್ಲಿಯೂ ಪ್ರಾಸವುಂಟು; ಪ್ರಾಸವನ್ನು ಎರಡೆರಡು ಪಾದಗಳಿಗೆ ಬದಲಾಯಿಸಿರುವುದೂ, ಪ್ರಾಸವೇ ಇಲ್ಲದಿರುವುದೂ ಸಹ ಉಂಟು. ಒಟ್ಟಿನಲ್ಲಿ, ಪ್ರಾಸ ಪರೀಕ್ಷೆಯು ಈ ಗ್ರಂಥದಲ್ಲಿ ಬಲು ಚೆನ್ನಾಗಿ ನಡೆದಿದೆ.

ಅಂದವಾದ ಮುದ್ರಣಾದಿಗಳೂ ಅಶುದ್ಧ ಪದಗಳಿಲ್ಲದಿರುವುದೂ ಈ ಗ್ರಂಥದ ಹೆಚ್ಚುಗಾರಿಕೆ.

ದೇವುಡು.

---

## ೫. ಸಂಶಯ

ಲೇಖಕರು.—"ಶ್ರೀ ಸುಬ್ರಹ್ಮಣ್ಯ," ಮೈಸೂರು.

ಪ್ರಕಾಶಕರು.—ಬಾಲ ಕನ್ನಡ ಸೇವಾ ಮಂಡಲಿ, ಮೈಸೂರು.

ಮುದ್ರಣಕಾರರು.—'ವಿಶ್ವಬಂಧು' ಮುದ್ರಣಾಲಯ, ಮೈಸೂರು.

ಕ್ರೌನ್ ಅಷ್ಟಪತ್ರ ಪುಟಗಳು ii+೨೧; ಬೆಲೆ ೪ ಆಣೆ; ೧೯೩೨.

ಈ ಕೃತಿಯು "ಮೊಗಲ ಸಾಮ್ರಾಟರ ಅಂತಃಪುರದಲ್ಲಿ ನಡೆದಿರಬಹುದಾದ, ಅವರಿಗೆ ಸಾಮಾನ್ಯವಾದರೂ ಇತರರಿಗೆ ಅದ್ಭುತವಾದ, ಒಂದು ವಿಚಿತ್ರ ಪ್ರಸಂಗದ ಪದಚಿತ್ರವಾಗಿದ್ದು, ಐತಿಹಾಸಿಕ ವೇಷಧಾರಿಯಾದ ಒಂದು ಸಾಮಾಜಿಕ ರೂಪಕ."

ಷಹಜಹಾನನ ಪ್ರೇಮದ ಮಡದಿಯರಲ್ಲೊಬ್ಬಳಾದ ಸಿಲೀಮೆಯನ್ನು, ಬಾಲ್ಯದಿಂದಲೂ ಅವಳಲ್ಲಿ ಅನುರಕ್ತನಾಗಿದ್ದ ಮಾಹರೂಣನು ಸ್ತ್ರೀ ವೇಷದಲ್ಲಿ ಸೇವಿಸುತ್ತಿದ್ದು ಒಂದು ರಾತ್ರಿ ಅವಳು ನಿದ್ರಿಸುತ್ತಿರುವಾಗ ಮೋಹಪರವಶನಾಗಿ ಅವಳನ್ನು ಮುದ್ದಿಸುವನು. ಪತಿಯು ಅದನ್ನು ಕಂಡು ಕುಪಿತನಾಗುವನು. ಕೋಪವಿಳಿದು ದಿಟವನ್ನು ಅರಸನು ಅರಿಯುವುದರೊಳಗಾಗಿ ಸಿಲೀಮೆಯು, ಪ್ರಾಣವನ್ನು ನೀಗೆಂದ ಸಪತ್ನಿಯ ವಾಕ್ಯವನ್ನು ಪತಿಯ ಸಿದ್ಧಾಂತವೆಂದು ಬಗೆದು, ವಿಷಪಾನ ಮಾಡುವಳು. ಚರಮಾವಸ್ಥೆಯಲ್ಲಿ ಅವಳಿಗೆ ಪತಿ ದರ್ಶನವಾಗುವುದು; ಇದು ಕಥಾವಸ್ತು.

ಈ ಕವಿತೆಯು ಸರಳ ರಗಳೆಯಲ್ಲಿರುವ ರೂಪಕ. ರಗಳೆಯ ಧಾಟಿಯು ಚೆನ್ನಾಗಿದ್ದು ಕಾವ್ಯ ಭಾವವು ಅಲ್ಲಲ್ಲಿ ಸ್ಫುಟವಾಗಿದೆ.

---

## ೬. ಮರಿಗಳ ಕೂಗು

ಲೇಖಕರು.—ಕಶ್ಯಪರು.

ಮುದ್ರಣಕಾರರು.—ಮೋದಿ ಪವರ್ ಪ್ರಿಂಟಿಂಗ್ ವರ್ಕ್ಸ್, ಬೆಂಗಳೂರು ಸಿಟಿ.

ಕ್ರೌ ಅಷ್ಟಪತ್ರ ಪುಟಗಳು ಒಟ್ಟು ೨೨೫; ಬೆಲೆ ೧ ರೂಪಾಯಿ.

ಇದು ಸ್ಕೌಟು (ಬಾಲ ಚಮೂ) "ಕ್ರಮಾಚರಣೆಗೆ ಅಸ್ತಿಭಾರವಾದ 'ಕಬ್' ಎಂದರೆ ಮರಿಗಳ, ಎಂದರೆ ಪ್ರಾಥಮಿಕ ಶಾಲೆಗಳಲ್ಲಿ ಓದುವ ವಯಸ್ಸಿನ ಹುಡುಗರಿಗಾಗಿ ಏರ್ಪಟ್ಟಿರುವ, ಕ್ರಮಾಚರಣೆಯನ್ನು ವಿವರಿಸುವ ಪುಸ್ತಕ."

ಶ್ರೀಮಾನ್ ಕೆ. ಶಂಕರನಾರಾಯಣರಾಯರು ಈ ಪುಸ್ತಕಕ್ಕೆ ಬರೆದಿರುವ ತಮ್ಮ ಮುನ್ನುಡಿ (ಘರ್ಜನೆ)ಯಲ್ಲಿ, "ಈಗ ಬಾಲಕರಾಗಿರುವವರು ಮುಂದೆ...... ಯೋಗ್ಯರಾದ ಪ್ರಜೆಗಳಾಗುವಂತೆ ಮಾಡಲು ಪ್ರಯತ್ನಿಸಬೇಕು. ಈ ಸದುದ್ದೇಶವನ್ನು ನಮ್ಮ ಬಾಲಕರಿಗೆ 'ಕಬ್' ಶಿಕ್ಷಣವನ್ನು ಕೊಡುವುದರ ಮೂಲಕ ನೆರವೇರಿಸಬಹುದು. ಆದರೆ ಈ ಕಾರ್ಯವನ್ನು ಕೈಕೊಳ್ಳುವುದಕ್ಕೆ ಸಹಾಯಕರವಾದ ಯಾವ ಪುಸ್ತಕವೂ ಕನ್ನಡ ಭಾಷೆಯಲ್ಲಿ ಇದುವರೆಗೂ ಇರಲಿಲ್ಲ.............. ವಿಧವಿಧವಾದ ಆಟ ಪಾಟ, ಕುಣಿತ, ಕಥೆ, ಹಾಡು, ಘರ್ಜನೆ ಮುಂತಾದುವುಗಳನ್ನು ಶ್ರೀ ಕಶ್ಯಪರು ಸುಲಭ ಶೈಲಿಯಲ್ಲಿ ಬರೆದಿರುವುದಲ್ಲದೆ, ಅತಿ ವಿತರಣೆಯಿಂದ ಆರಿಸಿ ಸೇರಿಸಿರುವರು" ಎಂದು ಬರೆದಿದ್ದಾರೆ.

ಈ ಪುಸ್ತಕದಲ್ಲಿ (೧) ನಿಬಂಧನೆಗಳು, (೨) ಮರಿಗಳ ಶಿಕ್ಷಣ, (೩) ಹಿರಿಯಣ್ಣಂದಿರಿಗಾಗಿ, (೪) ಆಟ ಮತ್ತು ಕುಣಿತಗಳು, (೫) ಕಥೆಗಳು, (೬) ಹಾಡುಗಳು, (೭) ಹರ್ಷನಾದಗಳು ಎಂಬ ಪರಿಚ್ಛೇದಗಳಿವೆ; ಇದು ಛಾಯಾ ಚಿತ್ರಗಳೂ, ಅನೇಕ ಆಕೃತಿಗಳೂ ಇವೆ. ಭಾಷೆಯು ಹುಡುಗರಿಗೆ ಸುಲಭವಾಗಿ ಅರ್ಥವಾಗುವಂತೆ ಸರಳವಾಗಿದೆ.

---

## ೭. ಸದ್ಧರ್ಮ ದೀಪಿಕೆ

ಪ್ರಕಾಶಕರು.—ಶ್ರೀ ಚನ್ನಮಲ್ಲಿಕಾರ್ಜುನ, ಹಾವೇರಿ.

ಮುದ್ರಣಕಾರರು.—ಶಿವಲಿಂಗ ವಿಜಯ ಮುದ್ರಾಲಯ, ಹಾವೇರಿ.

ಡೆಮ್ಮಿ ಅಷ್ಟಪತ್ರ ಪುಟಗಳು ೪೦; ವಾರ್ಷಿಕ ಚಂದಾ (ಪರಸ್ಥಳದವರಿಗೆ) ರೂ. ೨-೪-೦; ೧೯೩೨.

ಪೂರ್ವಿಕ ವೀರಶೈವ ಗ್ರಂಥಗಳನ್ನು ಪ್ರಕಟಗೊಳಿಸಬೇಕೆಂಬ ಧ್ಯೇಯವನ್ನು ಸಾಧಿಸುವ ಮಾಸ ಪತ್ರಿಕೆಯಿದು. ನಮ್ಮ ಮುಂದಿರುವ ಸಂಚಿಕೆಗಳಲ್ಲಿ (೩-೭) ಮಹಾದೇವಿಯಕ್ಕನ ರಗಳೆ, ಶಿವಯೋಗ, ಸಿದ್ಧೇಶ್ವರ ವಚನ, ಪುರಾತನ ದೇವಿಯರ ತ್ರಿವಿಧಿ ಮೊದಲಾದ ಪೂರ್ವಿಕರ ಗ್ರಂಥಗಳೂ ಆಧುನಿಕರ ಲೇಖಗಳು ಕೆಲವೂ ಇವೆ. ಕರ್ನಾಟಕ ಸಾಹಿತ್ಯದಲ್ಲಿ ಶಿವ ಶರಣರ ವಚನಗಳು ಉತ್ತಮ ಭೂಷಣಗಳು. ಅವುಗಳನ್ನು ಪ್ರಕಟಿಸುವ ಮಹತ್ಕಾರ್ಯವನ್ನು ಕೈಕೊಂಡಿರುವ ಈ ಮಾಸ ಪತ್ರಿಕೆಯು ಚಿರಕಾಲ

ನಡೆದು ಪ್ರಕಾಶಕರಿಗೆ ತಕ್ಕಷ್ಟು ದ್ರವ್ಯಸಹಾಯವೂ ಮನ್ನಣೆಯೂ ದೊರೆಯು ಲೆಂದು ಹಾರೈಸುತ್ತೇವೆ.

---

## ೮. ಸ್ವದೇಶಿ ಪ್ರಚಾರಕ

(ಸಂಪುಟ ೧, ಸಂಚಿಕೆ ೧–೨)

ಸಂಪಾದಕರು.—ಎಂ. ಬಾಬುರಾಯ ಪ್ರಭು, ಬಿ.ಎ., ಮಂಗಳೂರು.

ಪ್ರಕಾಶಕರು.—ದಕ್ಷಿಣ ಕನ್ನಡಾ ಸ್ವದೇಶೀ ಯುವಕ ಸಂಘ, ಮಂಗಳೂರು.

ಡೆಮ್ಮೈ ಚತುಷ್ಪತ್ರ ಪುಟಗಳು ೨೪ ; ವಾರ್ಷಿಕ ಚಂದಾ, ಒಂದು ರೂಪಾಯಿ ;

ಅಂಚೆಯ ವೆಚ್ಚ ೪ ಆಣೆ; ೧೯೩೨.

ಮಹಾತ್ಮಾಜೀಯವರ ೬೩ನೆಯ ವರ್ಷವರ್ಧಂತಿಯ ದಿನ ಸ್ವದೇಶ ಪ್ರೇಮ ದಿಂದ, ಸರ್ವಸಮಾಜಗಳ ಸೇವೆಯ ಕಾಂಕ್ಷೆಯಿಂದ, ಸ್ವದೇಶೀ ಪ್ರಚಾರ ಕಾರ್ಯದ ಮುಖ್ಯಾಂಶವಾಗಿ ಈ ಪತ್ರಿಕೆಯು ಜನ್ಮವೆತ್ತಿದೆ. ಇದರಲ್ಲಿ ೪ ಪುಟಗಳಷ್ಟು ಇಂಗ್ಲಿಷು ಭಾಗವೂ ಇದೆ.

ಇದರಲ್ಲಿ ಬಂದಿರುವ ಲೇಖನಗಳು ಸ್ವಾಭಿಮಾನವನ್ನು ಎಲ್ಲ ವಿಧಗಳಿಂದಲೂ ಅಭಿವೃದ್ಧಿಗೊಳಿಸುವಂತಹವುಗಳಾಗಿವೆ.

---

## ೯. ರಾಜಾ ರಾಮಿಯರ್

(ಸಂಪುಟ ೨೦, ಸಂಚಿಕೆ ೩)

ಕನ್ನಡ ಭಾಗದ ಸಂಪಾದಕರು.—ಸುಭ್ರಾವ ಟಿ. ಬನಸೋಡೆ, ಸಿ.ಬಿ.ಎ.

ರಾಯಲ್ ಅಷ್ಟಪತ್ರ ಪುಟಗಳು ೫೦+೩೦+೨೪.

ಕೊಲ್ಹಾಪುರದ ರಾಜಾರಾಂ ಕಾಲೇಜಿನಿಂದ ಹೊರಡುವ ಈ ತ್ರೈಮಾಸಿಕ ಪತ್ರಿಕೆ ಯಲ್ಲಿ ಮೊದಲನೆಯ ಭಾಗ ಇಂಗ್ಲೀಷು, ಎರಡನೆಯದು ಮರಾಠಿ, ಮೂರನೆಯದು ಕನ್ನಡ.

ಕೊಲ್ಹಾಪುರವು ಕನ್ನಡನಾಡಿನ ಗಡಿ ನಾಡು. ಅಲ್ಲಿರುವ ವಿದ್ಯಾವಂತರೂ ವಿದ್ಯಾರ್ಥಿಗಳೂ ತಮ್ಮ ಮಾತೃಭಾಷೆಯಾದ ಕನ್ನಡವನ್ನು ಗೌರವಿಸುತ್ತಿರುವರೆಂಬು ದಕ್ಕೆ ಈ ಪತ್ರಿಕೆಯೇ ಸಾಕ್ಷಿ. ನಮ್ಮ ಮುಂದಿರುವ ಸಂಚಿಕೆಯಲ್ಲಿ, ಆಧುನಿಕ ಕವಿತೆ ಗಳೂ, ಕತೆಗಳೂ, 'ಆಧುನಿಕ ಕನ್ನಡ ಕವಿಗಳೂ ಮತ್ತು ಕಾವ್ಯವು' ಎಂಬ ಲೇಖನವೂ ಇವೆ. ಕನ್ನಡ ಭಾವಾಭಿಮಾನವು ಈ ನಾಡಿನ ಕನ್ನಡಿಗರಲ್ಲಿ ಇನ್ನೂ ಅಭಿವೃದ್ಧಿಹೊಂದಿ ಈ ಪತ್ರಿಕೆಯು ಕನ್ನಡ ನಾಡಿನಲ್ಲೆಲ್ಲ ಪ್ರಸಿದ್ಧಿ ಹೊಂದಲಿ ಎಂಬುದೇ ನಮ್ಮ ಹಾರೈಕೆ.

ಕನ್ನಡ ಭಾಗದ ಸಂಪಾದಕರು ಶಿವ ಶಕೆಗೆ ಬದಲಾಗಿ ಕರ್ಣಾಟಕದ ವಿಕ್ರಮ ಶಕೆ, ಅಥವಾ ಶಾಲೀವಾಹನ ಶಕೆಯನ್ನು ಉಪಯೋಗಿಸಬೇಕೆಂದು ಬಯಸುತ್ತೇವೆ.

---

## ೧೨. Census of India, 1931

VOLMUE XXV—MYSORE

Part I—Report; Part II—Tables; Part IV—Taluk Tables;
Part V—Village Population Tables.
Foolscap Size pp. (1) XIV+363; (2) 263; (4) 169; (5) 229.
Price (1) Rs. 4-8-0; (2) Rs. 6-0-0; (4) Rs. 2-8-0; (5) Rs. 3-8-0.
*Superintendent & Editor.*—Mr. M. VENKATESA IYENGAR, M.A., BANGALORE.

Printed at the Mysore Government Press; 1932.

ಈ ಸಲದ ಜನಗಣತಿಯಲ್ಲಿ ವಿಷಯ ಸಂಗ್ರಹ ಮಾಡಿದ ವಿಶೇಷ ವಿಚಾರಗಳಲ್ಲಿ ಈ ಕೆಳಗೆ ಹೇಳುವುದೊಂದು:—

'ವಿದ್ಯೆಯೋದಿದವರಲ್ಲಿ ನಿರುದ್ಯೋಗಿಗಳು ಎಷ್ಟು ಮಂದಿ ಇರುವರು ಎಂಬ ಗಣಿತಿ'.

ಮೊದಲನೆಯ ಭಾಗದಲ್ಲಿ, ಸಂಪಾದಕರು ಜನತೆಗೆ ಸಂಬಂಧಪಟ್ಟ ಅನೇಕ ವಿಷಯಗಳನ್ನು ಮನಸ್ಸಿಗೆ ಹತ್ತುವಂತೆ ಸುಲಭವಾದ ಇಂಗ್ಲಿಷು ಭಾಷೆಯಲ್ಲಿ, ಬೇಸರ ಹಿಡಿಯದಂತೆ, ಹೇಳಿರುತ್ತಾರೆ. ಇದನ್ನು ಓದುವುದರಿಂದ ಅನೇಕ ಉಪಯುಕ್ತವಾದ ವಿಷಯಗಳು ತಿಳಿಯಬರುವುವು. ಸಂಪಾದಕರು ಕನ್ನಡ ಭಾಷೆಯಲ್ಲಿ ಸ್ವತಃ ಪ್ರಸಿದ್ಧ ಕವಿಗಳಾಗಿರುವುದರಿಂದ, ರಸ ರಹಿತವಾದ ಇಂತಹ ವರದಿಯಲ್ಲಿಯೂ ಕರ್ಣಾಟಕ ಸಾಹಿತ್ಯಾಭಿವೃದ್ಧಿಯು ಕಳೆದ ದಶಕದಲ್ಲಿ ಹೇಗೆ ನಡೆದಿರುವುದೆಂಬುದನ್ನು ಕುರಿತ ಸ್ವಾರಸ್ಯವಾದ ಒಂದು ಪರಿಶಿಷ್ಟವನ್ನು ಕೊಟ್ಟಿರುವರು. ಇದರಲ್ಲಿ, ತಮ್ಮ ವಿಷಯವನ್ನು ಮಾತ್ರ ವಿಶದವಾಗಿ ತಿಳಿಸದೆ, "I am myself among the workers" ಎಂದು ಹೇಳಿ ಮುಗಿಸಿರುವರು. ಅವರೇ ಹೇಳಿರುವ, "It is quite common for one person to have to his credit poetry, essay, story and drama, all together" ಎಂಬ ಮಾತು ಅವರಿಗೇ ಅನ್ವಯಿಸುವುದೆಂದು ಹೇಳದಿದ್ದರೆ ಈ ಪರಿಶಿಷ್ಟದಲ್ಲಿ ಅಷ್ಟು ವಿಶದವಾಗಿ ಹೇಳಿರುವ ವಿಷಯಗಳಲ್ಲಿ ಕೊರತೆಯುಂಟಾಗುವುದು.

ಈ ಭಾಗದಲ್ಲಿ ಕೊಟ್ಟಿರುವ ಮುಂದಣ ವಿಷಯಗಳು ಜ್ಞಾಪಕದಲ್ಲಿರಬೇಕಾದವು:—ಮೈಸೂರು ದೇಶದಲ್ಲಿರುವ ೧೬,೫೫೧ ಗ್ರಾಮ (ಪಟ್ಟಣ, ಹಳ್ಳಿ)ಗಳಲ್ಲಿ, ೧೯೩೧ನೆಯ ಫೆಬ್ರವರಿ ೨೬ನೆಯ ತಾರೀಖಿನ ದಿನ, ಇದ್ದ ಒಟ್ಟು ಜನಸಂಖ್ಯೆ ೬೫'೦ಲಕ್ಷ. ಇಲ್ಲಿ ಕನ್ನಡವು ಮಾತೃಭಾಷೆಯಾಗಿರುವ ಜನದ ಸಂಖ್ಯೆ ೪೫'೧೦ ಲಕ್ಷ; ಇದರಲ್ಲಿ ೨೮'೧೦ ಸಾವಿರ ಜನರು ಬೇರೆ ಮತ್ತೊಂದು ಭಾಷೆಯನ್ನೂ ಮಾತನಾಡುವರು. ಈ ಭಾಷೆಗಳಲ್ಲಿ ತೆಲುಗು ಪ್ರಾಮುಖ್ಯವಾದುದು; ಇದನ್ನು ೨೬.೧೦ ಸಾವಿರ ಮಂದಿ ಮಾತನಾಡುತ್ತಾರೆ. ಇಂಡಿಯಾ ದೇಶದಲ್ಲೆಲ್ಲ ಕನ್ನಡ ಮಾತನ್ನಾಡುವವರ ಒಟ್ಟು ಸಂಖ್ಯೆ ೧ ಕೋಟಿಯೂ ೧೦ ಲಕ್ಷವೆಂದು ಊಹಿಸಲಾಗಿದೆ. ಆದುದರಿಂದ ಮೈಸೂರು ದೇಶದಲ್ಲಿಯ ಕನ್ನಡಿಗರ ಸಂಖ್ಯೆಯು ಒಟ್ಟು ಕನ್ನಡಿಗರ ಸಂಖ್ಯೆಯಲ್ಲಿ ಸರಿಸುಮಾರು ಅರ್ಧವೆನ್ನಬಹುದು.

---

ಶ್ರೀಃ

# ಕರ್ಣಾಟಕ
# ಸಾಹಿತ್ಯ ಪರಿಷತ್ಪತ್ರಿಕೆ

ಸಂಪುಟ ೧೮] ಶ್ರೀಮುಖ ಸಂವತ್ಸರ ಆಷಾಢಮಾಸ [ಸಂಚಿಕೆ ೨



ವಾರ್ಷಿಕ ಚಂದಾ ರೂ. ೪] [ಬಿಡಿ ಸಂಚಿಕೆ ರೂ. ೧–೮–೦

ಜೂಲೈ ೧೯೩೩

1992—33.—ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಟಿ. ಸುಬ್ರಹ್ಮಣ್ಯ ಅಯ್ಯರವರಿಂದ ಮುದ್ರಿತವಾಯಿತು

## ವಿಷಯ ಸೂಚಿಕೆ

ಪುಟ

ಶ್ರೀಃ

ಕರ್ಣಾಟಕ ಸಾಹಿತ್ಯ

# ಪರಿಷತ್ಪತ್ರಿಕೆ



ಸಂಪುಟ ೧೮] ಶ್ರೀಮುಖ ಸಂ॥ ಆಷಾಢ ಮಾಸ [ಸಂಚಿಕೆ ೨

## ಕರ್ಣಾಟಕ ಸಂಸ್ಕೃತಿ—II

## ಗಂಡುಸರ ಹಾಡುಗಳು

ಮನುಷ್ಯನ ವ್ಯವಹಾರವೆಲ್ಲವೂ ನಡೆನುಡಿಗಳೆರಡರಲ್ಲಿ ಅಡಕವಾಗಿದೆ. ಆದುದರಿಂದ, ಸಂಸ್ಕೃತಿ ಪರಿಶೋಧನಕ್ಕೆ ಹೊರಟಿರುವ ನಾವು ಮುಖ್ಯವಾಗಿ ಈ ನಡೆನುಡಿಗಳನ್ನು ಗಮನಿಸಬೇಕು. ಅವೆರಡರಲ್ಲಿ ತಟ್ಟನೆ ನಮಗೆ ಸಿಕ್ಕುವುದು ನುಡಿ. ಆದುದರಿಂದ ಅದನ್ನೇ ಮೊದಲು ತೆಗೆದುಕೊಳ್ಳೋಣ.

ನುಡಿಯಲ್ಲಿ ಹಾಡು, ಕಥೆ, ಒಗಟೆ, ಗಾದೆ—ಇವೆಲ್ಲವೂ ಬರುವುವು. ಕೊನೆಯ ಮೂರರಲ್ಲಿ ಕಾಣದ ಗಂಡು ಹೆಣ್ಣು ಎಂಬ ಭೇದವು ಮೊದಲನೆಯದಾದ ಹಾಡಿನಲ್ಲಿ ಕಂಡುಬರುವುದು: ಹೆಂಗುಸರು ಹಾಡುವ ಶೋಭಾನೆಯ ಹಾಡುಗಳು, ಆರತಿಯ ಹಾಡುಗಳು ಮೊದಲಾದವು ಗಂಡುಸರ ಗುಂಪಿನಲ್ಲಿ ಕಂಡುಬರುವುದಿಲ್ಲ. ಗಂಡುಸರು ಹಾಡುವ ಲಾವಣಿ ಮೊದಲಾದವು ಹೆಂಗುಸರಲ್ಲಿ ಬಳಕೆಯಲ್ಲಿಲ್ಲ. ಹೀಗಿರುವುದರಿಂದ, ಈ ಹಾಡುಗಳನ್ನು ಕುರಿತು ಬರೆಯುವಾಗ ಅನುಕೂಲ್ಯ ಆವಶ್ಯಕತೆಗಳನ್ನು ಹಿಡಿದು ಗಂಡುಸರ ಹಾಡು, ಹೆಂಗುಸರ ಹಾಡು ಎಂದು ವಿಭಾಗ ಮಾಡುವೆವು.

ಹೆಂಗುಸರ ಹಾಡುಗಳಲ್ಲಿರುವಂತೆಯೇ ಗಂಡುಸರ ಹಾಡುಗಳಲ್ಲಿಯೂ ಬೇಕಾದಷ್ಟು ವೈವಿಧ್ಯವಿದೆ. ಅವುಗಳನ್ನು ಬೇರೆ ಬೇರೆ ದೃಷ್ಟಿಯಿಂದ ನಾನಾ ಜಾತಿಗಳಾಗಿ ವಿಂಗಡಿಸಬಹುದಾದರೂ ಸದ್ಯದಲ್ಲಿ ನಾವು **ಲಾವಣಿ, ವಿನೋದದ ಪದಗಳು, ವಿಶೇಷದ ಪದಗಳು** ಎಂದು ಮೂರು ಗುಂಪು ಮಾಡುವೆವು. ಮೊದಲನೆಯದು ಸಾಮಾನ್ಯವಾಗಿ ಗರುಡಿಯ ಮನೆಯವರಲ್ಲಿ ಬಳಕೆಯಲ್ಲಿರುವ ಲಾವಣಿಗಳು ಮೊದಲಾದವು. ಹೊತ್ತು ಕಳೆಯುವ ಉದ್ದೇಶದಿಂದ ಒಂಟಿಯಾಗಿಯೋ, ಅಥವಾ ಗುಂಪಾಗಿಯೋ ಹೇಳುವ ಪದಗಳು; ಗಾಡಿ ಬಂಡಿಗಳವರು ನಟ್ಟಿರುಳಿನಲ್ಲಿ ಹಾದಿ ಹಿಡಿದು ಹೋಗುತ್ತ ಎಚ್ಚರವಾಗಿರಲೆಂದು ತಾರಸ್ಥಾಯಿಯಲ್ಲಿ ಕೂಗುವ, ಅರ್ಥವಿರುವ,

ಅರ್ಥವಿಲ್ಲದ ಹಾಡುಗಳು; ತುಂಡು ಪದಗಳು; ಮನೆ ಬಾಗಿಲುಗಳಲ್ಲಿ ಕುಳಿತು ಹಾಸ್ಯವಿನೋದಗಳಿಗೆಂದು ಒಬ್ಬರಿಗೊಬ್ಬರು ಹೇಳಿ ನಕ್ಕು ನಲಿಯುವ ಪದಗಳು; 'ತಂದನಾನಾ' ಪದಗಳು; ಕೋಲಾಟದ ಪದಗಳು—ಇವು ನಮ್ಮ 'ವಿನೋದದ ಪದಗಳು' ಎಂಬ ಗುಂಪಿಗೆ ಸೇರಿದವು. ಮೂರನೆಯ ಜಾತಿಯ 'ವಿಶೇಷದ ಪದಗಳು' ಎಂಬ ಗುಂಪಿಗೆ ಜಾತ್ರೆಯಂತಹ ವಿಶೇಷ ಸಂದರ್ಭಗಳಲ್ಲಿ ಹಾಡುವ ಜಾತ್ರೆಯ ಪದಗಳು; ಭಕ್ತಿಯ ಆಧಿಕ್ಯದಿಂದ ಹಾಡಿರುವ ಶೈವ ವೈಷ್ಣವ ದಾಸರ ಪದಗಳು; ಹೋಳೀ ಹಬ್ಬದ ಪದಗಳು—ಇವೆಲ್ಲವೂ ಸೇರುವುವು.[1]

## (ಅ) ಲಾವಣಿಗಳು

'ಲಾವಣಿಯೆಂಬುದು ಗರಡಿಯವರು ಹಾಡುವ ಹಾಡು' ಎಂದು ಜನ ಸಾಮಾನ್ಯದ ಅಭಿಪ್ರಾಯ. ಇದನ್ನು ಈಗಲೂ ಲಾವಣ್ಯಾ, ಸಂವಾದ, ಪವಾಡ ಎಂದು ಕರೆಯುವುದೂ ಉಂಟು. ಈ ಎರಡನೆಯ ಮಾತಿನಿಂದ ಇದರ ಸ್ವರೂಪವನ್ನೂ ಇತಿಹಾಸವನ್ನೂ ತಿಳಿಯಲು ಅವಕಾಶವಾಗುತ್ತದೆ.

ಸಂವಾದಗೀತಗಳು ಹೊಸವಲ್ಲ, ಅತಿ ಪ್ರಾಚೀನವಾದವು. ಇವುಗಳ ವಿಷಯವಾಗಿ ಪ್ರೊಫೆಸರ್ ವಿಂಟರ್‌ನಿಟ್ಜ್ ಅವರು ಒಂದೆಡೆ ಹೀಗೆ ಹೇಳಿದ್ದಾರೆ:—

"ಋಗ್ವೇದದಲ್ಲಿ ಸಂವಾದ, ಆಖ್ಯಾನ, ಇತಿಹಾಸ ಎಂಬ ಹೆಸರಿನಿಂದ ಬರುವ ಸುಮಾರು ೨೦ ಸೂಕ್ತಗಳುಂಟು........ಈ ಸಂವಾದಗಳು ಪುರಾತನ ಕಾಲದ 'ಲಾವಣಿ' (Ballad) ಗಳೆಂದು ನನ್ನ ಅಭಿಪ್ರಾಯ. ಇಂತಹವು ಇತರ ಪ್ರಾಚೀನ ಸಾಹಿತ್ಯಗಳಲ್ಲಿಯೂ ಉಂಟು. ಈ ಪ್ರಾಚೀನ ಸಂವಾದಗಳಿಂದಲೇ ಮಹಾಕಾವ್ಯವೂ ನಾಟಕವೂ ಹುಟ್ಟಿದುದು. ಇವುಗಳಲ್ಲಿ ದೃಶ್ಯದ ಅಂಶವೂ ಉಂಟು, ಶ್ರಾವ್ಯದ ಅಂಶವೂ ಉಂಟು. ಈ ಸಂವಾದಗಳು ಸಮಗ್ರವಾಗಿ ಪದ್ಯವಾಗಿಯೇ ಇರಬೇಕೆಂಬ ನಿಯಮ ವಿರಲಿಲ್ಲ; ಅಲ್ಲಲ್ಲಿ ಗದ್ಯ ಬರುತ್ತಿದ್ದುದುಂಟು. ಬಹುತರವಾಗಿ, ಅಷ್ಟು ಕಾವ್ಯದಂತೆ ಶ್ರಾವ್ಯವಾಗಿ, ಇನ್ನಷ್ಟು ನಾಟಕದಂತೆ ದೃಶ್ಯವಾಗಿ ಇವೆ."

"ಮುಂದೆ ಬೌದ್ಧರ ತ್ರಿಪಿಟಕಗಳಲ್ಲಿಯೂ ಈ ಸಂವಾದಗಳು ಬಂದಿವೆ. ಬುದ್ಧನ ಜೀವನ ಚರಿತ್ರೆಯು ಗ್ರಂಥಸ್ಥವಾಗುವುದಕ್ಕಿಂತ ಮುಂಚೆ, ಆತನ ಜೀವನದ ಮುಖ್ಯ ಮುಖ್ಯ ವಿಷಯಗಳು ಸಂವಾದ ರೂಪದಲ್ಲಿದ್ದುವು. ಅವು ಈಗಲೂ ಪಾಳಿಯ 'ತ್ರಿಪಿಟಕ'ದಲ್ಲಿಯೂ 'ಮಹಾವಸ್ತು', 'ಲಲಿತವಿಸ್ತರ'ಗಳಲ್ಲಿಯೂ ದೊರೆಯುತ್ತವೆ. 'ಸುತ್ತನಿಪಾತ'ದಲ್ಲಿ ಇಂತಹ ಮೂರು ಸಂವಾದಗಳಿವೆ.

"ಇವುಗಳಲ್ಲಿ ಮೊದಲನೆಯದು ಬುದ್ಧನ ಜನನವಾದಾಗ ನಡೆದ ಸಂಗತಿಯೊಂದನ್ನು ಚಿತ್ರಿಸುತ್ತದೆ. ಸ್ವರ್ಗನಿವಾಸಿಯಾದ ಅಸಿತನೆಂಬ ಋಷಿಯು ಸಂಭ್ರಮ

---

1 ಗಂಡುಸರ ಹಾಡುಗಳೆಲ್ಲವೂ ಸಾಮಾನ್ಯವಾಗಿ ಲಯಪ್ರಧಾನವಾದವು. ಇವುಗಳಲ್ಲಿ ರಾಗಕ್ಕಿಂತಲೂ ತಾಳಕ್ಕೆ ಗಮನವು ಹೆಚ್ಚು; ಕೆಲವು ಸಂದರ್ಭಗಳಲ್ಲಿ ಕುಣಿತವೂ ಸೇರಿರುವುದುಂಟು. ದಾಸರ ಪದಗಳಲ್ಲಿ ರಾಗಪ್ರಧಾನವಾಗಿ ಹಾಡುವುದು ಈಚೆಗೆ ಬಂದಿರಬಹುದೆಂದು ನಮ್ಮ ಅಭಿಪ್ರಾಯ. ಬಹುವಾಗಿ ಗಮಕಿಗಳ ಪ್ರಭಾವದಿಂದ ಈ ಬದಲಾವಣೆಯಾಗಿರಬಹುದು.

ಪಡುತ್ತಿರುವ ದೇವತೆಗಳಿಂದ ಬುದ್ಧನ ಜನನವಾಗಿರುವುದನ್ನು ತಿಳಿದು ಭೂಲೋಕಕ್ಕೆ ಬಂದು, ದೇವಾದಿದೇವತೆಗಳೆಲ್ಲರಿಂದಲೂ ಸೇವೆಗೊಳ್ಳುತ್ತಿರುವ ಬುದ್ಧ ಶಿಶುವನ್ನು ದರ್ಶನಮಾಡಿ ಆನಂದ ತುಂದಿಲನಾಗುತ್ತಾನೆ. 'ನನಗಂತೂ ಈ ಮಹಾತ್ಮನ ಶಿಷ್ಯ ನಾಗುವ ಯೋಗವಿಲ್ಲ ; ನೀನಾದರೂ ಈತನ ಶಿಷ್ಯನಾಗಿ ಉದ್ಧಾರವಾಗು' ಎಂದು ತನ್ನ ಬಂಧುವಾದ ನಾಲಕನಿಗೆ ಹೇಳಿ ಬೀಳ್ಕೊಳ್ಳುತ್ತಾನೆ. ಈ ಸಂವಾದದ ಹೆಸರು 'ನಾಲಕ ಸುತ್ತ.'

"ಎರಡನೆಯ 'ಪಬ್ಬಜ್ಜಾ ಸುತ್ತ'ವು ಬುದ್ಧನು ಮನೆಯನ್ನು ಬಿಟ್ಟುಹೋಗಿ ಪ್ರವ್ರಜಿತನಾಗಿ ಮುಂದೆ ರಾಜಗೃಹದ ದೊರೆಯನ್ನು ಕಂಡ ಕಥೆಯನ್ನೂ, ಮೂರನೆಯ 'ಪಧಾನ ಸುತ್ತ'ವು ಗೌತಮನನ್ನು ಮಾರನು ಏಳು ವರುಷಗಳಷ್ಟು ದೀರ್ಘ ಕಾಲ ಗೋಳುಹೊಯ್ದುಕೊಂಡು ಕೊನೆಗೆ ಹತಾಶನಾಗಿ ಹಿಂದಿರುಗಿದ ಕಥೆಯನ್ನೂ ಹೇಳುತ್ತವೆ."

* * * * *

"ಬೌದ್ಧ ಗ್ರಂಥಗಳಲ್ಲಿ ಇತರ ಸಂಗತಿಗಳನ್ನೊಳಕೊಂಡ ಸಂವಾದಗಳೂ ಉಂಟು. 'ಮಜ್ಝಿಮ ನಿಕಾಯ'ದ ತಸ್ಕರ ಅಂಗುಲಿಮಾಲನ ಕಥೆ, ಮಖಾದೇವನ ಕಥೆ, 'ರತ್ಥಪಾಲ ಸುತ್ತ'ದ ರತ್ಥಪಾಲನ ಕಥೆ ಮೊದಲಾದವುಗಳು ಇಂತಹ ಸಂವಾದ ಗಳಿಗೆ ಅತ್ಯುತ್ತಮ ಉದಾಹರಣೆಗಳು. ಮಾರನು ಭಿಕ್ಷುಣಿಯರಿಗೆ ದುರಾಶೆ ತೋರಿಸಲು ಯತ್ನಿಸಿ ವಿಫಲನಾಗುವ ಕಥೆಗಳನ್ನು ಹೇಳುವ ಸಂವಾದಗಳಂತೂ ಪ್ರಾಚೀನ ಭಾರತದ ಕಾವ್ಯ ಕಲೆಯ ಪರಮ ಶ್ರೇಷ್ಠ ರತ್ನಗಳು ಎನ್ನಬಹುದು."

"ಜಾತಕಗಳಲ್ಲೂ 'ಥೇರೀ ಗಾದೆ'ಗಳಲ್ಲೂ ಇಂತಹ ಸಂವಾದಗಳು ಅಸಂಖ್ಯಾತ ವಾಗಿವೆ.........ಇವೆಲ್ಲವೂ ಸಂವಾದ ರೂಪವಾಗಿಯೇ ಇದ್ದು, ಕೇಳುತ್ತಿದ್ದ ಹಾಗೆಯೇ ಅರ್ಥವಾಗುವಷ್ಟು ಸುಲಭವಾಗಿವೆ. ಒಂದು ವೇಳೆ ತಟ್ಟನೆ ಅರ್ಥವಾಗ ದಿದ್ದರೆ ಅಲ್ಲಲ್ಲಿ ಅಷ್ಟಿಷ್ಟು ಗದ್ಯವನ್ನು ಸೇರಿಸುವುದೂ ಉಂಟು. ಸಂವಾದಗಳ ಬೆಳವಣಿಗೆಯಲ್ಲಿ ಇದು ಮೊದಲನೆಯ ಹಂತ. ಸಂವಾದ ಮಧ್ಯದಲ್ಲಿ (ಇತರ) ಪದ್ಯಗಳನ್ನು ಸೇರಿಸಿ ಕಥೆಯನ್ನು ಹೇಳುವುದು ಎರಡನೆಯ ಹಂತ. ಬೌದ್ಧ ಗ್ರಂಥ ಗಳೆಲ್ಲ ಈ ಹಂತದಲ್ಲಿವೆ. ಇಲ್ಲಿಂದ ಮುಂದಿನ ಹಂತವೇ ಪುರಾಣ, ಮಹಾ ಕಾವ್ಯಗಳು."

ಈ ಸಂದರ್ಭದಲ್ಲಿ ಪ್ರಾಚೀನ ಕಾಲದ ದ್ರಾವಿಡರಲ್ಲಿದ್ದ 'ಅಗಂ, ಪುರಂ (ಪೊರಳ್)'ಗಳನ್ನೂ ಗಮನಿಸಬೇಕಾದುದು ಆವಶ್ಯಕ. "ದ್ರಾವಿಡರು ತಮ್ಮ ಕಾವ್ಯಗಳಲ್ಲಿ ನೀತಿ ಧರ್ಮಗಳನ್ನು ಅಷ್ಟಾಗಿ ಗಮನಿಸದೆ ಪ್ರೇಮ ಯುದ್ಧಗಳನ್ನೇ ಹೆಚ್ಚಾಗಿ ಹಾಡಿ ಹೊಗಳುತ್ತಿದ್ದರು. ಅವೇ ಇಂದಿನ ಅಗಂ, ಪುರಂ (ಪೊರಳ್) ಗಳು" ಮೇಲೆ ಹೇಳಿರುವ ಸಂವಾದ ಗೀತಗಳೂ ಈ 'ಅಹಂ, ಪುರಂ (ಪೊರಳ್)'ಗಳೂ ನಮ್ಮ ಲಾವಣಿಗಳ ಆದಿಯಾಗಿರಬಹುದು.

'ಲಾವಣಿ'ಯೆಂಬ ಪದವೂ ನಮಗೆ ಹೊಸತಲ್ಲ. ಷಟ್ಪದೀ ಕಾವ್ಯಗಳಲ್ಲಿ ಈ ಪದವು 'ಯುದ್ಧದ ಕುಣಿತ, ಸೌಂದರ್ಯ, ಕೌಶಲ್ಯ, ಪ್ರಯೋಗ ಚಾತುರ್ಯ' ಎಂಬ

ಅರ್ಥದಲ್ಲಿ ದೊರೆಯುತ್ತದೆ. ಈಗ್ಗೆ ಸುಮಾರು ಒಂದೂವರೆ ಶತಮಾನದ ಹಿಂದೆ ದೊಡ್ಡ ನವಾಬರ ಕಾಲದಲ್ಲಿ, 'ಭಟ್ಟರಾಜು' ಎಂಬ ಒಂದು ಜಾತಿಯವರು ಸೈನ್ಯದಲ್ಲಿ ಇದ್ದಂತೆಯೂ, ಉತ್ಸಾಹ ವರ್ಧಕವಾದ ರಣ ಗೀತಗಳನ್ನು ಹಾಡಿ ಸೈನಿಕರನ್ನು ಹುರಿದುಂಬಿಸುತ್ತಿದ್ದುದು ಇವರ ಕೆಲಸವಾಗಿದ್ದಂತೆಯೂ ತಿಳಿಯಬರುತ್ತದೆ. ಇವೆಲ್ಲವನ್ನೂ ಪರಿಶೀಲಿಸಿ, ನಾವು 'ಲಾವಣಿ'ಯೆಂದರೆ 'ಕಳನ ಹಾಡು', 'ಸೈನ್ಯ ವಾಟಿಕೆಯಲ್ಲಿ ಉತ್ಸಾಹ ವಿಜೃಂಭಣಕ್ಕಾಗಿ, ವಿಜಯಾನಂದ ವಿವರ್ಧನಕ್ಕಾಗಿ ಕುಣಿಯುತ್ತ ಹಾಡುತ್ತಿದ್ದ ಲಯ ಪ್ರಧಾನವಾದ ರಣ ಗೀತಗಳು' ಎನ್ನುತ್ತೇವೆ. ಈಗಲೂ ಹುಬ್ಬಳ್ಳಿಯ ಕಡೆ ಈ ಲಾವಣಿಗಳನ್ನು ಹಾಡುವಾಗ ಗೆಜ್ಜೆ ಕಟ್ಟಿಕೊಂಡು ಕುಣಿಯುವುದೂ ಉಂಟಂತೆ. ಇದರಿಂದಲೂ, ಈ ಲಾವಣಿಗಳನ್ನು ಹಾಡುವಾಗ ಉಪಯೋಗಿಸುವ 'ಧುಂ ಧುಂ' (ಡಬ್ಬು, ಕಡ) ವಾದ್ಯದ ವಾದನ ರೀತಿಯಿಂದಲೂ ಈ ಅಭಿಪ್ರಾಯಕ್ಕೆ ಬಣ್ಣವೇರುತ್ತದೆ.[2]

ಈ ಜಾತಿಯ ಹಾಡುಗಳಲ್ಲಿ 'ತುರಾ', 'ಕಲ್ಗಿ(ಕಲ್ಕಿ)' ಎಂಬವು ಮುಖ್ಯವಾದ ಪ್ರಭೇದಗಳು.[3] ಲಾವಣಿ ಹಾಡುವವರು ಉಪಯೋಗಿಸುವ ಕಡದ ಮೇಲೆ ಕೆಲವರು ಚಿನ್ನ ಬೆಳ್ಳಿಯ ಜರತಾರಿಯಲ್ಲಿ ಕಟ್ಟಿರುವ ಮುತ್ತುಗಳುಳ್ಳ ಗರಿಗಳ ಕುಚ್ಚನ್ನು ಕಟ್ಟುವರು; ಇನ್ನು ಕೆಲವರು ಕುದುರೆಯ ತಲೆಯ ಮೇಲೆ ಕಟ್ಟುವ ಗರಿಗಳ ಕುಚ್ಚನ್ನು ಕಟ್ಟುವರು. ಮೊದಲನೆಯವರು 'ತುರಾ', ಎರಡನೆಯವರು 'ಕಲ್ಗಿ' ಎಂದು ಒಬ್ಬ ವಿದ್ವಾಂಸರ ಅಭಿಪ್ರಾಯ.[4] "ಧರೆಯೊಳಗೆ ಕೇಳೋ ಷಾಹಿರಾ! ಹಚ್ಚೈತೆ ಕಲ್ಗ ಜರತಾರಾ" ಎಂದು ಕಲ್ಗಿ ಪಂಗಡದವರು ಹಾಡಿರುವುದು ಉಂಟು; ಅದರಿಂದ ಈ ಅಭಿಪ್ರಾಯಕ್ಕೆ ಅಷ್ಟು ಗೌರವ ಕೊಡಲಾಗುವುದಿಲ್ಲ. ಅಲ್ಲದೆ, ಕಲ್ಗಿಯವರು ಮಣಿಗಳು ಗರಿಗಳು ಮೊದಲಾದುವನ್ನೂ, ತುರಾದವರು

2 (ಅ) ಫಿನ್‌ಲ್ಯಾಂಡಿನಲ್ಲಿ ಫಿನ್ನಿಷ್ ಭಾಷೆಯಲ್ಲಿ 'ಕಳೇವಲ'ವೆಂಬ ಕಾವ್ಯ ಸಂಗ್ರಹವೊಂದುಂಟು. ಆ ದೇಶದಲ್ಲಿ ಚಳಿಗಾಲದ ದೀರ್ಘ ರಾತ್ರಿಗಳನ್ನು ಬೆಂಕಿಯನ್ನು ಕಾಯಿಸಿಕೊಳ್ಳುತ್ತ ಕಳೆಯುವರು. ಆಗಿನ ಬೇಸರವನ್ನು ನೀಗಲು ಇದರಲ್ಲಿಯ ಹಾಡುಗಳನ್ನು ಹೇಳುವರಂತೆ. ಆ ಹಾಡು ಹೇಳುವ ರೀತಿಯೂ ವಿಚಿತ್ರವಾದುದು: ಬೆಂಕಿಯ ಮುಂದೆ ಕುಳಿತಿರುವವರಲ್ಲಿ ಇಬ್ಬರು ಎದ್ದು ಒಬ್ಬರ ಕೈಯನ್ನೊಬ್ಬರು ಹಿಡಿದುಕೊಳ್ಳುವರು. ಈ ಹಾಡಿನಲ್ಲಿ (ನಮಗೆ ರಾಮಾಯಣ ಮಹಾಭಾರತಗಳಿದ್ದಂತೆ ಇದು ಅವರಿಗೆ) ತಮಗೆ ನೆನಪಾದಷ್ಟು ಸಂವಾದ ರೂಪವಾಗಿ ಹೇಳುವರು. 'ಕಳೇವಲ' ಎಂಬ ಮಾತಿಗೆ 'ವೀರಭೂಮಿ' ಎಂದು ಅರ್ಥ. See *Ency. Brit.*, 14th Edn.

(ಆ) "An American scholar has proved from a comparison of the ballad poetry of numerous people that the recitation of ballads was originally always combined with song and dramatic dance." Winternitz's *Some Problems of Indian Literature*, *Page 55*.

(ಇ) ಲಾವಣಿಗಾರರು ಹೇಳಿಕೊಳ್ಳುವ,

"ಪುಟ್ಟಿ ಇಲ್ಲಿಗೆ ತುರಾ ಕಲ್ಗಿ ಚರ್ಚೆ ತಿಳಿಯಲೋ ಷಾಹಿರ।
ಒಟ್ಟು ಸಾವಿರದೊಂಭೈನೂರ ವರುಷಗಳ್ ಮೇಲ್ ಚಿಲ್ಲರಾ॥"

ಎಂಬ ಮಾತೂ, ಇದು ಕಾಶಿಯ ಕಡೆಯಿಂದ ನಮ್ಮ ದೇಶಕ್ಕೆ ಬಂದಿತೆಂಬ ವದಂತಿಯೂ ಗಮನಿಸಬೇಕಾದುವು.

3 ಉತ್ತರ ಕರ್ನಾಟಕದಲ್ಲಿ ಇವನ್ನು ಕರಡಿಯ ಹಾಡು, ಡಪ್ಪಿನ ಹಾಡು ಎಂದು ಕರೆಯುತ್ತಾರೆ. 'ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆ', ಸಂಪುಟ ೮, ಪುಟ ೭೩.

4 *The Indian Antiquary*, Vol. XVIII, page 359, Footnote 44.

ಅವರ ಡಬ್ಬಿನ ಮೇಗ ಮುತ್ತಿನ ತುರಾ। ಜರ್ತಾರಾ।
. . . . ವೈರಿಗ ಮಾಷ್ಕೇರ ಜೇರ॥ ಇಳಿತ ಕಲಿಗಿಗಿ ನೀರಾ॥

ಹೂವನ್ನೂ ತಮ್ಮ ಕಡಗಳಿಗೆ ಧರಿಸುವುದು ವಾಡಿಕೆ. ತುರಾದವರು ಹೂವಿನ ತುರಾಯನ್ನೂ ಕಲ್ಕಿಯವರು "ಶಿರಪೇಷಿ"ನಂತಹ ಕುಚ್ಚನ್ನೂ ಉಪಯೋಗಿಸು ವುದರಿಂದ ಇವರಿಗೆ ಈ ಹೆಸರುಗಳು ಬಂದಿವೆಯೆಂದು ಒಂದು ಅಭಿಪ್ರಾಯ. ಬಹುತರವಾಗಿ ತುರಾ ಕಲ್ಗಿಯ ಪ್ರಭೇದವು ನಮ್ಮ ದೇಶದ ಹದಿನೆಂಟು ಪಣ ಒಂಬತ್ತು ಪಣಗಳಿಂದ ಆದುದಿರಬಹುದು.

ತುರಾದವರಿಗೆ ಹರಿದಾಸರು ಎಂದೂ, ಕಲ್ಗಿಯವರಿಗೆ ನಾಗೇಶರು ಎಂದೂ ಬಿರುದುಂಟು. 'ಮಝುಮಾ' (ಲಾವಣಿಗಾರರ ಎರಡು ಗುಂಪುಗಳೂ ಸೇರಿ ಹಾಡುವುದಕ್ಕೆ ಕುಳಿತುಕೊಳ್ಳುವ ಸಭೆ) ಸೇರುವಾಗ ತುರಾದವರು ರಾಹುವಿರುವ ದಿಕ್ಕಿಗೆ ಎದುರಾಗಿ ಕುಳಿತುಕೊಳ್ಳುತ್ತಾರೆ. ಇವರು ಪುರುಷಪ್ರಾಧಾನ್ಯವನ್ನು ಹೇಳುತ್ತ—

"ಶಕ್ತಿಗೆ ಶಕ್ತನು ಶಕ್ತಿಯ ಕೊಟ್ಟುದರಿಂದ ಶಕ್ತಿಗೆ ಶಕ್ತಿಯು ಬಂತೂ ।
ಶಕ್ತನವ್ಯಕ್ತನು ಅದರಿಂ ಶಕ್ತಿನಾಮ ಹೆಚ್ಚಲ್ ಬಂತು ॥"

ಎಂದು ಹಾಡಿದರೆ, ಕಲ್ಗಿಯವರು ಅದಕ್ಕೆ ಪ್ರತಿಯಾಗಿ,

"ಸ್ವಾಮಿ ಶಕ್ತಿಯಾಧಾರದೊಳು ಸ್ಥಿತಿ ಲಯಗಳನೆಲ್ಲಾ ।
ಭೂಮಿಯೊಳಗೆ ತಾನು ಮಾಡಿ ತೋರುತಿರುವನಲ್ಲ ।
ಪ್ರೇಮದಿ ಅವಳ ಅಡಿ ಪಿಡಿವರು ಮುನಿಗಳೆಲ್ಲ ॥"

ಎಂದು ಆರಂಭಿಸುತ್ತಾರೆ. ಆರಂಭ ಕಾಲದಲ್ಲಿ ಕಲ್ಗಿಯವರು ಶಾರದಾ ಸ್ತುತಿಯನ್ನೂ, ತುರಾದವರು ಗಣಪತಿ ಸ್ತೋತ್ರವನ್ನೂ ಮಾಡುತ್ತಾರೆ; ಅನಂತರದಲ್ಲಿ ಅವರು ಗಣಪತಿ ಸ್ತೋತ್ರವನ್ನೂ ಇವರು ಶಾರದಾ ಸ್ತೋತ್ರವನ್ನೂ ಮಾಡುತ್ತಾರೆ. ಮೊದಲಿನಿಂದ ಕೊನೆಯವರೆಗೂ ತುರಾದವರು ಪುರುಷನ ಹೆಚ್ಚುಗಾರಿಕೆಯನ್ನೂ ಕಲ್ಗಿಯವರು ಶಕ್ತಿಯ ಹೆಚ್ಚುಗಾರಿಕೆಯನ್ನೂ ಪ್ರತಿಪಾದಿಸುತ್ತಿದ್ದರೆಂದೂ ಈಗ ಆ ಸಂಪ್ರದಾಯವು ಶಿಥಿಲವಾಗಿದೆಯೆಂದೂ ತೋರುತ್ತದೆ.

ಈ ತುರಾ ಕಲ್ಗಿ ಪ್ರಭೇದಗಳಲ್ಲದೆ ವಿಷಯ ದೃಷ್ಟಿಯಿಂದ ಈ ಜಾತಿಯ ಹಾಡು ಗಳಲ್ಲಿ ಐದು ತೆರಗಳಿವೆಯೆಂದು ಹೇಳಬಹುದು. ಈ ವಿಭಾಗವು ಎರಡೂ ಕಡೆಯವರ ಸಂಗ್ರಹಗಳಲ್ಲಿರುವುದರಿಂದ ಮುಂದೆ ನಾವು ಕೊಡುವ ಉದಾಹರಣೆಗಳಲ್ಲಿ ತುರಾ ಕಲ್ಗಿ ಭೇದವನ್ನು ಅಷ್ಟಾಗಿ ಗಮನಿಸುವುದಿಲ್ಲ. ಇದರಿಂದ ಯಾರಿಗೂ ಮನ ನೋಯದಿರಲೆಂದು ಹಾರೈಸುತ್ತೇವೆ.

**I. ನಡೆದ ಸಂಗತಿಗಳನ್ನು ಕುರಿತು ಹಾಡಿರುವ ಇತಿಹಾಸ ಲಾವಣಿ ಗಳು ಮೊದಲನೆಯ ಜಾತಿ.**—ಪಿರಿಯಪಟ್ಟಣದ ಜಗಳ, ಶ್ರೀರಂಗಪಟ್ಟಣದ ಲಾವಣಿ, ಸಂಗ್ಯಾನಲಾವಣಿ*, ಸಂಗೊಳ್ಳಿ ರಾಯಣ್ಣನ ದಂಗೆ† ಈ ಮೊದಲಾದವು ಕೆಲವು.

* *The Indian Antiquary*, *XVIII*, P. 353 ff.
† *The Indian Antiquary*, *XIV*, P. 293 ff.

ಈ ಜಾತಿಯಲ್ಲಿ, ಜನತೆಯ ಮನಸ್ಸನ್ನು ಹಿಡಿದು ಅಲ್ಲಾಡಿಸಿ ಸುಖದುಃಖಗಳನ್ನು ತಂದಿಟ್ಟು ಅವರ ಮನಸ್ಸಿನಲ್ಲಿ ಮನೆಮಾಡಿ ನೆಲಸಿದ ವಿಷಯಗಳು ಹಾಡಿನ ವಸ್ತುಗಳಾಗುವುವು. ಇದರಲ್ಲಿ ವೀರ ಶ್ರೇಷ್ಠರ, ನೃಪತಿ ಪುಂಗವರ ವಿಷಯಗಳನ್ನೇ ಹಾಡಬೇಕೆಂಬ ನಿಯಮವು ಇಲ್ಲ. ಹಾಡಿನ ನಾಯಕನು ಪಿರಿಯಪಟ್ಟಣದ ಪಾಳೆಯಗಾರನಂತೆ ಒಬ್ಬ ಕ್ಷುದ್ರ ಮಾಂಡಲಿಕನಿರಬಹುದು; ಅಥವಾ, ಸಂಗ್ಯನ ಲಾವಣಿಯಲ್ಲಿರುವಂತೆ ಒಬ್ಬ ಸಾಮಾನ್ಯ ರೈತನಾಗಿರಬಹುದು. ನಾಯಕನು ಯಾವನಾಗಿರಲಿ ಅವನ ಕಾರ್ಯವು ಸುತ್ತಮುತ್ತಿನವರ ಮನಸ್ಸನ್ನು ಸೆರೆಹಿಡಿಯುವಷ್ಟು ದೊಡ್ಡದಾಗಿದ್ದರೆ ಸಾಕು; ಸುತ್ತಮುತ್ತಿನವರು ಆ ವಿಷಯವನ್ನು ಹತ್ತೆಂಟು ಸಲ ಆಡುತ್ತಿದ್ದರೆ ಸಾಕು; ಅದು ಕೂಡಲೆ ಒಂದು ಲಾವಣಿಯಾಗುತ್ತದೆ. ಹೀಗೆಯೇ, ನಮ್ಮ ಮೈಸೂರು ಮಹಾರಾಜರವರು ಆಚರಿಸಿದ ಕೈಲಾಸ ಯಾತ್ರೆಯ ವಿಚಾರವೂ ಲಾವಣಿಯಾಗಿದೆ.

ಈ ಹಾಡುಗಳು ಹೀಗೆ ಹಿಂದಿನಿಂದ ಹುಟ್ಟಿ ಬಂದಿದ್ದರೂ ಈಗ ನಮಗೆ ದೊರೆತಿಲ್ಲ. ಸಾಂಗತ್ಯವಾಗಿ ಬಂದಿರುವ ಕುಮಾರ ರಾಮನ ಕಥೆಯನ್ನು ಬಿಟ್ಟರೆ, ಲಾವಣಿಗಳಾಗಿ ನಮಗೆ ದೊರೆತಿರುವುದರಲ್ಲೆಲ್ಲ ವಿಷಯ ದೃಷ್ಟಿಯಿಂದ, 'ಪಿರಿಯಪಟ್ಟಣದ ಲಾವಣಿ'ಯೇ ಅತಿ ಪ್ರಾಚೀನವಾದುದೆನ್ನಬೇಕು.[5] ಇದು ೧೬೧೫ರಲ್ಲಿ ನಡೆದ ಪಿರಿಯಪಟ್ಟಣದ ವಿಜಯವನ್ನು ಕುರಿತು ಹೇಳುತ್ತದೆ. ಆದರೂ ಇದು ಆಗ ಹಾಡಿದಂತೆಯೇ ಈಗಲೂ ಇದೆಯೆಂದು ಹೇಳಲಾಗುವುದಿಲ್ಲ. ಹಾಡುವವನು ಈ ಹಾಡುಗಳನ್ನು ಹಿಂದಿದ್ದಂತೆಯೇ ಹಾಡಬೇಕೆಂಬ ಕಟ್ಟುನಿಟ್ಟು ಇಲ್ಲವಾದುದರಿಂದ, ಹಾಡಬಲ್ಲ ಲಾವಣಿಕಾರನು ಹುಟ್ಟಿಕೊಂಡಂತೆಲ್ಲ ಅವೂ ಹೊಸ ಹೊಸ ರೂಪಗಳನ್ನು ತಾಳುತ್ತವೆ. ಶ್ರೀರಂಗಪಟ್ಟಣದ ಉದಾಹರಣೆಯನ್ನು ತೆಗೆದುಕೊಂಡರೆ ಈ ವಿಷಯವು ಸ್ಪಷ್ಟವಾಗುವುದು: ಶ್ರೀರಂಗಪಟ್ಟಣವು ೧೭೯೯ರಲ್ಲಿ ಶತ್ರುಗಳ ಕೈವಶವಾಗಿ ಸೂರೆಯಾಯ್ತು. ಇದನ್ನೇ ವಸ್ತುವಾಗಿ ಮಾಡಿಕೊಂಡು ಎಷ್ಟೋ ಲಾವಣಿಗಳು ಹುಟ್ಟಿರಬಹುದೆನ್ನುವುದಕ್ಕೆ ಸಾಕ್ಷಿಯಾಗಿ, ವಿಲ್ಕ್ಸ ಅವರ ಪುಸ್ತಕದಲ್ಲಿ ಒಂದು ಉರ್ದು ಲಾವಣಿಯ ಭಾಷಾಂತರವಿದೆ. ಆದರೂ ಈಗ ನಮಗೆ ದೊರೆಯುವುದು ಆಧುನಿಕರು ರಚಿಸಿದ ಹಾಡುಗಳೆರಡು: ಒಂದು ಸುಮಾರು ೩೦ ವರ್ಷಗಳಿಂದೀಚೆಗೆ, ಇನ್ನೊಂದು ಹೋದ ವರ್ಷ ಬರೆದವು.[6]

[5] Rice's *Mysore Gazetteer*, Vol. II, page 291.
ಈಚೆಗೆ 'ಜಯಕರ್ಣಾಟಕ'ದಲ್ಲಿ ಪುರಂದರ ದಾಸರ ಲಾವಣಿಯೊಂದು ಬಂದಿದೆ.

[6] Collectors are often asked by would-be intelligent enquirers as to the age of some folk-song, as if the question of age were either important or relevant. Others (sceptics) suggest that the traditional singer "made it up himself." The answer to this, of course, is that quite possibly he did to some extant "make it up himself" although this in no way adds to, or takes away from, its scientific or artistic value. It is not the question of age or authorship that is important in a folk-song but that of spontaneity and beauty........A folk-song then is always grafting the new on the old........A folk-song is neither new nor old because it is continually taking on new life: it is an individual flowering on a common stem."

*Encyclopædia Britannica*, 14th Edn., page 448.

ಈ ಜಾತಿಗೊಂದು ಉದಾಹರಣೆಯನ್ನು ಕೊಡೋಣ:—

೧. ಸಂಗ್ಯಾನ ಲಾವಣಿ—

"ಬಡತನ ಅಂಬೋದು ಬಲು ಕಷ್ಟ । ಬಡವಗೆ ಬಂತೊ ಬಹು ಸಿಟ್ಟ ।
ಸಾವಕಾರ್‍ರ ಸಾಲ ಕೊಡಬೇಕಾದರ ಸಂಗ್ಯಾಗೆ ಆದೀತೋ ಸಂಕಷ್ಟ ॥ ಪ ॥"

ಬೈಲ ಹೊಂಗಲದಲ್ಲಿ ಸಂಗ್ಯನೆಂಬ ರೈತನು ತನ್ನ ಹೊಲವನ್ನು ಐದು ವರ್ಷದ ವಾಯಿದೆ ಹಾಕಿ ದುರವಜಂತಿ ಚನ್ನಬಸಣ್ಣನೆಂಬ ಸಾಹುಕಾರನಿಗೆ ಆಧಾರ ಮಾಡಿ ಕೊಟ್ಟನು. ಸಾಹುಕಾರನು ಬಲು ಒಳ್ಳೆಯವನು; ಆದರೂ, ವಾಯಿದೆ ಮುಗಿಯುತ್ತ ಬಂದರೂ ಸಾಲ ತೀರಲಿಲ್ಲವಾಗಿ ದಾವಾ ಮಾಡಿದನು. ಎರಡು ಕೋರ್ಟಿನಲ್ಲಿಯೂ ಅವನ ಕಡೆಯೇ ಆಯಿತು. ಸ್ವತ್ತು ಜಪ್ತಿಗೆ ಬಂದಾಗ, ಹಿಂದೆ ಮುರಿಹಾಕಿದ್ದ ಸಂಗ್ಯನು—"ಹೊಲದ ವಳಗ ಬಿಡಿಸಿರಿ ಪಾಲಾ, ಸರ್ವ ತಪ್ಪು ನಂದ ಆಯಿತಲ್ಲಾ । ನಿನ್ನಿಂದ ಹೊರತ ಗತಿಯಿಲ್ಲಾ । ಬಸಲಿಂಗಣ್ಣನ ಮಾತ ಮೀರುದಿಲ್ಲ । (ಎಂದು) ಕೈಮುಗದ ಹಿಡಿದನ ಕಾಲಾ."—ಆದರೂ ಸಾಹುಕಾರನು ಒಪ್ಪದೆ ಹೊಲವನ್ನು ಸುಫರ್ದು ಮಾಡಿಕೊಂಡನು.

ಸಂಗ್ಯನಿಗೆ ಇದರಿಂದ ಬಹಳ ಸಂಕಟವಾಯ್ತು. ಅಣ್ಣ ತಮ್ಮಂದಿರು ಸೇರಿ—"ಮಸೆದರ ಕುಡುಗೋಲ ಕುಂತ ।" "ಕಡುನ ಅಂತ । ಇಂದಿಗೆ ಹೋಗಲಿ ನಮ್ಮ ತಲಿ । ಆಗುವುದು ಆಗಲಿ" ಎಂದು ಗೊತ್ತುಮಾಡಿಕೊಂಡರು.

"ಮಂಗಳಾರ ಉದಯಕ ತಾಯೆದ್ದ । ತಾಯಿ ಪದಕೆ ಹೋಗಿ ಬಿದ್ದ ।
ಸಂಗ್ಯಾ ಪರಿಶ್ಯಾ (ತಮ್ಮ) ಇಬ್ಬರು ಅಂತರ ಬಸವಣ್ಣ ನಡಸು ನಮ್ಮ ಜದ್ದ ॥
ಕುಡುಗೋಲ ಮಸದ ಅವ ಹಿಡಿದ ಬಗಲಗ ಮುಚ್ಚಿಕೊಂಡ ತಾ ನಡೆದ ।
ಮೂರ ತಾಸ ಹೊತ್ತೇರಿತ ಆಗ ॥"

ಚೆನ್ನಬಸಣ್ಣನ ತಮ್ಮಂದಿರು ಫಕೀರಣ್ಣ, ರಾಚಪ್ಪ ಇಬ್ಬರನ್ನೂ ತೀರಿಸಬೇಕೆಂದು ಅವರ ಮನೆಗೆ ಹೋದರು. ಅವರು ಮನೆಯಲ್ಲಿರಲಿಲ್ಲ; ಬದುಕಿಕೊಂಡರು. ಮುಖ್ಯ,

"ಕೊಲ್ಲವಕಿಂತ ಕಾಯುವ ಶ್ರೇಷ್ಠ । ಬಹಳ ಚೆಲೋ ಅವರ ಅದೃಷ್ಟ ॥
ಬಂದದ್ವಾಟ ಅಂತರ ಕಾಲಿ । ಶಿಟ್ಟ ಆದರ ತಮ್ಮ ಮನದಲ್ಲಿ ॥
ಬಸಲಿಂಗಣ್ಣನ ಮನೆಗೆ ಹೋದರೊ ತಿಳಿಯಲಿಲ್ಲ ಇಬ್ಬರ ನೆಲಿ ॥
ಪೊಂಬತ್ತಾಸ ವೇಳೆದ ಮೇಲೆ ಪೂರ್ವ ಲಿಖಿತ ವದಗಿತ ಅಲ್ಲಿ ॥
ಸಂಗ್ಯಾ ಪರಿಶ್ಯಾ ಮುಜರಿ ಮಾಡಿಕ್ಯಾರ । ಹೋಗಿ ನಿಂತರೊ ಅವನ ಬಡಿಯಲಿ ॥
ಕಡದಾರು ಅಂಬುದು ಅವಗ ತಿಳಿಯಲಿಲ್ಲ । ಶಿವ ತಂದ ಹಾಕಿದ ಮ್ಯಾಲಿ ॥
ಸಂಗ್ಯಾ ಮುಂಗೈಯ್ಯಂಗಿಯ ತೇಡಿಕೊಂಡ ಬಗಲನ್ನ ಕುಡುಗೋಲ ತಕ್ಕೊಂಡ ॥
ನಿಂತ ನೋಡಿ ಕಡದನೊ ಅವನ ಚಂಡ । ಅದರಂತ ಕುಡುಗೋಲ ಯಳಕೊಂಡ ॥
ಕಡದವನ ಹಿಂದಕ ಸರಕೊಂಡ । ಪೋಡಿಹೋದನ ಪರಿಶ್ಯಾನ್ನ ಕರಕೊಂಡ ॥
ಬಸಲಿಂಗಣ್ಣಯೆದ್ದ ಸಂಗಟಾಗಿ ಶಿರಬಾಗಿ ॥ ಬಾಯಲಿ ಸುರಿತ ನೆತ್ರರಾ । ಹಾರಿತ ಕಬರಾ ।
ಬಿದ್ದನ ಜೀವ ಹೋಗಿ । ಕುಂತಿರು ಮಂದಿ ಗಾಬ ಆಗಿ ಹೊರಗ ಹೋಗಿ ।

ಯೆಲ್ಲರು ಅಂತರ ಹಿಡಿಹಿಡಿ ಪೋಡುತಾನ ಪೋಡಿ । ಕೋದ ಕುತ್ತಿಗಿ ।
ಬರುಹಂತ ಮಂದಿ ಇದಿರಾಗಿ ಬದಿಗಾಗಿ ಅವನ ಹಿಡಿಯಲಿಲ್ಲ ಯಾರ್‍ಯಾರ ॥
ಬಂದರ ಹಳಬರಾ ಆಗ ಸುದ್ಯಾಗೀ ॥
ಊರಾಗಾ ಆದೀತ ಬೊಬ್ಬಾಟ । ದಾಟಲಿಲ್ಲ ಹೊಂಗಲ ಗೇಟ ॥ "

ಕೊನೆಗೆ ಸಂಗನನ್ನೂ ಪರಶ್ಯನನ್ನೂ ಹಿಡಿದು ವಿಚಾರಣೆಗೆ ಗುರಿ ಮಾಡಿದರು. 'ತಮಗೆ ಬೇಡದ ಹೂವಿನ ರಾಮಯ್ಯನೂ ಇದರಲ್ಲಿ ಸೇರಿದ್ದಾನೆ'ಯೆಂದು ಇವರು ಅವನನ್ನೂ ಹಿಡಿಸಿದರು. ವಿಚಾರಣೆಯಲ್ಲಿ, "ಹೂವಿನ ರಾಮನ ತಂದದ್ದ ಅನ್ಯಾಯಿ" ಎಂದೂ, ಪರಶ್ಯನಿಗೆ "ಕರಿ ನೀರ" ಶಿಕ್ಷೆಯೂ ಸಂಗ್ಯನಿಗೆ ಗಲ್ಲಿನ ಸಜವೂ ಆಯಿತು.

"ಈ ಕೃತ್ಯವು ನಡೆದುದು ಆಶ್ವೀಜ ಶುದ್ಧ ಪಾಡ್ಯ ಮಂಗಳಾರ । ಸಕೆ ಸತ್ತರಾಸೆ ಪಂಚಾ ಐಂಶಿ ರುದ್ರೋದ್ಗಾರಿ ನಾಮ ಸಂವತ್ಸರಾ ॥ " (೧೮೬೩ನೆಯ ಅಕ್ಟೋಬರ್ ೧೩). ಇದನ್ನು ಹಾಡಿದವನು" ತುಕಾರಾಮನ ಶಿಷ್ಯನಾದ ಶಾಯಿರಾ ಕವಿ ಅಪ್ಪ ॥ "[7]

(ಈ ಕಥೆಯು ನಾಟಕವಾದರೆ ಎಷ್ಟು ಸೊಗಸಾಗಬಹುದು!)

ಇನ್ನೊಂದು ಉದಾಹರಣೆ ತೆಗೆದುಕೊಳ್ಳೋಣ:—

೨. ಪೆರಿಯಪಟ್ಣದ ಜಗಳ—

"ಪೆರಿಯಾಪಟ್ಣದ ಜಗಳವು ಹೇಳುತೀನಿ ಕೇಳಿರಂಣ ನೀವ್ ಸಭೆಯೆಲ್ಲ ॥
ಅರಿಯದ ಹಸುಮಗ ದಳವಾಯಿ ಹೊಂಟನು ಮಾಡಲೀಕೆ ಹಲ್ಲಾ ॥ ಪ ॥ "

ಹರುಷದಿಂದ ಮೆರೆಯುತ್ತಿದ್ದ ದಳವಾಯಿಗೆ ಯಾರಿಗೂ ಕಪ್ಪ ಕೊಡುವನಲ್ಲದ ವೀರರಾಜ ಭೂಪನ ಕೀರ್ತಿ ಶೌರ್ಯಗಳು ತಿಳಿದು, "ಪೆರಿಯಪಟ್ಣದ ಕಪ್ಪವ ತರಬೇಕು ಮೈಸೂರು ಭೂಪನಿಗೆ"ಎನ್ನಿಸಿತು. ಕೂಡಲೆ ಅರಸನ ಬಳಿಗೆ ಹೋಗಿ, "ವೀಳ್ಯವ ಕೊಡು ಯನಗೆ ಪೆರಿಯಪಟ್ಣಕೆ ಹೋಗಬೇಕು, ಮನಸ್ಸೈತದರ ಮೇಗೆ" ಎಂದು ಅರಿಕೆ ಮಾಡಿದನು. ಭೂಪನು—

"ಹಿರಿಯವರೆಲ್ಲ ಹೋಗಿ ಮಡಿದರು ಸುರರಿಗಸಾಧ್ಯವು ಪೆರಿಯಪಟ್ಣವು ।
ಬರಿದೆ ಭ್ರಮೆಯ ಪಡಲಿಬೇಡಾ । ತರಳನೆ ಸಾಧ್ಯವಿಲ್ಲ ನಮಗೆ ।
ಅಡಕೆಯ ತುರಿಯಂತಾಗಿ ಹೋದೀಯಾ ನಿಲ್ಲಲಾರೆ ಅವನ ಮೇಗೆ॥ "

ಎಂದನು. ಕೊನೆಗೆ ಹಠಮಾಡಲು, ಅರಸನು

"ಕರೆಸಿ ಕೊಟ್ಟನು ವೀಳ್ಯವ ಕೈಯೊಳಗೆ ।
ಮುತ್ತಿನ ಹಾರ ನವರತ್ನದ ಪದಕ ಹಾಕಿದ ಕೊರಳೀಗೆ ।"

"ಅತಿಹರುಷದಿಂದ ದಳವಾಯಿ ಬಂದನು......
ಸತ್ಯವಂತೆ ಕುಲದೇವಿ ಚಾಮುಂಡಿ ಇರು ಯರ್ಜಿ ಬೆ'ಮೇಗೆ ।"

ಎಂದು ಮನೆದೇವರ ಪೂಜೆಮಾಡಿ ಅಪಶಕುನವಾದರೂ ದಳವಾಯಿಯು "ಚಾಮುಂಡಿ ಗತಿಯೆನಗೇ" ಎಂದು ಧೈರ್ಯಮಾಡಿ ಹೊರಟನು.

7 *The Indian Antiquary*, Vol. XVIII, page 359 ff.

ವೀರರಾಜ ಭೂಪನಿಗೆ ದಳವಾಯಿಯು, "ಕಪ್ಪ ಕಾಣಿಕೆ ಕೊಡು, ಅಥವಾ ಯುದ್ಧಮಾಡು" ಎಂದು ಪತ್ರವನ್ನು ಬರೆದನು. ಅವನು—

"ಯಂತ ಮಾತನು ಬರದೋ ರಣ ಹೇಡಿ ನಾಚಿಕಿಲ್ಲವೇ ನಿನಗೆ ।
ಮತ್ತೆ ಮದ್ದು ಗುಂಡು ಸಾಲದೆ ಹೋದಲೆ ಕೊಡುತೀನಿ ನಾ ನಿನಗೆ ।
ವ್ಯರ್ಥ ಹಮ್ಮು ನೀ ಮಾಡಿ ಕೆಡಬೇಡ ಬಾರೊ ರಣಾಗ್ರದೊಳಗೆ ॥"

ಎಂದು ಉತ್ತರ ಬರೆದನು.

"ಸಮುಸಾಟಿಯಾಗಿ ಯರಡು ಕೂಡಿತು ದಂಡು ಬೈಲಿನಾಗೆ ।
ಜಮಾಯಿಸಿ ಜಗಳ ಹತ್ತಿತು ನೋಡೋ ಕರ್ಣ ಪಾರ್ಥರಾಗೇ ॥
ನೇಮದಿ ಕಾದಿರುವಳು ಪೆರಿಯಪಟ್ಣದ ಮಾರಿ ಹೀಗೆ ।
ವೀರಜ ಭೂಪನ ಅಗಲದೆ ಬೆರ್ತಿ ಮೇಗೆ ।
ತಮಾಂ ದಂಡು ಉರುಳಿಹೋಯಿತು ಮೂರು ಪಟಾಲಂ ದಳವಾಯ್ ಕಡೇಗೇ ॥"

ಆಗ ದಳವಾಯಿಯು ತಾನು ಮಾಡಿದ ಕಾರ್ಯವು ಹುಡುಗ ಬುದ್ಧಿಯಾಯಿತು ಎಂದು ಚಿಂತಿಸಿ, ಮತ್ತೆ ದಂಡು ಗುಂಡು ಬೇಕೆಂದು ಮೈಸೂರರಸರಿಗೆ ಬರೆದನು. ಅವರು, "ಭೂಪನಾದರೆ ಜೈಸಿಬಾ । ಇಲ್ಲದೆ ಹೋದರೆ ಹೆಣ್ಣಿನಂಗೇ ಒಪ್ಪವಾಗಿ ಬಳೆಯನು ತೊಟ್ಟುಕೋ । ನಾಚಿಕಿಲ್ಲವೆ ನಿನಗೇ" ಎಂದು ಬರೆದರು. ಆಗ ಅವನು ಪರಿ ಪರಿ ಚಿಂತೆ ಮಾಡಿ, "ಪ್ರಾಣವು ಕೊಡುವೆನು ನಾನು ವೈರಿಯ ಕೈಯೊಳಗೇ" ಎಂದುಕೊಂಡು ಮಲಗಲು, ಚಾಮುಂಡಿಯು ಕನಸಿನಲ್ಲಿ ಬಂದು—

"ಅಂಜಬೇಡ ಹೀಗೆ । . . . . . .
ಇರುವೆನು ನಡೆ ನಾ ನಿನ್ನ ಒಂದಿಗೆ ನಾಳೆ ಜಗಳದೊಳಗೇ ।
ಭರದಿ ಹೋಗುವೆ ಮುಂದುಗಡೆ ಪೆರಿಯಪಟ್ಣದೊಳಗೇ ॥
ತೂರುವೆ ಮಂಕಿನ ಬೂದಿಯ ನಾನು ಚೆಪ್ಪಿಡಿಯೋ ಹಾಗೆ ।
ಕರದಿ ಮೇಲೆ ಕರಾ ಹೊಡೆದು ನಡೆದಳು ಆದಿಶಕ್ತಿ ಬೇಗೇ ॥"

ಮರು ದಿನದ ಯುದ್ಧದಲ್ಲಿ ಚಾಮುಂಡಿಯು ಪೆರಿಯಪಟ್ಣದ ಪುರಿಮಸಣಿಯನ್ನೂ ವೀರಭದ್ರನನ್ನೂ ಮಾರಿ ನಡೆದು ವೀರರಾಜನಿಗೆ ಮಂಕು ಬೂದಿ ತಳೆದು, "ತೂಗುತಾಳೆ ಮಂಕು ಬರುವ ಹಾಗೆ". ಇದರ ಫಲವಾಗಿ "ಸೂರೆ ಆಯಿತು ಪೆರಿಯಪಟ್ಣವು ಮೈಸೂರಿನವರಿಗೆ."

ಕೊನೆಗೆ ರಾಣಿವಾಸದವರು ಬಹಳ ಶ್ರಮಪಟ್ಟು ವೀರರಾಜನನ್ನು ಎಚ್ಚರಗೊಳಿಸಿದರು. ಎಚ್ಚರವಾಗಿ ಅವನು ಎಲ್ಲವನ್ನೂ ಕಂಡು, "ಮಾರಿತು ಕಾರ್ಯ ಯತ್ನವಿಲ್ಲ"ವೆಂದು ತಿಳಿದು ಕೊಂಡನು. ಕೊನೆಗೆ ಗಂಡ ಹೆಂಡಿರೆಲ್ಲ ಮಾತನಾಡಿಕೊಂಡು, "ಕ್ಷೀರ ಅನ್ನವ ಪೂಟ ಮಾಡಿದರು ಒಂದೆ ಎಲೆಯೊಳಗೆ." ಅವರನ್ನೆಲ್ಲ ತಾನೇ ಕತ್ತಿಯಿಂದ ಕೊಂದು ರಾಜನು ರಣಭೂಮಿಗೆ ನಡೆದನು.

ಅಲ್ಲಿ ದಳವಾಯಿಯನ್ನು ಹುಡುಕಿಕೊಂಡು ಬಂದು ಅವನೊಡನೆ ಹೋರಾಟಕ್ಕೆ ನಿಂತನು.

"ಹರುಷದಿ ಚಾಮುಂಡಿ ನಡುವೆ ನಿಂತಳು ಜಗಳದಿ ಈರ್ವರಿಗೆ ।
ಹಾರಿ ಹಿಡಿವಳು ಈರಾಜ ಭೂಪನ ಪಟ್ಟು ತಗಲದಾಗೇ ।
ತ್ವರಿತದಿ ದಳವಾಯಿ ಪೆಟ್ಟು ಬೀಳುತಿತ್ತು ವೀರ ಜ ಭೂಪನಿಗೆ ।"

ಹೀಗಾಗಿ ವೀರರಾಜ ಭೂಪನು ಬಿದ್ದನು. ಅವನ ತಮ್ಮನೂ ಅಣ್ಣನಂತೆ ಅಂತಃಪುರದವರನ್ನು ಕಡಿದು ಆಗ ಬಂದು ರಣಭೂಮಿಯಲ್ಲಿ ತನುವನ್ನು ತೆತ್ತನು.

"ಹತ್ತಿದರಂಣ ಪೆರಿಯಪಟ್ಟಣದ ಕೋಟೆ ಬತೇರಿ ಮೇಗೆ ।
ಕರಕರ ಕಾಗದ ಬರದಾ ಮೈಸೂರು ಭೂಪತಿಗೆ ।
ಸಕ್ಕರೆ ಹಂಚಿಕೋ ನಿಮ್ಮ ಪುರದಲ್ಲಿ ಗಣಿತವಿಲ್ಲದಾಗೆ ।
ಶೀರ್ಷಗಿರಿ ಹರಿದಾಸರ ಪದವಿದೆ ಮೆರೆಯುತಿದೆಯಲ್ಲಾ ॥" [8]

(ಈ ಹಾಡಿನಲ್ಲಿರುವ ದೈವ ಮಾನುಷ್ಯ ಸಂಬಂಧವನ್ನು ನೋಡಿರಿ: ಪೂಜೆಗೆ ಒಲಿದು ಭಕ್ತರಿಗೋಸುಗ ಬೇಕಾದುದನ್ನು ಮಾಡುವ ದೇವತೆಗಳು, ಪ್ರಪಂಚದ ಆಗು ಹೋಗುಗಳೆಲ್ಲ ಅವರ ಕೈಯಲ್ಲಿದೆಯೆಂದು ನಂಬಿರುವ ಮನುಷ್ಯರು—ಈ ಇಬ್ಬರ ಸಂಬಂಧಕ್ಕನುಗುಣವಾಗಿರುವ ಫಲಾಫಲಗಳು—ಇವುಗಳನ್ನು ಗಮನಿಸಿರಿ. ಹಿಂದಿನ ಹಾಡಿನಲ್ಲಿ, ಕೊಲೆಗಾಗಿ ಹೊರಟಿರುವ ಸಂಗನು ತಾಯಿಗೂ ತನ್ನ ಗುರುದೇವನಾದ ಬಸವಣ್ಣನಿಗೂ ನಮಸ್ಕಾರ ಮಾಡುತ್ತಾನೆ. ಸಾಹುಕಾರನು ತಮ್ಮಂದಿರು ಸಿಕ್ಕದೆ ಹೋದಾಗ, "ಕೊಲ್ಲುವಕಿಂತ ಕಾಯುವ ಶ್ರೇಷ್ಠ, ಬಹಳ ಚೆಲೋ ಅವರ ಅದೃಷ್ಟ ॥" ಕೊಲ್ಲುವುದಕ್ಕೆ ಬಂದವನು ಕೊಂದುದೂ "ಶಿವ ತಂದು ಹಾಕಿದ ಮಾಲಿ" ಅದರಿಂದ.)

**II. ಎರಡನೆಯದು ಸ್ತುತಿಯ ಲಾವಣಿಗಳು.**—ಈ ಜಾತಿಯಲ್ಲಿ ಗುರು, ಶಾರದಾ, ಗಣಪತಿ ಸ್ತೋತ್ರಗಳು ಮುಖ್ಯವಾದವು; ಇಷ್ಟದೇವತಾ ಕುಲದೇವತಾ ಸ್ತೋತ್ರಗಳೂ ಬರುವುದುಂಟು. ನಾಟಕದಲ್ಲಿ ಪೂರ್ವರಂಗವೂ ಭರತವಾಕ್ಯವೂ ಇದ್ದಂತೆ, 'ಮಝುಮಾ' ಸೇರಿದಾಗ ಆದ್ಯಂತಗಳಲ್ಲಿ ಸ್ತೋತ್ರ, ಮಂಗಳಗಳನ್ನು ಹಾಡುತ್ತಾರೆ. ಸಾಮಾನ್ಯವಾಗಿ ಇವೆಲ್ಲ ಈ ಜಾತಿಯ ಸಂಸ್ಕೃತ ಸ್ತೋತ್ರಗಳಿದ್ದಂತೆಯೇ ಇವೆ. ಒಂದೊಂದು ಕಡೆ ಸ್ತುತಿ ಮಾಡುವಾಗ ಆ ದೇವತೆಯು ಯಾವಾಗ ಏಕೆ ಹುಟ್ಟಿತು ಎಂಬುದನ್ನೂ ಅದರ ಪ್ರಭಾವವೆಂತಹುದು ಎಂಬುದನ್ನೂ ವರ್ಣಿಸುವುದುಂಟು.

**III. ಮೂರನೆಯದು ಸವಾಲ್ ಲಾವಣಿಗಳು—ಪ್ರಶ್ನೋತ್ತರ ರೂಪವಾದವು.**—ಈ ಜಾತಿಯ ಸ್ವರೂಪವನ್ನು ವಿವರಿಸುವುದಕ್ಕಿಂತ ಒಂದು ಉದಾಹರಣೆಯನ್ನು ಕೊಡುವುದು ಉತ್ತಮ:

8 ಇದನ್ನು ಬರೆದವನು ಯಾರೆಂಬುದು ಗೊತ್ತಿಲ್ಲ.

೩. "ಹರಹರ ಹರಹರ ಶಂಭು ಸದಾಶಿವ ಶಂಭು ಶಂಕರಾ ಮಹದೇವ।
ಶಿವ ಶಿವ ಶಿವ ಶಿವ ಸದಾ ಭಜಿಸುವೆನು ತನ್ನ ನಂಬಿದಾ ಭಕ್ತರ ಕಾಯ್ವಾ ॥ ಪ ॥
ಕೈಲಾಸದಲಿ ಸಭೆ ಕೂಡಿತು ಇಂದ್ರ ಅಗ್ನಿ ಯಮ ನೈರುತ್ಯಾ।
ವರುಣ ವಾಯು ಕುಬೆರ ಯಿಶಾನ್ಯ ಅಷ್ಟ ದಿಕ್ಪಾಲರು ಕೂಡಿ ಸುತ್ತಾ॥
ಬ್ರಹ್ಮನು ಬಂದನು ವಿಷ್ಣುವು ಬಂದನು ಗಣಪತಿ ಬಂದನು ಕುಣಿಯುತ್ತ।
ತೆತ್ತೀಶ ಕೋಟಿ ಸುರರು ಕೂಡಿದರು ಷಣ್ಮುಖ ಸಭೆಯನು ಕೂಡಿಸುತಾ ॥
ನಾರದ ಮುನಿಗಳು ಬಂದರು ಅಲ್ಲಿಗೆ ವೀರಭದ್ರ ತಾ ನಸು ನಗುತಾ।
ಸಪ್ತ ರುಷಿಗಳು ಬಂದರು ಅಲ್ಲಿಗೆ ಆದಿಶಕ್ತಿ ತಾ ಪಾರ್ವತಾ॥
ಆದಿ ಲಕ್ಷ್ಮಿಯು ಬಂದಳು ಭಾರತಿ ವೀಣೆಯ ನುಡಿಸುತ್ತಾ।
ಸರಿಗಮ ಪಧನಿಸ ಸನಿಧಪ ಮಗರಿಸ ಸಪ್ತ ತಾಳಗಳ್ ಕೂಡಿಸುತಾ॥
ಝುನನನ ನನಝುಂ ಝುಂ ಝುಂ ಝುಂ ಝುಂ ಬ್ರಹ್ಮನು ತಾಳವ ಹಾಕುತಲೀ।
ಹಗಡಧಿಂ ಹಗಡಧಿಂ ತಟಕಿಟ ತಟಕಿಟ ವಿಷ್ಣು ಮೃದಂಗವ ನುಡಿಸುತಲೀ॥
ಸರ್ಪರ ಮುಂದೆ ಗೆಜ್ಜೆಯ ಕಟ್ಟಿಕೊಂಡು ಶಿವನು ಕುಣಿದ ಸಂತೋಷದಲೀ॥
ಯಾರು ಮುಂದೆ ಕುಣಿತು ಮಾಡ್ಯಾರು ಸಾಹಿರಾ। ತಿಳಿದು ಹೇಳೋ ನಿನ್ನ ಮನಸಿನಲಿ॥
ಯಾವ ದಿನ ಯಾವ ಗಳಿಗೆ ಸಾಹಿರಾ। ಕುಣಿತು ಮಾಡ್ಯಾರು ಯಾವ ವಾರದಲ್ಲಿ॥
ಯಾವ ನಕ್ಷತ್ರದಲಿ ನಾಟ್ಯವಾಡಿದನು ಶಂಕರ ಬಹು ಸಂತೋಷದಲೀ।
ಸವಾಲ್ ಮಾಡಿದೆ ಸಾಹಿರಾ ನಿನ್ನ ಮ್ಯಾಲೆ। ತಿಳಿದು ಹೇಳೋ ನಿನ್ನ ಮನಸಿನಲೀ[9] ॥"

* * * * * *

ಇದರಲ್ಲಿ ಝುಡಿತಿಯೆಂಬ ಇನ್ನೊಂದು ಉಪ ಜಾತಿಯುಂಟು.—

('ರಾಮಾಯಣದ ಸವಾಲ್'ನಿಂದ)

೪. "ಲಂಕದಾಗಿನ ಮನೆ ಕುಂತು ಕೇಳಿರಣ್ಣಾ ಲೆಕ್ಕಾ ಹೇಳುತಿನಿ ಬಹು ಟೀಕು।
ಐದು ಲಕ್ಷ ಸುಣ್ಣನಾ ಮನೆ ಯಿಟ್ಟಿಗೆ ಯೇಳು ಲಕ್ಷ ಕಟಕು॥
ಒಂಭತ್ತು ಲಕ್ಷ ಪಾಷಾಣ ಮನೆಗಳು ಕಬ್ಬಿಣದು ಆಕರ ಲಾಕಾ।
ಇಪ್ಪತ್ತು ಲಕ್ಷ ಚೊಕ್ಕ ಬೆಳ್ಳಿ ಮನೆ ಕಟ್ಟಗಾರ್ಕೆ ಬಹು ನಾಜೋಕಾ ॥
ಕೋಟಿ ಲಕ್ಷ ಕಂಚಿನ ಮನೆಗಳು ಇದರ ಹೊರ್ತು ಲೋಕದ ಬೆಳಕು (?)
ಐಸಿ ಹಜಾರ್ ಹೆಂಡರವಗೆ ಲಕ್ಷಪುತ್ರ ಅವನ ಉತ್ತರಕೆ॥
ಲಕ್ಷಮಂದಿ ಮಕ್ಕಳನಾ। ಬ್ಯಾರೆ ಹಿಡಿದು ತೆಗಿಯೊ ಕೂಸಾ।
ಮೊಮ್ಮಕ್ಕಳ ಹೆಸರೇನಾ। ಬಿಚ್ಚಿ ಹೇಳಬೇಕು ಐವಾನಾ॥
ಇಷ್ಟು ಮಂದಿ ಹೆಸರೇನಾ। ವಿವರಿಸಿ ಹೇಳೋ ಜಾಣಾ।
ಅದೆಷ್ಟು ಮಂದಿ ಸೊಸೆಯರು ರಾವಣಗೆ। ಹೋಗಬೇಕು ಸಾಹಿರಾ ಹೆಸರೇಳಿ॥"

9 ಈ ಲಾವಣಿಯನ್ನು ಬರೆದವರು ತಮ್ಮ ವಿಚಾರವಾಗಿ ಹೀಗೆ ಹೇಳಿಕೊಂಡಿದ್ದಾರೆ :—
"ರೋಮಕೆ ಕೋಟಿ ಲಿಂಗವು ಧರಿಸಿಹ ಬಾಲನಣ್ಣ ನಮ್ಮ ದೇವರಾ॥
ಚನ್ನಮ್ಮಲಾದ್ರಿಯೊಳು ಮುರುಗ್ಯ ಸ್ವಾಮಿಗಳು ಮಾಡುತಾರೆ ನಮಸ್ಕಾರಾ॥
ನಾಗೋಜಿ ಯಂಕೋಜಿಯೆಂಬೋ ಗೆಳೆಯರು ಕೂಡಿ ಸದಾ ಮಾಡುತಾರೆ ಗುರುತಾವೆ॥...."

ಅದೇ ಸವಾಲಿನಿಂದ ಇನ್ನೊಂದು ಪ್ರಶ್ನೆ.—

“ ತ್ರೈತಾಯುಗದಾಗೆ ರಾಮ ರಾವಣಗೆ ಕೆಡಕು ಹತ್ತಿ ಕದನ ಹುಟ್ಟಿ।
ಅವರಿಬ್ಬರಿಗೆ ಲಡಾಯಿ ಆಗುವಾಗ ನುಡಿಯುತಿತ್ತು ಹದಿನಾಲ್ಕು ಘಂಟಿ॥
ಒಂದು ಘಂಟಿ ಟನ್ನಂತ ನುಡಿದರೆ ರುಂಡ ಕುಣಿಯುತಾವೆ ಒಂದು ಕೋಟಿ !
ಮೂರು ಹಗಲು ರಾತ್ರಿ ಒಂದೇ ಸಮನಾಗಿ ನುಡಿಯುತಿತ್ತು ಅಂತಾ ಘಂಟಿ॥
ದಂಡು ಯೆಷ್ಟು ಮಡಿದಿತೂ। ಘಂಟಿಯೆಷ್ಟು ಬಡಿದೀತು ಬರೆಯಾದ ಯೆಲಿ! ಪಟ್ಟಿ॥
ಯಾವ ಘಂಟಯು ವರ್ಜ ಮಾಡಿದ ಹೇಳಿಕೊಡೋ ನೀ ಹುಚ್ಚ ಬಡ್ಡಿ[10] ॥ ”

ಹಾಗೆಯೇ ಶಾಸ್ತ್ರ ವಿಷಯಗಳನ್ನು ಕೇಳುವ ಇನ್ನೊಂದು ಉಪಜಾತಿಯುಂಟು :

೫. “........ಹೇಳೋ ಕೇಳ್ಳೆ ಯಿದೊಂದು ಚುಟ್ಕಾ।
ಬುಡವು ಮೇಲೆ ಕೊನೆ ಕೆಳಗಾಗಿ ಗಿಡ ಬೆಳೆಯುತ್ತೈತೆ ಜೋಡಿ।
ಕಡೆ ಮೊದಲಿಲ್ಲದೆ ಪುಷ್ಪ ಕಾಯಿ ಹಣ್ಣು ತುಂಬಿಯಿದೆ ಕೂಡಿ॥
ಸಡಗರದಿಂದಲಿ ಹಣ್ಣು ಕೀಳೊಕೆ ಹುಡುಗ ಬಂದ ನೋಡಿ।
ಬಿಡದೆ ಗಣೆಯೇರಿ ಬೀಳತೇಳುವನ ತೋರೂ ಸಭೆಯಲಿ॥ ಶುನಕಾ॥
ಮೂರು ಚರಣದಾ ಪಕ್ಷಿಯು ಮರದಲಿ ಕುಂತಿರುವುದು ಯೇನು॥
ಆರು ವರ್ಣದಾ ಗರಿಗಳೂ ರೆಕ್ಕೆಗೆ ಬಲ್ಲಿಯೇನೋ ನೀನು॥
ಬಾರಿ ಬಾರಿಗೂ ಹಾರುತಲಿರುವುದು ತೋರೋ ಯಿದರ ಕೂನು॥
ಹರಿ ಹರ ಬ್ರಹ್ಮಾದಿಗಳು ಕಾಣದೆ ಹುಡುಕುತಾರೆ ಯಿನ್ನು॥
ಭರದಿ ಇದರದು ಜವಾಬೇಳೋ ನಿನ್ನ ಮರಣ ಪರಿಯತನಕಾ[11] ॥ ”

(ಅಂತ್ಯ ಪ್ರಾಸದ ಜೊತೆಗೆ, ಚುಟ್ಕಾ, ಶುನಕಾ, ತನಕಾಗಳಲ್ಲಿರುವ ಪ್ರಾಸವನ್ನು ನೋಡಿರಿ.)

ಸವಾಲು ಲಾವಣಿಗಳಲ್ಲಿ ಅಲ್ಲಲ್ಲಿ ವೀರ ವಾದಗಳು ಮುಂದುವರಿದು ಆಣೆಗಳನ್ನು ಇಡುವುದೂ ಉಂಟು.—

೬. (ಅ) “ ಹೇಳಿದ ಮಾತನು ತಿಳಿಯದೆ ಬೊಗಳುವ ಮನುಜನಿಗೇನೂ ಅನುಭವವಿಲ್ಲಾ।
ಖೂಳ ಮನುಜನೆ ಯಾತಕೆ ಬೊಗಳುವೆ ತರವಲ್ಲಾ ನಿನಗಿದು ಗಮಕಿನ ಸೊಲ್ಲಾ॥ ”
(ಆ) “ ಜಬಾಬು ಹೊರ್ತು ಡಬ್ಬು ಹಿಡಿದರೆ ತಾಯಿಮೇಗೆ ಬಿಚ್ಚಿದಂಗೆ ಲಾಡಿ। ”

ಇದು ಹೀಗೆಯೇ ಬೆಳೆದು ಒಬ್ಬರನ್ನೊಬ್ಬರು ಚಿತ್ರ ಚಿತ್ರವಾಗಿ ಮೂದಲಿಸುತ್ತ—

“ಕೇಳ್ ಪಂಡಿತಾ। ಕೇಳ್ ಪಂಡಿತಾ। ಖಂಡಿತ ಮಾತಾ।
ಕೋಪಮಾಡಿ ಪೋಡಬ್ಯಾಡ ಛೂಪರೊಳಗೆ ಅಳುತಾ॥ ”

10 ಇದನ್ನು ಬರೆದವನು
“ ದೊಡ್ಡ ಹರಿಪರ್ ತಕ್ಕಂತ ನಗರಿ। ವಸ್ತಾದಿ ಶೆಟ್ಟಿಪ್ಪಿರಿ
ಸುತ್ತ ರಾಜ್ಯಕ್ಕೆ ಅಸ್ಕಾರೀ।
ಅಂಜ ನಡೆಯುತಾನೆ (ಅವನ) ವೈರೀ॥ ”

11 ಇದನ್ನು ಬರೆದವನು, “ ಪರಿ ಪರಿ ಪಾಹಿರಾ ಸರಜ ಪಾಪಣ್ಣ.”

ಎಂದು ಆರಂಭವಾಗಿ,

"ಸುಡುವೆನಗ್ನಿಯೊಳಗೆ । ಮುರಿದು ನಿಮ್ಮ ಪ್ರಾಣ ಹರಿವೆನು ಕ್ಷಣದೊಳಗೆ"

ಎನ್ನುವ ವರೆಗೂ ಹೋಗಿ ಆ ಬೆದರಿಕೆಯು ಕಾರ್ಯವೇ ಆಗಿ ಪರಿಣಮಿಸುವುದೂ ಉಂಟು. ಮೊದಲೆಯು ಮೃದುವಾಗಿ ಮಿತಿ ಮೀರದಿರುವಾಗ 'ತಾನ್' ಎಂದೂ, ಮಿತಿ ಮೀರಿ ಕ್ರೋಧ ಪ್ರದೀಪ್ತವಾಗಿ ಮಾತು ಮೆರೆಯುವಾಗ 'ರಿಂದಾ' ಎಂದೂ ಕರೆಯಿಸಿಕೊಳ್ಳುತ್ತವೆ.

**IV. 'ರಂಗು' ಎಂದು ಹೆಸರಾದ ಶೃಂಗಾರ ಪದಗಳು ಇನ್ನೊಂದು ಜಾತಿ.**—ಲಾವಣಿಗಳಲ್ಲೆಲ್ಲ ಇದೇ ಬಹಳ ಸ್ವಾರಸ್ಯವಾದುದೆಂದು ಇದಕ್ಕೆ ಈ ಹೆಸರು ಬಂದಿದೆ. ಮಿಕ್ಕ ಲಾವಣಿಗಳನ್ನು ಹೇಳುವಾಗ ಕಾಣದ ರಾಗ ವಿನ್ಯಾಸವು ಇಲ್ಲಿ ತೋರುವುದುಂಟು. ಈ ಗುಂಪಿನಲ್ಲಿ ಶೃಂಗಾರಾಂಗಗಳಾದ ಸಂಭೋಗ ವಿಪ್ರಲಂಭಗಳ ವೈಖರಿಯೆಲ್ಲವೂ ತೋರುವುದು. ಸಾಮಾನ್ಯವಾಗಿ ನಾವು ಕಾವ್ಯಗಳಲ್ಲಿ ನೋಡುವ, ಪ್ರಾಯ ಸಮರ್ಥೆಯರಾಗಿ ಲೋಕವನ್ನರಿತಿರುವ ನಾಯಕೆಯರು, ಅವರನ್ನು ಅಡ್ಡ ಗಟ್ಟಿ ರೂಪಾದಿಗಳಿಂದ ಒಲಿಸಿಕೊಳ್ಳುವ ನಾಯಕರು—ಇವರು ಈ ಹಾಡುಗಳಲ್ಲಿ ಪ್ರಧಾನ ಪಾತ್ರಗಳು. ಅಲ್ಲಲ್ಲಿ ಪರಕೀಯ ನಾಯಕೆಯರನ್ನು ಸಂಗ್ರಹಿಸಿರುವ ಕಥೆಗಳೂ ಬರುವುದುಂಟು. ಈ ರಂಗು ಲಾವಣಿಗಳು ಬಹುಶಃ ತಮಿಳಿನ ಕಡೆಯಿಂದ ಬಂದವುಗಳ ಸಂತಾನವಿರಬಹುದು[12]. ನ್ಯಾಯವಾಗಿ ಈ ಗುಂಪು ನಮ್ಮ ಎರಡನೆಯ ಜಾತಿಯ ವಿನೋದದ ಪದಗಳಲ್ಲಿ ಸೇರಬೇಕು. ಆದರೂ ಲಾವಣಿಯೆಂಬ ಹೆಸರೂ ಆ ಪಡಿಯಚ್ಚಿನಲ್ಲಿಯೇ ಇರುವ ಛಂದವೂ ಇವುಗಳನ್ನು ಲಾವಣಿಗೆ ಸೇರಿಸಿವೆ.

ಇದರಲ್ಲಿರುವ ನಾನಾ ಭಂಗಿಗಳಿಗೆಲ್ಲ ಉದಾಹರಣೆಯನ್ನು ಕೊಡುವುದು ಇಲ್ಲಿ ಸಾಧ್ಯವಿಲ್ಲವಾಗಿ ಒಂದೆರಡು ಉದಾಹರಣೆಗಳನ್ನು ಮಾತ್ರ ಕೊಡುವೆವು:—

೭. "ವೈಯಾರೀ ಮಣಿ। ಸುಂದರಾ ಕಣಿ। ಪನ್ನಗಾ ವೇಣಿ। ಯನ್ನಾನೂ ನೋಡೆ ॥ ಪ ॥
ತೋಯಜ ಗಣಿ। ಶಾರಿಕ ವಾಣಿ ।ನೀರೆ ಬಿನ್ನಾಣಿ। . . . . . . . . . . . .ನೀಡೆ॥
ಕಾಯಜ ರಾಣಿ। ಪೋಲುವೆ ಹಣಿ। ಪಲ್ಲವ ಪಾಣಿ। ಕರುಣಿಸಿ ಕೂಡೆ॥
ಮಾಯಕಾತಿ ಭಣಿ। ನಾರಿ ಶಿರೋಮಣಿ। ಸದ್ಗುಣ ಶ್ರೇಣಿ। ಪಂಥವ ಬಿಡೆ।
ಕೈಯ ಹರಡಿ ಮಣಿ। ಕೊರಳಿಗೆ ಕಟ್ಟಾಣಿ। ರುಳಿ ಸರಪಣಿ। ಕೊಳ್ಳೇ ಮನ ಮಾಡೆ॥
ಹಾ ಯುವತಿಯರೊಳು ಸರಿಗಾಣೆ। ತೋಯಜ ಮುಖಿ ಕೇಳ್ ನಿನ್ನಾಣೆ।
ಹೇಯವೆಂದು ತಿಳಿಯದೆ ನಿನ್ನ। ವಾಯವರಿತು ಬೇಡಿದೆ ರನ್ನೆ॥"

ತನ್ನನ್ನು ಅಡ್ಡಗಟ್ಟಿದವನಿಗೆ ಒಬ್ಬಳು ಬುದ್ಧಿ ಹೇಳುತ್ತಾಳೆ. ಇಬ್ಬರು ಹೇಳುವುದನ್ನೂ ಕೇಳೋಣ:—

೮. "ಧರೆಯೊಳು ನಿನ್ನ ಪರಿ ಯಿರುವ ಸ್ತ್ರೀಯರು ಅರಸಿ ನೋಡಿದರು ಯಿಲ್ಲವಲ್ಲೆ।
ಸರಸಿಜ ನಯನವು ನಾಸಿಕ ಸಂಪಗೆ ವರಸೆ ದಂತಾ ಹುಬ್ಬು ಸ್ಮರ ಬಿಲ್ಲೆ॥

12 Compare P. T. Srinivasa Iyengar's 'History of the Tamils', Chapter XIII.

ತರಳೆಯ ಅಡಿ ತಳಿರು ನುಣ್ಣು ದೊಡೆ ಮಿಳಗುವ ಕಳಶ ಕುಚವು ಫುಟಚಂಡಲ್ಲೆ ।
ಗರ ಗರ ದೇಶವು ಹುಡುಕಿ ತಿರುಗಿದರು ಹರಿಮುಖಿ ನಿನ್ನಾ ಸಮನಿಲ್ಲವಲ್ಲೇ ॥
ಶರಹರಗೊಳಿಸುವ ತನು ಧಾರೆಯುನೆರೆವೆನು ಕೇಳೆಲೆ ನಿನಗಿನ್ನಾ ।
ದುರುಳ ಮಾರನ ಶರ ಹತಿ ಘಾಯಕೆ ತ್ವರಿತದಿ ಅವುಷಧ ಕೊಡೆ ರನ್ನಾ ॥ "

* * * *

" ತರುಣಿ ತರುವೆನೆಂದು ಹರಿಯ ಸತಿಯ ತಂದು ಭರದಿ ರಾವಣನು ತಾ ಕೆಟ್ಟ ।
ದುರುಳ ಕೀಚಕ ಮನವರಿಸದೆ ದ್ರೌಪದಿಯಿಂದ ಹರಣ ಕಳದುಕೊಂಡ ಭ್ರಷ್ಟ ॥
ವರ ಮುನಿ ಗೌತಮುರರಸಿಗೆ ಭ್ರಮಿಸಿ ಸುರಪತಿಗೆ ಅಂಗ ಯೋನಿಯಾಯ್ತು ನಷ್ಟ ।
ಗುರು ಬೃಹಸ್ಪತಾಚಾರ್ಯರರಸಿ ಮಾಡಿದಳ್ ತರಳ ಚಂದ್ರಸಿಗೆ ಕಳೆ ನಷ್ಟಾ ॥
ಹಿರಿಯರಿಗಾದ ಪಾಡರಿಯದೆ ಸುಮ್ಮನೆ ಮೈಮರೆತು ನಡಿಬ್ಯಾಡೋ ಸಂಪನ್ನಾ[13] ॥ "

ಇದರಲ್ಲಿ—

" ಒಬ್ಬ ಸಿಪಾಯಿಯು ಹೆಂಡತಿಯ ಮಾತು ಕೇಳದೆ ಯುದ್ಧಕ್ಕೆ ಹೋಗಿ ಮೃತನಾದುದು, ಅವಳು ಕೆಟ್ಟ ಕನಸು ಕಂಡು ಅಳುಕಿ ಗಂಡನನ್ನು ಹುಡುಕಿಕೊಂಡು ಹೋಗಿ, ಅವನ ರುಂಡ ಮುಂಡಗಳನ್ನು ಯುದ್ಧ ರಂಗದಲ್ಲಿ ಕಂಡು ಅವುಗಳನ್ನು ತಬ್ಬಿಕೊಂಡು ಅತ್ತು ಹೊರಳಾಡಿದುದು "—

ಇಂತಹ ಸಾಮಾನ್ಯ ಕಥೆಯ ಹಾಡುಗಳೂ,

" ಒಬ್ಬ ವ್ಯಾಪಾರಿಯು ದೇಶಾಂತರಕ್ಕೆ ಹೋಗಿ ಬಹು ದಿನವಾದರೂ ಬರದಿರಲು, ಅವನ ಹೆಂಡತಿಯು ಮತ್ತೊಬ್ಬನನ್ನು ಕೂಡಿಕೊಂಡು ಮಗನನ್ನು ಪಡೆದು ವ್ಯಾಪಾರ ಮಾಡಿಕೊಂಡಿದ್ದಳು ; ಅವಳ ಗಂಡನು ಕೊನೆಗೆ ಬಂದು ಹೆಂಡತಿಯನ್ನು ಗುರುತಿಸಿದನು ; ಅವಳೂ ಅವನನ್ನು ಗುರುತಿಸಿದಳು. ಉಪಪತಿಯು " ನಿನ್ನ ಹೆಂಡತಿಯನ್ನು ನೀನು ತೆಗೆದುಕೊ, ನನ್ನ ಮಗನನ್ನು ನನಗೆ ಕೊಟ್ಟುಬಿಡು " ಎಂದನು. ಇಬ್ಬರಿಗೂ ಜಗಳವಾಗಿ ಕೋರ್ಟಿನ ವರೆಗೆ ಹೋಯಿತು. ಕೊನೆಗೆ ಕೋರ್ಟಿನಲ್ಲಿ ವಾದವಾಡುವಾಗ ಗಂಡನು,

" ಗೋಡದ ಹಸುವ ನಾ ತಂದು ಬಿಟ್ಟಿದ್ದೆ ಊರೊಳಗೆ ಒಂದು ।
ಊರಾಗಳಾ ಹೋರಿಯು ಬಂದು ಕಟ್ಟಿತು ಗರ್ಭ ಕರುವೊಂದು ॥
ಹಸುವಿನ್ಹಿಂದೆ ಕರು ಹೋಗಬೇಕೇ । ಹೋರಿ ಹಿಂದೆ ಕರ ಹೋಗಬೇಕೆ ॥

ಎಂದು ವಿಚಿತ್ರ ವಾದ ಮಾಡುತ್ತಾನೆ "

ಎಂಬ ಇಂತಹ ವಿಚಿತ್ರ ಕಥೆಗಳ ಹಾಡುಗಳೂ ಉಂಟು.

**V. ವೇದಾಂತ ತತ್ತ್ವಗಳನ್ನೂ ಉಪನಿಷದ್ರಹಸ್ಯಗಳನ್ನೂ ಬೋಧಿಸುವ ವೇದಾಂತದ ಲಾವಣಿಗಳು ಮತ್ತೊಂದು ಜಾತಿ.**—ಈ ಶಾಖೆಯಲ್ಲಿ ಅದ್ವೈತ

13 ಈ ಲಾವಣಿಯಲ್ಲಿ ನಾಲ್ಕು ಪಾದವು ಮುಗಿದಮೇಲೆ ಒಂದು ಪಾದವು ಅಧಿಕವಾಗಿದೆ. ಅದರ ಜೊತೆಗೆ ಹಿಂದಲ ಪಲ್ಲವಿಯು ಎರಡನೆಯ ಪಾದವನ್ನು ಸೇರಿಸಿಕೊಂಡು ಹಾಡಿ ಸಮಪಡಿಸಿಕೊಳ್ಳಬೇಕು.
Cf. ಶುಭಾ ಸಂವಾದ. *Vide* Winternitz's 'Some Problems of Indian Literature,' page 52 ff.

ಮತ್ತು ಷಟ್‌ಸ್ಥಲ ಸಿದ್ಧಾಂತಗಳೇ ಹೆಚ್ಚಾಗಿರುವುದೊಂದು ವಿಶೇಷ. ದರ್ಶನ ಶಾಸ್ತ್ರಗಳ ಸಾರವೆಲ್ಲವೂ ಇಲ್ಲಿ ಸಾಮಾನ್ಯ ಜನರ ಮಾತಿನಲ್ಲಿ ಹಿರಿಯ ಹೊಳೆಯಾಗಿ ಹರಿದಿದೆ; ಧರ್ಮಶಾಸ್ತ್ರಗಳು, ಸಮಾಯಾಚಾರ ಧರ್ಮಗಳು, ನೀತಿಗಳು—ಎಲ್ಲವೂ ಇಲ್ಲಿವೆ.

ನೊಂದು ಸಮಾಧಾನ ಹೇಳಿಕೊಳ್ಳುವುದು

೯. "ಬಿಡು ಯಾತರ ಜಲ್ಮವು ಕೂಡಲಿಲ್ಲ ಸುಖಸಾರಾ ।
ಪೂರ್ವದಲ್ಲಿ ಮಾಡಲಿಲ್ಲ ಶಿವಪೂಜಿ ಮನಸಾರಾ ॥"

೧೦. "ಏನು ನಡೀತೀಯೋ ಯಾಕೆ ಕೆಡುತೀಯೋ ।
ಮಾನುಷ್ಯ ಜನ್ಮವನು ವ್ಯರ್ಥಮಾಡಿಬಿಟ್ಟೆ ಮೂರ್ಖ ॥ ಪ ॥
ಹೆಂಡತಿಯ ಬದುಕನೀಗ ಸವರಿ ನೋಡಿದಂತೆ ।
ಮೊನ್ನೆ ಕಂಡ ಸಾಲಗ್ರಾಮವನ್ನೆ ಮುಟ್ಟಬಾರದೆ ತಡಹಬಾರದೆ ॥
ರಂಡೆಯರ ವಿಷಯಕಾಗಿ ಕಾಲಿಗೆರಗಿದಂತೆ ।
ತತ್ತ್ವಪಂಡಿತರ ಚರಣಕೆ ನೀ ಬೀಳಬಾರದೆ ಹೊರಳಬಾರದೆ ॥
ದುಂಡು ಮುತ್ತಿನ ಸರವ ಸತಿಗೆ ಕೊಂಡು ಹಾಕಿದೊಲು ।
ಪಿಂಡಾಂಡವ ವಿವರಿಪರಿಗೆ ಒಂದು ತುತ್ತು ನೀಡಬಾರದೆ ಮಾಡಬಾರದೆ ॥
ಕೊಂಡು ಸುದ್ದಿ ನಾರಿ ಕಿವಿಯ ಕಂಡಿಯೊಳು ।
ಹೇಳ್ವ ತರದಿ ಅಖಂಡ ಸಾಧುಗಳೊಳು ನೀಲ ವುಸುರಬಾರದೆ ಅರುಹ ಬಾರದೆ" ॥ ೧ ॥

ಗುರುವಿನ ಮಹತ್ತ್ವ

೧೧. "ಗುರು ಅಲಕ್ ನಿರಂಜನ ನಿರವಯ ನಿರಗುಣ ನಿಷ್ಕಲನೆನುತೆಲ್ಲಾ ।
ಪರಿ ಪರಿ ಯೋಗಾಭ್ಯಾಸ ಕರಿಸಿದ ಹರಿ ಹರರಿಗೆ ಗುರು ದೊರೆಯಲಿಲ್ಲ ॥
ಗುರು ದಿಗಂಬರ ಸ್ವರೂಪನು ಅಂತೂ ಭವಸಾಗರ ದಾಂಟಿಪುದು ಬಲ್ಲ ।
ಗುರು ಪರಬ್ರಹ್ಮ ಪರಾತ್ಪರ ಪರಮಾತ್ಮ ಪರಂಜ್ಯೋತಿಯಾಗಿ ಮೆರೆಯುವನೆಲ್ಲಾ ॥
ನೋಡು ಗುರು ಸತ್ಯವೆ ಸಾಗರಾ ಆ ಗುರು ನಿತ್ಯ ನಿರಾಕಾರಾ ।
ನೋಡು ಗುರು ನಿರಂಹಕಾರಾ । ಗುರು ಮೃತ್ಯುಂಜಯ ಧೀರಾ ॥
ಗುರು ಅಗಮ್ಯ ಗೋಚರ ಅಗಣಿತ ಅದ್ವಯ ಲೀಲಾಜಾಲವೆ ಮಯವಾಗಿದೆಯೆಲ್ಲಾ ॥"

* * * * * *

ತತ್ತ್ವ ವಿಚಾರ

೧೨. "ಪಾರ್ವತಿ ಕೇಳುತಾಳೆ ಪರಮೇಶ್ವರನಿಗೆ ಕೈಯ ಮುಗಿದು ನಿಂತರ್ಧಾಂಗಿ ।
ಪಿಂಡವಾಗುವ......ಯೆನಗೆ ತಿಳಿಸಬೇಕು ಯಿದರ ಬಗಿ ॥
ಮುಟ್ಟಾದ ಮೂರು ದಿವಸಕೆ ಶುದ್ಧ ಪಂಚಮಿ ದಿನ ।
ಬಿಂದು ಬಿದ್ದಿತು ಕಲಾಕಾಯಿತು ಕೇಳ್ಮಾಯರ ಜನನ ॥
ಇಪ್ಪತ್ತೈದು ದಿವಸಕೆ ಆಗುತ ಬಂತು ನಾಜೋಕು ಬಹು ಸಣ್ಣ ।
ಮೂರು ತಿಂಗಳಿಗೆ ಕೈಕಾಲ್ಬೆರಳು ನಾಲ್ಕು ತಿಂಗಳಿಗೆ ನಾಸಿಕ ಕರಣ ।

ಐದು ತಿಂಗಳಿಗೆ ಅರವು ಸಮಾನ ದೇಹಕೆ ಮೂಡುತವೆ ರೋಮ ॥
ಆರು ತಿಂಗಳಿಗೆ ಆರು ಮೂರು ಒಂಭತ್ತು ದ್ವಾರಾ ಎಲ್ಲಾ ತೈಯ್ಯಾರಾ ॥
ಏಳು ತಿಂಗಳಿಗೆ ಜ್ಞಾನ ಹುಟ್ಟಿತು ಅಲ ವುಪಕಾರ ॥ "

* * * * * *

## ಉಪದೇಶ (ಜಾಣನ ಹಾಡು)

೧೩. "ಜ್ಞಾನದಿಂದ ಶಿವ ಧ್ಯಾನವ ಮಾಡು । ಆ ।
ಜ್ಞಾನದಿಂದ ಶಿವ ಧ್ಯಾನವ ಮಾಡು ॥ ಪ ॥
ಕಾಮ ಕ್ರೋಧವ ಕಡಿಮೆಯ ಮಾಡು ।
ಗರ್ವಾಂಕಾರ ಗಲೀಜು ಮಾಡು ।
ಸೊಕ್ಕು ಸೊಟ್ಟನೆ ಬೂದಿಯ ಮಾಡು ।
ನಿನ್ನೊಳಗೆ ನೀ ವಿಚಾರ ಮಾಡಣ್ಣಾ ಕೇಳೋ ಜಾಣಾ । ॥ ೧ ॥
ಆರು ಶಾಸ್ತ್ರವ ಸಿದ್ಧಿಯ ಮಾಡು ।
ಹದಿನೆಂಟು ಪುರಾಣವ ಪಾಠವ ಮಾಡು ।
ಎಂಟೆಂಟು ದಿನಕೊಮ್ಮೆ ಸಂತೆಯ ಮಾಡು ।
ರೊಕ್ಕ ನೋಡಿ ನೀ ವ್ಯಾಪಾರ ಮಾಡಣ್ಣಾ ಕೇಳೋ ಜಾಣಾ । ॥ ೨ ॥
ಹುಣವಿ ಅಮಾಸಿಗೆ ಒಂದ್ಹೊತ್ತು ಮಾಡು
ಬೆಳ ಬೆಳತನಕ ಭೋಗವ ಮಾಡು ।
ಮುಂಜೇಲೆದ್ದು ಶಿವ ಭಜನೆಯ ಮಾಡು ।
ಹಸಿದು ಬಂದವರಿಗೆ ಅನ್ನವ ನೀಡು ।
ಸಿಟ್ಟು ಬಂದರೆ ನಿಧಾನ ಮಾಡಣ್ಣಾ ಕೇಳೋ ಜಾಣ । ॥ ೩ ॥
ಸರ್ಕಾರ ಕಂಡರೆ ಸಲಾಮು ಮಾಡು ।
ವೈರಿಯ ಕಂಡರೆ ಧೈರ್ಯವ ಮಾಡು ।
ಮನಿ ಬಿಚ್ಚಿ ಮೇಲೆ ಮಾಡಿಯ ಮಾಡು ।
ಮಾಡಿಗೆ ತಕ್ಕಂತ ಮಡದಿಯ ಕೂಡಣ್ಣಾ ಕೇಳೋ ಜಾಣ । ॥ ೪ ॥
ತಂದೇ ತಾಯಿಗೆ ಪೂಜೆಯ ಮಾಡು ।
ಲಾ(ನಾ)ಡೀ ನೋಡೀ ವೈದ್ಯ ಮಾಡು ।
ಅತ್ತೆ ಮಾವಗೆ ಮರ್ಯಾದೆ ಮಾಡು ।
ಹೊತ್ತು ಮುಳುಗಿದಲಿ ನಿಸ್ತ್ರಿಯ ಮಾಡು ।
ಕಡಕೊಳ್ಳೆಂಬುದು ಮೊಕ್ಕಾಮು ಮಾಡಣ್ಣಾ ಕೇಳೋ ಜಾಣ । " ॥ ೫ ॥

ಇಲ್ಲಿಗೆ, ಸಾಮಾನ್ಯವಾಗಿ ಲಾವಣಿಯ ಉಪ ಜಾತಿಗಳನ್ನು ಹೇಳಿ ಮುಗಿಸಿದಂತಾಯಿತು. ದಾಸರ ಪದಗಳಲ್ಲಿ ಬರುವ, ತಾಳವನ್ನು ಮಾತ್ರ ಸೂಚಿಸಿ ರಾಗದ ಹೆಸರನ್ನು ಹೇಳದೆ ಬಿಟ್ಟಿರುವ ತಾಳ ಪದಗಳೆಲ್ಲ ಈ ಜಾತಿಯವೆಂದೇ ನಮ್ಮ ಮತ. ಹೆಚ್ಚಾಗಿ

ಜನಪದ ಸಾಹಿತ್ಯವೆಲ್ಲ ಈ ಲಾವಣಿಯ ಜಾತಿಯದೇ ಆಗಿರುವುದು. ಆದರಿಂದ ಇದರ ರಚನಾ ಕ್ರಮವನ್ನೂ ಹಾಡುವ ರೀತಿಯನ್ನೂ ಗಮನಿಸಿ ಮುಂದಿನ ವಿಚಾರ ಗಳಿಗೆ ಹೋಗೋಣ.

ಈಗ ನಮಗೆ ದೊರೆತಿರುವ ಲಾವಣಿಗಳನ್ನೆಲ್ಲ ಪರೀಕ್ಷಿಸಿ ನೋಡಿದರೆ ಅವುಗಳ ರಚನಾ ಕ್ರಮದಲ್ಲಿ ಎರಡು ರೀತಿಗಳಿದ್ದಂತೆ ಕಾಣುತ್ತದೆ: ಇವನ್ನು, ಮೊದಲನೆಯದು ಕಾವ್ಯ ಜಾತಿ, ಎರಡನೆಯದು ಚಂಪೂ ಜಾತಿ ಎಂದು ಹೇಳಬಹುದು. ಇದರಲ್ಲಿ ಮೊದಲ ನೆಯ ಜಾತಿಯ, ಗತಿ ಸಾರಳ್ಯವನ್ನು ಗಮನಿಸುತ್ತ, ಏಕ ನಾದದ ಶ್ರುತಿಯನ್ನೂ ಕೈಯ ತಾಳದ ಏಕತಾಳದ ನಡೆಯನ್ನೂ ಹಿಡಿದು ಪಾದಗಳಾಗಲೀ ಆವರ್ತಗಳಾಗಲೀ ಇಷ್ಟೇ ಇರಬೇಕೆಂಬ ನಿಯಮವಿಲ್ಲದೆ, ಹಾಡುಗಾರನು ಬೇಕೆಂದಾಗ ಮುಂದೆ ನಡೆದು, ಬೇಡ ವೆಂದಾಗ ನಿಲ್ಲುವ ಜಾತಿಗಳು. ಮೇಲೆ ಕೊಟ್ಟಿರುವ ಜಾಣನ ಹಾಡು (೧೩) ಇದಕ್ಕೆ ಒಳ್ಳೆಯ ಉದಾಹರಣೆ. ಒಂದು ಕಡೆ ಐದು ಪಾದಗಳು, ಇನ್ನೊಂದು ಕಡೆ ಏಳು ಪಾದಗಳು ಬರುವುದೂ ಉಂಟು. ಒಂದೊಂದು ಪಾದದಲ್ಲೂ ಅರ್ಥ ಪೂರ್ಣವಾಗಿರುವುದ ರಿಂದ ಇನ್ನೊಂದು ಪಾದವು ಬೇಕೇ ಬೇಕೆಂಬ ಆಕಾಂಕ್ಷೆಯಿಲ್ಲ. ಇಂತಹ ಜಾತಿಗಳಲ್ಲಿ ಪಲ್ಲವಿಯೂ ಒಂದೇ ಪಾದವಾಗಿರುವುದು. ಬೇಕಾದರೆ ಅದನ್ನೇ ಪುನರಾವೃತ್ತಿ ಮಾಡಬಹುದು. ಆದರಲ್ಲಿ ಇನ್ನೊಂದು ಜಾತಿಯಲ್ಲಿರುವಂತೆ, ನುಡಿಯು ಮುಗಿದೆಡೆಗೆ ಪಲ್ಲವಿಯು ಹೊಂದಿಕೊಳ್ಳಬೇಕೆಂಬ ನಿಯಮವೂ ಇಲ್ಲ. ಈ ಜಾತಿಯನ್ನು ಮುಂದೆ ಹೇಳುವ ಕೋಲಾಟದ ಪದಗಳಲ್ಲಿಯೂ 'ತಂದಾನಾ' ಪದಗಳಲ್ಲಿಯೂ ಸ್ಪಷ್ಟವಾಗಿ ಕಾಣಬಹುದು. ಈ ಜಾತಿಯಲ್ಲಿ ನಾಲ್ಕು ಮಾತ್ರೆ ಐದು ಮಾತ್ರೆಯ ಗಣಗಳೇ ಪಾದವನ್ನು ಕಟ್ಟುವವು. ಒಂದೊಂದು ವೇಳೆ ಕಾಗದದ ಮೇಲೆ ಗುರ್ತಿಸಿದಾಗ ಮೂರು ಮಾತ್ರೆಯ ಗಣಗಳಂತೆ ಕಂಡರೂ ಅವು ಬಾಯಲ್ಲಿ ಹೇಳುವಾಗ ತಪ್ಪದೆ ಐದು ಮಾತ್ರೆಯ ಗಣಗಳೋ (ಸಾಮಾನ್ಯವಾಗಿ ಇವೇ ಹೆಚ್ಚು), ನಾಲ್ಕು ಮಾತ್ರೆಯ ಗಣಗಳೋ ಆಗುತ್ತವೆ.

ಎರಡನೆಯ ಚಂಪೂ ಜಾತಿಯು ಈ ಕಾವ್ಯ ಜಾತಿಯಿಂದ ಮುಂದಕ್ಕೆ ಬೇಕಾ ದಷ್ಟು ದೂರ ಸಾಗಿದೆ. ಆದರೂ ತನ್ನ ಮುಖ್ಯ ಲಕ್ಷಣವಾದ ಲಯವನ್ನು ಬಿಡದೆ ಅನುಸರಿಸಿಯೇ ಇದ್ದುಕೊಂಡು ಆ ಲಯದಲ್ಲಿ ಬೇಕಾದ ವೈವಿಧ್ಯವನ್ನು ಕಲ್ಪಿಸಿ ಕೊಂಡಿರುವುದು ಈ ಜಾತಿಯ ಗುರುತು. ಒಂದು ಉದಾಹರಣೆಯನ್ನು ತೆಗೆದು ಕೊಂಡು ಇದನ್ನು ವಿಶದಪಡಿಸೋಣ :—

ಇದು ಶ್ರೀರಂಗಪಟ್ಟಣದ ಲಾವಣಿಯಿಂದ ಆರಿಸಿಕೊಂಡ ತುಂಡೊಂದು :—

೧೪. "ಭೇಷಕ್ ತಮಾಷಾ ಟೈಗರ್ ನಿಶಾನಾ ಟೀಪು ಸುಲ್ತಾನನ ಬಿರುದಾಯ್ತು ।
ಮುಸಲತ್ ಮಾಡಿದ ಮೀರ್‌ಸಾದಕನಿಗೆ ದೇಶ ದ್ರೋಹಿಯೆಂಬ್ಹೆಸರಾಯ್ತು" ॥ ಪ ॥

* * * * * *

ಚಾಲ್ ॥ ಹರಾಮಖೋರರ ಕರಾಮತ್ತರಿತನು ಟೀಪುಸುಲ್ತಾನನು ನಿಮಿಷದಲಿ ।
ಅರೇ ಹಮಾರೇ ನಮ್ಮಖ್ಬರಾಮ ಕರೇಸೋ ಕಾಮ್ಮೆಂದ ಘನಸಿನಲಿ ॥

ಸ್ವರಾಜ್ಯ ರಕ್ಷಣೆಗೋಸ್ಕರ ಸುಲ್ತಾನ್ ರಣಾಗ್ರಕ್ಕೊರಟನು ರೋಷದಲಿ ।
ಫರಂಗಿ ಸೋಲ್ಜರ್ ತರಂಗ ಮಧ್ಯದಿ ತುರಂಗ ಬಿಟ್ಟನು ತ್ವರಿತದಲಿ ॥
ಪರಂಪರೆಯ ಪರ ವಿರೋಧಿ ಫೌಜನು ಕುರೀಗಳಂದದಿ ಖಡ್ಗದಲೀ ।
ಸರಾಸರೀ ಇಲ್ ಬರೆಯಲು ಸಾಗದು ತರಿದನು ಎಷ್ಟೋ ಶಿರ ಬದಲಿ ॥
ಪರಾಕ್ರಮದಿ ಬಲು ಹೊರಾಡಿ ಬಿದ್ದನು ಸಾರಂಗ ಬಾಗಿಲ ಗವಿಯ ಬಳಿ ।
ಫರಂಗಿ ಫೌಜನ ತರಂಗ ನುಗ್ಗಿತು ಶ್ರೀರಂಗಧಾಮನ ಪಟ್ಣದಲಿ ॥

ಉಡ್ಡಾ ॥ ಅಳಿದೋದ ಮೇಲೆ ಮೈಸೂರ್ ಹುಲಿಯು ರಣದಲ್ಲಿ ।
ಗಲಭೇಯು ಹತ್ತಿತೂ ಶ್ರೀರಂಗಪಟ್ಣದಲ್ಲಿ ।
ಸುಲುಗೇಯ ಮಾಡಿದರು ಶತ್ರುಜನ ಪುರದಲ್ಲಿ ।
ಬಳಿಕಾದ ವಿವರ ಬರದೇನು ಇಲ್ಲ ಫಲವಿಲ್ಲ ॥

ಗುಲ್ ಉಡ್ಡಾ ॥ ಬಂದಿದ್ದವರೆಲ್ಲ ತಿಂದು ತೇಗೆ ।
ಹಿಂದಿನ ರಾಜರ ಸಂತತಿಗೆ ॥
ಮುಂದಿನೊಳು ಮುಮ್ಮಡಿ ಕೃಷ್ಣಂಗೆ ।
ಪೊಂದಿತು ರಾಜ್ಯವು ಸಾವಿರದೇಳ್ನೂರ್ ತೊಂಭತ್ತೊಂಬತ್ರೊಳಗೇ ॥

ಶ್ಲೋಕ ॥ ರಾಜಧಾನಿಯ ಮೈಸೂರ್ ಪಟ್ಟಣ ಮಾದರಿಯ ನವ ರೀತಿ ।
ಸೋಜಿಗದ ಸಂಸ್ಥಾನವಾಗಿದೆ ಕೃಷ್ಣರಾಜರ ಕೃಪೆಯಲಿ ॥

ಇಲ್ಲಿ ನಮ್ಮನುಕೂಲಕ್ಕಾಗಿ ಹಿಂದಿನ ನುಡಿಗಳ ಚಾಲ್ ಒಂದನ್ನು ತೆಗೆದು ಕೊಳ್ಳೋಣ:—

ಚಾಲ್ ॥ "ಖಾಸಾ ದಂಡಿನ ಶ್ರೇಷ್ಠ ಮುಖಂಡರ ಮೋಸವು ಟೀಪುಗೆ ಅರುವಾಯ್ತು ।
ಮಸಲತ್ ಮಾಡಿದ ಮಿರ್ಸಾದಕನಿಗೆ ದೇಶದ್ರೋಹಿ ಎಂಬ್ಹೆಸರಾಯ್ತು ॥"

ಈ ಜಾತಿಯು ಸಾಮಾನ್ಯವಾಗಿ ದ್ವಿಪದಿಗಳ ತಳಹದಿಯ ಮೇಲೆ ತಾಳಗಳ ಆಧಾರದಿಂದ ಕಟ್ಟಿರುವುದೆಂಬುದು ನೋಡುತ್ತಿದ್ದ ಹಾಗೆಯೇ ತಿಳಿಯುವುದು. ಪಲ್ಲವಿಯು ದ್ವಿಪದಿಯೆಂಬುದರಲ್ಲಿ ಕೊಂಚವೂ ಸಂದೇಹವಿಲ್ಲ. ಮುಂದಿನ 'ಚಾಲ್' ನಲ್ಲಿ ಪಲ್ಲವಿಯಂತಹ ನಾಲ್ಕು ತುಂಡುಗಳಿವೆ. ಮತ್ತೆ ಈ ಚೌಕ (ಈ ಒಟ್ಟು ಭಾಗಕ್ಕೆ ಈ ಹೆಸರು) ದ ಕೊನೆಯಲ್ಲಿ ಬರುವ ಚಾಲ್ ಪಲ್ಲವಿಯಂತಹ ದ್ವಿಪದಿ. 'ಉಡಾನ್' ಎಂಬುದರಲ್ಲಿ ಗಣವು ವ್ಯತ್ಯಾಸವಾಗಿದ್ದರೂ ಅದೂ ದ್ವಿಪದಿಯ ಜಾತಿಯನ್ನು ಬಿಟ್ಟಿಲ್ಲ. ಮುಂದಿನ ಗುಲ್ ಉಡಾನ್‌ನಲ್ಲಿ ಮಾತ್ರ ಹಿಂದಿನ ಕಾವ್ಯ ಜಾತಿಯ ಸ್ವಾತಂತ್ರ್ಯವು ತಲೆದೋರಿದೆ. ಅದರ ಮುಂದಿನ ಶ್ಲೋಕವು [ಈ ಶ್ಲೋಕ ಭಾಗವು] ಚೌಕದಲ್ಲಿದ್ದರೆ ಇರಬಹುದು, ಇಲ್ಲದಿದ್ದರೆ ಇಲ್ಲ. (ಕೆಲವರು ಈ ಶ್ಲೋಕದ ಬದಲು 'ಸಖಿ'ಯೆಂಬ ಒಂದು ತುಂಡನ್ನು ಹಾಡುತ್ತಾರೆ): ಏಳು ಮಾತ್ರೆಯ (೩+೪) ಗಣಗಳಿಂದ ಆದುದು. ಅದೂ ಒಂದು ಜಾತಿಯ ದ್ವಿಪದಿ (ಭಾಮಿನಿ ಷಟ್ಪದಿಯ ೧, ೨, ೪, ೫, ಪಾದಗಳಂತೆ).

ಈ ಚೌಕವೆಲ್ಲವೂ ತಾಳ ನಿಯಮದ ಮೇಲೆ ಕಟ್ಟಿರುವ ರಚನೆ. ಸಾಮಾನ್ಯವಾಗಿ ಚತುರಸ್ರ ತ್ರಿಪುಟ, ಅಥವಾ ಆದಿ ತಾಳವು ಇದರ ಪ್ರಧಾನ ಗತಿ. ಇದರಿಂದ ಒಂದೊಂದು ವೇಳೆ ಛಾಪಿಗೆ ಹೋಗಿ, ಮತ್ತೆ ಹಿಂದಿರುಗಿ, ಇನ್ನೊಂದು ಸಲ ತ್ರಿಶ್ರ ತ್ರಿಪುಟಕ್ಕೆ ನುಗ್ಗಿ ಮತ್ತೆ ಆದಿ ತಾಳಕ್ಕೆ ಬರುವುದು. ಹಾಗೆಯೇ ಪ್ರತಿಯೊಂದು ಪಾದದ ಕೊನೆಯಲ್ಲಿಯೂ ಇರುವ ಅಪೂರ್ಣ ತಾಳವೂ ಗಮನಿಸಬೇಕಾದುದು. ಲಾವಣಿ ಹಾಡುವವನು ಉಸಿರು ತೊಗೆಚಿಕೊಳ್ಳಲು ಅವಕಾಶವಿರುವುದು ಇಲ್ಲಿ; ಸಂಸ್ಕೃತದ ಛಂದಸ್ಸಿನ ಶಾಸ್ತ್ರದ ಮಾತಿನಲ್ಲಿ ಹೇಳಬೇಕಾದರೆ ಯತಿಯಿರುವುದು ಇಲ್ಲಿ.

ಇದನ್ನು ಹಾಡುವ ಕ್ರಮವೂ ವಿಚಿತ್ರವಾದುದು. ಪಲ್ಲವಿಯನ್ನು ಹಾಡಿ, ಅದೇ ರೀತಿಯಲ್ಲಿ ಅದರ ಮುಂದಿನ ಚಾಲ್ ಹಾಡುವುದು. ಉಡಾನ್‌ನಲ್ಲಿ ಗತ್ತು ಬದಲಾಯಿಸಿದಂತೆ ಸ್ಥಾಯಿಯೂ ಬದಲಾವಣೆಯಾಗುವುದು. (ಇದು ಗ್ರಾಮ ಪಲ್ಲಟವೋ? ವೇದಗಳನ್ನು ಹೇಳುವಾಗ ಹೀಗೆ ಸ್ಥಾಯಿಗಳನ್ನು ಬದಲಾಯಿಸುವುದುಂಟು.) ಆವರ್ತದ ಶಂಕೆಯಿಲ್ಲದೆ ಹಾಡುವ ಅನುಪಲ್ಲವಿಯಿದೆಂದರೂ ಒಪ್ಪುವುದು. ಮುಂದೆ ಬರುವ ಗುಲ್ ಉಡಾನ್‌ನಲ್ಲಿ ತಾಳ ಬದ್ಧವಾದ ಗದ್ಯವನ್ನು "ಈಷದ್ರಾಗ ರಂಜಿತ" ವಾಗುವಂತೆ, ತಾಳವೂ ಸ್ಪಷ್ಟಾಸ್ಪಷ್ಟವಾಗಿರುವಂತೆ ಹಾಡಿ, ಕೊನೆಯ ಪಾದದಲ್ಲಿರುವ ಅಧಿಕ ಗಣಗಳನ್ನು ಯಥಾ ಸೌಕರ್ಯವಾಗಿ ಆವರ್ತ ಮಾಡಿಕೊಂಡು ಮುಂದಿನ ಶ್ಲೋಕ, ಅಥವಾ ಸಖಿಗೆ ಬರುವುದು. ಅಲ್ಲಿ ತಾಳವು ಬದಲಾಯಿಸಿ ತ್ರಿಶ್ರ ತ್ರಿಪುಟವಾಗುವುದು. ಇಲ್ಲಿ ಕೆಲವರು ರಾಗವನ್ನು ಬದಲಾಯಿಸುವುದೂ ಉಂಟು. ಮುಂದೆ ಚಾಲ್ ಎಂಬುದು ಮೊದಲಿನ ಪಲ್ಲವಿಯ ಧಾಟಿಯನ್ನು ಹಿಡಿಯುವುದು. ಇಲ್ಲಿ ಬರುವ ಚಾಲ್‌ನಲ್ಲಿ ಒಂದೇ ಒಂದು ಪಾದವಿದ್ದು ಪಲ್ಲವಿಯ ಎರಡನೆಯ ಪಾದವು ಇಲ್ಲಿ ಪುನರಾವರ್ತಿತವಾಗುವುದು.

ಹೀಗೆ ಒಂದು ಚೌಕವನ್ನು ಹಾಡಿ ಆದ ಮೇಲೆ ಹಾಡುಗಾರನು ತಾನು ಹಿಡಿದಿರುವ ಕಡ, ಅಥವಾ ಡಬ್ಬಿನ ಮೇಲೆ ಒಂದೆರಡು ಆವರ್ತಗಳನ್ನು (ಯಥಾ ರುಚಿಯಾಗಿ ಆದಿತಾಳ, ಅಥವಾ ಛಾಪು) ಬಾಜಿಸಿ ಮತ್ತೊಂದು ಚೌಕವನ್ನು ಆರಂಭಿಸುವನು.[14]

ಈ ಲಾವಣಿಯನ್ನು ಹಾಡುವ ಧಾಟಿಯನ್ನು ಜೆ. ಎಸ್. ಫ್ಲೀಟರವರು ಇಂಡಿಯನ್ ಆಂಟಿಕ್ವೆರಿಯಲ್ಲಿ XIV, XV, XVI, XVIII, XIX ನೆಯ ಸಂಪುಟಗಳಲ್ಲಿ ಕೊಟ್ಟಿದ್ದಾರೆ; 'ಮ್ಯೂಸಿಕ್ ಆಫ್ ಹಿಂದೂಸ್ಥಾನ್' ಎಂಬ ಪುಸ್ತಕದಲ್ಲಿಯೂ (ಮೂರನೆಯ ಅಧ್ಯಾಯದಲ್ಲಿ) ಬಂದಿದೆ. ಮ॥ ಶೇಷಗಿರಿರಾಯರು ರಂಗಭೂಮಿಯ ೭ನೆಯ ಸಂಪುಟದ ೭ನೆಯ ಸಂಚಿಕೆಯಲ್ಲಿಯೂ ಲಾವಣಿಯ ಧಾಟಿಯನ್ನು ಸ್ವರ ಹಾಕಿ ಬರೆದಿದ್ದಾರೆ. ಜಿಜ್ಞಾಸುಗಳಿಗೆ ಹೋಲಿಸುವುದಕ್ಕೆ ಸ್ವಲ್ಪವಾದರೂ

14 ಹೀಗೆ ಹಾಡುವವನಿಗೆ ಶಕ್ತಿ ಸಾಮರ್ಥ್ಯಗಳು ಇದ್ದಂತೆಲ್ಲ ರಾಗವು ಬೆಳೆಯುತ್ತದೆ. ಆದರೂ ಲಾವಣಿಗಳಲ್ಲಿ ತಾಳದ ಗತ್ತಿಗಿರುವ ಪ್ರಾಧಾನ್ಯವು ರಾಗದ ಗಮ್ಮತ್ತಿಗಿಲ್ಲವೆಂಬುದನ್ನು ವಾಚಕರು ನೆನಪಿನಲ್ಲಿಡಬೇಕು.

ಅನುಕೂಲವಾಗಲೆಂದು ಒಬ್ಬ ಮಿತ್ರರು ಹಾಕಿಕೊಟ್ಟಿರುವ ಸ್ವರವನ್ನು ಸಾಹಿತ್ಯ ದೊಡನೆ ಇಲ್ಲಿ ಕೊಟ್ಟಿದ್ದೇವೆ:—

೧. "ಪಿರಿಯಾ ಪಟ್ಣದ ಜಗಳವ ಹೇಳ್ತೀನಿ, ಕೇಳಿ ರಣ್ಣ ನೀವೆಲ್ಲ. . . . ||
ಸಾಮಮ ಮಮಮಮ, ಮಪಪಾ, ಮಗಗರಿ, ರಿರೀಗ ಗಮಮಾ ಮಗರಿಸ ಸರಿರೀ || "

೨. "ಅರಿಯದ ಹಸುನುಗ, ದಳವಾಯಿ ಹೊಂಟನು ಮಾಡಲಿಕೆ ಹಲ್ಲಾ . . . . . . . . ||
ನೀಸನಿ ನೀನಿನಿ, ಸಾಸಸ ಸಾಸಸ, ಮಾಮಗ ಗರಿಸಾ . . . . . . . . || "

ಒಂದೊಂದು ವೇಳೆ ಎರಡನೆಯ ಪಾದದ ಧಾಟಿಯಲ್ಲಿ ಮೊದಲನೆಯ ಪಾದ ವನ್ನು ಹೇಳುವುದೂ ಉಂಟು.

ಒಟ್ಟಿನಲ್ಲಿ, ಲಾವಣಿಗಳನ್ನು ಯಮನ್, ಪೀಲು, ಪಂತು ವರಾಳಿ, ಭೈರವಿ, ಶಂಕರಾಭರಣ, ಹನುಮ ತೋಡಿ, ಮಾಯಾ ಮಾಳವ ಗೌಳ ಮೊದಲಾದ ಪ್ರಸಿದ್ಧ ರಾಗಗಳಲ್ಲಿ, ಸಂಪೂರ್ಣ ರಾಗ ಸಂಚಾರವಿಲ್ಲದೆ, ಅನೇಕ ವೇಳೆಗಳಲ್ಲಿ ರಾಗ ಹೋಯಿತು ಬಂದಿತು ಎಂಬ ಯೋಚನೆಯೂ ಇಲ್ಲದೆ, ಎರಡು ಮೂರು ಸ್ವರಗಳನ್ನು ಮುಟ್ಟದೆಯೇ ಹಾಡುವರೆಂದು ತೋರುತ್ತದೆ. ಈ ವಿಚಾರವನ್ನು ವಿದ್ವಾಂಸರು ಪರಾಮರ್ಶಿಸ ಬೇಕು.

ಈಗ ನಾವು ಹೇಳಿರುವ ಇದಿಷ್ಟರಿಂದಲೇ ಲಾವಣಿ ಸಾಹಿತ್ಯವು ಎಷ್ಟು ವಿಸ್ತಾರ ವಾಗಿದೆಯೆನ್ನುವುದರ ಅರಿವಾಗಿರಬೇಕು. ಅದನ್ನು ಸ್ಥಿರಪಡಿಸುವ ಒಂದು ಮಾತು ನಮ್ಮ ಕಿವಿಗೆ ಬಿದ್ದಿದೆ: ಮೈಸೂರು ಪಟ್ಟಣವೊಂದರಲ್ಲಿ, ಒಂದೊಂದು ಗರಡಿ ಯವರಲ್ಲಿ, ಚಾಮುಂಡಿಯ ಬೆಟ್ಟದ ಪ್ರತಿಯೊಂದು ಮೆಟ್ಟಿಲಿಗೆ (ಒಂದು ಸಾವಿರ ಮೆಟ್ಟಿಲು) ಒಂದೊಂದು ಲಾವಣಿಯಂತೆ, ಹೇಳಿದುದನ್ನು ಮತ್ತೆ ಹೇಳದೆ, ಹೇಳಲು ಬೇಕಾಗುವಷ್ಟು ಸಾಹಿತ್ಯವಿದೆಯಂತೆ! ಒಂದು ಊರಿನಲ್ಲೇ ಇಷ್ಟು ಇದ್ದರೆ ಮಿಕ್ಕ ಕರ್ಣಾಟಕದಲ್ಲೆಲ್ಲಾ ಇನ್ನೆಷ್ಟು ಇರಬಹುದು!

ಹಾಡುವ ರೀತಿಯೂ ಕೊಂಚ ಕೊಂಚ ಭಿನ್ನೈಸಬಹುದು. ತಿಳಿದವರೊಬ್ಬರು "ಬಳ್ಳಾರಿಯಲ್ಲಿ ಹಾಡುವ ರೀತಿ ಬೇರೆ, ಹರಿಹರದಿಂದ ಆಚೆಗೆ ಹಾಡುವ ರೀತಿ ಬೇರೆ, ಮೈಸೂರು ಬೆಂಗಳೂರುಗಳ ರೀತಿಯೇ ಬೇರೆ" ಎಂದೊಮ್ಮೆ ಹೇಳಿದ್ದರು. ಮಂಗಳೂರಿನ ಕಡೆಯದೂ ಬೇರೆಯದಾಗಿರಬಹುದು. ಇದರಂತೆಯೇ, ಲಾವಣಿಯ ಒಂದೊಂದು ನುಡಿಯ ಬೇರೆ ಬೇರೆ ಅಂಗಗಳಿಗೆ ಬೇರೆ ಬೇರೆ ಹೆಸರೂ ಇರಬಹುದು. ಸಂಗ್ರಹದ ಕಾರ್ಯವು ತೃಪ್ತಿಕರವಾಗಿ ಸಾಂಗವಾಗಿ ನಡೆಯುವ ವರೆಗೆ ಸಮಗ್ರವಾಗಿ, ಸರಿಯಾಗಿ ಹೇಳುವುದು ಸಾಧ್ಯವಿಲ್ಲವೆಂದು ಸೂಚಿಸಿ ಮುಂದಿನ ವಿಭಾಗಗಳ ಕಡೆಗೆ ಹೋಗುವೆವು.

### (ಆ) ವಿನೋದದ ಪದಗಳು

ವಿನೋದದ ಪದಗಳು ಎರಡನೆಯ ಜಾತಿಗೆ ಸೇರಿದವು. ಇವುಗಳಲ್ಲಿ ಅರ್ಥ ವಿಲ್ಲದ ಪದಗಳು, ಜಗಳದ ಪದಗಳು, ತುಂಡು ಪದಗಳು, ಹಾಸ್ಯದ ಪದಗಳು, ಕೋಲಾಟದ ಪದಗಳು, ತಂದನಾನಾ ಪದಗಳು ಎಂದು ಸಾಮಾನ್ಯವಾಗಿ ಆರು

ಗುಂಪುಗಳನ್ನು ವಿಂಗಡಿಸಬಹುದು. ಕೋಲಾಟದ ಪದಗಳಲ್ಲಿ ನುಡಿಗಳನ್ನೆಲ್ಲ ಒಬ್ಬರು ಹೇಳುವರು; ಪಲ್ಲವಿಯನ್ನು ಎಲ್ಲರೂ ಸೇರಿ ಹೇಳುವರು. ತಂದನಾನಾ ಪದಗಳಲ್ಲಿಯೂ ಹೀಗೆಯೇ ಒಬ್ಬನು ಏಕನಾದ (ಕೆಲವರು ಒಂದು ತುಂಡು ವೀಣೆಯಂತಹ ವಾದ್ಯ) ವನ್ನು ಬಾಜಿಸಿಕೊಂಡು ಅದರ ಶ್ರುತಿಗೆ ಹೊಂದಿಕೊಂಡು ತಾರಸ್ಥಾಯಿಯಲ್ಲಿ ನುಡಿಯನ್ನು ಹೇಳುವನು. ಅದು ಮುಗಿದ ಮೇಲೆ ಅವನ ಹಿಮ್ಮೇಳದವರು ತಾಳಗಳನ್ನು ಬಾಜಿಸುತ್ತ ವಾದ್ಯದ ತಂತಿಗಳನ್ನು ತಾಳಕ್ಕೆ ಸರಿಯಾಗಿ ಜಾಗ್ರತೆ ಜಾಗ್ರತೆಯಾಗಿ ಮಿಡಿಯುತ್ತ, "ತಂದಾನಾ" ಎಂಬ ಒಂದೆರಡು ಆವರ್ತಗಳನ್ನುಳ್ಳ ಪಲ್ಲವಿಯನ್ನು ಎಲ್ಲರೂ ಸೇರಿ ಹಾಡುವರು.

ಲಾವಣಿಗಳ ನುಡಿಯಲ್ಲಿ ಕಾಣಿಸುವ ಬೇರೆ ಬೇರೆ ತಾಳಗಳ ಅಂಗಗಳು ಇಲ್ಲದೆ ನುಡಿಗಳು ಏಕ ರೂಪವಾಗಿರುವುದು, ಹಾಡಿನಲ್ಲಿ ರಾಗಾಂಶವು ಅಧಿಕವಾಗಿರುವುದು, ಕೊನೆಯಲ್ಲಿ ಏನಾದರೊಂದು ಅರ್ಥವಾಗುವ, ಆಗದ, ತುಂಡೊಂದನ್ನು ರಾಗ ಸೇರಿಸಿ ದೀರ್ಘವಾಗಿ ರಾಗ ಎಳೆಯುವುದು, ಹಾಡುಗಳನ್ನು ಸಾಮಾನ್ಯವಾಗಿ ತಾರ ಸ್ಥಾಯಿಯಲ್ಲಿ ಹಾಡುವುದು—ಈ ಜಾತಿಯ ಗುರುತುಗಳು. ಈ ಅಂಶಗಳನ್ನು ಸಾಧ್ಯವಾದ ಮಟ್ಟಿಗೆ ಉದಾಹರಣೆಗಳಿಂದ ಸ್ಪಷ್ಟಪಡಿಸೋಣ.—

**I. ಅರ್ಥವಿಲ್ಲದ ಹಾಡುಗಳು.—**

೧೫. "ಮೂರು ಲೋಕಕೆ ಶಿವ ಕಳುಹಿದನು। ಮೂರು ಕಣ್ಣಿನ ತೆಂಗಿನ ಕಾಯಿ।
ಭಕ್ತ ಜನಗಳು ಬೇಡಿಕೊಂಬುತಾರೆ ಕೃಷ್ಣನೆಂಬ ಕುಂಬಳ ಕಾಯಿ ॥ ೧ ॥

ಸಪ್ಪೆ ತಿಂದರೆ ಪಥ್ಯ ಮಾಡಿದ ಹಾಗೆ ಒಳ್ಳೆದೈತೆ ಕಾರ ಮೆಣಸಿನ ಕಾಯಿ।
ಮನೆ ಹೆಂಡತಿಗೆರಡು ಮಕ್ಕಳಿದ್ದರೆ ಅದನೆಂಬರು ಜವಳಿ ಕಾಯಿ ॥ ೨ ॥

ವರದರಾಜ ಸ್ವಾಮಿಯಿರುವ ಕಂಚಿಯೊಳಗೆ ಕಂಚೀ ಕಾಯಿ।
ನಂಜನಗೂಡು ಸಾಲುತೋಪಿನಾಗೆ ಈಶ್ವರನ ಪತ್ರೇಯ ಕಾಯಿ ॥ ೩ ॥

ಹಗಲು ಯಿರುಳೂ ಧ್ಯಾನ ಮಾಡುತಾರೆ ಮನಸಿನೊಳಗೆ ರಾಮಫಲ ಕಾಯಿ।
ಗಂಡನ ಅಂಜಿಕೆ ಮಾಡಿದಳು ಪತಿವ್ರತೆ ಸೀತಾಫಲದ ಕಾಯಿ"[15] ॥ ೪ ॥

* * * * * *

೧೬. "ರಂಗಪ್ಪ। ಜಾಜಿಯ ಹೂವ್ವು ಬೆಳ್ಳಗೆ ॥ ಪ ॥
ಕಾಶಿಯೆಂಬೋದು ನಗರ।
ದೋಸೆಯೆಂಬೋದು ತಿಂಡಿ।
ಆಸೆಯೆಂಬೋದು ಹಾಳು।
ಮಿಾಸೆಯೆಂಬೋದು ಕೂದಲು" ॥ ೧ ॥

ಕೆಲಸದ ಜೊತೆಯಲ್ಲಿ ಹಾಡುವ ಹಾಡುಗಳೂ ಈ ಜಾತಿಗೆ ಸೇರಬೇಕು. ಕಲ್ಲನ್ನು ಎತ್ತುವಾಗ, ಅಥವಾ ಮೇಲಕ್ಕೆ ಸೇದಿಕೊಳ್ಳುವಾಗ, ಸಾಗಿಸುವಾಗ,

15 'ಕ. ಸಾ. ಪ. ಪತ್ರಿಕೆ', ಸಂಪುಟ ೩, ಸಂಚಿಕೆ ೪, ಪುಟ ೩೦-೩೧.

ಒಬ್ಬನು 'ಚಾಮುಂಡವ್ವಾ', 'ಕಡುಬೂ ತುಪ್ಪಾ' ಮೊದಲಾದ ಅರ್ಥವಿಲ್ಲದ ಮಾತುಗಳನ್ನು ಹೇಳುವನು. ಮಿಕ್ಕವರೆಲ್ಲ "ಸೋಹಾ" ಎಂದು ಹೇಳಿ ಒಟ್ಟಿಗೆ ಕೆಲಸ ಮಾಡುವರು. ಹೇಳುವುದು ಏನೇನೋ ಆಗಿದ್ದರೂ ತಾಳಕ್ಕೆ ಸರಿಯಾಗಿರುವುದು ಮಾತ್ರ ತಪ್ಪುವುದಿಲ್ಲ. (ಸೋಹಾ < ಸ್ವಾಹಾ ಇರಬಹುದೊ?)

II. **ಜಗಳಗಳು.**—ಧಾನ್ಯಗಳ ಜಗಳ, ಅಡಕೆಲೆ ಜಗಳ, ಮಿಸುನಿ ಲೋಹದ ಜಗಳ, ಮೀನಿನ ಜಗಳ ಮೊದಲಾದವು ಈ ಜಾತಿಯವು. ಕೆಲವು ಲಾವಣಿಯ ರೂಪದಲ್ಲಿಯೂ ಇವೆ: (ಮಿಸುನಿ ಲೋಹದ ಜಗಳ). ಮೈಸೂರಿನ ಒಂದನೆಯ 'ರೀಡರಿ' ನಲ್ಲಿರುವ "ನೀನಾರಿಗಾದೆಯೋ ಎಲೆ ಮಾನವಾ", ಶ್ರೀ ಮಂಗೇಶರಾಯರ ಪದ್ಯ ಪುಸ್ತಕದ (೧) "ಬಿದಿರು"—ಈ ಜಾತಿಯ ಹಾಡುಗಳನ್ನೆಲ್ಲ ಈ ಗುಂಪಿಗೇ ಸೇರಿಸಬಹುದು.

ಧಾನ್ಯಗಳ ಜಗಳ

೧೭. "ಗೋಧಿ.—ಏ ಕಡಲೀ ! ನಿನ್ನ ಮಾರಿ ಸುಡಲೀ |
ನಿನ್ನ ಕಲ್ಲಾಗ್ಯಾಕಿ ಗಡ ಗಡ ಒಡಿಲೀ || ಪ ||
ಕಡಲಿ.—ಏ ಗೋಧಿ | ಯಾತಕೆ ವಾದಿ |
ತುಪ್ಪ ಇಲ್ಲದೆ ತಿಂದರೆ ಕುಕ್ಷಿಗೆ ಬಾಧಿ || ಪ ||
ನಾನು ಆಗುವೆನು ಕುದುರೆಗೆ ದಾಣಿ |
ನನ್ನ ಹುರಿದು ಒಡೆದರೆ ಆಗುವೆನು ಪುಟಾಣಿ ||
ನನ್ನ ಹಿಡಿದು ಹಿಡಿದು ತುಂಬುವರು ಗೋಣಿ |
ನೀನೆನ್ನ ಸರಿಯೇನು ಗೋಧಿ ಗುಮ್ಮಾಣೀ　　|| ೧ ||
ಗೋಧಿ.—ನಾನು ಆಗುವೆನು ಹೋಳೀಗಿ |
ನನ್ನ ತಿಳಿದು ಬೀಸಿದರೆ ಆಗುವೆನು ಶ್ಯಾವೀಗಿ ||
ಪಿತೃಗಳಿಗಾಗುವೆನು ಗಾರೀಗಿ |
ನೀನೆನ್ನ ಸರಿಯೇನೆ ಹುಚ್ಚ ಹೋರೀಗಿ || "

ಗಂಡ ಹೆಂಡಿರ ಜಗಳ

೧೮. "ಹ್ಯಾಂಗೆ ಸಂಸಾರಮಾಡಲಿ |
ಈ ಮುರುವನ ಕೂಡೆ | ಈ ಮುರುವನ ಕೂಡೆ || ನಾ ನೀ ||
ಉಡೋಕೆ ಶ್ಯಾಲೆಯಿಲ್ಲವಲ್ಲೋ.......... |*
ಈಚಲು ಚಾಪೆಯಿಲ್ಲವೇನೇ..........*　　|| ೧ ||
ಇಡೋಕೆ ವಾಲೆಯಿಲ್ಲವಲ್ಲೋ .......... |*
ಈರುಳ್ಳಿ ಹೋಳು ಯಿಲ್ಲವೇನೇ.......... |*　　|| ೨ ||

(ಇದನ್ನು ಹೇಳುವಾಗ ಪಲ್ಲವಿಯ ಮೊದಲನೆಯ ಪಾದವು ಸಾವಕಾಶವಾಗಿ ನಡೆದು ಎರಡನೆಯ ಪಾದವು ಮಧ್ಯಮ ಕಾಲದಲ್ಲಿ ನಡೆಯಬೇಕು. ನುಡಿಗಳೆಲ್ಲ ಗುಬ್ಬಚ್ಚಿಗಳ ಜಗಳದ ಹಾಗೆ ತೃತೀಯ ಕಾಲದಲ್ಲಿ ನಡೆಯಬೇಕು.)

* ಇಲ್ಲಿ ಒಂದು ಬೈಗುಳು.

**III. ತಂದನಾನಾ ಪದಗಳು.**—ಹಳ್ಳಿಗರಿಗೆ ಇದು ಬಲು ಅಚ್ಚುಮೆಚ್ಚಾದ ಪದಗಳು. ಜಗಲಿಗಳ ಮೇಲೆ, ರಾತ್ರಿಯ ಊಟವಾದ ಮೇಲೆ, ಎಲ್ಲಿಯವರು ಅಲ್ಲಿ ನಿರಾಂತಕವಾಗಿ ಒರಗಿಕೊಂಡು ಈ 'ತಂದಾನಾ' ಪದಗಳನ್ನು ಕೇಳುತ್ತ ಕುಳಿತುಕೊಳ್ಳುವರು. ಹಾಡಿದವರಿಗೆ ಕಾಸು ಕಾಳು ಎಲ್ಲವೂ ಸಿಕ್ಕುವುದು. (ಇದನ್ನು ಹಾಡುವವರ 'ದಿರಸೂ' ಬಲು ಅಂದವಾಗಿರುವುದು.)

೧೯. "ತಂದಾನೊ ತಾನಾನಿ, ತಂದಾನೋ ತಾನಾನಿ, ತಾನು ತಂದನು ತಂದೆ।
ನಾನಿ ತಂದನು ತಾನಿ, ತಾನು ತಂದನು ತಂದೆ, ಶಿವ್ನೀಗೆ ಶರಣೆನ್ನಿ ॥ ಪ ॥
ಕಟಿ ಕಟೀ ಕಲ್ಲೂರು ಬೆಡಗೀನ ಬೇಲೂರು, ಹಿಂದೆ ತಾವರೆಗೇರೆ ಮುಂದೆ ತಾವರೆಗೇರೆ।
ಕಲ್ಲೇಶ ಲಿಂಗಾಗೆ ಮಲ್ಲೇಶ ಲಿಂಗಾಗೆ ಕಡ್ಗೂರು ರಾಮಪ್ಗೆ ಒಡ್ಡೆ ತೆಂಗಿನ ಕಾಯಿ॥
ಓಟೀಯೂ ಶಿಗ್ಬಾವು ಅಂದ ಚಂದಕೆ ಮೂರು ಪಟ್ಟೀಯ ತೆಗದವ್ರು।
ಪಟ್ಟಣದ ಮನಸ್ವಾಮಿ ಪಾದಾಕೆ ಬಿದ್ದವ್ರು ಅರಿತೋರಿಗೆ ಮತ್ತೆ ಮರಿತೋರಿಗೆ ದೇವ॥
ಮತಿ ಕೊಡೋ ಮಾದೇವ, ಸತಿ ಕೋಡೊ ಸಾದೇವ, ವಿದ್ಯೇವ ಕಲಿಸಯ್ಯ ಹಿರಿಯೋರ ಕೂಡೆ।
ನೆರೆಸಿದ್ದಾ ರೊಟ್ಟೀಗೆ ಬಿದ್ದಂತೆ ಶರಣೋ" ॥ ೧ ॥ [15]

ಮೈಸೂರಿನ ಸುತ್ತುಮುತ್ತಲಿರುವ ಚಾಮಾಯಿ ನಂಜುಂಡರ ಪ್ರಣಯದ ಹಾಡುಗಳು ಈ ಜಾತಿಯಲ್ಲಿ ಬಲು ಪಸಂದಾದವು. ಅವಕ್ಕೆ ಇದೊಂದು ಉದಾಹರಣೆ.—

೨೦. ಚಾಮುಂಡಿಯು (ಹಾಡಿನಲ್ಲಿ ಚಾಮಾಯಿ) "ಮೂಗುತಿ ಮುರಿಯಿತು, ಮುಂಬಲ್ಲು ಸಿಡಿಯಿತು. ಉಟ್ಟಂಗೆ ಪದಕ ಬೆಂಕಿಯಲ್ಲಿ ಬೇಯಿತು"—ಇಂತಹ ಕನಸು ಕಂಡಳು. ತಂಗಿಯಾದ ಉತ್ತನಹಳ್ಳಿ ಮಾರಿಯನ್ನು ಕರೆದು, "ನಂಜನಗೂಡಿನ ನಂಜುಂಡ ಲಿಂಗಗೆ ಏನು ಕಷ್ಟವೋ ಕಾಣೆ, ಹೋಗಿ ನೋಡಿಬಾ" ಎಂದು ಕಳುಹಿಸಿದಳು. ಅವಳು ನೋಡಿ ಬರುವುದಕ್ಕೆ ಹೋದವಳು "ಭಾವ ವಿಷಕಂಠನ ಕೂಡಿದಳು." ಕೊನೆಗೆ, "ಪಟ್ಟದ ರಾಣಿ ಪಾರ್ವತಿ"ಗೆ ಹೆದರಿ ಊರುಬಿಟ್ಟು ಬರಲಾರದೆ, "ಬಟ್ಟಾನೆ ಮೊಗದವಳ ಕಟ್ಟಾಣಿಯಂತಹ ಕಡು ಚೆಲ್ವೆ ಚಾಮಾಯಿಯ ಮರೆತೆನೆಂದರೆ ಮನಸಿಲ್ಲವಲ್ಲ ಹ್ಯಾಗೆ ಮಾಡಲೋ" ಎಂದು ತಪಿಸುತ್ತಿದ್ದ ನಂಜುಂಡನು, ಏನೋ ಉಪಾಯ ಮಾಡಿ, "ಬೆಟ್ಟದ ರಾಣಿ ಚಾಮಾಯಿ"ಯನ್ನು ಬಂದು ಕೂಡಿದನು. ಅಲ್ಲಿ ಯೆಲ್ಲದೇವೀರಿ (ಉತ್ತನಹಳ್ಳಿ ಮಾರಿ)ಯ ಗುಟ್ಟು ಬಯಲಾಯಿತು. ಆದರೂ ನಂಜುಂಡ ಲಿಂಗನನ್ನು ಕೊನೆಗೆ ಕರತಂದಳಲ್ಲಾ ಎಂದು ಚಾಮಾಯಿಯು ಅವಳನ್ನು ಕ್ಷಮಿಸಿ ನಂಜುಂಡನೊಡನೆ ಸುಖವಾಗಿದ್ದಳು."

ಈ ಹಾಡು ಸುಮಾರು ನೂರು ನುಡಿಗಳ ವರೆಗೆ ಇದೆ.

---

15 'ಹುಟ್ಟಿದ ಹಳ್ಳಿ—ಹಳ್ಳಿಯ ಹಾಡು' (ಅರ್ಚಕ ಬಿ. ರಂಗಸ್ವಾಮಿಯವರು), ಪುಟ ೩೦. ಈ ಹಾಡಿನ ವಿಚಾರವಾಗಿ ಇವರು ಹೇಳುವ "ಇಲ್ಲಿಯ ವರೆಗೂ (೫ ನುಡಿ) ಸುಮ್ಮನೆ ಕೋಲು ಮತ್ತು ತಾಳ ಝುಲ್ಲರಿಗಳ ಲಯಕ್ಕೆ ಸರಿಯಾಗಿ ಸದ್ದುಮಾಡುತ್ತ ನಿಂತಲ್ಲೇ ನಿಂತಿರುವರು. ಮುಂದಕ್ಕೆ ಪದ್ಮದಂತೆ, ಚಕ್ರದಂತೆ, ಕೋಟೆಯಂತೆ, ಸೈನಿಕರಂತೆ ವ್ಯೂಹಗಳನ್ನು ರಚಿಸಿಕೊಂಡು ಒಬ್ಬರ ಕೈಯಲ್ಲಿರುವ ಕೋಲಿಗೆ ಇನ್ನೊಬ್ಬರು ಟಕ್ಕ ಹೊಡೆಯುತ್ತ ಹಾಡುವರು" ಎಂಬ ಮಾತು ಗಮನಿಸಬೇಕಾದುದು. ಮೈಸೂರು ಮತ್ತು ಸುತ್ತಮುತ್ತಲಿನ ಹಳ್ಳಿಗಳಲ್ಲಿ 'ತಂದಾನಾ' ಪದಗಳನ್ನು ಮೇಲೆ ಹೇಳಿರುವಂತೆ ಕುಳಿತು ಹಾಡುವುದೇ ಹೆಚ್ಚು.

(ಇದನ್ನು ಈ ಜಾತಿಯ ಸಂಸ್ಕೃತ ಚಾಟು ಶ್ಲೋಕಗಳೊಡನೆ ಹೋಲಿಸಿರಿ.)

**IV. ಕೋಲಾಟದ ಪದಗಳು.**—ಹೆಣ್ಣುಮಕ್ಕಳಲ್ಲಿಯೂ ಕೋಲಾಟವುಂಟು. ಅವರು ಬಸವಣ್ಣನನ್ನು ದೀವಳಿಗೆಯ ವೇಳೆಯಲ್ಲಿ ಕೂರಿಸಿ ಆ ಬಸವಣ್ಣನ ಮುಂದೆ ಕೋಲು ಹೊಯ್ಯುವರು. ಆದರೆ ಗಂಡುಸರ ಕೋಲಾಟಕ್ಕೆ ಆ ನಿರ್ಬಂಧವಿದ್ದಂತೆ ಇಲ್ಲ. ವ್ಯವಧಾನವು ಇದ್ದು ಆಸೆಯಾದಾಗಲೆಲ್ಲ ಕೋಲು ಹೊಯ್ಯುವರು, ಸುಗ್ಗಿಯಲ್ಲಿ ಕಣ ಕಾಯುವ ಕೆಲಸ ಬಿದ್ದಾಗ ಬೆಳುದಿಂಗಳ ರಾತ್ರಿಗಳಲ್ಲಿ ಹೆಚ್ಚು ಎಂದು ತೋರುತ್ತದೆ. ಈ ಕೋಲಾಟದ ಸಂದರ್ಭದಲ್ಲಿ ತಪ್ಪದೆ ಬಸವಣ್ಣನ ಹೆಸರು ಬಂದೇ ಬರುವಂತೆ ಕಾಣುತ್ತದೆ. ಇದೊಂದು ವಿಶೇಷ. ಈ ಕೋಲಾಟದ ಉತ್ಪತ್ತಿಯನ್ನು ಕುರಿತ ಒಂದು ಹಾಡನ್ನು 'ಜಯಕರ್ನಾಟಕ'ವು ಪ್ರಕಟಿಸಿದೆ: (ಸಂಪುಟ ೧೦, ಸಂಚಿಕೆ ೮, ಪುಟ ೬೧೨)—

೨೧. "ಸ್ವಾಮಿಾ ಹುಟ್ಟುವ ಮೊದಲೇ ಭೂಮಿ ಹುಟ್ಟುವ ಮೊದಲೆ।
ಸ್ವಾಮಿ ಮಾದೇವ ರಾಯಾ। ಹುಟ್ಟಬಂದನೋ ಕೋಲು ॥ ೧ ॥

* * * *

ಪಾತಾಳ ಜಡಿದು ಪಾರವಾಳಕ್ಕೆ ಬಂದವು ಕೋಲು ॥ ೩೦ ॥

* * * *

ಸತ್ಯದಲ್ಲಿ ಚಂದನ ಗಿಡವ ಪಡೆದನು ಶ್ರೀ ಮಾದೇವ ರಾಯ।
ಬಸವನ ಕೋಡೀನ ಮೇಲೆ ಚಿಗ್ಗಾಗ ಸಾಕಿದವು ॥ ೩೨ ॥
ಬಸವನ ಕೋಡೀನ ಮೇಲೆ ಕಡ್ಡಿ ಏರಿಸಿದವು ಕೋಲು।
ಅದರ ಮೇಲೆ ಮೂರ್ಮೊಟ್ಟೆ ತಾವು ಹಾಕಿದವು ॥ ೩೩ ॥
ಮೊಟ್ಟೇ ಹಾಕಿದ ಮೇಲೆ ಮೊಟ್ಟೇ ಮೊಟ್ಟೆಗೆ ತಾಕಿ।
ಜರಿದು ಬಿದ್ದು ಸ್ವಾಮಿಯ ಮೇಲೆ ಸಂಕಟ ಬಂದೀತು ॥ ೩೪ ॥
ಸ್ವಾಮಿ ಏನು ಮಾಡುತ್ತೈದಾನು ಮಾದೇವ ರಾಯಾ।
ಮೂರೆಂಬ ವರವನು ತಾ ಕೊಡುವನು ॥ ೩೫ ॥
ಕರಿಯ ಮಂಡಲ ಭೂಮಿತಾಯಿ ಆಗಲೋ।
ಬಿಳಿಯ ಮಂಡಲಕ್ಕೆಂಬುದು ಆಕಾಶವಾಗಲೋ॥
ಹಸರು ಮಂಡಲಕ್ಕೆಂಬುದು ಜೀವ ರಾಶಿಯ ಕೋಲು" ॥ ೩೬ ॥

* * * *

ಹೀಗೆ ಕೋಲು ಹುಟ್ಟಿತು. ಅನಂತರ ದೇವತೆಗಳೆಲ್ಲ ಸೇರಿ ಕೋಲಾಟವಾಡಿದರು:

"ಮಾದೇವ ರಾಯಾ ಮದ್ದಲಿ ತಡೆದಾ।
ದೇವೇಂದ್ರ ರಾಯಾ ದೇಂವಟಿ ತಡೆದಾ।
ತಾಳಾಮಣಿ ತಾಳಾ ತಡೆದಾನೂ ಕೋಲು" ॥ ೪೪ ॥

ಎಲ್ಲರೂ ಚಿನ್ನ, ಬೆಳ್ಳಿ, ಮುತ್ತಿನ ಕೋಲುಗಳನ್ನು ತೆಗೆದುಕೊಂಡು ಆಡಿದರು. ಚಿನ್ನ ಬೆಳ್ಳಿಯ ಕೋಲುಗಳು ಸಿಗುರೊಡೆದವು. ಮುತ್ತಿನ ಕೋಲು ಮೂರು ತುಂಡಾಯಿತು. ಆಗ, "ಈ ಆಟ ನಮಗೆ ತರವಲ್ಲ ॥ ೫೩ ॥ ದೇವತೆಗಳಿರಾ ಈ ಆಟ ಮಾನವರ ಮಕ್ಕಳಿಗೆ ॥ ೫೪ ॥" ಎಂದು "ಸತ್ಯದಲಿ ಹಾಲು ಕೆರೆಯ ಪಡೆದನು ಮಾದೇವ ರಾಯ । ಹಾಲಕೆರೆಯಿಂದ ಮಾನವನ ಪಡೆದನು ॥ ೫೬ ॥" ಅವನನ್ನು ದೇವತೆಗಳು ಕರೆದು, "ಚಿನ್ನದ ಮದ್ದಲಿ ನೀ ಹಿಡಿಯಬೇಕು" ಎಂದರು. ಅವನು "ಚಿನ್ನದ ಮದ್ದಲಿ ತನಗೆ ಸ್ವಾಮಿ ತರವಲ್ಲ । ದೇವತೆಗಳಿರಾ । ಹೊನ್ನೆಯ ಮದ್ದಲಿ ತನಗೆ ಕೊಡಬೇಕು" ಎಂದು ಕೇಳಿಕೊಂಡನು. ಹೀಗೆಯೇ,

"ಚಿನ್ನದ ತಾಳ ತನಗೆ ತರವಲ್ಲ ದೇವತೆಗಳಿರಾ । ಕಂಚಿನ ತಾಳ ಕೊಡಬೇಕೂ ॥ ೬೭ ॥
ಚಿನ್ನದ ಕೋಲು ತರವಲ್ಲ ದೇವತೆಗಳಿರಾ । ಕೊಡಸೀನ ಕೋಲು ತನಗೆ ಕೊಡಬೇಕು ॥ ೬೮ ॥
ಚಿನ್ನದ ಗುಮಟೇ ತನಗೆ ತರವಲ್ಲ ದೇವತೆಗಳಿರಾ । ಮಣ್ಣಿನ ಗುಮಟೆ ತನಗೆ ಕೊಡಬೇಕು ॥"

ಎಂದು ಪ್ರಾರ್ಥಿಸಿದನು. ದೇವತೆಗಳು ಆಗಲೆಂದು ಹರಸಿ, ನೂರೊಂದು ಕೋಲೂ ನೂರೊಂದು ಹಾಡೂ ಕೊಟ್ಟು ತಮ್ಮ ತಮ್ಮ ಠಾವಿಗೆ ನಡೆದರು. "ಶ್ರೀ ಮಾದೇವ ರಾಯ ತಮ್ಮನ (ಕೋಲನ್ನು) ಮುಂದೆ ಮಾಡಿ ಕೊತಿದ್ವಾನು."

ಈ ಕೋಲಾಟದಲ್ಲಿ ಆಡುವವರು ಎರಡು ಗುಂಪಾಗಿ ಸವಾಲ್ ಜವಾಬು ನಡೆಯಿಸುತ್ತ ಕೋಲು ಹೊಯ್ಯುವುದೂ ಉಂಟು.—

೨೨. "ಮಾತಾಡ್ ಮಾತಾಡು ಮಲ್ಲಿಗೆ, ಶಾಮಂತೀಗೆ ಇರುವಂತಿಗೆ ಸ್ಯೆಯಂತೀಗೆ ॥ ಪ ॥
ಸವಾಲು.—ಒಬ್ಬೀಗೆ ನಾಕ್ಮೊಲೆ । ಒಬ್ಬೀಗೆ ಎರಡ್ಮೊಲೆ । ಒಬ್ಬೀಗೆ ಸದ್ಯಾ । ಮೊಲೆಯಿಲ್ಲ ।
ಜವಾಬು.—ಗೋವಿಗೆ ನಾಕ್ಮೊಲೆ । ಆಡೀಗೆ ಎರಡ್ಮೊಲೆ । ಕೋಳೀಗೆ ಸದ್ಯಾ । ಮೊಲೆಯಿಲ್ಲ ॥ ೧ ॥
ಸವಾಲು.—ಒಬ್ನೀಗೆ ಕಾಲ್ಕೊಟ್ಟೆ । ಒಬ್ನೀಗೆ ಕೈಕೊಟ್ಟೆ । ಒಬ್ನೀಗೆ ಸೀರೆ ಎಳಕೊಟ್ಟೆ ।
ಜವಾಬು.—ಪಂಚಾಲನ್ಗೆ ಕಾಲ್ಕೊಟ್ಟೆ । ಬಳ್ಳಾರಂಗೆ ಕೈಕೊಟ್ಟೆ । ಅಗ್ಸಂಗೆ ಸೀರೆ ಸೆಳಕೊಟ್ಟೆ ॥ ೨ ॥

ಇದರಲ್ಲಿರುವ ಒಗಟುಗಳು, ಅದರಲ್ಲಿ ಕಾಣುವ ಪ್ರಕಾರಾಂತರವಾದ ಅರ್ಥ, ಅದಕ್ಕೆ ಇರುವ ನಿರ್ದುಷ್ಟವಾದ ಅರ್ಥ—ಇವುಗಳನ್ನೆಲ್ಲ ಕೇಳಿದರೆ ಆಗುವ ಆನಂದವನ್ನು ಗಮನಿಸಿರಿ. ಇಂತಹವನ್ನು ಆಗಾಗ ಅಲ್ಲಲ್ಲಿಯೇ ಹುಟ್ಟಿಸಿಕೊಂಡು ಹೇಳುವರು.[17]

**V. ತುಂಡು ಪದಗಳು.**—ಇವು ಅದೆಷ್ಟಿವೆಯೋ ಹೇಳಬರುವುದಿಲ್ಲ. ಯಾವ ಯಾವ ವಿಷಯದ ಮೇಲಿವೆ ಎಂಬುದನ್ನೂ ಹೇಳಬರುವಂತಿಲ್ಲ. ಉದಾಹರಣೆಗಳು.—

೨೩. "ಬೀಗನ ಮನೆಯಲಿ ತುಂಬಿದೆ ನವಣೆ ।
ಬೀಗಿತ್ತೀಗೆ ಹತ್ತಿದೆ ಹೊಸ ಹೊಸ ತಗಣೆ ॥

17 "ಹುಟ್ಟಿದ ಹಳ್ಳಿ—ಹಳ್ಳಿಯ ಹಾಡು"—ಇದರಲ್ಲಿ ಈ ಕೋಲಾಟದ ಹಾಡುಗಳು ಮುವ್ವತ್ತು ಶೇಖರವಾಗಿವೆ. ಆ ಸಂಗ್ರಹದ ಕೊನೆಯಲ್ಲಿ ಅವರು ಹೇಳುವ—"ಮೇಲಿನ ಪದ್ಯಗಳಲ್ಲಿ ದೇವತಾ ಸ್ತುತಿಗಳೂ ವೀರರ ವರ್ಣನೆಗಳೂ ಇವೆ. ಅವುಗಳನ್ನು ಕಾವ್ಯ ದೃಷ್ಟಿಯಿಂದ ಪರಿಶೀಲಿಸಿ ವಿಮರ್ಶಿಸಿದರೆ ಪಾಮರ ಸಾಹಿತ್ಯದಲ್ಲಿ ರಸ, ಶ್ಲೇಷೆ, ಅಲಂಕಾರ, ಪ್ರತಿಭಾ— ಇವುಗಳ ಪ್ರವಾಹವೇ ತೋರಿಬರಬಹುದು" — ಎಂಬ ಮಾತು ಸರ್ವಥಾ ಸತ್ಯವಾದುದು.

ಬೀಗನ ಮಗಳು ತಾ ಬಲು ಸುಗುಣಿ ।
ಬೀಗಿತ್ತಿ ತಿಂತಾಳೆ ಮರ ಮರ ಸೆಗಣಿ ॥ "

ಈ ಮೇಲಿನ ಪದ್ಯ (?) ದಲ್ಲಿ ಹೇಳಿರುವುದೆಲ್ಲ ಬೀಗರ ಮನೆಗೆ ಸಂಬಂಧಪಟ್ಟವು. ಇದಕ್ಕೆ ವಿರುದ್ಧವಾಗಿ ಸಂಬಂಧದ ಗಾಳಿಯೂ ಇಲ್ಲದವುಗಳನ್ನು ತೆಗೆದುಕೊಂಡು ಸೇರಿಸಿರುವ ಪದ್ಯಗಳೂ ಉಂಟು :—

೨೪. "ಥಳಿ ಥಳಿ ಎಂಬುದು ನಡುಕ ।
ಮಕ್ಕಳ ಕೊರಳೀಗೆ ಪದಕ ।
ಪ್ರಾಯ ಹೋದ ಮೇಲೆ ಮುದುಕ ।
ಪ್ರಾಣ ಹೋದ ಮೇಲೆ ಬದುಕ ॥ " (೧೬ನೆಯ ಹಾಡಿಗೆ ಹೋಲಿಸಿರಿ)

ಇವುಗಳನ್ನು ರಾಗವಾಗಿ ಓದಿ ಮುಗಿಸುತ್ತಿದ್ದ ಹಾಗೆಯೇ "ಟಿಂಗ್ ಟಿಯ್ಯ್" ಎಂಬ ಏಕನಾದದ ತಂತಿಯ ಮಿಾಟನ್ನು ಸ್ಮರಿಸಿಕೊಳ್ಳಿರಿ; ಎಂತಹ ಆನಂದವಾಗುವುದೋ ನೋಡಿರಿ.

**VI. ಹಾಸ್ಯದ ಹಾಡುಗಳು.**—ಈ ಜಾತಿಯಲ್ಲಿ ಅದ್ಭುತಗಳೂ ಅಸಂಬದ್ಧ ಪ್ರಲಾಪಗಳೂ ಇರುವುದರ ಜೊತೆಗೆ ತಿಳಿ ತಿಳಿಯಾದ ಹಾಸ್ಯವೂ ಉಂಟು.—

೨೫. "ಸುಳ್ಳೂ ನಮ್ಮಲ್ಲಿಲ್ಲ ಸುಳ್ಳೀ ನಮ್ಮನೆ ದೇವರು ।
ಗೊಡ್ಡ ಗೋಡೆ ಹಾಕಿದ್ಕಂಡೆ । ಬೆಕ್ಕು ರೊಟ್ಟಿ ತಟ್ಟಿದ್ಕಂಡೆ ।
ಮೆಣಸಿನ ಕಾಯಿ ಕಂಡೆನಕ್ಕ । ಮನರ್ಸ ತೋರಾವಾ ॥ ೧ ॥

ಕೋಳಿ ಕೋಟೆ ಗೆದ್ದದ್ಕಂಡೆ । ಹಕ್ಕಿ ಕಂಬ್ಳಿ ನೇಯೋದ್ಕಂಡೆ ।
ಅವರೆ ಕಂಡೆನಕ್ಕ ಆನೆ ಗಾತ್ರವಾ " ॥ ೨ ॥

ನರಿಯ ಮದುವೆ

೨೬. "ನರಿ ಬಹಳ ಪರಿಯಿಂದ ಮದುವೆ ಮಾಡುತಾದೆ ।
ಹುಲಿ ಮನೆಯೊಳಗೆ ಹೆಣ್ಣು ತಗೆದೀತು ॥
ಕಾಗೆ ಬಂದು ಕೂಗ್ಯಾಡಿ ಹೇಳುತದೆ । ಗೂಗೆಯ ಕೂಡೆ ಬುದ್ಧಿ ಮಾತು ॥

* * * * * *

ಮತ್ತೆ ಪಾರಿವಾಣ ಕೋರಿಹುಳ ಚಿಕ್ಕಾಟನ ಮೇಲ್ ಸಬರ್ ಹಾಕಿ ।
ಮಲೆನಾಡು ಮಲದೇಶ ತಿರುಗಿ ತಾನು ತಂದು ಕೊಟ್ಟಿತು ಸಣ್ಣ ಅಕ್ಕಿ ॥
ಹಾಳಿ ಹದ್ದು ಬಂದು ಹೋಳಿಗಿ ಮಾಡಿತು ಬಹಳ ಬಹಳ ಹೂರಣ ಹಾಕಿ ॥
ಮಿಾನು ಬಂದು ಖುರಬಾನ ಬಸ್ಸಿತು ।

* * * * * *

ನೊಣ ಬಂದು ಅರಸೀನ ಹಚ್ಚೀತು । ನುಶೀ ಬಂದು ಕುಂಕುಮ ಹಚ್ಚೀತು ॥
ಬೆಕ್ಕು ಭಾಷಿಂಗ ಕಟ್ಟೀತು । ಕಟ್ಟೆರುವೆ ಕಂಕಣ ಕಟ್ಟೀತು ।

ಗೊಡ್ಡ ಬಂದು ಎಲೆ ಹಾಕೀತು । ಇರುವೆ ಬಂದು ನೀರ ಬಡಸೀತು ॥
ಇಲಿ ಬಂದೆಲೆಯಡಿಕೆ ಕೊಟ್ಟೀತು ॥ ''

(ಇದು ''ಮೂಗೂರು ಷಹರ್ ಬಜಾರ್ । ಕವಿ ಹನುಮಂತ ದೇವರ ॥ '' ಪದ. ಇದು ಸಿಕ್ಕಿದುದು ಚಿತ್ರದುರ್ಗದಲ್ಲಿ. ಎಲ್ಲಿಂದ ಎಲ್ಲಿಗೆ ಹೋಗಿದೆ ನೋಡಿರಿ!)

## ಕೋಣವೇಗೌಡನ ಕಥೆ

೨೭. ''ನಮ್ಮೂರಲ್ಲಿದ್ದ ಕೋಣವೇಗೌಡ । ಜೀನನೆಂದರೆ ಹೆಸರ್ಹೋಳಬೇಕವನ ।

*　　*　　*　　*　　*　　*

ಜೋಳನಾದ್ರೇ ಬಿತ್ತೇ ಆಯ್ತು । ಮೂರು ವರುಸ ಮಳೆಯೇ ಹೋಯ್ತು ।
ಇರುವೆ ಕಾಳ ಹೊತ್ಕೊಂಡ್ಹೋದೋ ॥ ಗೌಡನು ಇರೀಗೆ ಸಂಕಲೇ ಹಾಕಿ ।
ಕಾಳನೆಲ್ಲಾ ತೆಗೆದು ತುಂಬ್ದ ॥

ಹೊಟ್ಗಿಲ್ದೋರು ಕೇಳಿದರವನ । ಬಿಕ್ಸನಾದರೆ ಕೊಡಿಗಿಡಿಯೆಂದು ।
ಬಿಕ್ಸದೋರ್ಕೋಟೀ ತಡೀಲಾರ್ದೆ । ಕರೆದು ಹೆಂಡ್ತಿಗೇಳ್ದ ಹಿಂಗೆ ॥
''ಬಿಕ್ಸದವರು ಬಂದ್ಗಿಂದಾರು । ಬಿಕ್ಸಕಾದರೆ ಬಂದಾರೀಗ ।
ಸತ್ತಂತೆ ನಾನು ಬಿದ್ಕೋತೀನಿ । ಅಳತಾ ಬಾಕ್ಲಲ್ಕುಂತಕೊ ಹೆಣ್ಣೆ ।
ದಾಸಯ್ಯನಾದ್ರೆ ಬತ್ತಾನಾಗ । ಇದ್ಯಾಕಮ್ಮ ಅನ್ನುತಾನೆ ॥

ಗಂಡ ಸತ್ತೋದ ಅಂತ ಹೇಳು । ದೇವ್ರು ಸೂತಕ್ಕೆ ಸಿಕ್ಕೀಹೋಯ್ತು ।
ದಾಸಯ್ಯನಾದ್ರೆ ಓಡ್ತಾನಾಗ ॥
ಹಂಗಂತ ಹೇಳಿ ಗೌಡನು ಮಲಗ್ದ । ಸತ್ತಂಗೆ ಮೂಲೇಲಿ ಬಿದ್ಕೊಂಡ ।
ಗೌಡ್ನ ಹೆಂಡ್ತೀ ಬಾಕ್ಲಲ್ ಕುಂತುಕೊಂಡು । ಅಳತಾ ಇದ್ಳು ಗೌಡ ಹೇಳ್ದಂಗೆ ॥ ''

(೨)

''ಕೇಳ್ ಕೇಳ್ ನನ್ನ ಕೋಣವೇಗೌಡ । ಕೊಡಗಿನ ಮಾರಿ ತಂಟಲ ಮಾರಿ ।
ಗೌಡಗೆ ಬುದ್ಧೀ ಕಲಿಸಾಲೆಂತ । ದಾಸಯ್ನು ವೇಸವ ಹಾಕಿಕೊಂಡು ।
ತೊಳಸೀ ಮಣಿಯ ಕತ್ತಿಗೆ ಹಾಕಿ । ಕೈಲಿ ಜಾಗಟೆ ಕಂಕುಳಲ್ಕಂಕು ॥
ಹಣೇಲ್ನಾಮ ಇಟ್ಕುಕೊಂಡು । ಗೋವಿಂದ ತಿಮ್ಮಪ್ಪ ಎಂದೆನ್ನುತ್ತ ।
ಗೌಡ್ನ ಹಟ್ಟೀ ಬಾಕ್ಲಿಗೆ ಬಂದ್ಲು ।
ನೋಡಿದಳಲ್ಲಿ ಗೌಡ್ನ ಹೆಂಡ್ತಿ ಅಳುತ ಬಾಕ್ಲಲ್ಕುಂತಿರೋದ ॥
ಇದ್ಯಾಕಮ್ಮ ಅಳ್ತೀ ಎಂದ್ಲು । '' ಗೌಡ ಸತ್ತೋದ ಕೆಟ್ಟೆ ಕಾಣಪ್ಪ ।
ಹೊರೋರು ಹೆಣವ ದಿಕ್ಕಿಲ್ವಲ್ಲೋ । ನನಗೆ ಮುಂದಕೆ ದಿಕ್ಕಿಲ್ಲ ತಂದೆ ॥
ಕೆಟ್ನಲ್ಲಪ್ಪೊ ಕೆಟ್ನಲ್ಲಪ್ಪೊ । '' ಅಂತ ಹೇಳೀ ಬಿಕ್ಕಿ ಬಿಕ್ಕಿ ಅತ್ಲೂ ।
ಕಣ್ಣಲ್ಲಿ ತೊಟ್ಟು ನೀರೇಯಿಲ್ಲ ॥
''ಅಯ್ಯೊ ಕೋಣವಪ್ಪ, ಸತ್ಯಾ ನೀನು । ಚಿನ್ನದಂತಾ ಮನುಸನು ನೀನು
ನಿನ್ನಂಥಾ ದಾನಗಾರ ಸತ್ತಾ ಮೇಲೆ । ನಮಗೆ ಹೊಟ್ಗ್ಯಾರ್ಕೊಡಾರಪ್ಪ । ''

ಅಂತಾ ತುಂಬಾ ಬಗೆಲಿ ದಾಸಯ್ಯ । ತಲೆಯಾ ತಲೆಯಾ ಹೊಡೆಕೊಂಡತ್ತ ॥
"ಏಟ್ಹೊತ್ತು ಬಡಕೊಂಡ್ರು ಇದ್ದೇ ಅದೆ । ಹೆಣವ ಹೊರೋರು ದಿಕ್ಕಿಲ್ವಂತೆ ।
ಅಂತ ಹೇಳಿ ದಾಸಯ್ಯನಾಗ । ಶಂಕು ಜಾಗಟೆ ತೆಗೆದು ಮಡಗಿ ।
ಉಟ್ಟದ್ಹೊದ್ದಿದ್ದಟ್ಟೆ ತೆಗೆದು । ಒಂದು ಕಡೀಕೆ ಗಂಟ್ಕಟ್ಟಿಟ್ಟು ।
ಗೌಡನ ಮೊಕವಾ ನೋಡಾಕ್ಹೋದ ॥"

(೩)

ಹೊರಗಡೆ ನಡೆಯೋ ಪರಸಂಗ ಕೇಳಿ । ದಾಸಯ್ಯ ಬರುವಾ ಗುರುತಾನರ್ತು ।
ಗೌಡಾ ಬಿಗೀಲಿ ಉಸಿರಾ ಕಟ್ಟಿ । ಕಣ್ಣುಗಡ್ಡೆ ಮೇಗ್ಕೆ ಸಿಕ್ಕಿಸಿಕೊಂಡು ।
ಬಾಯ ಅಗಲಾಗಿ ತಾ ತೆರಕೊಂಡು । ಕೈಕಾಲ್ನಾನು ಮುದುರಿಕೊಂಡು ।
ಸತ್ತಂಗೆ ತಾನು ಬಿದ್ಕೊಂಡಿದ್ದ ॥

ಗೌಡ್ನ ರುಣವ ತೀರ್ಸೋ ನೆವದಿ । ದಾಸಯ್ಯ ಒಂದ್ಹಿಡಿ ಅಕ್ಕಿ ತಂದು ।
ಮೊಕ್ದಾ ಮುಸಕಾ ಒಕ್ಕಡೀಕೆಳ್ದು । ಕಿಸಿದಿದ್ದಾಬಾಯ್ಗೇ ಅಕ್ಕೀ ತುಂಬಿ ।
"ಅಯ್ಯೋ ಅಪ್ಪಾ ಸತ್ಯಾ ಗೌಡ । ನಿನ್ನಂತಾ ಗೌಡ ಹುಟ್ತಾನೇನೋ ॥"
ಅಂತಾ ಅಳ್ತಾ ಹೊರೀಕೆ ಬಂದು । ಬಿದಿರಾ ಹಿಂಡಲಲ್ಬಿದಿರಾ ತಂದು ।
ಚಟ್ಟವನಾದ್ರೆ ಕಟ್ಟಿಕೊಂಡು । ಹೆಣವ ತಂದು ಅದ್ರಮೇಲಿಡುಕಿ ।
ಬಂದು ನೋಡ್ತಾನಲ್ಲಿ ಹೆಣವ ॥

ಹೆಣೀನ ಮುಸುಕ ತೆಗೆದು ನೋಡಿದ್ರೆ । ಅಕ್ಕಿ ಒಂದ್ಕಾಳಿರಲೇಯಿಲ್ಲ ।
ತೆರದಿದ್ದ ಬಾಯಿ ಮುಚ್ಕೊಂಡಿತ್ತು । ಮುದರಿದ್ದ ಕಾಲು ನೀಡ್ಕೊಂಡಿತ್ತು ॥
ಹೆದರಿದೋನ್ನಂಗೆ ದಾಸಯ್ಯ ನೋಡಿ ।
"ದೆವ್ವ ಬಂದದೆ ಹೆಣದಾ ಮ್ಯಾಲೆ । ಅದ್ನ ಈಗ ಓಡ್ಸಲೆ ಬೇಕು ॥"
ಅಂತ ಹೇಳಿ ಬರಗುಳಾವ । ಚೆಂಕಿಲ್ನಾಕಿ ಚಂದಾಗ್ಕಾಸಿ ।
ತಕೊಂಡು ಬಂದು ಹೆಣದಾ ಹತ್ರ ॥

"ಓಡೋಡ್ಲೆ ಹಾಳು ದೆವ್ವೇ ನೀನು । ಹೆಣಾನ ಯಾಕೆ ಹಿಡುಕೊಂಡಿದ್ದೀ ॥"
ಅಂತ ಹೇಳಿ ಗೌಡ್ನ ಬೆನ್ಮೇಲೆ । ಬರಗುಳ ಎಳ್ದ ಚೊರಚೊರ ಅಂತು ।
ಅಯ್ಯಯ್ಯಪ್ಪಾ ಎಂದ ಗೌಡ । ಉರೀಗೆ ಬಾಯ್ಬಾಯಿ ಬಡಕೊಂಡ್ಬಿಟ್ಟ ॥
ದಾಸಯ್ಯನಾದ್ರೆ ಕಿಸಿ ಕಿಸಿ ನಗ್ತಾನೆ ।
ಗೌಡ್ನ ಹೆಂಡ್ತಿ ಬೀದೀಲಿದ್ದೋಳು । ಒಳೀಕೆ ಬಂದು ನೋಡ್ತಾಳಲ್ಲಿ ।
ಗಂಡಗೆ ಬರಗುಳ ಬಿದ್ದಿರೋದಾ ।

ಜೀನ ಗಂಡ್ನ ಗತಿಯಾ ಕಂಡು । ಅಳ್ವಿನ ಜೊತ್ಗೇ ನಗುವೂ ಬಂತು ।
ದಾಸಯ್ಯ ಶಂಕೂ ಜಾಗಟೆ ತಂದೂ । ಬಿಕ್ಸಾ ಹಾಕಮ್ಮ ಅಂತಂದ ॥
ಕೊಣವೇಗೌಡ್ನಿಗೆ ಈಟುಹೊತ್ಗೆ । ಬಂದಿತ್ತು ಬುದ್ಧಿ ಚನ್ನಾಗೇಯೆ ।
"ಹಾಕೇ ಒಂದ್ಹಿಡಿ ಜೋಳಾ ಅವನ್ಗೆ ।" ಅಂತ ಹೇಳ್ದ ಹೆಂಡ್ತೀಗವನು ॥

"ಸತ್ಹೋದ ಗೌಡ ಬದಕ್ಕೊಂಡನ್ವೆ । ಒಂದ್ಹಿಡಿ ಜೋಳ ನನಗೆ ಸಾಲ್ದು ।
ಕೊಡಬೇಕು ನನಗೆ ಒಂದು ಹೇರು" । ಅಂತ ಹೇಳಿ ಹಟವಾ ಹಿಡಿದ ॥
ಕೋಪವು ಬಂತು ಗೌಡನಿಗೆ ಬಾಳಾ । ಮೊದ್ಲೇ ಬರಗುಳಾ ಬಿದ್ದ ನೋವು ।
ಇದ್ದದ್ದು ತುಂಬಾ ಕೋಪ ಬಂತು । ದೊಣ್ಣೀ ತಕ್ಕೊಂಡು ಹೊಡೆಯೋಕೆ ಬಂದ॥
ದಾಸಯ್ಯನಾಗ ಹೆಂಗ್ಸಾಗಿದ್ಲು । ನೋಡಿದರವಳು ಕೊಡಗಿನ ಮಾರಿ ।
ಗೌಡನು ಹೆದರಿ ಕಾಲಿಗ್ಬಿದ್ದು । "ತಾಯಿಾ ನನ್ನ ಕಾಪಾಡವ್ವ ॥"
ಅಂತ ಅವಳ ಕೇಳಿಕೊಂಡು । ತನ್ನಲ್ಲಿದ್ದ ಎಲ್ಲಾವನ್ನೂ ।
ತಂದು ಮಾರೀಗೆ ಬಲಿಯಾ ಕೊಟ್ಟ ।
ಕಾವಿಯುಟ್ಕೊಂಡು ಬೀದಿಯಲ್ಲಿ । ಏಕ್ನಾದಾ ತಕ್ಕೊಂಡ್ಹಂಗೋಳೀಗೆ ।
"ಜೀನರಾಗ್ಬೇಡ್ರಪ್ಪ ಎಂತಾ । ಹೇಳ್ತಾ ಅವನು ತಿರಗ್ತಾ ಅವ್ನೆ ॥"

ಈ ಹಾಡಿನಲ್ಲಿರುವ ಕಥೆ ಹೇಳುವ ಜೋಕು, ದೇವತೆಗಳಿಗೂ ಮನುಷ್ಯರಿಗೂ ಇರುವ ಸಂಬಂಧ—ಇವುಗಳನ್ನೂ, ವಿದ್ಯಮಾನಗಳನ್ನು ಇದ್ದಂತೆ ವರ್ಣಿಸುವ ಸಾಮರ್ಥ್ಯವನ್ನೂ ನೋಡಿರಿ; ಪುರಂದರದಾಸರ ಕಥೆಯೊಡನೆ ಹೋಲಿಸಿರಿ. ಇಂತಹ ಹಾಡುಗಳು ಎಷ್ಟು ಸಹಸ್ರವಿವೆಯೋ !

## (ಇ) ವಿಶೇಷ ಪದಗಳು

ಇನ್ನು, ಕೊನೆಯ ವಿಭಾಗವಾದ ವಿಶೇಷ ಪದಗಳತ್ತ ತಿರುಗೋಣ. ಇವುಗಳಲ್ಲಿ ಜಾತ್ರೆಯ ಪದಗಳು, ಶೈವ ಮತ್ತು ವೈಷ್ಣವ ದಾಸರ ಪದಗಳು, ತತ್ತ್ವಗಳು ಎಂಬ ಮೂರು ವಿಭಾಗಗಳನ್ನು ಮಾಡುವೆವು. ಸೂಳಾದಿಗಳು ಈ ಎರಡನೆಯ ಭಾಗದಲ್ಲಿ ಸೇರುವುವು. ಇನ್ನೂ 'ಜಾಣನ ಪದಗಳು', 'ಚಂದಮಾಮನ ಪದಗಳು' ಎಂಬವೂ ಇವೆ. ಇವುಗಳನ್ನೂ ತತ್ತ್ವಗಳ ಜೊತೆಗೇ ಸೇರಿಸುವೆವು.

I. ೧. ಜಾತ್ರೆಯ ಪದಗಳು.—

"ಜಾತ್ರೆಗೆ ಹೋಗೋಣ ಬಾ" ಎಂದು ತನ್ನ ನಲ್ಲೆಯನ್ನು ಕರೆಯುವ ಪದಗಳೇ ಹೆಚ್ಚು. ಹಾಗೆಯೇ, ಸಂತೆಗೆ ಕರೆಯುವ ಪದಗಳೂ ಉಂಟು. ಕಾಮನ ಪದಗಳೂ ಮಾರ್ನವಮಿಾ ಪದಗಳೂ ಈ ಜಾತಿಗೇ ಸೇರಿದವು.

ಜಾತ್ರೆಯ ಪದಗಳೂ ಸಂತೆಯ ಪದಗಳೂ ಸಾಮಾನ್ಯವಾಗಿ ಆಯಾ ಪ್ರಾಂತ್ಯದ ಸುತ್ತಮುತ್ತಲಿನಲ್ಲಿ ಮಾತ್ರ ಇರುವವು. ಆದುದರಿಂದ ಅವನ್ನು ಬಿಟ್ಟು ಮುಂದಕ್ಕೆ ಹೋಗಿ, ಈ ಜಾತ್ರೆಯ ಮತ್ತು ಸಂತೆಯ ಪದಗಳನ್ನು ಉಪಯೋಗಿಸಿಕೊಂಡು ಅದನ್ನೇ ತತ್ತ್ವಗಳನ್ನಾಗಿ ತಿರುಗಿಸಿರುವ ಪರಿಯನ್ನು ಮಾತ್ರ ಒಂದೆರಡು ಉದಾಹರಣೆಗಳಲ್ಲಿ ನೋಡೋಣ:—

೨೮. "ಊರು ದೇವರ ಮಾಡಬೇಕಣ್ಣ । ತನ್ನೊಳಗೆ ತಾನು ॥
ಊರು ದೇವರು ಮಾಡುಯೆಂದು ಸಾರುತಿದೆ ಹಗಲು ಇರುಳು ।

ದ್ವಾರಗಳೊಂಭತ್ತು ಯೇರಿಸೀ ಭ್ರೂಮಧ್ಯದೊಳಗೆ ||
ತರ್ಕವೆಂಬೋ ಕ್ಲೇಶ ಕುರಿಯಣ್ಣಾ । ಅದ ಹಿಡಿದು ತಲೆಯ ಚಂಡಾಡ ಬೇಕಣ್ಣಾ ||

*  *  *  *

ತನುವೆಂಬೋ ಮೇಕೆ ಹೋತಣ್ಣಾ । ಅದಕ್ಕೆ ತಕ್ಕ ಜ್ಞಾನವೆಂಬೋ ಪೋತರಾಜಣ್ಣಾ ||
ತಾನು ಯೆಂಬೋ ಚಾಟಿ ಹಿಡಿದು । ಹೀನ ಹೋತನ ಸೀಳಿ ಬಿಸುಟು ।
ಜ್ಞಾನ ಗುಡಿಸಲು ಸೂರೆಗೊಂಡು । ತಾನು ಬೆಳಗುವ ಜ್ಯೋತಿ ನಿಲಿಸಿ || "

೧೯. "ಅರ್ಥಿವುಲ್ಲಾಸದಿಂದ ನೀವು ನಾವು ಕೂಡಿ ಹೋಗೋಣ ।
ಬರ್ತಿರೇನ್ರಿ ಇಲ್ಲೆಯಿರ್ತಿರೇನ್ರಿ || ಪ ||
ಚಿನ್ನದೋಲೆಯನ್ನಿಟ್ಟು । ಸೀರೆ ಕುಪ್ಪುಸ ತೊಟ್ಟು ।
ಮುನ್ನಿನ ಮೂರ್ತಿಗೊಲಿವ । ಲಿಂಗನ ತೋರಿಸ್ತೀನಿ || ಬರ್ತಿರೇನ್ರಿ ||
ಆರು ಚಕ್ರದ ಗಾಡಿ । ಮೂರು ಮುಲ್ಕಿನ ತೇರು ।
ಮೇಲು ಮಂಟಪದೊಳು । ದೇವದೇವನ ತೋರಿಸ್ತೀನೀ || ಬರ್ತಿರೇನ್ರಿ ||

೨. ಕಾಮನ ಪದಗಳು.—

ಕಾಮನ ಕಥೆ[18]ಯನ್ನು ನಾನಾ ಪರಿಯಾಗಿ ಈ ಹಾಡುಗಳು ವರ್ಣಿಸುವುವು. ಲಾವಣಿಗಳಲ್ಲಿ ಕಂಡುಬರುವ ಜಾತಿಗಳೆಲ್ಲವೂ ಇದರಲ್ಲಿಯೂ ಕಂಡುಬರುವುವು. ಈ ಪದಗಳನ್ನು ವೈಷ್ಣವ ಕವಿಗಳೂ ಹಾಡಿದ್ದಾರೆ. ಈ ಹಾಡುಗಳಲ್ಲಿ ಭಂಡ ಮಾತುಗಳು ಬರುವುದುಂಟು. "ಢುಂಢು, ಅಥವಾ ಹೋಲಿಕಾ ಎಂಬ ರಾಕ್ಷಸಿಯ ತೃಪ್ತಿಗಾಗಿ ತುಚ್ಛ ಭಾಷಣಗಳನ್ನುಚ್ಚರಿಸಬೇಕು ಎಂದು ಪುರಾಣ ಕಥೆಯಿದೆ."

೨೦. "ದಿಮ್ಮಿ ಸಾಲೆನ್ನಿ ರಾಮ । ದಿಮ್ಮಿ ಸಾಲೆನ್ನಿ ಕೃಷ್ಣ ।
ದಿಮ್ಮಿ ಸಾಲೆನ್ನಿರೋ ಪರಬೊಮ್ಮನೆಂದು ಸಾರಿರೋ || ಪ || "

ದಾಕ್ಷಾಯಣಿಯು ತಂದೆಯ ಯಜ್ಞಕಾಲದಲ್ಲಿ ಅಲ್ಲಿಗೆ ಹೋಗಿ ಅಲ್ಲಿ ತಂದೆ ಯಾಡಿದ ಶಿವನಿಂದಾ ವಾಕ್ಯಗಳನ್ನು ಕೇಳಲಾರದೆ ಆ ಯಜ್ಞಾಗ್ನಿಯಲ್ಲಿಯೇ ಬಿದ್ದು ದೇಹವನ್ನು ತ್ಯಾಗಮಾಡಿದಳು. ಇದರಿಂದ—

"ತಾರಕಾಖ್ಯ ದೈತ್ಯ ಮೃತ್ಯು ರಹಿತನಾದೆನೆಂದು ।. . . . . . . . . . . . . . . .
ಕೆಟ್ಟ ಬುದ್ಧಿಯಿಂದ ಜನರ ಬಾಧಿಸುತ್ತಲಿದ್ದನು || "

---

18 ಮಾರನು ಬುದ್ಧನನ್ನು ವಿಷಯ ಪ್ರಪಂಚದ ಕಡೆಗೆ ಸೆಳೆಯಲು ಏಳು ವರ್ಷಗಳು ಶ್ರಮಪಟ್ಟು ವಿಫಲನಾದುದನ್ನು ಕುರಿತು ವರ್ಣಿಸುವ ಲಾವಣಿಗಳು ಬೌದ್ಧ ಸಾಹಿತ್ಯದಲ್ಲಿವೆ. ಕಾಮನ ವಿಚಾರವಾಗಿ ಋಗ್ವೇದ ಅಥರ್ವಣ ವೇದಗಳಲ್ಲಿ ಉಲ್ಲೇಖವಿದೆ. ಕ್ರಿ.ಶ. ೪೦೦ರಲ್ಲಿ (ಭಾರತೀಯ ವಿದ್ವಾಂಸರ ಮತದಂತೆ ಕ್ರಿಸ್ತ ಪೂರ್ವ ಒಂದನೆಯ ಶತಮಾನದಲ್ಲಿ) ಬರೆದ ಶಾಬರ ಭಾಷ್ಯದಲ್ಲಿ ಈ ಹೋಲಿಕಾ ವ್ರತವು ಪ್ರಾಚ್ಯರಲ್ಲಿ ಮಾತ್ರ ವಾಡಿಕೆಯಲ್ಲಿದ್ದಿತು ಎಂದು ಹೇಳಿದೆ. (ಆನಂದಾಶ್ರಮದ ಮುದ್ರಣ, ಪುಟ, ೨೫೦.)

ಈ ಎಲ್ಲ ವಿಷಯಗಳನ್ನು ಸಮನ್ವಯ ಮಾಡಿ ಈ ಹಬ್ಬವು ಹುಟ್ಟಿದೆಯೆನ್ನಬಹುದೇ ? ಇದು ಬೌದ್ಧರಿಂದ ತೆಗೆದುಕೊಂಡ ಹಬ್ಬವೆನ್ನುವುದಕ್ಕೆ—ದೀವಳಿಗೆಯಂತೆ—ಈ ವ್ರತ ವಿಧಾನದಲ್ಲಿ ಹೇಳಿರುವ ಹೋಮವು ಅಡ್ಡಿಯಾಗಿದೆ.

ಕೊನೆಗೆ ದೇವತೆಗಳು ಈ ಬಾಧೆ ತಡೆಯದೆ ಬ್ರಹ್ಮನಲ್ಲಿ ಮೊರೆಯಿಟ್ಟರು. ಆಗ ಆತನು, "ಶಿವನ ಔರಸ ಪುತ್ರನೊಬ್ಬನು ತಾರಕನನ್ನು ಗೆಲ್ಲಬಲ್ಲನು. ಶಿವನಾದರೋ ತಪದಲ್ಲಿರುವನು. ಆ ಶಿವನು ಬಹಿರ್ಮುಖನಾಗಿ ಗಿರಿಜೆಯ ಕೈಹಿಡಿವಂತೆ ಕಾಮನು ಮಾಡಲಿ. ಆದಾದರೆ ನಿಮ್ಮ ಕಾರ್ಯವಾಗುವುದು" ಎಂದನು. ದೇವತೆಗಳು ಅದೇ ಪ್ರಕಾರವಾಗಿ ಕಾಮನನ್ನು ಬೃಹಸ್ಪತಿಯ ಮುಖದಿಂದ ಆ ಕಾರ್ಯಕ್ಕೆ ನಿಯೋಜಿಸಿದರು. ಆತನು—

"ಕೇಳು ಪ್ರಿಯಳೆ ಹ ನ ವನಕೆ ನಾನು ಪೋಗಿ ಬೇಗದಿಂದ ।
ಮನವ ಸೆಳೆದು ಬಾಣ ಬಿಟ್ಟು ಕಳವಳಾವಗೊಳಿಸುವೆ ॥ ೧೪೯ ॥

* * *

ಆರ್ಯ ಜನರ ಮಾತ ಕೇಳಿ । ಧೈರ್ಯದಿಂದ ಪೋದರಲ್ಲಿ ।
ಕಾರ್ಯ ಸಿದ್ಧಿಯನ್ನು ಪಡೆದು । ಸೂರ್ಯಗಧಿಕನಾಗುವೆ ॥ ೧೫೩ ॥

ನಿನ್ನ ಪಾತಿವ್ರತ್ಯದಿಂದ । ಎನ್ನ ಧೈರ್ಯ ಬಲಗಳಿಂದ ।
ಮುನ್ನ ಹರನು ಭ್ರಾಂತಿಬಿಟ್ಟು । ತನ್ನ ಸತಿಯ ಕೂಡಲಿ" ॥ ೧೫೪ ॥

ಎಂದು ಸತಿಯನ್ನು ಸಂತಯಿಸಿ—

"ರತ್ನಮಯ ಕಿರೀಟವಿಟ್ಟು ಜತನವಾದ ಕವಚ ತೊಟ್ಟು ।
ವೀರಮುದ್ರೆ ಇಕ್ಷುಚಾಪ ಪುಷ್ಪ ಶರವ ಪಿಡಿದನೂ ॥ ೧೬೦ ॥

ಮಘುಮಕ್ಷೀಪ ದಿವ್ಯವಾದ ಹೂವು ಪಿಡಿದು ಸುತ್ತ ಮಲ್ಲಿ ।
ಯೆಂಬ ಕತ್ತಿಯೆತ್ತಿ ಕರದಿ ಪಿಡಿದುಕೊಂಡು ನಡೆದನು ॥ ೧೬೧ ॥

ಇರಾವಂತಿಗೆಂಬ ಚೂರಿ । ಭರದಿ ನಡುವಿನಲ್ಲಿ ಕಟ್ಟಿ ।
ನಾಗಪುನ್ನಾಗವೆಂಬ ಬತ್ತಳೀಕೆ ಕಟ್ಟಿದಾ ॥ ೧೬೩ ॥

ವೀಳ್ಯ ರಥವನೇರಿ ಒಳ್ಳೆ । ಸುಳಿಯ ಗಾಳಿ ಮಂತ್ರಿ ಕೂಡಿ ।
ಚಂದ್ರಬಿಂಬವೆಂಬ ಶ್ವೇತ ಛತ್ರದಿಂದ ಒಪ್ಪುತಾ ॥ ೧೬೪ ॥

* * *

ಕಾಮ ಬಂದು ನಾಗಭೂಷಣನ ಮುಂದೆ ನಿಂತು ।
ಬಾಗಿರುವ ಬಿಲ್ಲಿನಲ್ಲಿ ಹೂವ್ವು ಬಾಣ ಬಿಟ್ಟನು ॥ ೧೮೭ ॥

* * * *

ಸಾಲು ಬಾಣ ತಗಲಿ ಹರನು ಬಹಳ ನೊಂದು ಮನಸಿನಲ್ಲಿ ।
ತಪವು ವಿಘ್ನವಾಯಿತೆಂದು ಫಾಲನೇತ್ರ ತೆರೆದನು ॥ ೧೯೪ ॥

* * * *

ಕಣ್ಣಿನಿಂದ ಹೊರಟ ಅಗ್ನಿಜ್ವಾಲೆಯಿಂದ ಕಾಮದೇವ ।
ಹುಣ್ಣಿಮಾಯ ದಿವಸದಲ್ಲಿ । ಕಣ್ಣುಮಾಯವಾದನು" ॥ ೧೯೬ ॥

* * * *

ಆಗ ರತಿಯು ಬಂದು ಬಹುವಾಗಿ ಶೋಕಿಸಲು, ಈಶ್ವರನು ದಯಾಪರನಾಗಿ—

"ನರಕ ವೈರಿ ಕೃಷ್ಣನಲ್ಲಿ ಪುನಃ ಜನಿಸಿ ಬರುವನು ॥ ೨೧೨ ॥

ಬ್ರಹ್ಮ ಶಾಪದಿಂದ ನೀನು ಶಂಬರಾನ ವಶದಿ ಯಿರಲು ।
ಕಂದನಾಗಿ ಬಂದು ನಿನ್ನ ಹೊಂದಿ ಸುಖವ ಪಡಿಸುವ ॥ ೨೧೩ ॥

* * * *

ಕಾಮದೇವನ ಹಬ್ಬವನ್ನು ದಾವ ದೇಶದಲ್ಲಿ ಮಾಡೆ ।
ಕಾಲ ವರುಷ ಪೈರು ಫಲವು ಆಗುವೋದು ನಿಶ್ಚಯ ॥ ೨೧೪ ॥

* * * *

ಹಬ್ಬ ಮಾಡುವಂಥ ಜನರು ಬೊಬ್ಬೆಯಿಕ್ಕಿ ಬಂದು ಕೂಗಿ ।
ಬಂಡು ಮಾತನಾಡಿದರು ಸುದ್ದಿಗ್ಹೋಗಲಾಗದು ॥ ೨೧೮ ॥

ಬಂಡು ಭಗದ ಲಿಂಗ ಶಬ್ದವಾಡುತಾಲಿ ಹಿಂಡುಗೂಡಿ ।
ಗಂಡನುಳ್ಳ ಸತಿಯರೊಡನೆ ಕಂಡ ಮಾತನಾಡೋರು ॥ ೨೧೯ ॥

ಬಾಗಿಲಾಗೆ ನಿಂತು ಬಾಯಿ ನಾದವನ್ನು ಮಾಡಿದರು ।
ನೋಯಲಾಗದಯ್ಯ ನ್ಯಾಯವರಿತ ಜನರು ಜಗದೊಳು ॥ ೨೨೦ ॥

ಬಾಯಿ ನಾದ ಬಂಡು ನುಡಿಯ ಕೇಳಿ ಬೈದ ಸತಿಯರೆಲ್ಲ ।
ಏಳು ಜನ್ಮ ಸತಿಯನಳಿದು ಶ್ವಾನ ಜನ್ಮ ಪಡೆವರು ॥ ೨೨೧ ॥

ಬಾಯಿ ನಾದ ಬಂಡು ನುಡಿಯು ಮಾಡೆ ನಾಚಿದಂಥ ಜನರು ।
ವಂಶವಳಿದು ಕಲ್ಪತನಕ ನರಕದಲ್ಲಿ ಬೀಳ್ವರು ॥ ೨೨೨ ॥

ಹೋಳಿಯಾಟ ಆಡದಿರುವ ದೇಶವೆಲ್ಲ ಕಾಡು ಸಮವು ।
ಅಲ್ಲಿ ಮಳೆಯು ಜನಕೆ ಸೌಖ್ಯವಿಲ್ಲ ಯೆಂದಿಗಾಗದು ॥ ೨೨೩ ॥

* * * *

ತಿರಿದು ಹೊರೆದು ಹಬ್ಬ ಮಾಡೆ ಸುರರು ಮೆಚ್ಚಿ ಸರ್ವರೀಗು ।
ಪುರುಷ ಅರ್ಥ ನಾಲ್ಕು ಇತ್ತು ಹರಸಿ ವರವ ಕೊಡುವರು ॥ ೨೨೪ ॥

* * * *

ಜಯತು ಹರನೆ ಕಾಮದೇವ ಜಯತು ತಾರಕಾರಿ ನೀನು ।
ಜಯತು ಜಯತು ಕಾಮದೇವ ದಯದೊಳೆಮ್ಮ ಪಾಲಿಸು ॥ ೨೪೨ ॥

ದಿಮ್ಮಿ ಸಾಲೆನ್ನಿ ರಾಮ । ದಿಮ್ಮಿ ಸಾಲೆನ್ನಿ ಕೃಷ್ಣ ।
ದಿಮ್ಮಿ ಸಾಲೆನ್ನಿರೋ । ಪರಬೊಮ್ಮನೆಂದು ಸಾರಿರೋ ॥"

* * * *

ಶ್ರೀ ಮಾಧ್ವ ಗುರು ಪರಂಪರೆಯಲ್ಲಿ ಪ್ರಸಿದ್ಧರಾದ ವಾದಿರಾಜರೂ ಈ ಕಾಮನ ಪದಗಳನ್ನು ಮಾಡಿದ್ದಾರೆ. ಅದರಲ್ಲಿಯೂ ಪಲ್ಲವಿಯು ಮೇಲಿನಂತೆಯೇ ಇದೆ. ಅದರ ನುಡಿಗಳಿವು :—

೩೭. "ಭಳಿರು ಭಳಿರು ಘಳಿರು ಘಳಿರು ಯೆಂಬ ರಥವನೇರಿಕೊಂಡು
ರಥಕೆ ಐದು ಗಿಣಿಯ ಕಟ್ಟಿ ನಡೆದ ಕಾಮ ರಾಯನು ॥ ೪ ॥

ಶಂಭು ಲಿಂಗನೊಡನೆ ಕಾದೆ ಸಂಗರಕ್ಕೆ ಹೋಗಲಾಗ ।
ನಿಂದು ಯುದ್ಧ ಮಾಡುವಾಗ ನಿಲದೆ ಉರಿದು ಹೋದನು ॥ ೫ ॥

* * *

ಎತ್ತಿ ಬರುವ ವಿಘ್ನ ಗಣವ ಕತ್ತರಿಸುವ ಹೋಳಿಯೆಂಬ ।
ಉತ್ತಮದ ವ್ರತವು ಜಗಕೆ ಸುತ್ತಿಕೊಂಡು ಬರುವುದು ॥

* * *

ಯದುಕುಲೇಶ ಗೋಪ ಕೃಷ್ಣ ಚದುರೆಯರನು ವಲಿಪೆನೆಂದು ।
ಮದನ ಹುಣ್ಣಿಮೆಯ ಹಬ್ಬ ಸಾದರದಿಂದ ರಚಿಸಿದ ॥

ದಿಮ್ಮಿ ಸಾಲೆನ್ನಿ ಚಿಕ್ಕ ತಮ್ಮಗಳಿರ ಗೊಲ್ಲತೆರ ।
ಹರ್ಮ್ಯ ಪೊಕ್ಕು ಅವರ ಮುಡಿ ಪೇರ್ಮೆಯಿಂದ ಭಸ್ಮ ಸೂಸಿ ॥

ವಾದಿರಾಜಗೊಲಿದು ಬಂದು ಸೋದೆಯ ಪುರದಲಿ ನಿಂದು ।
ತೋದಿ ಹಯವದನ ಮೇಲೆ ಪರಿದು ಸೂಸಿ ಭಸ್ಮವಾ ॥ "[19]

ಇಲ್ಲಿ 'ಪಾಮರ'ರ ಪದ್ಧತಿಗಳನ್ನು ತೆಗೆದುಕೊಂಡು ಪಾರಮಾರ್ಥಿಕ ದೃಷ್ಟಿಯನ್ನು ಅದರೊಳಗೆ ಹುದುಗಿಟ್ಟು ಅವರನ್ನು ಆ ಮಾರ್ಗದಿಂದ ತಮ್ಮ ಮಾರ್ಗಕ್ಕೆ ಎಳೆದುಕೊಳ್ಳುವ ಬೆಡಗನ್ನು ನೋಡಿರಿ.

೩. ಮಾರ್ನವಮಿಯ ಪದಗಳು.—

೩೮. "ಆಶ್ವಯುಜ ಶುದ್ಧ ಮಾನವಮಿ ಬರಲೆಂದು । ಶಾಶ್ವತದಿ ಹರಸಿದೆವು ಬಾಲಕರು ಬಂದು ।
ಈಶ ನಿಮಗತ್ಯಧಿಕ ಸುಖವ ಕೊಡಲೆಂದು । ಲೇಸಾಗಿ ಹರಸಿದೆವು ಬಾಲಕರು ಬಂದು ॥ ೧ ॥

ಧನ ಕನಕ ವಸ್ತು ವಾಹನವಾಗಲೆಂದು । ಕನಕ ದಂಡಿಗೆ ಚೌರಿ ನಿಮಗಾಗಲೆಂದು ।
ದಿನ ದಿನಕೆ ರಾಜಮನ್ನಣೆ ಹೆಚ್ಚಲೆಂದು । ಅನು ದಿನವು ಹರಸಿದೆವು ಬಾಲಕರು ಬಂದು ॥ ೨ ॥

ಮಳೆ ಬಂದು ಬೆಳೆ ಬೆಳೆದು ಧರೆ ತಣಿಯಲೆಂದು । ತಿಳಿಗೊಳಗಳುಕ್ಕಿ ತುರುಗಳು ಕರೆಯಲೆಂದು ।
ನಳಿನ ಮುಖಿಯರು ಸುಪುತ್ರರ ಪಡೆಯಲೆಂದು । ಇಳೆಯೊಳಗೆ ಹರಸಿದೆವು ಬಾಲಕರು ಬಂದು ॥ ೩ ॥

ಹರಕೆಯನು ಕೇಳಿ ಹರುಷವ ಮಾಡಿ ನಮಗೆ । ತರಿಸಿಕೊಡಿ ಹಚ್ಚಡವ ನಮ್ಮಯ್ಯಗಳಿಗೆ ।
ಬೆರಸಿ ಕೊಡಿ ಕಡಲೆಯನು ಬೆಲ್ಲವನು ನಮಗೆ । ಸರಸತಿಯ ಕರುಣವುಂಟಾಗಿರಲಿ ನಿಮಗೆ ॥ ೪ ॥

19 'ಜಯಕರ್ನಾಟಕ' ಸಂಪುಟ ೯, ಸಂಚಿಕೆ ೧೨, ಪುಟ ೯೨೩ರಲ್ಲಿ ಶ್ರೀ ಕೃ. ತ. ಬಿಟಗೇರಿಯವರು ಸಂಗ್ರಹಿಸಿದ ಹೋಳೀ ಪದವೊಂದಿದೆ. ಆದರೆ ವಿಷಯದ ದೃಷ್ಟಿಯಿಂದ ಅದು ಬೇರೇ ಜಾತಿಯೆಂದು ಕಾಣುತ್ತದೆ.

ಅಳಿಯನುಡುಗೊರೆಯಲ್ಲ ಮುನಿದು ಕೇಳುವರೆ । ಬಳಿಯ ಸಂಬಳವಲ್ಲ ನಿಂತು ಕೇಳುವರೆ ।
ಹಳೆ ಸಾಲವಲ್ಲ ಹಗಲಿರುಳು ಕಾಡುವರೆ । ಅಳಿ ಮನವ ಮಾಡದಿರಿ ಕೀರ್ತಿಗಳಿಸುವರೆ ॥ ೫ ॥

ಕೊಟ್ಟರಿಸಿ ಕೇಳಬಂದವರಲ್ಲ ನಾವು । ಬಿಟ್ಟಿ ಬೇಡಾ ತೆಗೆಯೆನ್ನದಿರಿ ನೀವು ।
ಕಷ್ಟ ಲೋಭಿಯ ಬಳಿಗೆ ಬರಲಿಲ್ಲ ನಾವು । ಕೊಟ್ಟು ನಮುಗುಡುಗೊರೆಯ ಕಳುಹಿಕೊಡಿ
ನೀವು ॥ ೬ ॥

II. **ದಾಸರ ಪದಗಳು.**—ಇವು ಹಿಂದೆ ಮೊದಲನೆಯ (ಲಾವಣಿ) ವಿಭಾಗ ದಲ್ಲಿ ಬಂದ ಸ್ತುತಿಗಳ ಜಾತಿಗೇ ಸೇರಿದವು. ಇಲ್ಲಿ ಛಂದಸ್ಸು ಬೇರೆಯಾಗುವುದು. ಮತ್ತು ಈಗ ನಮ್ಮೆಲ್ಲರಿಗೆ ಪರಿಚಿತವಾಗಿರುವ, ರಾಗವಾಗಿ ಹಾಡುವ ದಾಸರ ಪದ ಗಳಂತೆ ಇರದೆ, ಗಂಡುಸರ ಹಾಡಿನ ಮುಖ್ಯ ಲಕ್ಷಣವಾದ, ರಾಗದ ಬೆಡಗಿಲ್ಲದ ತಾಳ ಬದ್ಧತೆಯನ್ನು ಪಡೆದಿರುವುವು ಇವು. ರಾಗವಾಗಿ ಹಾಡುವ ದಾಸರ ಪದಗಳಲ್ಲಿರುವ ವೈವಿಧ್ಯವೆಲ್ಲವೂ ಇಲ್ಲಿಯೂ ಇರುವುದು. ಸಂದರ್ಭಾನುಸಾರವಾಗಿ ಹಾಡಿದ ಪದಗಳು, ಅರ್ಥವಾದಗಳು, ಸಗುಣನಾದ ಪರಮೇಶ್ವರನನ್ನು ಅರ್ಥಿಯಾಗಿ ಪ್ರಾರ್ಥಿಸುವುದು, ತನ್ನ ದುಃಸ್ಥಿತಿಯನ್ನು ಹಳಿದುಕೊಂಡು ವ್ಯಥಿಸುವುದು, ಇಹದ ಗೊಂದಲದಿಂದ ವೈರಾಗ್ಯದ ರಾಜ ಮಾರ್ಗಕ್ಕೆ ತಿರುಗೆಂದು ಮನಕ್ಕೆ ಬೋಧಿಸುವುದು—ಇವು ಈ ಹಾಡುಗಳ ವಿಷಯುಗಳು. ಸರ್ವಜ್ಞ ಪುರಂದರಾದಿಗಳಂತೆ ಎಲ್ಲೆಂದರೆ ಅಲ್ಲಿ, ಯಾವ ಸಂದರ್ಭವೆಂದರೆ ಆ ಸಂದರ್ಭದಲ್ಲಿ ಹಾಡಿದ ಪದ್ಯಗಳಿವು.—

೩೩. "ಎನ್ನವ್ವ ಕಲ್ಲಾ ಬಿಡೆ । ಈ ಥೋತ್ರವು ಚೆನ್ನಾಗಿ ಒಗೆಯಬೇಕು ॥ ಪ ॥
ಮುನ್ನ ಮಾಡಿದ ಪಾಪ ಕರ್ಮವು ಹೋಗುವ ಹಾಗೆ ।
ಚೆನ್ನಕೇಶವನ ಪ್ರಸಾದಕ್ಕೊದಗಬೇಕು ॥ ಅ ॥
ವೇದ ನೋಡಬೇಕು ಮನದೊಳಿದ್ದ । ಭೇದವ ತಿಳಿಯಬೇಕೂ ॥
ಸಾಧಾರಣೆಯಿಂದ ತಿಳಿದು ನಿಶ್ಚಯವಾಗಿ । ಕ್ರೋಧ ಕರ್ಮಗಳೆಲ್ಲ ಬಿಟ್ಟು
ಹೋಗುವ ಹಾಗೆ ॥ ೧ ॥
ವೆಲ್ಲಾಪುರಿಯ ಚೆಲುವ ಕೇಶವನ ಪ್ರಸಾದಕ್ಕೆ ।
ಆಲಸ್ಯ ಮಾಡದೆ ಕೋವೂರನು ಬಂದು ದ್ವಾರವತಿ‍ನಲಿ ನಿಂದು ॥
ನೀಲಕುಂದವ್ವ ಕಲ್ಲಾ ಬಿಟ್ಟು ಆ ಕಡೆ ಸಾರವ್ವಾ" ॥ ೨ ॥

(ಇದರಲ್ಲಿ ಛಂದೋ ವೈವಿಧ್ಯಗಳನ್ನು ನೋಡಿರಿ)

೩೪. "ಹರ ಹರ ಹರ ಹರಯೆನುತಲಿ ರುದ್ರಾಕ್ಷಿ । ಧರಿಸಲು ಭವಗಳ ಹರಿವುದು ರುದ್ರಾಕ್ಷಿ ॥ ಪ ॥
ವೀರಶೈವದಾಚಾರದ ಮುಕ್ತಿಗೆ । ದಾರಿಯ ತೋರುವ ರುದ್ರಾಕ್ಷಿ ॥
ಇನ ಶಶಿ ಹರಿಯುಜ ಇಂದ್ರರು । ಸುಗುಣಾಶ್ರಯ ಮುನಿಗಳು ಧರಿಸುವ ರುದ್ರಾಕ್ಷಿ ।
ಪರಿ ಪರಿಯಿಂದಲಿ ಕೊರಳೊಳು ಧರಿಸಲು । ಸ್ಥಿರ ಪದವಿಯ ಕೊಡುವುದು ರುದ್ರಾಕ್ಷಿ ।
ಕರದೊಳು ಭುಜದೊಳು ಕರ್ಣದಿ ಧರಿಸಲು । ಸ್ಥಿರ ಪದವಿಯ ಕೊಡುವುದು ರುದ್ರಾಕ್ಷಿ ॥"

೩೫. "ಮಾಯೆ ಮರವದು ಹೋಗಲಿಲ್ಲ । ಅರುವಾಗಲಿಲ್ಲ ।
ಮೀರದ ಉನ್ಮನಿ ಸೇರಲಿಲ್ಲ । ಹರನ ಕಾಣಲಿಲ್ಲ
ಸಾಧು ಸತ್ಪುರುಷರ ಸಂಗವಿಲ್ಲ । ನಿರ್ದ್ವಂದ್ವವಾಗಲಿಲ್ಲ ।
ಮದ ಮೋಹಕೆ ಸಿಕ್ಕಿ ಬಳಲುವೆಯಲ್ಲ ಕಾಲ ಕಳೆಯುವೆಯಲ್ಲ" ॥ ೧ ॥

೩೬. "ನಾನಿತ್ತಲೆಳೆದರೆ ತಾನತ್ತೆಳೆವುದು । ಇನ್ನೇನಿನ್ನೇನು ।
ಜ್ಞಾನವಿಲ್ಲದ ಕೋಣ ಸಾಧನವಾಗದು । ,, ।
ಮುಪ್ಪುರಿಗೆಯನು ಗೂಡಿ ಮೂಗುದಾಣ ಹಾಕಿದೆ । ,, ।
ಹಸುರು ಹುಲ್ಲನೆ ಕಂಡು ಬಿಸಲೊಳು ಮೆಯ್ವುದು । ,, ।
ಅಸವಲ್ಲದಾ ಕೋಣ ಕೊಸರಿಕೊಂಡೋಡಿತು । ,, ।
ನೂರಾರು ಕೋಣದೊಳು ಮೀರಿದ ಕೋಣದು । ,, ।
ನಮ್ಮ ಧೀರ ಮಂತೇಶನಿಗೆ ಮಾರಿಬಿಟ್ಟೆನು ಕೋಣ । ,, ।
(ಕೋಣವೆಂದರೆ, ಇಲ್ಲಿ ಸಗ್ಗದ ಮನಸ್ಸು)

III. ತತ್ತ್ವಗಳು.—ಇದರಲ್ಲಿ ವೇದಾಂತಗಳೂ ಯೋಗ ರಹಸ್ಯಗಳೂ ಹೆಚ್ಚಾಗಿವೆ. ಅನೇಕ ವೇಳೆಗಳಲ್ಲಿ ನಾವು ಯಾವ ಗ್ರಂಥಗಳಲ್ಲಿಯೂ ನೋಡಲು ಅರಿಯದಂತಹ ಅನುಭವ ರಹಸ್ಯಗಳನ್ನು ಮನೆ ಮಾತಿನಲ್ಲಿ ಹೇಳಿರುವುದು ಈ ಹಾಡುಗಳ ಗುರುತುಗಳು. ಇದರಲ್ಲಿ ವುಂಡಿಗೆಗಳು, ಚಿಟಿಕೆಗಳು, ಮುದ್ರಿಕೆಗಳು ಎಂಬ ಗುಟ್ಟಿನ ಹಾಡುಗಳೂ ಉಂಟು.

೩೭. "ಗುರುವಿನ ಮಹಿಮೆಯ ಗುರು ಭಕ್ತರೆ ಬಲ್ಲರು ಚಂದಮಾಮಾ । ಚಂದಮಾಮಾ ।
ಮೂಢ ನರರೇನು ಬಲ್ಲರು ನಡುರಂಗ ಜೋಳಿಯ ,, । ,, ।
ಒಂಟೆಗಾತರ ಕಾಯಿ । ಆನೆಗಾತರ ಹಣ್ಣು ,, । ,, ।
ಕದರು ಗಾತರ ಮರ ಕುದರೆ ಗಾತರ ಹುವ್ವು ,, । ,, ।
ಒಂಟೆ ಗಾತರ ಕಾಯಿ ಆನೆ ಗಾತರ ಹಣ್ಣು ,, । ,, ।
ಕಣ್ಣಿಲ್ಲದಾತನು ಕಂಡನು ಆ ಮರ ,, । ,, ।
ಕೈಯಿಲ್ಲದಾತನು ಕೊಯ್ದನು ಆ ಹಣ್ಣು ,, । ,, ।
ತಳವಿಲ್ಲದ ಪುಟ್ಟೀಲಿಟ್ಟಾರು ಆ ಹಣ್ಣು ,, । ,, ।
ಶಿರಸಿಲ್ಲದಾತನು ಹೊತ್ತಾನು ಆ ಪುಟ್ಟಿ ,, । ,, ।
ಮರದಲ್ಲಿ ಮರ ಹುಟ್ಟಿ ಮರ ಮಾಯವಾಯಿತು ,, । ,, ।
ನಮ್ಮ ಹಳಬ ಕನ್ನಡ ದಾಸ ಹಾಕಿದ ವುಂಡಿಗೆ ,, । ,, ।
ಅರ್ಥವಿಲ್ಲದಾತ ಬೆಲೆ ಮಾಡಿದನು ಹಣ್ಣು ,, । ,, ।
ಮೂಗಿಲ್ಲದಾತನು ಮೂಸಿನೋಡಿದ ಹಣ್ಣು ,, । ,, ।
ನಾಲಿಗಿಲ್ಲದಾತ ರುಚಿ ನೋಡಿದನು ಹಣ್ಣು ,, । ,, ।
ಅಂಗಳಿಲ್ಲದಾತ ನುಂಗಿದ ಆ ಹಣ್ಣು ,, ॥ ,, ॥

ಜಾಣನ ಪದಗಳಿಗೆ ೧೧ನೆಯ ಉದಾಹರಣೆ ಸಾಕು.

ಈ ತತ್ತ್ವದ ಪದಗಳಲ್ಲಿ ಎಷ್ಟು ಜಾತಿಯಿವೆ? ಅವುಗಳ ನಡೆಯೆಂತಹುದು? ವಿಷಯವೆಂತಹುದು? ಎಂಬ ಸರ್ವ ವಿಷಯಗಳನ್ನೂ ಚಿದಾನಂದರು, ಸಪ್ಪಣ್ಣನವರು, ನಿಜಗುಣರು, ಶಾಲ್ಯದರಸರು, ಶಂಭುಲಿಂಗರು, ಮಹಲಿಂಗರು, ವಾದಿರಾಜರು, ಜಗನ್ನಾಥದಾಸರು ಮೊದಲಾದ ಅನೇಕಾನೇಕ ಮಹನೀಯರಲ್ಲಿ ಯಾರೊಬ್ಬರ ಹಾಡುಗಳನ್ನು ತೆಗೆದುಕೊಂಡರೂ ಸ್ಪಷ್ಟವಾಗಿ ತಿಳಿಯುವುದು. ಆದರಿಂದ ನಾವು ವಿಸ್ತರಿಸದೆ ನಿಲ್ಲಿಸುವೆವು.

ಇದುವರೆಗೂ ನಾವು ಕೊಟ್ಟಿರುವ ಉದಾಹರಣೆಗಳಿಂದಲೇ ಈ ಗಂಡುಸರ ಹಾಡುಗಳಲ್ಲಿ ಅಡಕವಾಗಿರುವ ಸಂಸ್ಕೃತಿಯೆಂತಹುದು? ಎಷ್ಟು ಅಮೌಲ್ಯವಾದುದು? ಎಂಬುದು ವಾಚಕರಿಗೆ ತಿಳಿಯಬಂದಿದೆಯಾಗಿ ಆ ವಿಷಯವನ್ನು ಕುರಿತು ನಾವು ಹೆಚ್ಚಿಗೆ ಹೇಳುವುದಿಲ್ಲ. ಮುಖ್ಯವಾಗಿ, ಈ ಹಾಡುಗಳಲ್ಲಿ ಗಮನಿಸಬೇಕಾದುದು ಎರಡು ಅಂಶಗಳು: ಮೊದಲನೆಯದು, ಆದಷ್ಟು ಕಡಿಮೆಯ ಕಟ್ಟುಗಳನ್ನಿಟ್ಟುಕೊಂಡು, ಸಂತೋಷವಾಗಿ, ಇತರರನ್ನು ಮೆಚ್ಚಿಸಬೇಕೆಂಬ ಆಶೆಯಿಲ್ಲದೆ ಹಾಡಿರುವ ರೀತಿ; ಎರಡನೆಯದು ವಿಷಯ. ಮೊದಲನೆಯದನ್ನು ಗಮನಿಸುವಾಗ ಈ ಸ್ವಸಂತೋಷಕ್ಕಾಗಿ ಹಾಡಿಕೊಂಡ ಹಾಡಿನ ಕಟ್ಟು, ಪ್ರಾಸದ ಬಿಕ್ಕಟ್ಟುಗಳು, ತಾಳ ವೈಖರಿಗಳು—ಇವು ಅನುಕರಣವೋ, ಅಥವಾ ಆಯಾ ಶಾಸ್ತ್ರಗಳ ಅಡಿಗಲ್ಲುಗಳೋ ಎಂಬ ವಿಚಾರದಲ್ಲಿ ಹಾಗೋ ಹೀಗೋ ಎಂಬ ಸಂದೇಹಕ್ಕೆ ಅವಕಾಶವಿದೆ. ಆದರೆ ಎರಡನೆಯ ವಿಷಯ ವಿಚಾರದಲ್ಲಿ ಅಂತಹ ಸಂದೇಹಕ್ಕೆ ಅವಕಾಶವೇ ಇಲ್ಲವೆಂದು ನಮ್ಮ ಮತ.

ಅಂತೂ, ಈ ಹಾಡುಗಳ ಹೊರಮೆಯ್ಯೆಂಬ ಕಣಕವೂ ಒಳಗಿನ ಮೆಯ್ಯೆಂಬ ಪೂರಣವೂ ಎರಡೂ ಪ್ರಾಚೀನ ಕಾಲದವು ಎಂಬ ವಿಚಾರದಲ್ಲಿ ಮಾತ್ರ ಸಂದೇಹ ಬರುವಂತಿಲ್ಲ.[20]

**ದೇವುಡು.**

---



---

20 ಈ ವಿಚಾರದಲ್ಲಿ ಸಂಶಯಪಟ್ಟವರು ತಾವೇ ವಿಮರ್ಶಿಸಿ ನೋಡಲು ಅನುಕೂಲವಾಗಿರಲೆಂದು ಈ ನ್ಯಾಸದಲ್ಲಿ ಉದಾಹರಣೆಯಾಗಿ ಕೊಟ್ಟಿರುವ ಹಾಡುಗಳನ್ನು (೧೨, ೧೩, ೧೮, ೨೦ ವಿನಾ), ಕೆಳಗಿನ ಪಟ್ಟಿಯಲ್ಲಿರುವ ಮುದ್ರಿತವಾದ ಗ್ರಂಥಗಳಿಂದ ಆಯ್ದುಕೊಂಡಿದ್ದೇವೆ:—

ಮುದ್ರಿತ ಗ್ರಂಥಗಳು.—೧. ಕಲ್ಗಿಂ ಲಾವಣಿ, ೨. ತುರಾ ಲಾವಣಿ (೨), ೩. ಶ್ರೀರಂಗಪಟ್ಟಣದ ಲಾವಣಿ, ೪. ಕಾಮನ ಪದಗಳು, ೫. ಬಳ್ಳಾರಿ ತತ್ತ್ವ, ೬. ಜಾತ್ರೆಯ ಪದಗಳು, ೭. ಹುಟ್ಟಿದ ಹಳ್ಳಿ—ಹಳ್ಳಿಯ ಹಾಡು, ೮. ಚಿದಾನಂದರ ವಚನಗಳು, ೯. ಸಪ್ಪಣ್ಣನವರ ವಚನಗಳು, ೧೦. ಪದ್ಯಸಾರ.

ಪತ್ರಿಕೆಗಳು.—೧. ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ೨. ಜಯಕರ್ನಾಟಕ, ೩. ಮಕ್ಕಳ ಪುಸ್ತಕ.

ಈ ಗ್ರಂಥಗಳ ಕರ್ತರಿಗೂ ಪತ್ರಿಕೆಗಳ ಸಂಪಾದಕರಿಗೂ ನಮ್ಮ ಕೃತಜ್ಞತೆಯ ವಂದನೆಗಳು.

# *ಕನ್ನಡ ಛಂದಸ್ಸು



(೨)

ಈಗ ಈ ಹತ್ತು ಜಾತಿಗಳ ಸ್ವರೂಪವನ್ನು ವಿಮರ್ಶಿಸುವ.—ಮೊದಲನೆಯದಾಗಿ ನಾಗವರ್ಮನು 'ಅಕ್ಕರ' ಎಂಬ ಜಾತಿಯ ಐದು ಭೇದಗಳನ್ನು ಲಕ್ಷ್ಯಲಕ್ಷಣ ಸಮನ್ವಯವಾಗಿ ವಿವರಿಸಿದ್ದಾನೆ. ಆ ಐದು ಅಕ್ಕರಗಳಲ್ಲಿ ಮೊದಲನೆಯದು ಪಿರಿಯಕ್ಕರ. ಇದರಲ್ಲಿ ಮೊದಲು ಒಂದು ಬ್ರಹ್ಮಗಣವೂ ಅನಂತರ ನಾಲ್ಕು ವಿಷ್ಣು ಗಣಗಳೂ ಕೊನೆಗೊಂದು ರುದ್ರಗಣವೂ ಬರುವ ನಾಲ್ಕು ಪಾದಗಳಿವೆ. ಪಾದದ ಆದಿಯ ಗಣವು ಬ್ರಹ್ಮಗಣವಾದರೂ, ಕೊನೆಯಲ್ಲಿ ರುದ್ರಗಣವಿದ್ದರೂ ಈ ಪದ್ಯದ 'ಧಾಟಿ'ಯ ನಿರ್ಮಾಣಕ್ಕೆ ವಿಷ್ಣುಗಣವೇ ಕಾರಣ; ಎಂದರೆ, ಎಲ್ಲವೂ ವಿಷ್ಣುಗಣ ವಾಗಿದ್ದರೆ ಹೇಗೋ, ಅದೇ ತಾಳದಲ್ಲಿ ಓದಬೇಕು. ಗಣದೃಷ್ಟಿಯಿಂದಲೂ, ತಾಲಖಂಡಗಳ ದೃಷ್ಟಿಯಿಂದಲೂ ಬೇರೆ ಬೇರಾಗಿ ಇದರೊಂದು ಪಾದವನ್ನು ವಿಭಾಗಿಸಿ ತೋರಿಸುತ್ತೇನೆ:—

ಗಣ ವಿಭಾಗ.—

ಮೊದಲೊ । ಳಜಗಣಂ । ಕುಂದದೆ । ಬರ್ಕತ್ತ । ಮಯ್ಯುಗ । ಱಂಗಳೆ । ವಿಷ್ಣುವಕ್ಕುಂ ॥

ತಾಲ ಖಂಡ.—

ಮೊದಲೊ— । ಳಜ ಗಣಂ । ಕುಂದದೆ । ಬರ್ಕತ್ತ । ಮಯ್ಯುಗ । ಱಂಗಳೆ । ವಿಷ್ಣುವ । ಕ್ಕುಂ— ॥

ಇದರಲ್ಲಿ ತೋರುವ ವಿಶೇಷವೇನೆಂದರೆ—ಹಿಂದೆ ಹೇಳಿದ ಚತುರಸ್ರತೆಯ ನಿಯಮವನ್ನು ಮಿಕ್ಕದೆ, ಇಲ್ಲಿಯೂ ಎಂಟು ತಾಲ ಖಂಡಗಳಿವೆ; ಮತ್ತು ಕೊನೆಯದು ಅಪೂರ್ಣವಾಗಿದೆ. ಅಲ್ಲದೆ, ಮೊದಲನೆಯ ಖಂಡವೂ ಅಪೂರ್ಣವಾಗಿದೆ. ಹೀಗೆ ಒಂದೊಂದು ಭಾಗವನ್ನು ಅಲ್ಲಲ್ಲಿ ಅಪೂರ್ಣವಾಗಿಡುವುದೂ ಗಾನದ ಶೋಭೆಗಾಗಿ. ಸಾಮಾನ್ಯವಾದ ಹಾಡುಗಳಲ್ಲಿ ಇದು ಐಚ್ಛಿಕವಾಗಿದ್ದರೆ, ಈ ಪಿರಿಯಕ್ಕರದಲ್ಲಿ ಪ್ರಥಮ ತಾಲ ಖಂಡವೂ ಅಪೂರ್ಣವಾಗಿರುವುದೊಂದು ನಿರ್ಬಂಧವಾಗಿದೆ. ಮಾತ್ರೆಯ ನಿರ್ಬಂಧಕ್ಕೆ ಸರಿಯಾಗಿ ಅಳವಡುವ, ಎಂದರೆ ಮಾತ್ರಾಗಣ ಘಟಿತವಾದ ಹಾಡು ಗಳಲ್ಲಿಯೂ, ಕವಿಗಳು ಗಾನ ಚಮತ್ಕೃತಿ ವ್ಯಂಜಕವಾಗುವಂತೆ ಅಲ್ಲಲ್ಲಿ ಹೀಗೆ ಮಾಡಿದ್ದಾರೆ. ಉದಾ.—'ಗೀತ ಗೋವಿಂದ'ದಲ್ಲಿ,

---

* ಕ. ಸಾ. ಪರಿಷತ್ಪತ್ರಿಕೆಯ ೧೮ನೆಯ ಸಂಪುಟದ ೧ನೆಯ ಸಂಚಿಕೆಯ ೩೩ನೆಯ ಪುಟದಿಂದ ಮುಂದುವರಿದುದು.

ನಿಭೃತ ನಿ । ಕುಂಜ ಗೃ । ಹಂ ಗತ । ಯಾ ನಿಶಿ ।
ರಹಸಿ ನಿ । ಲೀಯ ವ । ಸಂ—। ತಂ—॥
ಚಕಿತ ವಿ । ಲೋಕಿತ । ಸಕಲ ದಿ । ಶಾ ರತಿ ।
ರಭಸ ಭ । ರೇಣ ಹ । ಸಂ—। ತಂ—॥ .॥
ಸಖಿ ಹೇ । ಕೇ—ಶಿ । ಮಥನಮು । ದಾರಂ ।
ರಮಯ ಮ । ಯಾ ಸಹ । ಮದನ ಮ । ನೋರಥ ।
ಭಾವಿತ । ಯಾ ಸವಿ । ಕಾ—। ರಂ—॥ .॥

ಆದರೆ ಈ ಪಿರಿಯಕ್ಕರದಲ್ಲಿ ಮೊದಲನೆಯ ಗಣವು ಬ್ರಹ್ಮವಾಗಿ, ಉಳಿದ ಅಷ್ಟಾಂಶಗಳಿಗಿಂತ ನ್ಯೂನವಾಗಿರುವುದರಿಂದ, ನ್ಯೂನ ಗಣದ ಸ್ವಾರಸ್ಯವು ಅವಗಾಹನೆಗೆ ಬಾರದೆ, ಕವಿಗಳು ತಪ್ಪು ಮಾಡುವ ಸಂಭವವು ವಿಶೇಷವಾಗಿದೆ. ನಾಗವರ್ಮನಿಗಿಂತ ಮೊದಲನೆಯವನಾದ ಪಂಪನ ಪಿರಿಯಕ್ಕರಗಳನ್ನು ನೋಡಿರಿ:—

ಗಣ ವಿಭಾಗ.—

೧. ಆಡ । ಲಾಡಿಸಲ್ । ಪಾಳಿಯಂ । ನಿರಿಸಲುಂ । ಪರಿಗೊಳಲ್ । ತೊವಲಿಕ್ಕ । ಲೊಳಗಂ ಬರಲ್ ।
ಕಾಡ । ಬೇಲಿಯಂ । ಮಾರ್ಕಾಡ । ನರಿಯಲುಂ । ಮೂಡಿಗೆ । ಕಕ್ಕುಂಬಂ । ಸುಳಿಸಿ ಜೊಂಪಂ॥
ಬೀಡು । ಬಿಡುವಂಬು । ಕದಳಿ ತೆಂ । ಗಿನ ತಾಣಂ । ಜಾಣಂ ನೀ ।ದರ್ಾಣಮೆಂ । ದೆಡೆಯರಿದುಂ ।
ಮಾಡಲ್ । ಮಾಡಿಸಲ್ । ಪಡೆ ಮೆಚ್ಚಿ । ನೀಂ ಬಲ್ಲೆ । ನೀಂ ಮೆಚ್ಚೆ ।ಹರಿಗ ಕೇ । ಳಾನೆ ಬಲ್ಲೆಂ ॥ .॥

೨. ನೆಲನಂ । ನಿರುಗೆಯಂ । ನಡೆವೊಂದು । ಪದಮುಮಂ । ಸೋವಳಿ । ಮೇವಳಿ । ಬಿಸುವಳಿಯಂ ।
ಬಲಮಂ । ಶಕುನಮ । ನೊಳ್ಪಿತ್ತು । ಪಾಯಮಂ । ಪಿಡಿವಂದೀ । ತನೆವಂದಿ । ಕುರುಡು ಕುಂಟಂ ॥
ದಲಸ । ದರಿದಿಂಕು । ಬಳ್ಮಿಗೆ । ಬೆರಲೆತ್ತಿ । ಪಜ್ಜೆಯಂ । ನೆಲೆಗಳಂ । ಕಿಡಲೀಯದೆ ।
ಸಿಲೆಯ ಮೇ । ಲಾದೊಡಂ । ಶಕುನಮಂ । ನಿರಿಪಂತೆ । ನಿರಿಸುವೆಂ । ಪಂದಿಯಂ । ನೀಂ ಮೆಚ್ಚಲುಂ ॥ .॥

ಇಲ್ಲಿ ಉದಾಹರಿಸಿದ ಮೊದಲನೆಯ ಪದ್ಯವು ಸಂಪೂರ್ಣವಾಗಿ ಲಕ್ಷಣ ಶುದ್ಧವಾಗಿದೆ; ಆದರೆ ಎರಡನೆಯ ಪದ್ಯದ ನಾಲ್ಕನೆಯ ಪಾದಾದಿಯ ಗಣವು, ಬ್ರಹ್ಮದ ಬದಲಾಗಿ ವಿಷ್ಣುವಾಗಿದೆ. ಮಾತ್ರಾ ಬಂಧದ ಬಿಗಿಯಿಲ್ಲದುದರಿಂದ ಪಂಪನಂತಹ ಮಹಾ ಕವಿಯೂ ಇದರಲ್ಲಿ ತಪ್ಪುವಂತಾಯಿತು; ಅಥವಾ, ಈ ಹಾಡಿನಲ್ಲಿ ಹಾಗೆ ಮಿಕ್ಕಿದರೆ ದೋಷವಿಲ್ಲವೆಂದು ಬಗೆದು ಅವನು ವಿಚಾರಿರಲೂ ಬಹುದು. ಇಲ್ಲಿ ಈ 'ಜಾತಿ' ಬೇಟೆಗಾರನ ಬಾಯಲ್ಲಿರುವುದು ಲಕ್ಷಿಸತಕ್ಕ ವಿಷಯವಾಗಿದೆ. ಅಜ್ಞನಾದ ನಾಡು ಗನಿಗೊಪ್ಪುವ ಛಂದವಿದೆಂದು ಅವನು ತಿಳಿದಿರುವನೆಂಬುದು ಸ್ಪಷ್ಟ. ಇದರಿಂದಲೂ ಅದು ಸಂಸ್ಕೃತ ಜನ್ಯವಲ್ಲದೆ ನಾಡಿನಲ್ಲಿ ಹುಟ್ಟಿ ಬೆಳೆದ ಬಂಧವೆಂಬ ಮಾತಿಗೆ ಒಂದು ಆಧಾರವನ್ನು ಹೆಚ್ಚಿಸುತ್ತದೆ. ಇರಲಿ, ಈ ಪಿರಿಯಕ್ಕರವು ಕನ್ನಡದ ಹತ್ತು ಜಾತಿಗಳಲ್ಲಿ ಹಿರಿಯದು. ಸಾಮಾನ್ಯವಾದ, ಪಾದದಲ್ಲಿ ನಾಲ್ಕು ಖಂಡಗಳಿರುವ ಇತರ ಗಾನ

ಬಂಧಗಳಂತಲ್ಲದೆ ಇದು, ಸಂಸ್ಕೃತದ ಮಾಲಾ ವೃತ್ತಗಳೊಳಗೆ ಸೇರಿರುವ ಲಲಿತ ವೃತ್ತದಂತೆ, ಪ್ರತಿ ಪಾದದಲ್ಲಿಯೂ ಎಂಟು ತಾಲ ಖಂಡಗಳಿಂದೊಡಗೂಡಿದೆ.

ಇನ್ನುಳಿದ ನಾಲ್ಕು ಅಕ್ಕರಗಳ ಲಕ್ಷಣವನ್ನು ನಾಗವರ್ಮನು ಛಂದೋಂಬುಧಿ ಯಲ್ಲಿ ಸ್ಪಷ್ಟವಾಗಿ ಹೇಳಿದ್ದಾನೆ. ಆದರೆ ನಾಗವರ್ಮನ ಕಾಲದಲ್ಲಿ ಈ ಅಕ್ಕರ ಗಳೆಲ್ಲ ಮೂಲೆಪಾಲಾಗಿದ್ದುವೆಂದು ಹೇಳಬಹುದಾಗುತ್ತದೆ. ಆ ಕಾಲದ ರಚನೆ ಗಳಲ್ಲಿ ಅವು ಹೆಚ್ಚಾಗಿ ದೊರೆಯುವುದಿಲ್ಲವೆಂಬೊಂದು ವಿಷಯವಲ್ಲದೆ, ನಾಗವರ್ಮನ ಆ ಲಕ್ಷಣ ಪದ್ಯಗಳಲ್ಲಿಯೇ ಕೊರತೆ ಕಂಡುಬರುತ್ತದೆ. ಮಾತ್ರೆಗಳ ಲೆಕ್ಕಕ್ಕೆ ಒಡಂಬಡದೆ ವಿಶುದ್ಧ ತ್ರಿಮೂರ್ತಿ ಗಣಗಳಿಂದ ರಚಿತವಾದ ಬಂಧಗಳಲ್ಲಿ ಪ್ರತಿಯೊಂದು ಗಣದ ತುದಿಯಲ್ಲಿಯೂ ಯತಿ ಇರಬೇಕಾಗುತ್ತದೆ. ಏಕೆಂದರೆ, ಈ ಬಂಧಗಳಲ್ಲಿ ತಾಲ ಖಂಡವಾಗುವಲ್ಲಿಯೇ (ಕೊನೆಯ ರುದ್ರ ಗಣವನ್ನು ಬಿಟ್ಟು) ಗಣವು ಕೊನೆಗೊಂಡು ದೀರ್ಘತಾಪೇಕ್ಷಿಯಾಗಿ ನಿಲ್ಲುತ್ತದೆ. ಇದೇ ಇದನ್ನು ಓದುವ ಮರ್ಮ. ಮೇಲೆ ಬರೆದ ಪಂಪನ ಪಿರಿಯಕ್ಕರಗಳಲ್ಲಿ ಅಲ್ಲಲ್ಲಿ ಯತಿ ಕ್ರಮವಾಗಿ ಬಂದಿದೆ. ಆದರೆ ನಾಗವರ್ಮನ ಪದ್ಯಗಳಲ್ಲಿ ಈ ಕಡೆಗೆ ಲಕ್ಷ್ಯವು ಸಾಕಷ್ಟು ಕೊಡಲ್ಪಟ್ಟಿಲ್ಲ. ಉದಾ.—**ದೊರೆಯಕ್ಕರ**: ಇದರಲ್ಲಿ ಪ್ರತಿಯೊಂದು ಪಾದದಲ್ಲಿ ಆರು ಗಣಗಳು: ಎರಡು ವಿಷ್ಣು, ಒಂದು ಬ್ರಹ್ಮ—ಹೀಗೆ ಅನುಕ್ರಮವಾಗಿ ಬರಬೇಕು. ಆದರೆ ಎಲ್ಲಾ ವಿಷ್ಣುಗಣಗಳಾದರೆ ಹೇಗೋ ಹಾಗೆ ಓದಬೇಕು.

ಗಣ ವಿಭಾಗ.—

ಸರಸಿಜೋ । ದರ ಗಣ । ಮೆರಡ । ಜನುಮಲ್ಲಿ । ನೆರೆದಿರ್ಕೆ । ಮತ್ತಂ ॥—

ಇತ್ಯಾದಿ. ಇದನ್ನು ತಾಲ ಖಂಡವಾಗಿಸಿದರೆ, ಬ್ರಹ್ಮ ಗಣಗಳೆರಡು ಸೌಂದ ರ್ಯಾವಾಪ್ತಿಗಾಗಿ ಅಪೂರ್ಣ ಖಂಡಗಳಾಗುತ್ತವೆ. ಅಲ್ಲಿ ಎಳೆದೇ ಓದಬೇಕು. ಯತಿ ಇಲ್ಲದೆ ಎಳೆದರೆ ಅರ್ಥವೇ ಆಗಲಾರದು. ಇದನ್ನು ನಾಗವರ್ಮನು ಲಕ್ಷಿಸದಿರು ವುದಕ್ಕೆ, ಅವನ ಕಾಲದಲ್ಲಿಯೇ ಆ ಬಂಧಗಳು ಹಳಸಿದುದೇ ಕಾರಣವಾಗಿರಬೇಕು.

**ನಡುವಣಕ್ಕರ**ದಲ್ಲಿ ಐದು ಗಣಗಳೂ ಆರು ತಾಲ ಖಂಡಗಳೂ ಪ್ರತಿ ಪಾದದಲ್ಲಿವೆ. **ಎಡೆಯಕ್ಕರ**ದಲ್ಲಿ ಪಾದಕ್ಕೆ ನಾಲ್ಕು ಗಣಗಳೂ ಐದು ತಾಲ ಖಂಡಗಳೂ ಇವೆ. **ಕಿರಿಯಕ್ಕರ**ವು ಹೆಸರಿಗೆ ತಕ್ಕಂತೆ ಕಿರಿದಾಗಿ, ಪಿರಿಯಕ್ಕರದ ಪಾದದ ಉತ್ತರಾರ್ಧ ಸ್ವರೂಪದಲ್ಲಿರುತ್ತದೆ; ಎಂದರೆ, ಅದರಲ್ಲಿ ಮೂರು ಗಣಗಳೂ ನಾಲ್ಕು ತಾಲ ಖಂಡಗಳೂ ಇವೆ. (ಇವುಗಳ ಲಕ್ಷಣವನ್ನು ಛಂದೋಂಬುಧಿಯಲ್ಲಿ ನೋಡಿಕೊಳ್ಳಬಹುದು.)

ಪಿರಿಯಕ್ಕರದಲ್ಲಿ ಎಂಟು ತಾಲ ಖಂಡಗಳೂ, ಕಿರಿಯಕ್ಕರದಲ್ಲಿ ನಾಲ್ಕು ಖಂಡ ಗಳೂ ಇರುವುದರಿಂದ, ಹಿಂದೆ ಹೇಳಿದ ಸರ್ವಗೀತಗಳ ಸಾಮಾನ್ಯ ಲಕ್ಷಣಕ್ಕೆ, ಎಂದರೆ ಚತುರಸ್ರತೆಗೆ ಇವೆರಡೂ ಹೊಂದುತ್ತವೆ; ಆದರೆ ದೊರೆಯಕ್ಕರ ನಡುವಣಕ್ಕರಗಳಲ್ಲಿ ಆರು ಖಂಡಗಳೂ, ಎಡೆಯಕ್ಕರದಲ್ಲಿ ಐದು ಖಂಡಗಳೂ ಇರುವುದರಿಂದ ನನ್ನ ಮಾತಿಗೆ

ವಿರೋಧವು ತೋರಬಹುದು. ಆದರೆ ಇದು ನಿಜವಾದ ವಿರೋಧವಲ್ಲ, ಕೇವಲ ವಿರೋಧಾಭಾಸ. ಕ್ರಮವಾಗಿ ಓದುವಾಗ ಈ ವಿರೋಧವು ಕಾಣಲಾರದು. ದೊರೆಯಕ್ಕರ ನಡುವಣಕ್ಕರಗಳಲ್ಲಿ ಪಾದಕ್ಕೆ ಆರರಂತೆ, ಇಡಿಯ ಪದ್ಯದಲ್ಲಿ ೨೪ ಖಂಡ ಗಳಾಗುತ್ತವೆ. ಆಗ ಅದಕ್ಕೆ ಚತುರಸ್ರತೆ ಬರುತ್ತದೆ. ಅಥವಾ, ಓದುವಾಗ ಎಂಟು ಖಂಡ ಕಾಲದ ವರೆಗೆ ವಿರಾಮವನ್ನೋ ಆಲಾಪವನ್ನೋ ಮಾಡಬೇಕು. ಎಡೆಯಕ್ಕರದಲ್ಲಿಯೂ ಹೀಗೆ ಐದು ಖಂಡಕ್ಕಿಂತ ಮುಂದೆ ಮೂರು ಖಂಡಗಳ ಕಾಲ ವನ್ನು ಕಳೆಯಬಹುದು; ಅಥವಾ, ಒಂದೇ ಖಂಡ ಕಾಲದಷ್ಟು ಕಳೆದು, ನಾಲ್ಕು ಪಾದಗಳ ಮೊತ್ತದಿಂದ ಚತುರಸ್ರತೆಯನ್ನು ಪಡೆಯಬಹುದು.

ಅಕ್ಕರಗಳ ಅನಂತರ **ತ್ರಿಪದಿ**ಯನ್ನವನು ವಿವೇಚಿಸಿದ್ದಾನೆ. ಅಕ್ಕರಗಳಂತೆ ತ್ರಿಪದಿಯೂ ಮಾತ್ರಾ ನಿಯಮವಿಲ್ಲದೆ ವಿಶುದ್ಧ ತ್ರಿಮೂರ್ತಿ ಗಣ ಘಟಿತವಾದುದಾ ದರೂ, ಇಲ್ಲಿ ನಾಗವರ್ಮನು ಗಣಾಂತಗಳಲ್ಲಿ ಯತಿಯನ್ನುಲ್ಲಂಘಿಸದೆ ಚೊಕ್ಕವಾಗಿ ಹೇಳಿದ್ದಾನೆ. ಇದಕ್ಕೆ ಅವನ ಕಾಲದಲ್ಲಿ ಈ ಬಂಧವು ಹಳಸದುದೇ ಕಾರಣ. ಅಲ್ಲದೆ, ಸುಮಾರು ಇತ್ತಿತ್ತಲಾಗಿನ ವರೆಗೂ ಇದರಲ್ಲಿ ಕವಿತಾ ರಚನೆಯಾಗುತ್ತಿತ್ತು. ಕನ್ನಡ ಜಿಲ್ಲೆಯ ಹೆಂಗುಸರ ತೊಟ್ಟಿಲ ಹಾಡುಗಳೆಲ್ಲ ಈ ಬಂಧದಲ್ಲಿಯೇ ಇಂದಿನ ವರೆಗೂ ಇವೆ. 'ಚಿಕದೇವರಾಜ ವಿಜಯ'ದಲ್ಲಿಯೂ ಕೆಲವು ತ್ರಿಪದಿಗಳಿವೆ. (ಆದರೆ ಇವುಗಳಲ್ಲಿ ಒಂದೊಂದು ಲಕ್ಷಣಕ್ಕೆ ವಿರುದ್ಧವಾಗಿವೆ.) ಸರ್ವಜ್ಞನ ವಚನ ಗಳಂತೂ ತ್ರಿಪದಿಗಳಲ್ಲಿಯೇ ಇವೆಯಷ್ಟೆ! ಆದರೆ ಈಗ ಇದನ್ನು ಓದಬಲ್ಲವರು ಸುಶಿಕ್ಷಿತರಲ್ಲಿ ಬಹು ಕಡಮೆ. ಕೆಲವರು ಇದರ ಮೂರನೆಯ ಪಾದವನ್ನು ಎರಡು ಸಾರಿ ಹೇಳಿ ಹಾಡುತ್ತಾರಂತೆ. (ಒಂದೇ ಸಾರಿ ಹೇಳಿದರೆ ಚತುರಸ್ರತೆಗೆ ಕೂಡಿ ಬಾರದುದಕ್ಕಾಗಿ ಈ ಪ್ರಯತ್ನವಾಗಿರಬಹುದು.) ಮುದ್ರಿತವಾದ ಸರ್ವಜ್ಞನ ಪದಗಳು ತ್ರಿಪದಿಯ ಲಕ್ಷಣಕ್ಕೆ ಅಲ್ಲಲ್ಲಿ ಬಹಳ ಬಿಡುತ್ತವೆ. ಅಕ್ಷರ, ಅಥವಾ ವಿಶುದ್ಧ ಮಾತ್ರಾ ಬಂಧಗಳನ್ನು ಹಾಡದೆ ಓದಿದರೂ ಅವುಗಳ ರೂಪವು ಜನರ ಕಣ್ಣಿಂದ ನಷ್ಟ ವಾಗಲಾರದು. ಆದರೆ ಆ ನಿರ್ಬಂಧವಿಲ್ಲದ ಬಂಧಗಳನ್ನು ಹಾಡದೆ ಓದಿದರೆ, ಅವು ಗಳಲ್ಲಿ ನಿಧಾನವಾಗಿ ತಪ್ಪು ಸೇರಿಕೊಳ್ಳುವುದು ಸ್ವಾಭಾವಿಕ. ಈ ದೃಷ್ಟಿಯಿಂದ ಸರ್ವಜ್ಞನ ವಚನಗಳನ್ನು ಶೋಧಿಸಿದರೆ ಸರಿಯಾದ ಪಾಠಗಳು ದೊರೆಯದಿರವು. 'ಕನ್ನಡ ಕೈಪಿಡಿ'ಯಲ್ಲಿ ಇದರ ಲಕ್ಷಣವನ್ನು ಕೊಡುವಾಗ—"ತ್ರಿಪದಿ, ಪಿರಿಯಕ್ಕರ ಎಂಬ ಮಾತ್ರಾ ವೃತ್ತಗಳ ಲಕ್ಷಣವನ್ನು ನಾಗವರ್ಮನು **ಒಂದು ರೀತಿಯಿಂದ** ಹೇಳಿರುವನು" ಎಂದು ಛಂದೋಂಬುಧಿಯ ಪದ್ಯಗಳನ್ನೇ ಕೊಟ್ಟಿದೆ. ಹಾಗಿದ್ದರೆ ಇನ್ನೊಂದು ರೀತಿಯಲ್ಲಿ ಅವುಗಳ ಲಕ್ಷಣವನ್ನು ಹೇಳಬಹುದೆಂಬ ಅರ್ಥವು ಸ್ಪಷ್ಟವಷ್ಟೆ! ಈ ಮತ್ತೊಂದು ರೀತಿ ಯಾವುದೆಂದು ನೋಡಿದರೆ ಅದಕ್ಕಿಂತ ಹಿಂದೆ ಅದೇ ಕೈಪಿಡಿಯಲ್ಲಿ ಹೀಗಿದೆ: "ಐದು ಮಾತ್ರೆಯ ಗಣವು ಒಂದೆರಡನೆಯ ಪಾದಗಳಲ್ಲಿ ನಾಲ್ಕು ನಾಲ್ಕೂ, ಮೂರನೆಯ ಪಾದದಲ್ಲಿ ಮೂರೂ ಇರುವವು." ಈ ಲಕ್ಷಣಕ್ಕೆ ಲಕ್ಷ್ಯವಾಗಿ ಕೊಟ್ಟ ಪದ್ಯವೇ ಆ ಲಕ್ಷಣಕ್ಕೆ ಹೊಂದುವುದಿಲ್ಲ. ಉದಾಹೃತ ಪದ್ಯವಿದು :—

ಪೊರಮಿಂಚು ಗೈವನಂ ಬರುವಾತುಗಾರನಂ
ಕರುಬನಂ ಕಪಟ ಹೃದಯನಂ ಧೂರ್ತನಂ
ತೊರೆಯದುದೆಗ್ಗ ತನವಲ್ತೆ ॥

ಇಲ್ಲಿ ಮೊದಲನೆಯ ಪಾದವನ್ನು ಬಿಟ್ಟರೆ, ಕೊಟ್ಟ ಲಕ್ಷಣದಂತೆ ಉಳಿದೆರಡು ಪಾದಗಳೂ ತಪ್ಪೆಂದಾಗುತ್ತವೆ. ಎರಡನೆಯ ಪಾದದಲ್ಲಿ ೧೮ ಮಾತ್ರೆ ಇದೆ. ಇದರಲ್ಲಿ ಪಂಚ ಮಾತ್ರಾ ಗಣ ನಾಲ್ಕನ್ನು ಹೇಗೆ ಕಂಡರೋ ನಾಸರಿಯೆ. ಮೂರನೆಯ ಪಾದದಲ್ಲಿ ೧೪, ಅಥವಾ ಪಾದಾಂತವಾದುದರಿಂದ ೧೫ ಮಾತ್ರೆಗಳಿವೆ. ಇದರಲ್ಲಿ ಪಂಚ ಮಾತ್ರಾ ಗಣ ಮೂರಂತೆ! ಅಲ್ಲದೆ, ಐದು ಮಾತ್ರೆಯ ಗಣವೊಂದನ್ನಾದರೂ ಅದರಲ್ಲಿ ಮಾಡಬೇಕಾದರೆ 'ದೆಗ್ಗ' ಎಂಬಲ್ಲಿ ಮೊದಲನೆಯ ಗುರುವನ್ನು ಕೊಂದು ಎರಡಾಗಿ ಸೀಳದೆ ಸಾಧ್ಯವಿಲ್ಲ. ಇದಕ್ಕೆ ಗಣ ಸಮನ್ವಯವೆಂದು ಹೇಳಲಿಕ್ಕಾದೀತೆ? ನಾಗವರ್ಮನು ಛಂದೋಂಬುಧಿಯಲ್ಲಿ ಇದರ ಲಕ್ಷಣವನ್ನು ಕೊಟ್ಟುದು ಮಾತ್ರವಲ್ಲ, ಟಿಪ್ಪಣಿಯೊಡನೆ ಅದು ಮೈಸೂರಲ್ಲಿ ಮುದ್ರಿತವಾಗಿರುವಾಗ ಸ್ವಲ್ಪ ಶ್ರಮದಿಂದಾದರೂ ಲಕ್ಷಣವನ್ನು ಶೋಧಿಸಿ ಬರೆಯುತ್ತಿದ್ದರೆ ಯೋಗ್ಯವಾಗುತ್ತಿತ್ತು.

ನಿಜವಾಗಿ ನೋಡಿದರೆ, 'ಕೈಪಿಡಿ'ಯಲ್ಲಿ ಉದಾಹೃತವಾದ ಆ ತ್ರಿಪದಿ, ಲಕ್ಷಣದ ಬಣ್ಣಕ್ಕೇನೂ ಬಿಡುವುದಿಲ್ಲ. ಆದರೆ ಅಲ್ಲಿ ಕೊಟ್ಟ ಲಕ್ಷಣ ದೋಷದಿಂದ ಲಕ್ಷ್ಯವು ಸದೋಷವೆಂದು ತೋರಲು ಕಾರಣವಾಯಿತು. ತ್ರಿಮೂರ್ತಿ ಗಣದಿಂದಲ್ಲದೆ ಅದರ ಲಕ್ಷಣವನ್ನು ಯಾವ "ಇನ್ನೊಂದು ರೀತಿಯಲ್ಲಿ"ಯೂ ಸಮಂಜಸವಾಗಿ ಹೇಳಲು ಸಾಧ್ಯವಿಲ್ಲ. ನಾಗವರ್ಮನು ಸಾಮಾನ್ಯವಾದ ಮೂಲ ತ್ರಿಪದಿಯನ್ನು ಆದಿಯ ಮತ್ತು ಅಂತ್ಯದ ಗಣಗಳಲ್ಲಿ ರುದ್ರ ಗಣವನ್ನಿಡುವುದರಿಂದುಂಟಾಗುವ ಚಿತ್ರ ಮತ್ತು ಚಿತ್ರ ಲತೆಯೆಂಬೆರಡು ಭೇದಗಳನ್ನು ಉದಾಹರಿಸಿದ್ದಾನೆ. ಮಾತ್ರಾ ನಿಯಮವಿಲ್ಲದೆ ಶಿಥಿಲವಾಗಿರುವೀ ಬಂಧದಲ್ಲಿ, ಪಂಪನು ಪಿರಿಯಕ್ಕರದಲ್ಲಿ ಮಾಡಿದಂತೆ, ಮಹಾ ಕವಿಗಳು ಮಾಡಿದ ತಪ್ಪುಗಳಿಗೆ ಶುದ್ಧಿ ಪತ್ರವನ್ನು ಕೊಟ್ಟಂತೆಯೇ ಆ ಯೆರಡು ಬಂಧಗಳು ತೋರುವವಲ್ಲದೆ ಅವೊಂದು ಬೇರೆ ಜಾತಿಯ ಬಂಧಗಳಲ್ಲವೆಂದು ತೋರುತ್ತದೆ. ಈ ತ್ರಿಪದಿಯೊಂದು ಉಳಿದ ಗೀತ ಬಂಧಗಳಂತೆ ಚತುರಸ್ರವಲ್ಲದಂತಿರುವುದೊಂದು ವಿಶೇಷ. ಸಂಸ್ಕೃತದಲ್ಲಿ 'ಗಾಯತ್ರಿ'ಯೂ ಹೀಗಿದೆ; ಆದರೆ ಇದೊಂದು ಪಾದ ಸಂಖ್ಯಾ ಮಾತ್ರ ಸಾಮ್ಯದಿಂದ, ಅದರಿಂದ ಇದು ಹುಟ್ಟಿರಬೇಕೆಂದೇನೂ ಆಗಲಾರದು; ಮತ್ತು ತೃತೀಯ ಪಾದವು ಗಾಯತ್ರಿಯಂತಲ್ಲದೆ, ತ್ರಿಪದಿಯಲ್ಲಿ ನ್ಯೂನವಾಗಿದೆ. ಈ ತ್ರಿಪದಿ ಧ್ರುವ ಗಾನಕ್ಕೂ ಅಪಕೃಷ್ಟಕ್ಕೂ ಕೂಡಿಯೇ ಉಪಯುಕ್ತವಾಗಿದೆ. ತೊಟ್ಟಿಲ ಹಾಡಾಗಿ ಇದನ್ನು ಹೇಳುವಾಗ ಅಪಕೃಷ್ಟ ಪದ್ಧತಿಯಲ್ಲಿಯೇ ತಾಯಂದಿರು ಹಾಡುತ್ತಾರೆ. (ನಿದ್ದೆಯುಂಟುಮಾಡುವುದಕ್ಕೆ ದ್ರುತ ಗತಿಯ ಧ್ರುವ ಬಂಧವು ಹಿತವಲ್ಲವೆಂಬುದಿಲ್ಲ ಲಕ್ಷಿಸತಕ್ಕುದಾಗಿದೆ.) ಈ ಪರಂಪರೆಯನ್ನರಿಯದವರಾಗಲಿ, ಅಥವಾ ಧ್ರುವ ಬದ್ಧವಾಗಿಯೇ ಸೊಗಸೆಂದಾಗಲಿ ಕೆಲವರು, ದ್ವಿತೀಯ ಪಾದದಲ್ಲಿ ಸ್ವಲ್ಪವನ್ನು ಎಂದರೆ, ಏಳನೆಯ ಗಣವನ್ನು ಹೇಳಿ ನಿಲ್ಲಿಸಿ, ಎತ್ತುವಾಗ ಅದನ್ನೇ

ಪುನರುಕ್ತಿಯಾಗಿ ಹೇಳುತ್ತಾರೆ. ಹೀಗೆ ಹೇಳುವುದಕ್ಕೆ ಅನುಕೂಲವಾಗಿ, ದ್ವಿಮುಖವಾದ ಅನ್ವಯಕ್ಕೂ ಸಿಕ್ಕುವಂತೆ ಬುದ್ಧಿವಂತಿಕೆಯಿಂದ ಅಲ್ಲಿ ಪದ ಪ್ರಯೋಗ ಮಾಡಿದವುಗಳೂ ತ್ರಿಪದಿಗಳಲ್ಲಿ ಕೆಲವಿವೆ. (ದಕ್ಷಿಣ ಕನ್ನಡದ ಹೆಂಗುಸರ ಉದಯ ರಾಗದ ಹಾಡುಗಳು ಕೆಲವು ಹೀಗಿವೆ). ಅಂಥವನ್ನು ಮಾತ್ರ ಹಾಗೆ ಹೇಳಿದರೆ ಸೊಗಸಾಗುವುದು.

ತ್ರಿಪದಿಯ ಅನಂತರ ಉಕ್ತವಾದ **ಏಳೆಯ** ಸ್ವಭಾವವನ್ನು, ಗ್ರಂಥಪಾತ ದಿಂದಾಗಿ ತಿಳಿಯಲು ಸಾಧ್ಯವೇ ಇಲ್ಲದುದಕ್ಕಾಗಿ ವ್ಯಸನಪಡಬೇಕಾಗಿದೆ. ಅನಂತರ, **ಚೌಪದಿಯನ್ನು** ವಿವರಿಸಲಾಗಿದೆ. ಇದರಲ್ಲಿ ಸ್ವಲ್ಪ ವಿಶೇಷವಿದೆ.—

ತಾಲ ಖಂಡ.—ಮದನನ । ತಂದೆಯ ಮುಂ—।—।
ದೊದವಿರೆ । ಶಂಕರ ನೊ—।—।
ಳ್ಳೊದವಿರೆ । ಸಂದುದು । ನೋ—।—।
ಡಿದೆ ಸತಿ । ಚೌಪದಿ ಗೆ—।—॥ ೦॥

ಇಲ್ಲಿ ಮೂರನೆಯ ತಾಲ ಖಂಡದಲ್ಲಿಯೇ ನಿಂತಿರುವುದಾದರೂ ನಾಲ್ಕು ಖಂಡ ಗಳ ಕಾಲದಷ್ಟು ವ್ಯಯಿಸಿಯೇ ಬೇರೊಂದು ಪಾದವನ್ನು ಎತ್ತಬೇಕು. ಭಾಗವತದ ಗೋಪಿಕಾ ಗೀತೆಯಲ್ಲಿಯೂ ಹೀಗೆಯೇ ಮಾಡಬೇಕಾಗುತ್ತದೆ:—

ಜಯತಿ । ತೇಧಿ । ಕಂ—।—।
ಜನ್ಮ । ನಾವ್ರ । ಜಃ—।—।
ಶ್ರಯತ । ಇಂದಿ । ರಾ—।—।
ಶಶ್ವ । ದತ್ರ । ಹಿ—।—॥ ೦॥

ಈ ಚೌಪದಿ ಮಾತ್ರಾಬಂಧಕ್ಕೂ ಸರಿಯಾಗುವಂತೆ ನಾಗವರ್ಮನು ಬರೆ ದಿದ್ದಾನೆ. ಆದರೆ ಮಾತ್ರೆ ಬೇಕೆಂದು ಹೇಳಲಿಲ್ಲವಾದ ಕಾರಣ ಸಂದೇಹಕ್ಕೆ ಕಾರಣ ವಾಗುತ್ತದೆ. ಮಾತ್ರಾ ನಿಯಮವಿದಕ್ಕೆ ಬೇಡವೆಂದಾದರೆ ಇದಕ್ಕೆ ಬೇರೆ ತಾಳವು ತಗಲುವುದು.

ಅನಂತರ ಉಕ್ತವಾಗಿರುವುದು **ಛಂದೋವತಂಸವೆಂಬ** ಮಾತ್ರಾ ನಿರಪೇಕ್ಷ ವಾದವಿಶುದ್ಧ ತ್ರಿಮೂರ್ತಿ ಗಣ ಜಾತಿ. ಇದು ಮೈಸೂರು ಪುಸ್ತಕದಂತೆ ಹೀಗಿದೆ:—

ಮಂದರ । ಧರ ಗ । ಣಮೆಸೆ । ದಿರೆ ಮೊ । ದಲೊಳೆ ।
ಬಂದಿರೆ । ಯುಂ ನಾ । ಲ್ಕೆಡೆ ಬಿ । ಸರುಹ । ಜನ್ಮಂ ॥
ಸಂದುದು । ಲಕ್ಷ । ಣಮವ । ನಿಯೊಳೀ । ತೆರದಿಂ ।
ಛಂದೋವ । ತಂಸ । ಕ್ಕೆಸೆದು । ದು ಗಜ । ಗಮನೇ ॥ ೦॥

ಹಿಂದೆ ತೋರಿಸಿದ ತ್ರಿಮೂರ್ತಿ ಗಣ ಪದ್ಧತಿಯಂತೆ, ವಿಷ್ಣು ಪ್ರಧಾನವಾದ ಒಂಥದಲ್ಲಿ ಕೊನೆಗೆ ಬರುವ ರುದ್ರಗಣವನ್ನು ಮಾತ್ರ ಒಡೆದು ತಾಲ ಖಂಡವನ್ನು ಮಾಡಬಹುದೇ ವಿನಾ, ಇತರ ಗಣಗಳೊಂದೊಂದು ತಾಲ ಖಂಡಗಳೇ ಆಗಿವೆ. ಆಗ

ಈ ಪದ್ಯದಲ್ಲಿ ಐದು ಖಂಡಗಳಾಗುತ್ತವೆ. ಮೊದಲನೆಯ ಗಣ ವಿಷ್ಣುವಾದುದರಿಂದ ಅದರ ತಾಳಕ್ಕೆ ಸರಿಯಾಗಿಯೇ ಉಳಿದ ಬ್ರಹ್ಮ ಗಣಗಳನ್ನೂ ಹೇಳಬೇಕಾಗುತ್ತದೆ. ಹೀಗೆ ಗಣಾಂತವನ್ನು ದೀರ್ಘ ಮಾಡುವಾಗ ಯತಿ ಅವಶ್ಯ. ಆದರೆ ಇಲ್ಲಿ ಹೀಗೆ ಓದಿದರೆ ಅರ್ಥವೇ ಆಗದಷ್ಟು ಯತಿ ಭಂಗವಾಗಿದೆ. ಇಷ್ಟೊಂದು ಸಣ್ಣ ಪದ್ಯದಲ್ಲಿ ೧೨ ಯತಿ ಭಂಗಗಳನ್ನು ಕವಿ ಮಾಡುವನೇ? ಎಂಬ ಸಂದೇಹವು ಬಾರದಿರುವುದಿಲ್ಲ. ಮಂಗಳೂರಿನಲ್ಲಿ ಮುದ್ರಿತವಾದ ಪ್ರತಿಯಲ್ಲಿ ಹೀಗಿದೆ:—

ಮಂದರ । ಧರ ಗಣ । ಮೆಸೆದಿರೆ । ಮೊದಲೊಳೆ ।
ಬಂದಿರೆ । ನಾಲ್ಕಕೆ । ಬಿಸರುಹ । ಜನ್ಮಂ ॥
ಸಂದುದು । ಲಕ್ಷಣ । ಮಿಾ ತೆರ । ದಿಂದಂ ।
ಛಂದೋವ । ತಂಸಕ್ಕೆ । ಮದ ಗಜ । ಗಮನೇ ॥ ೦ ॥

ಇದರಲ್ಲಿ ಉಕ್ತವಾದ ಲಕ್ಷಣದಂತೆ, ಮೊದಲಿನ ಮೂರು ವಿಷ್ಣುಗಣಗಳು, ನಾಲ್ಕನೆಯದು ಬ್ರಹ್ಮ ಎಂಬರ್ಥವಾಗುತ್ತದೆ. ಮತ್ತು ಮೊದಲನೆಯ ಪಾದದ ಕೊನೆಯ ಗಣ ಹೊರತು ಉಳಿದ ಎಲ್ಲ ಕಡೆಯಲ್ಲಿ ಲಕ್ಷ್ಯವು ಲಕ್ಷಣಕ್ಕೆ ಹೊಂದಿದೆ. ಗಣಾಂತದಲ್ಲಿ ವಿಶ್ರಮಿಸಿ ಓದುವಾಗ ಅರ್ಥಕ್ಕೂ ತೊಡಕಾಗುವುದಿಲ್ಲ. ಪ್ರಸಿದ್ಧವಾದ ಜೋಗುಳ ಹಾಡುಗಳು ಇದೇ ಬಂಧದಲ್ಲಿ ರಚಿತವಾಗಿವೆ. ಆದರೆ ಒಂದೆಡೆ ಲಕ್ಷಣ ಸಮನ್ವಯವಾಗದಿರುವುದಲ್ಲದೆ, 'ನಾಲ್ಕಕೆ' ಎಂಬ, ಆಧುನಿಕವೆಂದು ಭಾಸವಾಗುವ, ಪ್ರಯೋಗವೂ ಇದರಲ್ಲಿರುವುದರಿಂದ ಮೈಸೂರು ಪುಸ್ತಕ ಶೋಧಕರು ಈ ಪಾಠಕ್ಕೆ ಗಮನಕೊಡದಿದ್ದುದಿರಬಹುದು. ನನ್ನ ಮನಸ್ಸಿಗೆ ಇದು ಹೀಗಿದ್ದಿರಬಹುದೆಂದು ಹೊಳೆಯುತ್ತದೆ:—

ಮಂದರ ಧರ ಗಣಮೆಸೆದಿರೆ ಮೊದಲೊಳ್ ।
ಬಂದಿರೆ ನಾಲ್ಕರ್ಕೆ ಬಿಸರುಹ ಜನ್ಮಂ ॥
ಸಂದುದು ಲಕ್ಷಣಮಿಾ ತೆರದಿಂದಂ ।
ಛಂದೋವತಂಸಕ್ಕೆ ಮದ ಗಜ ಗಮನೇ ॥ ೦ ॥

ಇದಾದ ಮೇಲೆ ಉಕ್ತವಾಗಿರುವ ಅಕ್ಕರಿಕೆಗೆ, ಮಾತ್ರಾ ನಿಯಮಕ್ಕೆ ತಪ್ಪದಂತೆ ತ್ರಿಮೂರ್ತಿ ಗಣಗಳು ಬರಬೇಕೆಂದು ನಾಗವರ್ಮನು ಸ್ಪಷ್ಟವಾಗಿ ಹೇಳಿದ್ದಾನೆ. ಇದರಿಂದ ಇದು, ಮಾತ್ರಾ ಗಣಗಳ ಪರಿಚಯದಿಂದ, ವಿಶುದ್ಧ ತ್ರಿಮೂರ್ತಿ ಜಾತಿಗಳಲ್ಲುಂಟಾದ ಸಂಸ್ಕಾರದ ಫಲ ಸ್ವರೂಪವಾಗಿದೆಯೆಂದು ಬೋಧೆಯಾಗುತ್ತದೆ. 'ಅಕ್ಕರಿಕೆ' ಮತ್ತು 'ಅಕ್ಕರ' ಎಂಬ ಪದಗಳಲ್ಲಿ ಜನ್ಯ ಜನಕ ಭಾವವು ಹೊಳೆಯುವುದರಿಂದಲೂ, ಅಕ್ಕರಗಳಿಗಿಂತ ಇದು ಆಧುನಿಕವೆಂದು ಹೇಳುವುದರಲ್ಲಿ ಸಂದೇಹವಿಲ್ಲ. ಕಾಲಾಂತರದಲ್ಲಿ ಸಮಾನ ಮಾತ್ರೆಗಳ ತ್ರಿಮೂರ್ತಿಗಳೇ ಉಪಯುಕ್ತವಾಗತೊಡಗಿ, ಷಟ್ಪದಿಗಳ ೩, ೪, ೫ ಮಾತ್ರೆಯ ಗಣಗಳ ಸೃಷ್ಟಿಯಾದ ಬಗೆಯನ್ನು ತೋರಿಸುವುದಕ್ಕೆ ಇದು ಬಲವಾದ ಆಧಾರವಾಗಿದೆ.

ಇದರ ಮುಂದೆ ಮೂರು ವಿಧವಾದ ಲಕ್ಷಣಗಳನ್ನು ಕೊಟ್ಟು ವಿವರಿಸಿದ **ಮದನವತಿ** ಬರುತ್ತದೆ. ಅಕ್ಕರಿಕೆಯಂತೆ ಇದಕ್ಕೂ ಮಾತ್ರಾ ನಿಯಮವು ಅವಶ್ಯವೆಂದು ನಾಗವರ್ಮನು ಹೇಳದಿದ್ದರೂ, ಇದರ ಅಚ್ಚುಗಟ್ಟಾದ ಸ್ವರೂಪದಿಂದ ಹಾಗೆಯೇ ಬೋಧೆಯಾಗುತ್ತದೆ. ಅಲ್ಲದೆ, ಇದು ವಿಶುದ್ಧ ತ್ರಿಮೂರ್ತಿ ಘಟಿತವೆಂದು ಬಗೆಯುವುದಾದರೆ, ಅಕ್ಕರದ ಭೇದಗಳಲ್ಲಿಯೇ ಒಂದಾಗಬೇಕಾಗುತ್ತದೆ; ಏಕೆಂದರೆ, ಆಗ ಇದಕ್ಕೂ ನಡುವಣಕ್ಕರಕ್ಕೂ ಪಾದಾದಿಯ ಗಣದಲ್ಲಿ ಹೊರತು ಅನ್ಯಥಾ ಭೇದವುಳಿಯುವುದಿಲ್ಲ. ಆದುದರಿಂದ ನಡುವಣಕ್ಕರವೇ ಮಾತ್ರಾ ನಿಯಮಕ್ಕೆ ಅಳವಟ್ಟು 'ಮದನವತಿ'ಯಾಯಿತೆಂದು ಹೇಳಬೇಕಾಗುತ್ತದೆ. ಮತ್ತು ಇಲ್ಲಿ ನಾಗವರ್ಮನು ಹೇಳಿದ ಲಕ್ಷಣಕ್ಕೂ ಲಕ್ಷ್ಯಕ್ಕೂ ಮೇಳಗೂಡುವುದಿಲ್ಲ. ಕೊಟ್ಟ ಮೂರು ಲಕ್ಷಣಗಳಲ್ಲಿ ಇದೊಂದು :—

ಗಣ ವಿಭಾಗ.—ಮದನಹರ । ತ್ರಯದಿಂ ಹರಿ । ಕಡೆಸಡೆ ಮ । ದನವತೀ ॥ ೦ ॥

ತಾಲ ಖಂಡ.—ಮದನಹರ । ತ್ರಯದಿಂ ಹರಿ । ಕಡೆಸಡೆ ಮದ । ನವತೀ ॥ ೦ ॥

ಇಲ್ಲಿ ತಾಲ ಖಂಡಕ್ಕೂ ಗಣ ವಿಭಾಗಕ್ಕೂ ಜಗಳವುಂಟಾಗುತ್ತದೆ. ಇದು ತ್ರಿಮೂರ್ತಿ ಜಾತಿಗಳ ಮುಖ್ಯ ಲಕ್ಷಣಕ್ಕೆ ವಿರುದ್ಧ. ಅಲ್ಲದೆ, ಅದೇ ಪದ್ಯದ ಮೊದಲನೆಯ ಪಾದವೂ ಉಕ್ತ ಲಕ್ಷಣಕ್ಕೆ ವಿರುದ್ಧವಾಗಿದೆ:—

ಗಣ ವಿಭಾಗ.—ಮದನನ ತಂ । ದೆಯ ಗಣಮವು । ವಿಷಯದೊಳಿರೆ । ಗುರುಮುಂ ॥

ಇಲ್ಲಿ ಎರಡನೆಯ ಮೂರನೆಯ ಗಣಗಳು ರುದ್ರಗಣವನ್ನು ಮೀರಿ ಆರು ಅಕ್ಷರದವಾಗಿವೆ. ಆದರೆ ಕೊಟ್ಟ ಮೂರು ಲಕ್ಷಣಗಳಲ್ಲಿ ಯಾವುದಾದರೊಂದು ಅನ್ವಯಿಸಿದರೆ ಸಾಕೆಂಬ ಅಭಿಪ್ರಾಯವಿದ್ದರೆ, ನಾಲ್ಕು ಪಾದಗಳನ್ನೂ ಆಗ ಒಂದೇ ಪದ್ಯದ ಸಮ ಪಾದಗಳೆಂದು ಹೇಳಬೇಕಾದರೆ ಮಾತ್ರಾ ಬಂಧವು ಅವಶ್ಯವಾಗುತ್ತದೆ. ಇದರಿಂದ ಈ ಬಂಧಕ್ಕೆ ಮಾತ್ರಾ ನಿಯಮವು ಅವಶ್ಯವೆಂಬ ಪಕ್ಷಕ್ಕೇ ಬಲ ಹೆಚ್ಚುತ್ತದೆ.

ಇದಾದಮೇಲೆ **ಗೀತಿಕೆಯ** ಲಕ್ಷಣವು ಉಕ್ತವಾಗಿದೆ. "ಎರಡನೆಯ ಮತ್ತು ಆರನೆಯ ಗಣಗಳಲ್ಲಿ ಬ್ರಹ್ಮ ಗಣ ಬಂದರೆ ಸರಿ; ಉಳಿದುವೆಲ್ಲ ಮೆಚ್ಚಿದ ರೀತಿ" ಎಂದು ಹೇಳಿದ ಲಕ್ಷಣವು ಏನೂ ಸಾಲದಾಗಿದೆ. ಒಟ್ಟಿಗೆ ಎಷ್ಟು ಗಣಗಳೆಂದು ಹೇಳಲಿಲ್ಲ. ಇದರಿಂದಲೂ, ಒಂದನೆಯ ಗಣದ ಮರ್ಯಾದೆಯೇನೆಂದು ತಿಳಿಯದೆ ಎರಡನೆಯ ಗಣವಾವುದೆಂಬುದನ್ನು ಗುರುತಿಸುವುದು ಅಸಾಧ್ಯವಾದುದರಿಂದಲೂ ಈ ಲಕ್ಷಣದಿಂದ ಇದರ ರೂಪವನ್ನು ತಿಳಿಯುವುದು ಸಾಧ್ಯವಿಲ್ಲ. ಇದಕ್ಕೆ ಟೀಕೆ ಬರೆವಾಗ ಟಿಪ್ಪಣಕಾರರು—"ಈ ವೃತ್ತಕ್ಕೂ ನಾಲ್ಕು ಪಾದಗಳು ಇವೆ. . . . ಮೊದಲನೆಯ ಪಾದದಲ್ಲಿ ಮೂರು ಗಣಗಳು . . . . (ಇತ್ಯಾದಿ) ಎಂಬ ಅರ್ಥವು ಲಕ್ಷ್ಯದಿಂದ ಸೂಚಿತವಾಗುತ್ತದೆ" ಎಂದು ಮುಂತಾಗಿ ಬರೆದಿರುವರು. ಆದರೆ ಅವರೇ ವಿಭಾಗಿಸಿ ತೋರಿಸಿದಂತೆ, 'ತಿರೆಕರಂಗೀತಿ,' 'ಕೆಯಿಂತ' ಎಂಬಿವು ತ್ರಿಮೂರ್ತಿ ಗಣಗಳಲ್ಲಿ ಯಾವ ಜಾತಿಗೆ ಸೇರಿದುವೋ ಅವರೇ ಬಲ್ಲರು! ನಾನು ಶೋಧಿಸಿದ ಮಟ್ಟಿಗೆ ಈ ಗೀತಿಕೆಗೆ ಅಕ್ಷರ, ಮಾತ್ರಾ, ತ್ರಿಮೂರ್ತಿಗಳೆಂಬ ಯಾವ ಗಣಗಳೂ ಸಮಂಜಸವಾಗಿ ಅನ್ವಯಿಸು

ವಂತಿಲ್ಲ. ಛಂದೋಂಬುಧಿಯಲ್ಲಿ ಕೊಟ್ಟ ಲಕ್ಷಣಕ್ಕಂತೂ ಹಿಡಿಬುಡವೇ ಇಲ್ಲವಷ್ಟೆ! ಬೇರೆ ಗ್ರಂಥಗಳಲ್ಲಿಯೂ ಅಲ್ಲಲ್ಲಿ ಗೀತಿಕೆಗಳು ದೊರೆಯುತ್ತವೆ. ಅವುಗಳನ್ನು ಓದಲು ಪಟ್ಟ ಭಗೀರಥ ಪ್ರಯತ್ನದ ಅನುಭವದಿಂದ ನಾನು ಹೇಳುವುದೇನೆಂದರೆ, ಇದು ಯಾವ ಛಂದೋ ಗಣ ಬಂಧಕ್ಕೂ ಸೇರದೆ, ಕೇವಲ ತಾಳಕ್ಕೆ ಸರಿಯಾಗಿ ಇಷ್ಟ ಬಂದಂತೆ ಹೇಳಲಿರುವ ಬಂಧ. ಮತ್ತು ಎಲ್ಲವೂ ಹಾಡುಗಳೇ ಆಗಿರುವಾಗ, ವಿಶೇಷ ವಾಗಿ ಸಂಗೀತದ ಸೊತ್ತು ಎಂದು ತೋರಿಸುವುದಕ್ಕೆಂಬಂತೆ, ಇದಕ್ಕೆ 'ಗೀತಿಕೆ' ಎಂಬ ಹೆಸರಿದೆ. ಇಂತಹ ಗೀತಿಕೆಗಳು ತುಳುವಿನಲ್ಲಿಯೂ ಇವೆ. ಅದೇ ಜಾತಿಗೆ ಇದು ಸೇರಿದುದೆಂದು ನನ್ನ ಭಾವನೆ. ತಾಳಕ್ಕೆ ತಕ್ಕಂತೆ ಬೇಕಾದಲ್ಲಿ ಎಳೆದು, ಬೇಕಾದಲ್ಲಿ ಓಡಿಸಿ ಹೇಳುವುದು ಇದರ ಪದ್ಧತಿ.

ಉದಾ.—ನೃಪತುಂಗನ ಕವಿರಾಜಮಾರ್ಗದ ಎರಡು ಗೀತಿಕೆಗಳನ್ನು ತಾಲ ಖಂಡ ಮಾಡಿ ಇಲ್ಲಿ ಕೊಟ್ಟಿದ್ದೇನೆ:—

ಅರಿದು । ಪೀನಂ । ಮಾರ್ಗ । ಗತಿ । ಯಂ—।
ತರಿಸ । ಲಾಗ । ದಾ । ರ್ಗಂ । ಬಹು ವಿ । ಕಲ್ಪ । ದೊಳ್—॥
ಕುರಿತು । ಪೂರ್ವ । ಶಾಸ್ತ್ರ । ಪದವಿ । ಯಂ—।
ತೆರೆ । ದಿರೆ । ಪೇಳ್ವೆ । ನಿನಿ । ಸಂ—। ಕನ್ನಡ । ದೊಳ್ ॥ ೧ ॥

ಕಾಣೆ । ಗೆಯ್ದುದ್ದಂ । ತನ್ನ । ದೋಸ । ಮಂ—।
ಕಾ—। ಣದಂ । ತೆಂದುಂ । ಕಣ್ಗಳ್ । ತಮ್ಮ । ಕಾಡಿಗೆ । ಯಂ—॥
ಪೂ—। ಣೆಗ । ನಾದುದ । ರಿಂ ಪೆರ । ರಿಂ—।
ಜಾಣ । ರಿಂ ನೋ । ಡಿಸಿ । ಪೇ—। ಳ್ವುದು । ಕಬ್ಬ । ಮಂ ॥ ೨ ॥

ಹೀಗೆಯೇ ನಾಗವರ್ಮನ ಗೀತಿಕೆಯನ್ನು ವಿಭಾಗಿಸುತ್ತೇನೆ:—

ಎರಡ । ರೊಳಾ । ರೆಂಬ । ಸಂಖ್ಯೆ । ಯೊಳ್—।
ಬರೆ । ಪದ್ಮ । ಭವ । ಸುಳಿ । ದುವು ಮೆ । ಚ್ಚುವ ತೆರ । ದಿಂ—॥
ದಿರೆ ಮುಂ । ದಣ । ಪದಂ । ಮುನ್ನಿ । ನಂ—।
ತಿರೆ । ಕರಂ । ಗೀ—। ತಿಕೆ । ಯಿಂತ । ಕ್ಕುಂ ಸ । ಖೀ—॥ ೧ ॥

ವಿಭಾಗಕ್ಕೊಂದು ಪೆಟ್ಟು ಹೊಡೆದು ಇದರ ಗತಿಯನ್ನು ತಿಳಿದುಕೊಳ್ಳಬಹುದು. ಆಗ ಇದಕ್ಕೆ ಒಟ್ಟು ೨೪ ತಾಲ ಖಂಡಗಳಾಗಿ ಚತುರಸ್ರತೆ ಬರುವುದು. ಆದರೂ ಇದಕ್ಕಿಂತ ಹೆಚ್ಚು ಕಾಲವನ್ನು, ಎಂದರೆ ಪ್ರತಿ ಪಾದದಲ್ಲಿಯೂ ಎರಡು ಖಂಡಗಳ ಕಾಲವನ್ನು ವ್ಯಯಿಸಿ ಓದಲೂ ಬಹುದು. ತುಳುವಿನಲ್ಲಿ ಹೀಗೆಯೇ ಹಾಡುತ್ತಾರೆ. ಅಲ್ಲದೆ, ನೃಪತುಂಗನ ಬೇರೆ ಕೆಲ ಗೀತಿಕೆಗಳಲ್ಲಿ ವಿಷಮ ಪಾದಗಳಲ್ಲಿಯೂ ಐದಕ್ಕಿಂತ ಹೆಚ್ಚು ತಾಲ ಖಂಡಗಳು ಕಾಣುತ್ತವೆ. ಉದಾ.—

ಖುಂ । ತು ಸ । ಮುಚ್ಚ । ಯದ । ಬಳಿ ವಿ । ಕಲ್ಪ । ದಾ—॥

ಎಂಟು ಖಂಡ ಕಾಲದಲ್ಲಿಯೇ ಮೇಲಿನದರ ವಿಷಮ ಪಾದಗಳನ್ನು ಓದದಿದ್ದರೆ, ಇವೆಲ್ಲ ಒಂದೇ ಜಾತಿಯವೆಂದು ಹೇಳುವುದಾದರೂ ಹೇಗೆ? ಇರಲಿ, ಶಿಥಿಲವಾದ ತ್ರಿಪುರುಷ ಬಂಧಕ್ಕೂ ಸೇರದ ಈ ಸ್ವಚ್ಛಂದ ಗೀತಿಕೆಯನ್ನು ಒಂದು ಛಂದೋಬಂಧ ವೆಂದು ಹೇಳಲೂ ಹೇಸುವವರಿರಬಹುದು. ಆದರೆ, ಗೀತೋಪಯುಕ್ತವಾದ ಬಂಧಗಳೆಲ್ಲ ಛಂದೋಬಂಧಗಳೆಂಬ ದೃಷ್ಟಿಯಿಂದ ಇದೂ ಒಂದು ಛಂದೋಬಂಧವೆಂದು ಹೇಳುತ್ತೇನೆ. ಅಲ್ಲದೆ, ಇಂಗ್ಲಿಷ್ ಮೊದಲಾದ ಭಾಷೆಗಳ ಬಂಧವೂ ಇದಕ್ಕಿಂತ ಬಹಳ ಹೆಚ್ಚು ಸುದೃಢವಾಗಿಲ್ಲವೆಂದು ತಜ್ಞರಿಗೆ ತಿಳಿಯದಿರದು.

ಅನಂತರ ವಿವೃತವಾದ **ಉತ್ಸಾಹ**ಕ್ಕೂ ಮಾತ್ರಾ ನಿಯಮವಿದೆಯೋ ಇಲ್ಲವೋ ನಾಗವರ್ಮನು ಹೇಳಲಿಲ್ಲ; ಕೊಟ್ಟ ಉದಾಹರಣೆಯಲ್ಲಿ ಮಾತ್ರಾ ಬಂಧವು ಲಕ್ಷಿತ ವಾಗುತ್ತದೆ. ತ್ರಿಮೂರ್ತಿ ಗಣದಿಂದ ಕನ್ನಡ 'ಜಾತಿ'ಗಳ ಲಕ್ಷಣವನ್ನು ಹೇಳುವಾಗ 'ಗುರು' ಇತ್ಯಾದಿ ಅಕ್ಷರ ಸಂಜ್ಞೆಯ ಉಪಯೋಗವು ಅವಶ್ಯವಿಲ್ಲ. ಹಾಗೆ ಉತ್ಸಾಹದ ಲಕ್ಷಣವನ್ನು ಹೇಳುವುದಾಗಿದ್ದರೆ ಆರು ಬ್ರಹ್ಮ ಗಣಗಳ ಅನಂತರ ಒಂದು ವಿಷ್ಣು ಗಣ ಎಂದು ಹೇಳಬೇಕಾಗಿತ್ತು. ಇಲ್ಲಿ, ಏಳು ಬ್ರಹ್ಮ ಗಣ, ಅನಂತರ ಒಂದು ಗುರು ಎಂದು ಹೇಳಿದ್ದಾನೆ; 'ಮದನವತಿ'ಯಲ್ಲಿಯೂ ಒಮ್ಮೆ ಗುರುವೆಂದು ಪಠಿಸಿದ್ದಾನೆ. ಇದರಿಂದ ಒಂದು ವೇಳೆ ಅಕ್ಕರಿಕೆಯ ಸಾಲಿಗೆ (ಎಂದರೆ, ಮಾತ್ರಾ ನಿಯಮಕ್ಕೂ ತ್ರಿಪುರುಷಕ್ಕೂ ಅನ್ವಯಿಸುವ ಬಂಧ) ಇದು ಸೇರಲೂ ಬಹುದು. ಅನಂತರ ಇದೇ ಬ್ರಹ್ಮ ಗಣದಿಂದ ಉತ್ಸಾಹ ದಂಡಕವನ್ನು ಹೀಗೆಯೇ ಸಂದಿಗ್ಧವಾಗಿ ಹೇಳಿದ್ದಾನೆ.

ಆನುಷಂಗಿಕವಾಗಿ ಇಲ್ಲೊಂದು ವಿಚಾರ:—ಇದಕ್ಕೆ ಟಿಪ್ಪಣಿ ಬರೆವಾಗ, ಟಿಪ್ಪಣಕಾರರು—'ಚಿಕದೇವರಾಜ ವಿಜಯ' ಮೊದಲಾದ ಪ್ರಬಂಧಗಳಲ್ಲಿ ಲಯಗ್ರಾಹಿ ಎಂದು ನಿರ್ದಿಷ್ಟವಾದ ವೃತ್ತಗಳು ಉತ್ಸಾಹ ದಂಡಕದ ಲಕ್ಷಣವುಳ್ಳವಾಗಿರುವುವು; ಹಾಗೆ ಲಯಗ್ರಾಹಿಯೆಂದು ಹೆಸರು ಬರೆದವರಿಗೆ ಭ್ರಾಂತಿಯುಂಟಾಗಿದೆ—ಎಂಬರ್ಥ ವನ್ನು ಹೇಳುತ್ತಾರೆ. ಆದರೆ ಭ್ರಾಂತಿಗೆ ಗುರಿಯಾದವರು ನಿಜವಾಗಿಯೂ ಛಂದೋಂಬುಧಿಯ ಟಿಪ್ಪಣಕಾರರೇ! ಆ ವೃತ್ತಗಳಿಗೆ ಲಯಗ್ರಾಹಿಯೆಂಬ ಹೆಸರು ಇದೆಯೋ? ಇದ್ದರೆ ಹೇಗೆ ಬಂತೆಂಬ ಚರ್ಚೆ ಇಲ್ಲಿ ಅಪ್ರಕೃತ. ಆದರೆ ಉತ್ಸಾಹ ಜಾತಿಯ, ಅಥವಾ ತಜ್ಜನ್ಯವಾದ ಉತ್ಸಾಹ ದಂಡಕದ ಲಕ್ಷಣದ ಲೇಶವೂ ಅದರಲ್ಲಿಲ್ಲ. ನಾಲ್ಕು ಬ್ರಹ್ಮ ಗಣಗಳಲ್ಲಿ ಯಾವುದರಿಂದ ನಿರ್ಮಿಸಿದ ಉತ್ಸಾಹ ವಾದರೂ 'ಲಯಗ್ರಾಹಿ' ಎಂದು ನಿರ್ದಿಷ್ಟವಾದ ವೃತ್ತ ಜಾತಿಯಾಗಲಾರದು. ಅದು ಮಾಲಾ ವೃತ್ತಗಳಲ್ಲೊಂದಾದ ಲಲಿತ ವೃತ್ತದ ಲಕ್ಷಣವನ್ನು ಸರಿಯಾಗಿ ಹೊಂದಿರು ತ್ತದೆ. ಅದರಲ್ಲಿ ಅಕ್ಷರ ನಿಯಮವನ್ನು ಪಾಲಿಸದೆ, ಕೇವಲ ಮಾತ್ರಾ ಬಂಧವನ್ನು ಅಳವಡಿಸಿದರೆ, ಆಗಲದು ೫ ಮಾತ್ರೆಯ ಗಣಗಳಿಂದ ಘಟಿತವೆಂದಾಗುವುದು. ಲಲಿತ ವೃತ್ತವು ಛಂದೋಂಬುಧಿಯಲ್ಲಿಯೇ ಉದಾಹೃತವಾಗಿದೆ. 'ಚಿಕದೇವರಾಜ ವಿಜಯ'ದ ಲಯಗ್ರಾಹಿ ಇದು:—

ಕಾರುಗನ ಹಳ್ಳಿಯವನಾರುಬಟೆಯಿಂ ನೆರೆಪಿ ಭೂರಮಣರಂ ಸದೆದು ಬೀರತನದೊಳ್ಪಿಂ ॥

—ಇತ್ಯಾದಿ

ಇನ್ನುಳಿದುದು ಷಟ್ಪದಿ. ಮೈಸೂರು ಪುಸ್ತಕದಲ್ಲಿ ಇದು ಹೀಗಿದೆ:—

ಮಂದರ । ಧರ ಗಣ ।
ಮೊಂದಿರೆ । ಕಡೆಯೊಳ್ ।
ಕುಂದದೆ । ನೆಲಸುಗೆ । ಮದನ ಹರಂ ॥
ಇಂದು ನಿ । ಭಾನನೆ ।
ಮುಂದಣ । ತೆರಸೀ ।
ಯಂದಮೆ । ಯಾಗಲೆ । ಷಟ್ಪದಿ ಕೇಳ್ ॥ . ॥

ಇಲ್ಲಿಯೂ ನಾಗವರ್ಮನು ಸಂದೇಹವನ್ನು ಹುಟ್ಟಿಸುತ್ತಾನೆ; ಮಾತ್ರಾ ಗಣನೆ ಬೇಕೆನ್ನದೆ, ಗಣನೆಯಲ್ಲಿ ಅವಕ್ಕೆ ಸೇರುವಂತೆಯೇ ಬರೆದಿದ್ದಾನೆ. ಆದರೆ ಒಂದು ಹಸ್ತ ಲಿಖಿತ ಪ್ರತಿಯ ಪಾಠದಂತೆ, "ಬಂದಿರ್ಕಾರಂತ್ಯದೊಳ್" ಎಂದಿದೆಯಂತೆ. ಹೀಗಿದ್ದರೆ ಮಾತ್ರಾ ನಿರಪೇಕ್ಷವಾದ ವಿಶುದ್ಧ ತ್ರಿಮೂರ್ತಿ ಜಾತಿಯಿದು. ಆದರೆ ಟಿಪ್ಪಣ ಕಾರರು, "ಹೀಗಿದ್ದರೆ ಎರಡನೆಯ ಪಾದವು ಸರಿಯಾಗುವಂತೆ ತೋರುವುದಿಲ್ಲ" ಎಂದು ಬರೆದಿದ್ದಾರೆ. ಮಾತ್ರಾ ದೃಷ್ಟಿಯಲ್ಲಿ ಮಾತ್ರ ಇದು ಸರಿಯಾಗದೇ ಹೊರತು, ತ್ರಿಮೂರ್ತಿ ಗಣ ದೃಷ್ಟಿಯಲ್ಲಿ "ಸರಿಯಾಗುವಂತೆ ತೋರದಿರುವುದಕ್ಕೆ" ಏನೂ ಕಾರಣವಿಲ್ಲ. ಆದುದರಿಂದ ಇದು ಒಂದು ಕಾಲದಲ್ಲಿ, ಅಕ್ಕರ ಛಂದೋವತಂಸಗಳ ಜಾತಿಗೇ ಸೇರಿದ್ದಿರಬಹುದು. ಆದರೆ ಎರಡನೆಯ ಮತ್ತು ಐದನೆಯ ಪಾದಗಳಲ್ಲಿ ಲಕ್ಷಣ ಸಮನ್ವಯವಾಗುವುದಿಲ್ಲ. ಏಕೆಂದರೆ, ಅಲ್ಲಿ ವಿಷ್ಣು ಗಣಗಳ ಬದಲಾಗಿ, 'ಕಡೆಯೊಳ್' 'ತೆರಸೀ' ಎಂಬ ಬ್ರಹ್ಮ ಗಣಗಳು ಬಂದಿವೆ. ಪಾಠಾಂತರದಿಂದಲೂ ಪರಿಣಾಮವಾಗುವಂತಿಲ್ಲ. ಆದುದರಿಂದ ಇದು ನಾಗವರ್ಮನ ತಪ್ಪೇ ಇರಬಹುದು. ಆದರೆ, ವಿಶುದ್ಧ ತ್ರಿಮೂರ್ತಿ ಜಾತಿಯ ಶಿಥಿಲ ಗಣಗಳಿಂದಲೇ ಇದರ ರಚನೆಯನ್ನು ಮಾಡಿದರೆ, ಪ್ರಥಮ ಬ್ರಹ್ಮ ಗಣದ ಭೇದವನ್ನುಳಿದು, ಪಿರಿಯಕ್ಕರದ ಎರಡು ಪಾದ ಗಳೂ, ಇದರ ಆರು ಪಾದಗಳೂ ಸಮವಾಗುತ್ತವೆ. ಆದುದರಿಂದ ಈ ಷಟ್ಪದಿಯ ಪ್ರಯೋಜನವೆಲ್ಲಿ? ಎಂಬ ಪ್ರಶ್ನೆ ಬರುತ್ತದೆ; ಅಲ್ಲದೆ, ಚಂದ್ರರಾಜನ 'ಮದನ ತಿಲಕ'ದಲ್ಲಿಯೂ ಚಿತ್ರಿತವಾದ 'ಷಟ್ಪದಿ' ಮಾತ್ರಾ ಬಂಧವನ್ನು ಹೊಂದಿಯೇ ಇದೆ. ಆದುದರಿಂದ ಷಟ್ಪದಿಗೆ ಆದಿಯಿಂದಲೂ ಮಾತ್ರಾ ಗಣನೆ ಸಹಜವಾಗಿದ್ದಿರಲೂ ಬಹುದು. ಹಾಗಿದ್ದರೂ ಇದು ಪಿರಿಯಕ್ಕರದ ಮರಿಯೆಂಬುದು ಮಾತ್ರ ಸಿದ್ಧವಾಗ ದಿರುವುದಿಲ್ಲ.

ನಾಗವರ್ಮನು ಹೇಳಿದುದು ಒಂದೇ ಷಟ್ಪದಿಯನ್ನು; ಈಗ ಆರು ಷಟ್ಪದಿ ಗಳಿವೆ. ಈ ಷಟ್ಪದಿಗಳು ಇಷ್ಟೇ ಏಕೆ? ಇವು ಎಲ್ಲಿಂದ ಹುಟ್ಟಿದುವು?—ಇತ್ಯಾದಿ ಬಹಳವಾಗಿ ಚರ್ಚೆ ಈಗೀಗ ನಡೆಯುತ್ತಿದೆ. ಆ ವಿಷಯವಾಗಿ ನನಗೆ ಕಂಡುಬಂದ ಅಭಿಪ್ರಾಯಗಳನ್ನು ಸಂಕ್ಷೇಪವಾಗಿ ಇಲ್ಲಿ ಹೇಳುತ್ತೇನೆ.—

ಸಂಸ್ಕೃತದ 'ಮಯರಸತಜಭನಗಳಿಗೆ' ಮಾತ್ರೆಯನ್ನು ಲೆಕ್ಕಿಸಿ ಕನ್ನಡ ಷಟ್ಪದಿಗಳನ್ನು ಹುಟ್ಟಿಸಿದರೆಂದು ಕೆಲವರ ಸಮರ್ಥನೆ. ನನ್ನ ನಮ್ರ ಸೂಚನೆಯೇನೆಂದರೆ, ಗಣಗಳನ್ನು ನೋಡಿ ಲೆಕ್ಕಿಸಿ, ಅವುಗಳನ್ನು ಸುರಿದು ಮಾಲೆ ಮಾಡಿ ಛಂದೋಬಂಧಗಳನ್ನು ಆದಿಯಲ್ಲಿ ರಚಿಸಿದರೆಂಬುದು ಪ್ರಕೃತಿ ವಿರೋಧ. ಪದ್ಯ ರಚನೆಯಾದ ಮೇಲೆಯೇ ಗಣ ನಿಯಮವನ್ನು ತಿಳಿದರು. ಅನಂತರಕಾಲೀನರು, ಅದೇ ಜಾತಿಯ ಪದ್ಯಗಳಲ್ಲಿ ಹೊಸತೊಂದು ಭೇದವನ್ನು, ಬೇಕಾದರೆ ಗಣದ ನಿಯಮಗಳನ್ನು ಅನುಲಕ್ಷಿಸಿ, ನಿರ್ಮಿಸಿರಬಹುದು; ಹೊರತು ಯಾವುದಾದರೊಂದು ಜಾತಿಯ ಮೊತ್ತ ಮೊದಲಿನ ಬಂಧವು ಗಣ ಗಣನೆಯಿಂದ ಹುಟ್ಟಿರಲಾರದು. ಅಲ್ಲದೆ, ಕವಿ ಸ್ವಾಭಾವಿಕವಾದ ಲಯ ಗತಿಯಿಂದ, ಅಥವಾ ಯಾವುದಾದರೊಂದು ಬೇರೆ ವೃತ್ತ ಬಂಧದಿಂದ ಪ್ರೇರಿತನಾಗಿ ಹೊಸ ಬಂಧವನ್ನು ಕಲ್ಪಿಸುವನೇ ಹೊರತು, ಗಣಗಳಿಂದ ಪ್ರೇರಿತನಾಗುವುದಿಲ್ಲ. ತಾನು ಬರೆದ ಪದ್ಯದ ಗಣ ನಿಯಮವು ಕವಿಗೆ ತಿಳಿದಿರಲೇ ಬೇಕೆಂದಿಲ್ಲ; ಕೇವಲ ಒಂದು ಪ್ರಕೃತಿ ಅವನ ಹಾದಿಯನ್ನು ತಪ್ಪಿಸದೆ ಕೈಹಿಡಿದು ನಡೆಯಿಸುವುದು. ಹೀಗೆ ನೋಡಿದರೆ, ಷಟ್ಪದಿಗಳನ್ನು ಹುಟ್ಟಿಸಬಲ್ಲ, ಎಂದರೆ ಅವುಗಳನ್ನು ಪ್ರೇರಿಸಿರಬಹುದಾದ ವಿಶುದ್ಧ ಸಂಸ್ಕೃತ ಬಂಧಗಳಾವುವಿವೆ? ಇದನ್ನು ತೋರಿಸಿಕೊಡದೆ, ಸಂಸ್ಕೃತದ ಅಕ್ಷರ ಗಣದಿಂದ (ಮಾತ್ರಾ ಗಣದಿಂದಲೂ ಅಲ್ಲ!) ಕನ್ನಡ ಷಟ್ಪದಿಗಳು ಹುಟ್ಟಿದುವೆಂಬ ಮಾತನ್ನು ಒಪ್ಪಲು ನನ್ನ ಮನಸ್ಸು ಒಡಂಬಡುವುದಿಲ್ಲ. ಆರು ಪಾದದ ಸಂಸ್ಕೃತ ಬಂಧವಂತೂ ಇಲ್ಲವೇ ಇಲ್ಲವೆಂದು ಹೇಳಬಹುದು. ಬಂಧದ ಗತಿಯ ದೃಷ್ಟಿಯಿಂದಾದರೂ ಸಮಾನ ಸ್ವಭಾವದ ವೃತ್ತವಿದೆಯೋ ನೋಡುವ:

ಈ ದೃಷ್ಟಿಯಿಂದ ಪರಿಶೀಲಿಸಿದರೆ ಸಂಸ್ಕೃತದ ಅಕ್ಷರ ಗಣಗಳಿಗೆ ಒಳಪಡುವ ಕೆಲ ವೃತ್ತಗಳು, ಷಟ್ಪದಿಗಳ ಗಣ ಬಂಧಕ್ಕೂ ಹೊಂದುವಂತಿವೆಯೆಂಬುದು ಕಂಡು ಬರುವುದು. **ವನಮಂಜರಿ**ಗೆ ನಾಲ್ಕು ಮಾತ್ರೆಯ ಷಟ್ಪದೀ ಗಣವೂ, ಮಾಲಾ ವೃತ್ತಗಳೊಳಗೆ ಸೇರಿದ **ಲಲಿತ**ಕ್ಕೆ ಐದು ಮಾತ್ರೆಯ ಷಟ್ಪದೀ ಗಣವೂ, **ತರಳ, ಮಲ್ಲಿಕಾಮಾಲೆ**ಗಳಿಗೆ ೩+೪ ಮಾತ್ರೆಗಳ ಷಟ್ಪದೀ ಗಣವೂ ಕೂಡಿಬರುವುದು. ಆದುದರಿಂದ, ವನಮಂಜರಿಯಿಂದ **ಶರ ಪರಿವರ್ಧಿನಿ**ಗಳೂ, ಲಲಿತದಿಂದ **ಕುಸುಮ ವಾರ್ಧಿಕ**ಗಳೂ, ತರಳ ಮಲ್ಲಿಕಾಮಾಲೆಗಳಿಂದ **ಭಾಮಿನಿ**ಯೂ ಜನ್ಮಿಸಿದುವೆಂದು ತೋರಬಹುದು. ಐದು ಷಟ್ಪದಿಗಳಿಗೆ ಹೀಗೆ ಆಕರವು ದೊರೆಯುವಾಗ, ಇನ್ನೊಂದು **ಭೋಗ** ಷಟ್ಪದಿಗೂ ಯಾವುದಾದರೂ ಸಂಸ್ಕೃತ ಮಾತೃಕೆ ಇದ್ದಿರಬಹುದೆಂದು ಅನುಮಾನಿಸಿದರೆ ತಪ್ಪೆಂದಾಗಲಾರದು. ಆದರೆ ಇಲ್ಲಿ ಒಂದು ವಿಷಯವನ್ನು ನಾವು ಗಮನಿಸಬೇಕು: ನಾವು ಸಂಸ್ಕೃತ ವೃತ್ತಗಳೆಂದು ಯಾವ ವೃತ್ತಗಳನ್ನು ಹೇಳುವುದು ಸಮಂಜಸ? ಎಂದರೆ, ಸಂಸ್ಕೃತ ಕವಿಗಳು ತಮ್ಮ ಕಾವ್ಯಗಳಲ್ಲಿ ಯಾವ ಯಾವ ವೃತ್ತಗಳನ್ನು ಸ್ವತಂತ್ರ ಪರಂಪರೆಯಿಂದ ಬರೆದಿರುವರೋ, ಅವು ಮಾತ್ರ ಸಂಸ್ಕೃತ ವೃತ್ತಗಳು. ಯಾವುದಾದರೂ ದೇಶ್ಯ ಬಂಧವನ್ನು ಸಂಸ್ಕೃತ ಕವಿಗಳು ನಕಲು ತೆಗೆದರೆ—(ಕನ್ನಡ ಕವಿಗಳು 'ಶಾರ್ದೂಲ ವಿಕ್ರೀಡಿತ', 'ಕಂದ' ಮೊದಲಾದುವನ್ನು ಸಂಸ್ಕೃತದಿಂದ ಕಡ ತಂದಂತೆ)—ಅವು ಸಂಸ್ಕೃತ ವೃತ್ತಗಳಾಗಲಾರವು. ಹೀಗೆ

ವಿಚಾರಿಸಿದರೆ, ಸಂಸ್ಕೃತ ಕಾವ್ಯಗಳಲ್ಲಿ ಮೇಲೆ ಉದಾಹರಿಸಿದ ವನಮಂಜರಿ, ಲಲಿತ, ತರಳ, ಮಲ್ಲಿಕಾಮಾಲೆಗಳು ಎಷ್ಟು ಪ್ರಯೋಗಿಸಲ್ಪಟ್ಟಿವೆ? ಆ ವೃತ್ತಗಳು ಸಂಸ್ಕೃತದ ಅಕ್ಷರ ನಿಯಮಕ್ಕೆ ಒಳಪಡುವವಾದರೂ, ಅವುಗಳು ಕನ್ನಡ ಕಾವ್ಯಗಳಲ್ಲಿ ಮಾತ್ರ ವೆಂಬಂತೆ ಪ್ರಚುರವಾಗಿವೆ. ಇದರಿಂದ ಸಿದ್ಧಿಸುವುದೇನೆಂದರೆ, ಅವುಗಳನ್ನು ನಿರ್ಮಿಸಿ ದವರು ಕನ್ನಡಿಗರೇ ಆಗಿರಬೇಕು. ಸಂಸ್ಕೃತ ಛಂದಶ್ಶಾಸ್ತ್ರವು, ಶಾಸ್ತ್ರವೆಂಬ ಹೆಸರಿಗೆ ತಕ್ಕಂತೆ, ಕೇವಲ ತಾತ್ಕಾಲಿಕ ಪರಿಸ್ಥಿತಿಯ ಅಳತೆಯನ್ನು ಮಾತ್ರ ಮಾಡದೆ, ಗಣಿತ ರೀತ್ಯಾ ೨೬ ಅಕ್ಷರಗಳೊಳಗೆ ಎಷ್ಟು ಅಕ್ಷರ ವೃತ್ತಗಳು ಹುಟ್ಟಬಹುದೋ ಅವನ್ನೆಲ್ಲ ಒಳಕೊಳ್ಳುವಂತೆ ನಿರ್ಮಿತವಾಗಿದೆ. ಆ ಲಕ್ಷಣಗಳಿಗೊಳಪಟ್ಟು ನಾವಿಂದು ಎಷ್ಟೋ ಹೊಸ ವೃತ್ತಗಳನ್ನು ನಿರ್ಮಿಸಬಹುದು. ಆದರೆ, ಇಂದು ನಾವು ನಿರ್ಮಿಸಿದವು ಗಳನ್ನು ಸಂಸ್ಕೃತದ ಸ್ವಾಭಾವಿಕವಾದ ಛಂದೋಬಂಧಗಳೆಂದು ಹೇಳಲು ಸಾಧ್ಯವೆ? ಇಂಗ್ಲಿಷ್ ಭಾಷೆಯ ಪದ್ಯಗಳೂ ಕೂಡ ಸಂಸ್ಕೃತದ ಅಕ್ಷರ ವೃತ್ತಗಳಿಗೆ ಹೊಂದ ಬಹುದು; ಇದರಿಂದ ಆ ಇಂಗ್ಲಿಷ್ ಬಂಧಗಳು ಸಂಸ್ಕೃತದ ನಕಲುಗಳೆಂದು ಹೇಳ ಲಾದೀತೆ? ಸಂಸ್ಕೃತದ ಅಕ್ಷರ ವೃತ್ತ ಶಾಸ್ತ್ರವು ಕೇವಲ ಗಣಿತದ ಮೇಲೆ ಹೊಂದಿ ಕೊಂಡಿದೆ, ವ್ಯವಹಾರವನ್ನಲ್ಲ—ಎಂಬುದಕ್ಕೆ ಒಂದಕ್ಷರದವುಗಳನ್ನು ವೃತ್ತಗಳ ಸಾಲಲ್ಲಿ ಸೇರಿಸಿದುದು ಒಂದು ಸಾಕ್ಷಿ. ಅಲ್ಲದೆ, 'ಮ ಯ ರ ಸ ತ ಜ ಭ ನ'ಗಳು ವೃತ್ತಗಳ ಲಕ್ಷಣವನ್ನು ಹೇಳುವುದಕ್ಕಿರುವ ಸುಲಭೋಪಾಯವೇ ಹೊರತು, ವೃತ್ತದ ಪ್ರಕೃತಿಗೂ ಎಂದರೆ, ಹಾಡಿನ ಗತಿಗೂ ಆ ಗಣ ವಿನ್ಯಾಸಕ್ಕೂ ಏನೂ ಸಂಬಂಧವಿಲ್ಲವೆಂಬುದು ಪರಿಶೀಲನೆಗೆ ಹೊರಗಲ್ಲ.

ಉದಾ.—**ಮಂದಾಕ್ರಾಂತ**ದ ಸ್ವಾಭಾವಿಕವಾದ ಗತಿ ಹೀಗಿದೆ:—

ಕಶ್ಚಿತ್ ಕಾಂತಾ—ವಿರಹ ಗುರುಣಾ—ಸ್ವಾಧಿಕಾರಾತ್ಪ್ರಮತ್ತಃ

ಆದರೆ ಅಕ್ಷರ ಗಣ ದೃಷ್ಟಿಯಿಂದದನ್ನು ವಿಭಾಗಿಸಿದರೆ—

ಕಶ್ಚಿತ್ ಕಾಂ । ತಾ ವಿರ । ಹ ಗುರು । ಣಾ ಸ್ವಾಧಿ । ಕಾರಾತ್ಪ್ರ । ಮತ್ತಃ

ಆದರೆ, ಕನ್ನಡದ ತ್ರಿಮೂರ್ತಿ ಗಣಗಳಾಗಲಿ, ಷಟ್ಪದೀ ಗಣಗಳಾಗಲಿ, ಇಂಗ್ಲಿಷಿನ ಗಣಗಳಾಗಲಿ, ಅಥವಾ, ಸಂಸ್ಕೃತದ ಆರ್ಯಾ ಜಾತಿಯ ಮಾತ್ರಾ ಗಣ ಗಳಾಗಲಿ, ಪದ್ಯದ ಗತಿಗೇ ಆಧಾರ ಭೂತವಾಗಿವೆ. ಕಾರಣವೇನೆಂದರೆ, ಅವೆಲ್ಲ ತಾಳಕ್ಕೆ, ಎಂದರೆ ನಿಯಮಿತ ಗತಿಗೆ ಒಳಪಡುವವುಗಳು. ಆದರೆ ಸಂಸ್ಕೃತದ ಅಕ್ಷರ ವೃತ್ತಗಳು ವಿಷಮ ಗತಿಯವಾದುದರಿಂದ ಲಕ್ಷಣವನ್ನು ಗತಿಯ ದೃಷ್ಟಿಯಿಂದ ಹೇಳು ವುದು ಬಹಳ ಕಷ್ಟದ ಕೆಲಸವಾಗುತ್ತದೆ. ಅಲ್ಲದೆ, ಗುರು ಲಘುಗಳ ಕಟ್ಟುನಿಟ್ಟು. ಆದಕಾರಣ ಮ ಯ ರ ಸ ತ ಜ ಭ ನ ಗಳನ್ನು ಗಣಿತ ಶಾಸ್ತ್ರದ ಸಹಾಯದಿಂದ ನಿರ್ಮಿಸಿ ಲಕ್ಷಣವನ್ನು ಸೂತ್ರ ರೂಪವಾಗಿ ಹೇಳುವ ಪ್ರಯತ್ನ ಮಾಡಿದರೆಂಬುದು ಸ್ಪಷ್ಟವಾಗು ತ್ತದೆ. ಹೀಗೆ ಗಣಿತವನ್ನವಲಂಬಿಸಿದಾಗ ಶಾಸ್ತ್ರವು ಬಹುವ್ಯಾಪಕವಾಗಿ ಯಾರು ಯಾವ ಬಂಧವನ್ನು ನಿರ್ಮಿಸಿದರೂ, ಅದೂ ಅದರೊಳಗೆ ಸೇರಿರಲು ಸಾಧ್ಯ ವಾಗುತ್ತದೆ. ಆದರೆ, ಇಷ್ಟರಿಂದ ಸಂಸ್ಕೃತ ಪರಂಪರೆಯಿಂದ ಆ ಎಲ್ಲ ವೃತ್ತಗಳು

ಹುಟ್ಟಿದುವೆಂದು ಹೇಳಲಾಗುವುದಿಲ್ಲ. ಮತ್ತು ಸಂಸ್ಕೃತವು ಹಿಂದುಸ್ಥಾನದ ಸಾರ್ವತ್ರಿಕ ಭಾಷೆಯಾಗಿದ್ದುದರಿಂದ, ಅದರ ಸಾಹಿತ್ಯವು ಅನೇಕ ದೇಶ್ಯ ವಸ್ತುಗಳಿಂದ ಪುಷ್ಟವಾಗಿದೆ. ಈ ಕಾರಣಗಳಿಂದ 'ವನಮಂಜರಿ' ಮೊದಲಾದ ವೃತ್ತಗಳು ಕನ್ನಡ ದೇಶದಲ್ಲಿಯೇ ಹುಟ್ಟಿ ಬೆಳೆದುವೆಂದು ಹೇಳಬೇಕಾಗುತ್ತದೆ. ಷಟ್ಪದಿಗಳಿಗೂ ಅವಕ್ಕೂ ಇರುವ ಸಾಮ್ಯದ ರಹಸ್ಯವು ಆಗ ಹೊರಬೀಳುವುದು. ಯಾವ ಕನ್ನಡದ ಹಾಡಿನ ಗತಿ—ಗಣ ಗತಿ—ಷಟ್ಪದಿಗಳ ನಿರ್ಮಾಣಕ್ಕೆ ಕಾರಣವಾಯಿತೋ, ಅದೇ ಪ್ರಾಕೃತಿಕ ಗತಿಯಿಂದ ಆ ವೃತ್ತಗಳು ನಿರ್ಮಿತವಾದುವು. ಸಂಸ್ಕೃತದ ಅಕ್ಷರ ವೃತ್ತಗಳ ಸುಶ್ಲಿಷ್ಟತೆಗೆ ಮನಸೋತ ಕನ್ನಡಿಗರು ತಮ್ಮ 'ಜಾತಿ' ಬಂಧಗಳಿಗೆ ಬಿಗುಹನ್ನು ಕೊಟ್ಟು ಆ ಬಂಧಗಳನ್ನು ತಮ್ಮ ಕಾವ್ಯಗಳಲ್ಲಿ ಸೇರಿಸುತ್ತಬಂದರು. ಪರಿಣಾಮ ವಾಗಿ, ಸಂಸ್ಕೃತದ ಅಕ್ಷರ ವೃತ್ತಗಳ ಸಂಖ್ಯೆ ಬೆಳೆಯುತ್ತ ಬಂತು. ಈ ಬಂಧ ಗೌರವ ಕೊಡುವ ಪರಂಪರೆ ಸುಮಾರು ಒಂದು ಸಾವಿರ ವರ್ಷಗಳಿಗೂ ಮಿಕ್ಕಿ ನಡೆಯಿತೆಂದು ಹೇಳಬಹುದು. ಇದಕ್ಕೆ ಷಡಕ್ಷರಿಯೂ ಅಪವಾದವಲ್ಲ. ಕನ್ನಡದ ಉತ್ಸಾಹ ಜಾತಿಯನ್ನು ಅಕ್ಷರವೃತ್ತವಾಗಿ ಮಾರ್ಪಡಿಸಿದ ಶ್ರೇಯಸ್ಸು ಬಹುಶಃ ಅವನಿಗೆ ಸಲ್ಲತಕ್ಕುದು. ಮುದ್ರಿತವಾದ ಗ್ರಂಥಗಳಲ್ಲಿ ಅದಕ್ಕೀಗ ಉತ್ಸಾಹವೃತ್ತವೆಂಬ ಹೆಸರಿದೆ. ಉದಾ.—

ಯೋಗ ಚೂರ್ಣ ಯೋಗವರ್ತಿಯಂ ಕರಾಗ್ರದಲ್ಲಿ ತಾ |
ಳ್ದಾಗಳಂತೆ ಬಂದು ವಿಶ್ರಮುಳ್ಳರಾಲಯಂಗಳಂ ||—ಇತ್ಯಾದಿ.

ಇನ್ನೊಂದು ನಿದರ್ಶನ.—

ಶ್ರೀಮದಾತ್ಮನೇ ಗುಣೈಕ ಸಿಂಧವೇ ನಮಃ ಶಿವಾಯ ||

ಇತ್ಯಾದಿಯಾಗಿ ಶ್ರೀ ಶಂಕರಾಚಾರ್ಯ ಕೃತವೆಂದು ಒಂದು ಸ್ತೋತ್ರವಿದೆ. (ಆದರೆ ಶಂಕರಾಚಾರ್ಯರ ಹೆಸರಲ್ಲಿರುವವೆಲ್ಲ ಅವರ ರಚನೆಗಳಲ್ಲವೆಂದು ವಿದ್ವಾಂಸರು ಹೇಳುತ್ತಾರೆ). ಇದು ಮಾತ್ರಾ ದೃಷ್ಟಿಯಿಂದ ಉತ್ಸಾಹ ರಗಳೆಯಾಗುವುದಾದರೂ ಅಕ್ಷರ ನಿಯಮಕ್ಕೆ ಸರಿಯಾಗಿ ಹೊಂದುತ್ತದೆ. ಆದರೆ, ಸಂಸ್ಕೃತದ ಅಕ್ಷರ ವೃತ್ತ ಗಳೆಲ್ಲ ಕೊನೆಯಲ್ಲಿ ಗುರುವಾಗಿವೆ ; ಒಂದು ವೇಳೆ ಅಲ್ಲಿ ಲಘುವಿದ್ದರೂ ಗುರುವೆಂದೇ ಗ್ರಹಣ. ಇಲ್ಲಿ ಹಾಗೆ ಮಾಡಲು ಸಾಧ್ಯವಿಲ್ಲ. ಏಕೆಂದರೆ, ಅದನ್ನು ದೀರ್ಘವಾಗಿ ಮಾಡಿದರೆ ಹಾಡಿನ ಹಜ್ಜೆ ತಪ್ಪುತ್ತದೆ. ಆದುದರಿಂದ, ಇದು ರಗಳೆಯನ್ನು ಅಕ್ಷರ ವೃತ್ತವಾಗಿ ಮಾಡಿದ ಪ್ರಯತ್ನವೆಂಬುದು ಸಿದ್ಧವಾಗುತ್ತದೆ. (ಅಲ್ಲದೆ, ಈ ಸ್ತೋತ್ರದಲ್ಲಿ ಕನ್ನಡದಂತೆ ದ್ವಿತೀಯಾಕ್ಷರ ಪ್ರಾಸವು ತಪ್ಪದೆ ಬಂದಿದೆ. (ಇಲ್ಲಿ ಆನುಷಂಗಿಕವಾಗಿ ಒಂದು ವಿಚಾರ : ಸಂಸ್ಕೃತದ ಅಕ್ಷರ ವೃತ್ತಗಳು ವ್ಯವಹಾರ ದೃಷ್ಟಿಯಿಂದ ಗಣಿ ಸಲ್ಪಟ್ಟವುಗಳಲ್ಲವೆಂಬುದಕ್ಕೆ ಮತ್ತೊಂದು ಆಧಾರ ದೊರಕುತ್ತದೆ. ಕೊನೆಯಲ್ಲಿ ಲಘುವಿದ್ದ ಕೆಲವು ವೃತ್ತಗಳನ್ನು ವ್ಯವಹಾರ ದೃಷ್ಟಿಯಿಂದ ಕಳೆಯಬೇಕಾಗುತ್ತದೆ. ಆಗ ವೃತ್ತ ಸಂಖ್ಯೆ ಈಗಿನಷ್ಟು ಇರಲಾರದು).

ಒಂದು ಷಟ್ಪದಿಯ ಲಕ್ಷಣವನ್ನಾದರೂ ನಾಗವರ್ಮನು ತ್ರಿಮೂರ್ತಿ ಗಣಗಳಿಂದಲೆಂದೇ ಹೇಳಿರುವನಷ್ಟೆ! ಆದುದರಿಂದ, ಒಂದು ವೇಳೆ ಷಟ್ಪದಿಯ ನಿರ್ಮಾಣಕಾಲದಲ್ಲಿಯೇ ಅದಕ್ಕೆ ಮಾತ್ರಾ ಬಂಧವು ಅನ್ವಯಿಸುತ್ತಿದ್ದರೂ, ತ್ರಿಮೂರ್ತಿಗಳಿಂದಲೇ ಅದರ ಜನ್ಮವಾಯಿತೆಂದು ಆಗಿನ ವಿದ್ವಜ್ಜನರು ತಿಳಿಯುತ್ತಿದ್ದರೆಂದು ಸ್ಪಷ್ಟವಾಗುತ್ತದೆ. ಈಗಲಾದರೂ ಆ ಅಭಿಪ್ರಾಯಕ್ಕೆ ಬೆಲೆ ಕಡಮೆಯಾಗುವ ಆಧಾರಗಳೇನು ದೊರೆತಿವೆ? ಈಗ ಪ್ರಚಾರದಲ್ಲಿರುವ ಷಟ್ಪದಿಗಳೆಲ್ಲ, ೩, ೪, ೫ ಮಾತ್ರೆಗಳ ಗಣಗಳಿಂದ ಘಟಿತವಾಗಿವೆ. ತ್ರಿಮೂರ್ತಿ ಗಣಗಳ ಒರೆಯಲ್ಲಿ ಈ ಗಣಗಳನ್ನು ತಿಕ್ಕಿನೋಡಿದರೆ, ಷಟ್ಪದಿಗಳ ಮೂರು ಮಾತ್ರೆಯ ಗಣಗಳೆಲ್ಲ ಯಾವುದಾದರೊಂದು ಬ್ರಹ್ಮಗಣ, ನಾಲ್ಕು ಮಾತ್ರೆಯವೆಲ್ಲ ಯಾವುದಾದರೊಂದು ಬ್ರಹ್ಮ, ಅಥವಾ ವಿಷ್ಣುಗಣ, ಐದು ಮಾತ್ರೆಯವೆಲ್ಲ ಯಾವುದಾದರೊಂದು ವಿಷ್ಣು, ಅಥವಾ ರುದ್ರಗಣ ಎಂದು ಸ್ಪಷ್ಟವಾಗುವುದು. ತ್ರಿಮೂರ್ತಿಗಳಿಗೆ ಬಾಹಿರವಾದ ಯಾವ ಗಣವೂ ಯಾವ ಷಟ್ಪದಿಯಲ್ಲಿಯೂ ಇಲ್ಲ. ಇದೇನೋ ಕಾಕತಾಲವಾಗಿ ಬಂದಿರಬಹುದೆಂದು ಹೇಳುವವರಿಗೆ, ಆ ಗಣಗಳ ಸ್ವರೂಪವನ್ನು ಚೆನ್ನಾಗಿ ವಿಮರ್ಶಿಸಬೇಕೆಂದು ನಾನು ಬಿನ್ನಯಿಸಿಕೊಳ್ಳುತ್ತೇನೆ. ತ್ರಿಮೂರ್ತಿ ಗಣಗಳ ಜೀವವೇ ಈ ೩, ೪, ೫ ಮಾತ್ರೆಯ ಗಣಗಳಿಗೂ ಜೀವವಾಗಿದೆ. ಪ್ರಥಮ ಲಘ್ವನಂತರ ಗುರು ನಿಷೇಧವೇ ಈ ಜೀವ. ಅಲ್ಲದೆ, ಗಣಾಂತದಲ್ಲಿ ಸಾಮಾನ್ಯವಾದ ಯತಿ, ಈ ವಿಶುದ್ಧ ಮಾತ್ರಾ ಗಣಗಳಲ್ಲಿಯೂ ತ್ರಿಮೂರ್ತಿ ಗಣದಷ್ಟು ನಿರ್ಬಂಧವಿಲ್ಲದಿದ್ದರೂ, ಅವಶ್ಯವೆಂಬುದು ತೋರಿಬರುವುದು. ಅಲ್ಲದೆ, ಬ್ರಹ್ಮ ವಿಷ್ಣು ರುದ್ರಗಳ ಆದಿ ಗಣಗಳಲ್ಲಿ ಅನುಕ್ರಮವಾಗಿ ೪, ೬, ೮ ಮಾತ್ರೆಗಳು ಬಂದರೂ, ಅಂತದ ಗಣಗಳಲ್ಲಿ ಅನುಕ್ರಮವಾಗಿ ೩, ೪, ೫ ಮಾತ್ರೆಗಳೇ ಇರುತ್ತವೆ. ಇದರಿಂದ ಷಟ್ಪದಿಗಳ ಗಣವನ್ನು ಬೇರೆಲ್ಲಿಯೂ ಹುಡುಕದೆ ಅಲ್ಲಿಂದಲೇ ತೆಗೆದುಕೊಂಡರೆಂದು ಹೇಳುವುದು ಸಮಂಜಸವಾಗುತ್ತದೆ.

ಆದರೆ ಕನ್ನಡ ಕವಿಗಳ ಒಲವು ವಿಶುದ್ಧ ತ್ರಿಮೂರ್ತಿಗಳನ್ನು ಬಿಟ್ಟು ವಿಶುದ್ಧ ಮಾತ್ರಾ ಗಣಗಳ ಕಡೆಗೆ ಹರಿಯತೊಡಗಿದ ಕಾರಣವನ್ನು ತಿಳಿಯಬೇಕಾದರೆ, ಆ ಕಾಲದ ಕನ್ನಡ ಸಾಹಿತ್ಯದ ಅವಸ್ಥೆಯನ್ನು ಪರಿಶೀಲಿಸಬೇಕು. ಮೊದಮೊದಲು ಕನ್ನಡದಲ್ಲಿ ಸಂಸ್ಕೃತದ ಪ್ರಭಾವಕ್ಕಿಂತ ಪ್ರಾಕೃತದ ಪ್ರಭಾವವೇ ಹೆಚ್ಚಾಗಿತ್ತೆಂಬುದಕ್ಕೆ, ಅಪಾರವಾಗಿ ಬಳಕೆಗೆ ಬಂದ ಅಪಭ್ರಂಶ ಪದಗಳೂ, ಪ್ರಾಕೃತದಲ್ಲಿ ಮುಖ್ಯವಾದ 'ಸ್ಕಂಧ' ಜಾತಿಯ ಪ್ರಾಬಲ್ಯವೂ ನಿದರ್ಶನ. ಅಲ್ಲದೆ, ಆ ಕಾಲದಲ್ಲಿ ಕನ್ನಡ ನಾಡಿನಲ್ಲಿ ಜೈನರ ಪ್ರಾಬಲ್ಯವು ವಿಶೇಷವಾಗಿತ್ತು. ಅವರಿಗೆ ಸಂಸ್ಕೃತಕ್ಕಿಂತ ಹೆಚ್ಚಾಗಿ ಪ್ರಾಕೃತವೇ ಆದರಣೀಯವಾಗಿತ್ತು. ಇದರಿಂದ, ಎಂದರೆ ಪ್ರಾಕೃತದ ಸಂಸರ್ಗದಿಂದ, ಕನ್ನಡಿಗರಿಗೆ ವಿಶುದ್ಧ ಮಾತ್ರಾ ಗಣಗಳ ಸುದೃಢತೆಯು ವ್ಯಕ್ತವಾಗ ತೊಡಗಿ, ಶಿಥಿಲವಾದ ತ್ರಿಮೂರ್ತಿಗಳನ್ನು ಸುದೃಢ ಬಂಧಕ್ಕೇ ಅಳವಡಿಸುವ ಪ್ರವೃತ್ತಿಯುಂಟಾಗಿರಬೇಕು. ಇದಕ್ಕೆ ಅಕ್ಕರಿಕೆಯೇ ಸಾಕ್ಷಿ. ನಾಗವರ್ಮನು ಚೌಪದಿ, ಮದನವತಿ, ಉತ್ಸಾಹ, ಷಟ್ಪದಿಗಳಿಗೆ, ಕನ್ನಡದ ಪೂರ್ವದ ಛಂದಶ್ಶಾಸ್ತ್ರಕಾರರ ಮತವನ್ನನುಸರಿಸಿ, (ಜಯದೇವಾಕ್ಷರಥವಳರು 'ಜಾತಿ'ಚ್ಛಂದಗಳಲ್ಲಿ ಪೂರ್ವ ಶಾಸ್ತ್ರಕಾರರೆಂದು

ನಾಗವರ್ಮನ ಮಾತಿನಿಂದ ಗೊತ್ತಾಗುತ್ತದೆ.) ತ್ರಿಮೂರ್ತಿ ಗಣಗಳಿಂದಲೇ ಲಕ್ಷಣವನ್ನು ಹೇಳಿದರೂ, ಬಂಧವನ್ನು ಮಾತ್ರ ಮಾತ್ರಾ ಬಂಧಕ್ಕೆ ಸರಿಯಾಗುವಂತೆ ಬರೆದಿರುವುದರ ಕಾರಣವು ಆಗ ನಮಗೆ ಹೊಳೆಯುವುದು. ಆದುದರಿಂದ, ಅವನು ಮಾತ್ರಾ ಬಂಧಕ್ಕೂ ಸರಿಬರುವಂತೆ ಹೇಳಿದ ಜಾತಿಗಳಲ್ಲಿ ಕೆಲವಾದರೂ (ಉದಾ.— ಚೌಪದಿ, ಉತ್ಸಾಹ.) ಮೊದಲು ಅಕ್ಕರಗಳಂತೆ ಶಿಥಿಲ ಬಂಧವನ್ನೇ ಹೊಂದಿದ್ದುವೆಂದೂ, ನಾಗವರ್ಮನೋ ಅವನ ಸಮಾನ ಧರ್ಮಿಗಳೋ, ಅವುಗಳನ್ನು ಮಾತ್ರಾ ಬಂಧಕ್ಕೆ ಹೊಂದಿಸಿದರೆಂದೂ ಹೇಳಬೇಕಾಗುತ್ತದೆ. ಇದರಂತೆಯೇ ಷಟ್ಪದಿಗಳ ಮೂಲವೂ ಆ ಜಾತಿಗಳಲ್ಲಿಯೇ ಅಡಗಿದೆಯೆಂಬುದು ಆಗ ಸ್ಪಷ್ಟವಾಗದಿರದು. ತಾತ್ಪರ್ಯವೇನೆಂದರೆ, ಷಟ್ಪದಿಗಳಿಗೆ ತ್ರಿಮೂರ್ತಿ ಗಣಗಳೇ ಮೂಲ; ಆ ಗಣಗಳನ್ನು ಸಂಸ್ಕೃತದವೆಂದು ಸಿದ್ಧಪಡಿಸದೆ, ಷಟ್ಪದಿಗಳೂ ಸಂಸ್ಕೃತದಿಂದ ಬಂದುವೆಂದು ಹೇಳುವುದು ತಪ್ಪಾಗುವುದು.

ಆರು ಷಟ್ಪದಿಗಳ ಪ್ರಥಮ ಪಾದದಲ್ಲಿ ಅನುಕ್ರಮವಾಗಿ ೮, ೧೦, ೧೨, ೧೪, ೧೬, ೨೦ ಮಾತ್ರೆಗಳಿರುವುವು. ಅವುಗಳಲ್ಲಿ ಐದನೆಯದರ ವರೆಗೆ ಒಂದರಿಂದ ಒಂದಕ್ಕೆ ಎರಡೆರಡೇ ಮಾತ್ರೆಗಳ ವ್ಯತ್ಯಾಸವಿರುವಾಗ, ಆರನೆಯ ಷಟ್ಪದಿಗೆ ೧೮ ಮಾತ್ರೆಯಿದ್ದು ೨೦ ಮಾತ್ರೆಯ ಷಟ್ಪದಿ ಏಳನೆಯದಾಗಬೇಕಿತ್ತು; ಹೀಗೇಕಾಯಿತು ? ಎಂಬುದೊಂದು ಪ್ರಚಲಿತ ಪ್ರಶ್ನೆ. ಆದರೆ ಷಟ್ಪದಿಗಳನ್ನು ಒಂದರಿಂದೊಂದಕ್ಕೆ ಇರುವ ಮಾತ್ರಾಧಿಕ್ಯದ ದೃಷ್ಟಿಯಿಂದಲೇ ಬೇರ್ಪಡಿಸಿ ರಚಿಸಿದುದಲ್ಲ. ಗಣಗಳ ದೃಷ್ಟಿಯಿಂದಲೇ ಅವುಗಳನ್ನು ವಿಭಾಗಿಸಿದರು. ಆದರೆ, ಈಯೊಂದು ಶಂಕೆಯು ನಮ್ಮಲ್ಲಿ ಹುಟ್ಟಲು ಕಾರಣವೇನೆಂದರೆ, ಸಂಸ್ಕೃತದ ಅಕ್ಷರ ವೃತ್ತಗಳಲ್ಲಿ ಹೀಗೆ ಒಂದರಿಂದ ೨೬ರ ವರೆಗೆ ಒಂದೇ ಒಂದು ಸಂಖ್ಯೆಯನ್ನು ಬಿಡದೆ ವೃತ್ತ ನಿರ್ಮಾಣ ಮಾಡಿದುದನ್ನು ಛಂದಶ್ಶಾಸ್ತ್ರದಲ್ಲಿ ಓದಿದುದೇ ಆಗಿದೆ. ಆದರೆ ಈ ಪ್ರಕ್ರಮವು ಮಾತ್ರಾ ಬಂಧಗಳಿಗೆ ಹೊಂದಬೇಕೆಂದಿಲ್ಲ. ಸಂಸ್ಕೃತದ ಮಾತ್ರಾ ಬಂಧಗಳಲ್ಲಾದರೂ ಹೀಗೆ ಅನುಕ್ರಮವಾದ ಮಾತ್ರಾ ವೃದ್ಧಿ ನಮಗೆ ತೋರುತ್ತದೆಯೆ ? ಆದುದರಿಂದ ಈ ಶಂಕೆಗೆ ಈ ದೃಷ್ಟಿಯಿಂದ ಆಧಾರವೇ ದುರ್ಬಲವಾಗುತ್ತದೆ. ಅಲ್ಲದೆ, ಭಾಮಿನಿಯೊಂದನ್ನು ಬಿಟ್ಟರೆ, ಉಳಿದ ಐದು ಷಟ್ಪದಿಗಳೂ ಯಾವುದಾದರೊಂದೇ ವರ್ಗದ ಮಾತ್ರಾ ಗಣವುಳ್ಳುವು. ಭಾಮಿನಿಯಲ್ಲಿ ಮಾತ್ರ ೩+೪ರ ಮಿಶ್ರ ಬಂಧವಿದೆ. ಹೀಗೆ ಪರಸ್ಪರ ಮಿಶ್ರಮಾಡಿ ನೋಡಿದರೆ, ಮೂರು ಮಿಶ್ರ ಷಟ್ಪದಿಗಳಾಗಬೇಕಿತ್ತೆಂದು ತೋರುವುದು. ಇರುವ ಒಂದನ್ನು (ಭಾಮಿನಿ) ಬಿಟ್ಟು ಉಳಿದ ಎರಡು ೩+೫ (ಅಥವಾ ೫+೩); ೪+೫ (ಅಥವಾ ೫+೪). ಇವುಗಳಲ್ಲಿ ಮೊದಲನೆಯದು ೪+೪ ಸೇರಿದ ಜಾತಿಗೆ ಗತಾರ್ಥವನ್ನು ತರುವುದರಿಂದ ಹುಟ್ಟಲಿಲ್ಲವೆಂಬುದು ಸ್ಪಷ್ಟ. ಆದರೆ ೫+೪ರ ಷಟ್ಪದಿಯೇಕೆ ಹುಟ್ಟಲಿಲ್ಲವೆಂಬ ಪ್ರಶ್ನೆ ಮಾತ್ರ ಉಳಿಯುತ್ತದೆ. ಈಗಲಿದು ೧೮ ಮಾತ್ರೆಯ ಷಟ್ಪದಿಯೇಕೆ ಹುಟ್ಟಲಿಲ್ಲವೆಂಬ ಪ್ರಶ್ನೆಯೇ ಆಗಿಬಿಡುವುದೆಂದು ತಿಳಿದುಬಾರದಿರದು. ಇಂತಹ ಒಂದು ಷಟ್ಪದಿ ಆಗಲು ಸಾಧ್ಯವಿದೆಯೆಂದೂ, ಅದು ಖಂಡ ಜಾತಿ ತ್ರಿಪುಟ ತಾಳಕ್ಕೆ ಸೇರುತ್ತದೆಂದೂ, ಮಹನೀಯರೊಬ್ಬರು ಒಂದು ಷಟ್ಪದಿಯ ರಚನೆ ಮಾಡಿ ಪ್ರಸಿದ್ಧಿಸಿರುವರು. ಆದರೆ,

ಖಂಡ ಜಾತಿ ತ್ರಿಪುಟವು ರೂಢಿಗೆ ಬಂದ ತಾಳವಲ್ಲ. ಕಾರಣವೇನೆಂದರೆ, ಅದರ ಗತಿ ಬಹಳ ವಿಷಮವಾಗಿರುವುದರಿಂದ ಸಾಮಾನ್ಯ ಜನತೆಯ ಸ್ವಾಧೀನಕ್ಕೆ ಬರುವಂತಹದಲ್ಲ. ಸ್ವಲ್ಪ ಹೆಚ್ಚು ತಾಳ ಜ್ಞಾನವಿರುವವರು ಬೇರೆ ತಾಳಗಳಲ್ಲಿ ಹಾಡಬಹುದಾದ ಬಂಧಗಳಾದರೂ, ಅವು ಏಕತಾಳಕ್ಕೆ ಅಳವಡುವಂತಿದ್ದರೆ ಮಾತ್ರ ಎಲ್ಲರಿಗೂ ಅವು ಸುಲಭಗ್ರಾಹ್ಯವಾಗುವುವು. ಅರ್ಥ ಪ್ರಧಾನವಾದ ಸಾಹಿತ್ಯದಲ್ಲಿ ಸುಲಭ ತಾಳಗಳು ಮಾತ್ರ ಗ್ರಾಹ್ಯವಾದುವುಗಳು. ಕರ್ನಾಟಕ ಸಂಗೀತದಂತೆ ಏಕತಾಳದ ಐದು ಜಾತಿಗಳಲ್ಲಿ ಯಾವುದಕ್ಕೂ ಏಳಕ್ಕಿಂತ ಹೆಚ್ಚು ಮಾತ್ರೆಗಳಿಲ್ಲ. ಆದುದರಿಂದ ಅದಕ್ಕಿಂತ ಹೆಚ್ಚು ಮಾತ್ರೆಗಳಿದ್ದ ತಾಳದ ಆವರ್ತವುಳ್ಳ ಬಂಧಗಳು ಕಾವ್ಯಗಳ ಛಂದೋಬಂಧಕ್ಕೆ ಉಪಯುಕ್ತಗಳಲ್ಲವೆಂದು ಸಿದ್ಧವಾಗುತ್ತದೆ. ಇದರಿಂದ ಆ ಇನ್ನೊಂದು ಜಾತಿಯ ಷಟ್ಪದಿ ಹುಟ್ಟಲಿಲ್ಲ.

ಕನ್ನಡದ ಹಳೆಯ ಬಂಧಗಳಲ್ಲಿ **ರಗಳೆ** ಎಂಬ ಹೆಸರುಳ್ಳವೂ ಕೆಲವಿವೆ. ಇದಕ್ಕೆ ಗಣ ನಿಯಮವಿಲ್ಲ; ಇದು ಮಾತ್ರವಲ್ಲ, ಅದನ್ನುಲ್ಲಂಘಿಸುವುದೇ ಒಂದು ಚಂದವಾಗಿತ್ತು. ಕಾದಂಬರಿ, ಪಂಪ ಭಾರತಗಳ ರಗಳೆಗಳು ಇದಕ್ಕೆ ಸಾಕ್ಷಿ. ಪಾದವಿಂತಿಷ್ಟೇ ಎಂಬ ನಿಯಮವಿಲ್ಲದಿರುವುದು ಮಾತ್ರ ಇದರ ಮುಖ್ಯ ಲಕ್ಷಣವಲ್ಲ; ಉಳಿದ ಹಾಡುಗಳಂತೆ ಪಾದದ ಕೊನೆಯಲ್ಲಿ ಅಪೂರ್ಣವಾದ ತಾಲ ಖಂಡವಿಲ್ಲದೆ ಪೂರ್ಣ ಖಂಡವಿರುವುದೂ ಇದರ ಸ್ವಭಾವ. ಆದುದರಿಂದ, ವಿರಾಮವಿಲ್ಲದೆ ಪಾದಾಂತದಲ್ಲಿ ಆಲಾಪ ಮಾಡದೆ ಇದನ್ನು ಹಾಡಬೇಕಾಗುತ್ತದೆ. ಇದು ಸಂಸ್ಕೃತದಿಂದ ಬಂತೋ, ಸ್ವತಂತ್ರವೋ, ನನ್ನ ವಿಚಾರವು ಸಾಲದು. ಅಂತೂ, ಮಾತ್ರೆಗಳ ಲೆಕ್ಕವು ಕನ್ನಡದಲ್ಲಿ ಆರಂಭವಾದ ಮೇಲೆಯೇ ಇದರ ಸೃಷ್ಟಿಯಾಯಿತೆಂಬುದು ಸ್ಪಷ್ಟ. 'ರಗಳೆ' ಎಂಬುದು 'ರಘಟಾ' ಎಂಬುದರ ತದ್ಭವವಂತೆ. ಈ ಶಬ್ದವು ರಘ್—ಎಂದರೆ 'ಚಲಿಸು' ಎಂಬ ಧಾತು; ಲಘಟ್—ಎಂದರೆ 'ಗಾಳಿ' ಎಂಬ ಶಬ್ದದಿಂದ ಹುಟ್ಟಿರಬಹುದೆಂದು ತೋರುತ್ತದೆ. ಗಾಳಿಯಂತೆ ನಿಲ್ಲದೆ ಸ್ವಚ್ಛಂದವಾಗಿ ಓಡುವ ಬಂಧವೆಂಬ ಅರ್ಥವು ಇದಕ್ಕೆ ಸರಿಯಾಗಿ ಹೊಂದುತ್ತದೆ. (ಕಾಲಾಂತರದಲ್ಲಿ ಈ ರಗಳೆಗಳಿಗೂ ೩, ೪, ೫ ಮಾತ್ರೆಯ ಗಣಗಳ ಸಮನ್ವಯವಾಗಿ ಅವು ಅನುಕ್ರಮದಿಂದ ಉತ್ಸಾಹ, ಮಂದಾನಿಲ, ಲಲಿತ—ಎಂಬ ಹೆಸರುಗಳನ್ನು ಪಡೆದುವು. ಶಿಥಿಲ ಬಂಧಗಳು ಹೇಗೆ ಕನ್ನಡದಲ್ಲಿ ಕ್ಲಿಷ್ಟವಾಗುತ್ತ ಹೋದುವೆಂಬುದಕ್ಕೆ ಇದೂ ಒಂದು ಉತ್ತಮ ನಿದರ್ಶನ.)

ಇವುಗಳಲ್ಲದೆ, **ಸಾಂಗತ್ಯ** ಎಂಬ ಹೆಸರಿನ ಬಂಧಗಳಲ್ಲಿ ಹೇರಳ ಕಾವ್ಯಗಳು ಕನ್ನಡದಲ್ಲಿವೆ. ನಾಗವರ್ಮನ ಕೃತಿಯಲ್ಲಿ ಈ ಬಂಧದ ಉಲ್ಲೇಖವಿಲ್ಲದಿದ್ದರೂ, ಇದರ ರಚನೆ ತ್ರಿಮೂರ್ತಿಗಳಿಂದಲೇ ಆಗಿದೆ. ಉದಾ.—

ಸಿದ್ಧರ । ಸತತ ವಿ । ಶುದ್ಧರ । ಬೋಧ ಸ ।
ಮೃದ್ಧರ । ನೆನೆದು ನಾ । ನೀಗ ॥
ಸಿದ್ಧ ರ । ಸದೊಳು ಲೋ । ಹವನದ್ದಿ । ದಂತಾತ್ಮ ।
ಸಿದ್ಧಿಯ । ಪಡೆವೆನಿ । ನ್ನೇನು ॥

ವಿಷಮ ಪಾದಗಳಲ್ಲಿ ನಾಲ್ಕು ವಿಷ್ಣು ಗಣಗಳೂ, ಸಮ ಪಾದಗಳಲ್ಲಿ ಎರಡು ವಿಷ್ಣುಗಣಗಳ ಅನಂತರ ಒಂದು ಬ್ರಹ್ಮಗಣವೂ ಇದ್ದರೆ ಸಾಂಗತ್ಯವಾಗುತ್ತದೆ. ತ್ರಿಮೂರ್ತಿ ಗಣಗಳನ್ನು ಬಿಟ್ಟರೆ ಇದಕ್ಕೆ ಸಮಂಜಸವಾದ ಲಕ್ಷಣವನ್ನು ಹೇಳಲು ಸಾಧ್ಯವೇ ಇಲ್ಲ. 'ಕನ್ನಡ ಕೈಪಿಡಿ'ಯಲ್ಲಿ ಮಾತ್ರೆಗಳ ಲೆಕ್ಕದಿಂದ ಇದರ ಲಕ್ಷಣವನ್ನು ಹೇಳುವ ಪ್ರಯತ್ನ ಮಾಡಲಾಗಿದೆ; ಆದರೆ ಅದು ಸಿದ್ಧಿಸಲಿಲ್ಲ, ಸಿದ್ಧಿಸುವಂತೆಯೂ ಇಲ್ಲ; ಇರಲಿ. ಮೇಲಿನ ಲಕ್ಷಣವೇ ಇದಕ್ಕೆ ಸಮಂಜಸವಾದುದಾದರೂ ಕವಿಗಳು ಕೆಲವೆಡೆ ವಿಷ್ಣುವಿನ ಬದಲಾಗಿ ಬ್ರಹ್ಮಗಣವನ್ನಿಟ್ಟಿರುವುದು ಕಂಡು ಬರುತ್ತದೆ; ಆಗ ಅಲ್ಲಿ ವಿಷ್ಣುಗಣದಷ್ಟೇ ಕಾಲಯಾಪನೆ ಮಾಡಿ ಓದಬೇಕಾಗುತ್ತದೆ. ಆದರೆ ಇಂತಹ ದೋಷಗಳು 'ಭರತೇಶ ವೈಭವ'ದಂತಹ ಹಳೆಯ ಸಾಂಗತ್ಯ ಗ್ರಂಥಗಳಲ್ಲಿ ಅಲ್ಲಲ್ಲಿ ಒಂದೊಂದಿದ್ದರೆ, ಹೊನ್ನಮ್ಮನ 'ಹದಿಬದೆಯ ಧರ್ಮ'ದಂತಹ ಅನಂತರ ಕಾಲೀನ ಸಾಂಗತ್ಯ ಕಾವ್ಯಗಳಲ್ಲಿ ಮೆಟ್ಟು ಮೆಟ್ಟಿಗೆ ಈ ದೋಷವಿದೆ. ತ್ರಿಮೂರ್ತಿ ಗಣದ ಸ್ವರೂಪ ವಿಸ್ಮೃತಿ ದಿನ ದಿನಕ್ಕಾಗಿ, ಕೊನೆಗೆ ತಾಳಕ್ಕೆ ತಕ್ಕಂತೆ, ಬೇಕಾದಲ್ಲಿ ಎಳೆಯಬಹುದೆಂಬ ಅಭಿಪ್ರಾಯದಿಂದ ಹಾಗೆ ಬಂತೆಂಬುದು ಸ್ಪಷ್ಟ. ಈ ಸಾಂಗತ್ಯದಲ್ಲಿ ಇನ್ನೊಂದು ಜಾತಿ ಇದೆ. ಇದರಲ್ಲಿ ಸಮ ಪಾದಗಳ ಕೊನೆಯ ಬ್ರಹ್ಮ ಗಣಕ್ಕೆ ಬದಲಾಗಿ ವಿಷ್ಣು ಗಣ ಬರುತ್ತದೆ. ಉದಾ.—ದೇವರಾಜನ ಪದ್ಯ—

ಹರಿಯೆನೆ। ಶಂಖ ಚ। ಕ್ರಾಂಕಿತ। ಶಿವನೆನೆ।
ಸುರಸಿಂಧು । ವಹವಬ್ಜ । ಭವನೆನೆ ॥
ಸರಸತಿ। ಯಾಣ್ಮನಿಂ । ದ್ರನೆನೆ ಬ । ಲಾಹಕ ।
ಪರಿವೃತ। ಮುದ್ರ ಘೂ। ರ್ಣ ಸಮುದ್ರ॥ ೦॥

ಇದರಲ್ಲಿ ಕೊನೆಗೆ ನ್ಯೂನ ಖಂಡವಿಲ್ಲದುದರಿಂದ ಹಾಡಿಗೆ ಮೊದಲಿನ ರೀತಿಯದರಷ್ಟು ಸುಗಮವಲ್ಲದುದರಿಂದಲೇ ಇದು ಅಷ್ಟು ಪ್ರಚಾರಕ್ಕೆ ಬರಲಿಲ್ಲವೆಂದು ತೋರುತ್ತದೆ.

ಕನ್ನಡದಲ್ಲೀಗ ಪ್ರಚಾರದಲ್ಲಿರುವ ಇನ್ನೆಷ್ಟೋ ಹಾಡುಗಳು ಈ ಗಣಗಳಿಂದಲೇ ಬಂದಿವೆ. ಕೆಲವು ಷಟ್ಪದಿಗಳಲ್ಲಿರುವ (೩, ೪, ೫) ಮಾತ್ರಾ ಗಣ ಬದ್ಧವಾಗಿ ರಚಿತವಾಗಿವೆ; ಇನ್ನು ಕೆಲವು ಇವೆರಡರ ಸಂಕರವಾಗಿವೆ: 'ಗೋವಿನ ಕಥೆಯ' ಬಂಧವು ಈ ಸಂಕರ ಜಾತಿಗೆ ಸೇರಿದುದು. ಅದನ್ನು ಸುವ್ಯವಸ್ಥೆಗೆ ತರಬೇಕಾದರೆ ಸಂಪೂರ್ಣವಾಗಿ ಮಾತ್ರಾ ಬಂಧಕ್ಕೆ ಸಿಲುಕುವಂತೆ ರಚಿಸಬೇಕು. ಆಗ ಅದಕ್ಕೆ ಈ ಸ್ವರೂಪವು ಬರುವುದು:—

ಧರಣಿ ಮಂಡಲ ಮಧ್ಯ ಭಾಗದಿ ।
ಮೆರೆಯುತಿಹ ಕರ್ಣಾಟ ದೇಶದಿ ।
ಇರುವ ಗೊಲ್ಲರ ಕಾಳನೆಂಬನ ।
ಪರಿಯನೆಂತಾಂ ಪೇಳ್ವೆನು ॥ ೦॥

ಈಗಿನಂತೆ ಮಿಶ್ರವಾಗಿದ್ದರೂ, ಒಂದು ವ್ಯವಸ್ಥೆ ಅದಕ್ಕಿರಬೇಕಾದರೆ, ಪ್ರತಿ ಪಾದದ ನಾಲ್ಕು ಗಣ ಸ್ಥಾನಗಳಲ್ಲಿ, ವಿಷಮ ಗಣಗಳು ಮೂರು ಮಾತ್ರೆಯ ಬ್ರಹ್ಮ

ಗಣವಾಗಿರಬೇಕು ; ಸಮ ಸ್ಥಾನದ ಗಣಗಳಲ್ಲಿ ಮಾತ್ರಾ ನಿಯಮ ರಹಿತವಾದ ಬ್ರಹ್ಮ ಗಣವಿರಬೇಕು. ನಾಲ್ಕನೆಯ ಪಾದದಲ್ಲಿ ಮಾತ್ರ ನಾಲ್ಕನೆಯ ಗಣವೊಂದು ನ್ಯೂನವಾಗಿ ಒಂದೇ ಅಕ್ಷರವಿರಬೇಕು. ಆಗಲದು ಹೀಗಾಗುವುದು :—

ಧರಣಿ । ಚಕ್ರ । ಮಧ್ಯದೊಳಗೆ ।
ಮೆರೆಯು । ವಾ ಕ । ರ್ಣಾಟ । ದಲ್ಲಿ ।
ಇರುವ । ಗೊಲ್ಲ । ಕಾಳ । ನವನ ।
ಪರಿಯ । ನೆಂತು । ಪೇಳ್ವೆನು ॥ ೦ ॥

ಹೀಗೆ ಯಾವುದೊಂದು ವ್ಯವಸ್ಥೆಯಿರುವ ಪದ್ಯವು ಗೋವಿನ ಕಥೆಯಲ್ಲಿ ಬಹಳ ಕಡಿಮೆಯಿರಬಹುದು. ಕೇವಲ ತಾಳದ ಆಧಾರದಿಂದ ಗಣ ನಿಯಮವನ್ನು ಅಲಕ್ಷಿಸಿ ಬರೆದ ಬಂಧವಿದು. ಆದರೂ ತ್ರಿಮೂರ್ತಿ ಗಣಗಳ ಪ್ರಭಾವವು ಕನ್ನಡದ ಹಾಡುಗಳಲ್ಲಿ ಹೇಗೆ ಅವ್ಯಕ್ತವಾಗಿ ನುಳಿಯುತ್ತಲೇ ಇದೆ ಎಂಬುದನ್ನು ತೋರಿಸುವುದಕ್ಕಾಗಿ ಮಾತ್ರ ಈ ಬಂಧವನ್ನು ವಿಮರ್ಶಿಸಿದೆನು.

ಇಲ್ಲಿಗೆ ಕನ್ನಡ ಬಂಧಗಳ ನನ್ನ ವಿವೇಚನೆಯನ್ನು ಮುಗಿಸಿ, ಯತಿಯ ವಿಷಯ ವಾಗಿ ನಾಲ್ಕು ಮಾತುಗಳನ್ನು ಹೇಳಿ, ಬಹಳ ಬೆಳೆದು ಬೇಸರಿಸಿದೀ ಉಪನ್ಯಾಸವನ್ನು ಮುಗಿಸುವೆನು. ಕನ್ನಡದಲ್ಲಿ 'ಯತಿ' ಇದೆಯೋ ಇಲ್ಲವೋ, ಇದ್ದರೆ ಅವಶ್ಯವೋ ಅಲ್ಲವೋ, ಅದನ್ನು ಪೂರ್ವ ಕವಿಗಳು ಉಲ್ಲಂಘಿಸಿರುವರೋ ಇಲ್ಲವೋ ಎಂಬುದೊಂದು ವಿವಾದ ಗ್ರಸ್ತ ವಿಷಯ. "ಕನ್ನಡ ಕವಿಗಳು ಪ್ರಾಸಕ್ಕೆ ಮಹತ್ವವನ್ನು ಕೊಟ್ಟು ಯತಿಯನ್ನುಲ್ಲಂಘಿಸಿದರು" ಎಂದು ನೃಪತುಂಗನು ಹೇಳುತ್ತಾನೆ. ನಾಗವರ್ಮನು ಆ ವಿಷಯದಲ್ಲಿ ಎರಡು ಮಾತುಗಳನ್ನು ಹೇಳಿದ್ದಾನೆ:—

ಯತಿಯೆಂಬುದು ಗಣ ನಿಯತಂ ।
ಪ್ರತೀತಮುಸಿರ್ದಾಣಮಂತದಂ ದಾಂಟಲ್ಕಾ ॥
ಯತಿ ಕೆಡುಗುಂ ದಾಂಟಿದೊಡಾ ।
ಯತಿ ಕಿಡೆ ಕವಿತಾಭಿಧಾನಮೇನೆಸೆದಪುದೇ ॥ ೦ ॥

ಯತಿಯೆಂಬುದು ಗಣ ನಿಯಮ ।
ಪ್ರತೀತಮೆಂದರೆಬರೊಲ್ವರಂತದನೆ ಕೆಲರ್ ॥
ಶ್ರುತಿ ಸುಭಗರ್ ಸ್ವಚ್ಛಂದಂ ।
ಯತಿಯೆಂದರ್ ಕಪಿಳ ಪಿಂಗಳಾದಿಗಳೊಲ್ಲರ್ ॥ ೦ ॥

ಇದರ ತಾತ್ಪರ್ಯ ಹೀಗೆ:—ಯತಿಯೆಂದರೆ ಗಣಗಳಲ್ಲಿ ನಿಯತವಾಗಿ ಪ್ರತೀತ ವಾಗುವ ವಿರಾಮ ಸ್ಥಳ. ಅದನ್ನು ಉಲ್ಲಂಘಿಸಬಾರದು. ಕೆಲವರು, 'ಯತಿ ಗಣನಿಯಮದಲ್ಲಿಯೇ ಅಂತರ್ಭೂತವಾದುದು ; ಎಂದರೆ, ಗಣದಿಂದ ಗಣಕ್ಕೆ ಅಕ್ಷರ ವಿಚ್ಛೇದವಿದ್ದರೆ ಸರಿ, ಬೇರೊಂದು ಯತಿಯೆಂದಿಲ್ಲ' ಎಂಬರ್ಥವನ್ನು ಹೇಳುತ್ತಾರೆ. ಅದನ್ನನುಸರಿಸಿ 'ಒಳ್ಳೆಯ ಕಿವಿಯುಳ್ಳವರು' ಕೆಲವರು ಯತಿ ಸ್ವಚ್ಛಂದ, ಎಂದರೆ

ನಿರ್ಬಂಧ ರಹಿತವೆಂದು ಹೇಳುತ್ತಾರೆ. ಇದನ್ನು ಕಪಿಳ ಪಿಂಗಳಾದಿಗಳು ಒಪ್ಪುವುದಿಲ್ಲ. ಈ ವಿಷಯದಲ್ಲಿ ಛಂದೋಂಬುಧಿಯ ಟಿಪ್ಪಣಿಯಲ್ಲಿ ವಿಸ್ತಾರವಾದ ಚರ್ಚೆಯು ಅಂತದಲ್ಲಿ ಯತಿ ಕನ್ನಡಕ್ಕೆ ಬೇಡವೆಂಬರ್ಥವು ಸೂಚಿಸಲ್ಪಟ್ಟಿದೆ; ಇದು ಮಾತ್ರವಲ್ಲ. "ದಾಂಟಿದೊಡಾ ಯತಿ ಕೆಡುಗುಂ" ಎಂಬ ಮಾತಿಗೆ ಟಿಪ್ಪಣಕಾರರು ವ್ಯಾಖ್ಯಾನ ವಾಗಿ—

ಗಂಡನನೊರ್ವಳೂರ್ವಶಿಗೆ ಗಂಗೆಗೆ ಗೋಪಿಗೆ ಕೊಟ್ಟಳೆಂದೊಡಾ।

ಇದರಲ್ಲಿ 'ಗಂಗೆಗೆ' ಎಂಬುದಕ್ಕೆ ಬದಲಾಗಿ 'ಜಾಹ್ನವಿಗೆ' ಎಂದು ಬರೆದರೆ ಉಸಿರ್ದಾಣವು ಕೆಟ್ಟುಹೋಗುವುದು—ಎಂದು ಬರೆದಿದ್ದಾರೆ. ಯತಿಯೆಂಬುದಕ್ಕೆ ಅವರಲ್ಲಿ ಏನರ್ಥವನ್ನು ಕಲ್ಪಿಸಿರುವರೋ ನಾಸರಿಯೆ. ಅಕ್ಷರ, ಗಣ, ಯತಿ ಎಂಬುವು ಎಂದೂ ಸಮಾನಾರ್ಥಕಗಳಲ್ಲ. ಅವರು ಕೊಟ್ಟ ನಿದರ್ಶನದಲ್ಲಿ ಕೆಟ್ಟುದು ಯತಿಯಲ್ಲ, ಗಣ ನಿಯಮವೇ ಕೆಟ್ಟುಹೋಗುತ್ತದೆ; ಅಲ್ಲದೆ, ಒಂದಕ್ಷರ ಹೆಚ್ಚಾಗಿ ಛಂದೋ ವರ್ಗವೇ ಬೇರಾಗುತ್ತದೆ. ಗಣ ನಿಯಮವನ್ನು ಹೇಳಿದೊಡನೆ ಅದನ್ನು ಉಲ್ಲಂಘಿಸಬಾರದೆಂದು ಬೇರೆ ಹೇಳಬೇಕಾಗಿಲ್ಲವೆಂಬುದನ್ನು ಛಂದಶ್ಶಾಸ್ತ್ರ ಕರ್ತೃಗಳು ಬಲ್ಲರು. ಯತಿ ಭಂಗವೆಂದರೆ, ಗಣವು ಸರಿಯಾಗಿದ್ದು, ಓದುವಾಗ ಅರ್ಥವು ಕೆಡುವ ರೀತಿಯಲ್ಲಿ ವಿರಾಮು ತೆಗೆದುಕೊಳ್ಳಬೇಕಾಗಿ ಬರುವ ಸಂದರ್ಭ. ಒಂದು ಗಣಕ್ಕೆ ಬದಲಾಗಿ ಮತ್ತೊಂದು ಗಣವನ್ನಿಡುವುದೇ, ಅಥವಾ ಒಂದಕ್ಷರವನ್ನು ಹೆಚ್ಚಿಸುವುದೇ ಯತಿ ಭಂಗವೆಂಬೀ ವ್ಯಾಖ್ಯೆ ಅತ್ಯಪೂರ್ವ; ಇರಲಿ.

ನಾಗವರ್ಮನ 'ಶ್ರುತಿ ಸುಭಗರ' ಪಕ್ಷದಲ್ಲಿ, ಗಣಗಳು ವಿುಶ್ರವಾಗುವುದೇ ಯತಿಭಂಗ: ಉದಾ.—ಎತ್ತಿ ಸೀರೆರೆದು ಸಲಹಿರಿ—ಎಂಬ ಕಂದ ಪಾದದಲ್ಲಿ ಪ್ರಥಮ ದ್ವಿತೀಯ ಗಣಗಳು ವಿಚ್ಛೇದವಾಗದೆ ಓದಿನ ಹಜ್ಜೆ ತಪ್ಪುತ್ತದೆ; ಹೀಗೆ ಮಾಡದಿದ್ದರೆ ಸರಿ, ಯತಿ ಭಂಗವೆಂದರೆ ಬೇರಿಲ್ಲ, ಎಂದಾಗುತ್ತದೆ. ಗಣ ಬಂಧವೆಂದರೆ ಆಯಾ ಸ್ಥಳಗಳಲ್ಲಿ ಅಕ್ಷರ ವಿಚ್ಛೇದವಾಗಬೇಕೆಂದೇ ಅರ್ಥ. ಹೀಗಿರುವಾಗ ಇದನ್ನೇ ಯತಿಯೆಂದು ಬೇರೆ ಹೇಳಬೇಕಾದ ಅವಶ್ಯವೇನು? ಎಂಬುದಕ್ಕೆ ಉತ್ತರ ತೋರುವುದಿಲ್ಲ. ಅಲ್ಲದೆ, ವಿಚ್ಛೇದವಾಗದೆ ಗಣ ಸಮ್ಮಿಶ್ರಣದಿಂದಾಗುವ ದೋಷವು ಮಾತ್ರಾ ಬಂಧಗಳಿಗೆ ಮಾತ್ರ ತಗಲುತ್ತದೆ; ಅಕ್ಷರ ಬಂಧಗಳಿಗೂ ಆ ದೋಷವನ್ನು ಅನ್ವಯಿಸಲು ಹೋದರೆ ಗಣ ಭಂಗವಾಗುತ್ತದೆ. (ಯತಿಯೆಂಬುದಕ್ಕೆ ಇಂತಹ ವ್ಯಾಖ್ಯಾನಗಳುಂಟಾಗಲು ಕಾರಣವೇನೆಂದರೆ, ವೃತ್ತಗಳಲ್ಲಿ ಯತಿ ಸ್ಥಾನ ವೆಂದು ನಿರ್ದಿಷ್ಟವಾದೆಡೆಗಳಲ್ಲಿ ಮಹಾ ಕವಿಗಳನೇಕರು, 'ದಾಂಟಿ' ಪದವಿಟ್ಟಿರುವರು; ಅವರ ಕೆಲಸ ಸಾಧುವೆಂದು ಸಾಧಾರವಾಗಿ ತೋರಿಸುವುದಕ್ಕಾಗಿಯೇ ಈ ಯುಕ್ತಿ ಗಳೆಂದು ತೋರುವುದು). ನಿಜವಾಗಿ ನೋಡಿದರೆ, ಯತಿಯೆಂಬುದು, ಹಾಡುವಾಗ ಅರ್ಥಕ್ಕೆ ಹೊಂದಿಕೆಯಾಗುವಂತೆ ನಿಲ್ಲಿಸಲು ಎಡೆಯಿರಬೇಕೆಂಬುದಕ್ಕಾಗಿ ನಿಯಮಿತ ವಾಗಿದೆ. ಆದುದರಿಂದ ನಾಗವರ್ಮನ 'ಶ್ರುತಿ ಸುಭಗರು' ಹೇಳುವಂತೆ ಅದು ಕೇವಲ ಅಕ್ಷರ ವಿಷಯವಲ್ಲ; ಅರ್ಥಕ್ಕೂ ಸಂಬಂಧಿಸಿದ ವಿಷಯ. ಯತಿಯ ಈ ಅರ್ಥದಿಂದಲೇ

ಯತಿ ಭಂಗ ವಿಚಾರ ಮಾಡಬೇಕು. ಪಿಂಗಳನ ಅಭಿಪ್ರಾಯದಲ್ಲಿ—"ಸ್ವರ ಸಂಧಿಗಳಿಂದ ಉಂಟಾದ ಸೌಂದರ್ಯ ಬಲವಿದ್ದಲ್ಲಿ, ತೋರಿಕೆಯ ಪುಟ್ಟಿಗೆ ಅಕ್ಷರ ವಿಚ್ಛೇದವಾಗದಿದ್ದರೂ ದೋಷವಿಲ್ಲ" ಎಂದಾಗುತ್ತದೆ. (ಸ್ವರ ಸಂಧ್ಯಾಪ್ತ ಸೌಂದರ್ಯಾತ್ ತದ್ಭೇದೇಪೀಷ್ಯತೇ ಕ್ವಚಿತ್). ಇದಕ್ಕೆ, "ಶೋಭಾಂ ಪುಷ್ಯ। ತ್ಯಧಿಕ", "ಮೇಘಾಲೋಕೇ ಭವತಿ ಸುಖಿನೋ। ಪ್ಯನ್ಯಥಾ ವೃತ್ತಿ ಚೇತಃ"—ಇತ್ಯಾದಿ ದೃಷ್ಟಾಂತಗಳನ್ನು ಪಿಂಗಳ ಸೂತ್ರ ವ್ಯಾಖ್ಯಾನಕಾರರು ಕೊಟ್ಟಿದ್ದಾರೆಂದೂ ಟಿಪ್ಪಣಿಯಲ್ಲಿದೆ. ಇಲ್ಲಿ ಯತಿ ಭಂಗವಾಗಿದೆಯೆಂದು ಯಾರಿಗೂ ಭಾಸವಾಗಲಾರದು. ಕಾರಣವೇನೆಂದರೆ, 'ಅಧಿಕ', 'ಅನ್ಯಥಾ' ಎಂಬ ಯತ್ಯನಂತರ ಪದಗಳ ಸ್ವರೂಪವು ನಾಶವಾಗುವುದಿಲ್ಲ. ಇದರಿಂದ ನಾವು ತಿಳಿಯತಕ್ಕುದೇನೆಂದರೆ, ವಿಶ್ರಮ ಸ್ಥಾನಾನಂತರ ಬರುವ ಪದದ ಸ್ವರೂಪವು ಕೆಡದಿದ್ದರೆ ಯತಿ ಭಂಗವಾಗುವುದಿಲ್ಲ. ಕನ್ನಡದ ಲೋಪ ಸಂಧಿಯ ನಿಯಮವೇ ಇದಕ್ಕೆ ಅನ್ವಯಿಸುತ್ತದೆ: "ನಾಮರೂಢಿಯುಳಿಯದ ಪಕ್ಷಂ" ಪೂರ್ವ ಪದದ ಕೊನೆಯ ಸ್ವರವು ಲೋಪವಾಗುತ್ತದೆಯೇ ಹೊರತು ಉತ್ತರ ಪದಪಾದಿಗೆ ವಿಘಾತವಾಗುವುದಿಲ್ಲ. ಈ ಲೋಪ ಸಂಧಿಗೆ ಯಾವುದೊಂದು ಪ್ರಕೃತಿ ಶುದ್ಧಿ ಪತ್ರವನ್ನು ಕೊಟ್ಟಿತೋ, ಅದೇ ಪ್ರಕೃತಿ ಮೇಲೆ ಉದಾಹರಿಸಿದ ಸಂದರ್ಭಗಳಲ್ಲಿ ಯತಿಯನ್ನು ಕೆಡಿಸದೆ ಉಳಿಸುತ್ತದೆ. "ನಾಮರೂಢಿಯುಳಿಯದ ಪಕ್ಷಂ" ಎಂಬುದಕ್ಕಿಂತ ಹೆಚ್ಚು ಸ್ಪಷ್ಟವಾಗಿ ಇವೆರಡರ ಲಕ್ಷಣವನ್ನು ಹೇಳುವುದು ಸಾಧ್ಯವಿಲ್ಲ. ಏಕೆಂದರೆ, ಅದು ಸುಸಂಸ್ಕೃತವಾದ ಕಿವಿಗೆ, ಪರಂಪರೆಗನುಸರಿಸಿ, ಪ್ರತೀತವಾಗುವಂತಹದೇ ಹೊರತು "ಇದಮಿತ್ಥಂ" ಎಂದು ನಿಷ್ಕರ್ಷೆಯಿಂದ ಹೇಳಲು ಸಾಧ್ಯವಾಗುವ ವಿಷಯವಲ್ಲ. ಕಾವ್ಯದಲ್ಲಿ 'ಶಯ್ಯೆ' ಎಲ್ಲಿ ಕೆಟ್ಟಿದೆಯೆಂಬುದನ್ನು ನಿಷ್ಕೃಷ್ಟ ಲಕ್ಷಣಗಳಿಂದ ಹೇಳಲು ಸಾಧ್ಯವಿದೆಯೆ? ಸಾಧ್ಯವಿಲ್ಲವೆಂಬುದರಿಂದ, 'ಶಯ್ಯೆ' ಎಂಬುದೊಂದು ಇಲ್ಲವೆಂದು ಹೇಳುವುದಕ್ಕಾದೀತೆ? ಇದು ಸುಂದರ, ಇದು ಸುಂದರವಲ್ಲ ಎಂಬುದಕ್ಕೆ ಪ್ರಮಾಣ ಸಾಧನವಿಲ್ಲ. ಶಯ್ಯೆಯಂತೆ ಯತಿಗೂ ಸುಸಂಸ್ಕೃತವಾದ ಕಿವಿಯೇ ಪ್ರಮಾಣ; ಅದು ಸಹ ಅಭ್ಯಾಸ ಬಲದಿಂದ ವ್ಯತ್ಯಾಸವನ್ನು ಹೊಂದಬಹುದು.

ಹಿಂದೆ ಸೂಚಿಸಿದ ಪಿಂಗಳ ವ್ಯಾಖ್ಯಾನಕಾರರೇ ಅದೇ 'ಮೇಘದೂತ'ದಿಂದ ಯತಿ ಭಂಗವಾಗಲಾರದೆಂದು ಕೊಟ್ಟಿರುವ ಇನ್ನೊಂದು ನಿದರ್ಶನದಲ್ಲಿ, ಯತಿ ಭಂಗವಿದೆಯೆಂದು ನನಗೆ ಹೊಳೆಯುತ್ತದೆ: "ಸ್ಪರ್ಶಕ್ಲಿನ್ನಾ ಮಯಿ ತವ ಸಖೇ। ನಾಸಕೃತ್ಸಾರಯಂತೀಂ" ಎಂಬಲ್ಲಿ, ಪದ್ಧತಿಯಂತೆ ಹಾಡುವಾಗ, 'ಆಸಕೃತ್' ಎಂದು ಪ್ರತೀತಿಯಾಗುತ್ತದೆ. ಅಲ್ಲಿ 'ಅಸಕೃತ್' ಎಂಬ ಪದವೇ ಉಪಯೋಗಿಸಲ್ಪಟ್ಟುದು. ಯತಿ ಭಂಗವೆಂದರೆ ಇದೇ. 'ಶ್ರುತಿ ಸುಭಗರ್' ಎಂದು ನಾಗವರ್ಮನು ಕೊಟ್ಟ ವಿಶೇಷಣವು ಅಸ್ಥಾನೀಯವಾಗಿದೆ; ನನ್ನ ಮತದಲ್ಲಿ, "ಸ್ವರ ಸಂಧ್ಯಾಪ್ತ ಸೌಂದರ್ಯಾತ್ ತದ್ಭೇದೇಪೀಷ್ಯತೇ ಕ್ವಚಿತ್" ಎಂದ ಪಿಂಗಳಾದಿಗಳಿಗೇ ಅದು ಸಲ್ಲತಕ್ಕುದು. ಅಂತೂ, ಯತಿ, ಯತಿ ಭಂಗಗಳೂ ಶ್ರುತಿಗೆ 'ಪ್ರತೀತ'ವಾಗುವುವೇ ಹೊರತು, ನಿರ್ವಚನೀಯವಲ್ಲ ಎಂಬುದು ನಾಗವರ್ಮನ ಅಭಿಪ್ರಾಯವೂ ಆಗಿದೆ.

ಕೊಟ್ಟ ಉದಾಹರಣೆಯೆಲ್ಲ ಸಂಸ್ಕೃತ ಭಾಷೆಯದು. ಕನ್ನಡದ ಮಟ್ಟಿಗೆ ನೋಡಿದರೆ, "ಯತಿಯುಂ ಮಿಕ್ಕರ್" ಎಂದು ನೃಪತುಂಗನು ಹೇಳುವುದು ವೃತ್ತಗಳ ಪದಾಂತ ಯತಿ ವಿಷಯವಾಗಿ. ಪ್ರಾಸ ಸೌಕರ್ಯಕ್ಕಾಗಿ ಇದನ್ನುಲ್ಲಂಘಿಸಿದರೆಂದು ಕಾರಣವನ್ನು ಅವನೇ ಕೊಟ್ಟಿದ್ದಾನೆ. ಈ ಯತಿಯನ್ನು ಕನ್ನಡ ಕವಿಗಳು ಮಿಕ್ಕಿದುದರಿಂದ, ಅಕ್ಷರ ವೃತ್ತಗಳನ್ನು ಪಾದಾಂತದಲ್ಲಿ ನಿಲ್ಲಿಸದೆ ರಗಳೆಯಂತೆ ಓದುವ ಅವಶ್ಯವು ನಮಗುಂಟಾಯಿತು. ಅದು ಹೇಗಿದ್ದರೂ ಸಂಸ್ಕೃತ ಬಂಧಗಳಿಗೆ ಹೊಂದುವ ಸಂಗತಿ; ಅದರ ವಿಚಾರವು ಪ್ರಕೃತವಲ್ಲ. ವಿಶುದ್ಧ ಕನ್ನಡ ಜಾತಿಗಳಲ್ಲಿ ಯತಿಯ ಸ್ಥಿತಿಯೇನು? ಎಂದರೆ, ಹಿಂದೆಯೇ ನಾನು ಹೇಳಿದಂತೆ, ತ್ರಿಪುರುಷ ಗಣವೆಲ್ಲೆಲ್ಲಿ ಪ್ರಯುಕ್ತವೋ ಅಲ್ಲೆಲ್ಲ ಪ್ರತಿ ಗಣಾಂತದಲ್ಲಿಯೂ ಯತಿ ಇರಬೇಕು; ಇಲ್ಲದಿದ್ದರೆ ಅರ್ಥ ಕೆಡದಂತೆ ಓದಲು ಸಾಧ್ಯವೇ ಇಲ್ಲ. ಹಿಂದೆ ಕೊಟ್ಟ ಉದಾಹರಣೆಗಳಿಂದಲೇ ಇದು ಸಾಕಾದಷ್ಟು ಸ್ಪಷ್ಟವಾಗಿರಬಹುದೆಂದು ಭಾವಿಸುತ್ತೇನೆ.

ಇನ್ನು, ತ್ರಿಮೂರ್ತಿ ಜನ್ಯ ಕನ್ನಡ ಮಾತ್ರಾ ಬಂಧಗಳನ್ನು ಅವಲೋಕಿಸಿದರೂ, ಅಷ್ಟು ನಿರ್ಬಂಧವಿಲ್ಲದಿದ್ದರೂ (ಏಕೆಂದರೆ, ಗಣಾಂತ ಲಘುವನ್ನು ಮಾತ್ರಾ ಬಂಧಗಳಲ್ಲಿ ಗುರುವಾಗಿಸಬೇಕಾಗಿಲ್ಲ) ತಕ್ಕ ಮಟ್ಟಿಗೆ ಹಾಗೆಯೇ ಇದೆಯೆಂದು ವಿಶದವಾಗುವುದು. ಅಕ್ಕರಿಕೆ ಇದಕ್ಕೆ ಉತ್ತಮವಾದ ಉದಾಹರಣೆ. ಪ್ರಚಾರದಲ್ಲಿರುವ ಷಟ್ಪದಿಗಳಿಗೆಲ್ಲ ಸಾಮಾನ್ಯವಾಗಿ ಈ ನಿಯಮವು ಕೂಡಿಬರುತ್ತದೆ. ಉಪನ್ಯಾಸ ವಿಸ್ತಾರ ಭಯದಿಂದ ಹೆಚ್ಚು ಉದಾಹರಣೆಗಳನ್ನು ಕೊಡುತ್ತಹೋಗುವುದಿಲ್ಲ. ಜೈಮಿನಿ ಭಾರತದ ಮೊದಲನೆಯ ಪದ್ಯದ ಉದಾಹರಣೆಯನ್ನು ಮಾತ್ರ ಕೊಡುತ್ತೇನೆ. ಅದರ ಆರನೆಯ ಪಾದದಲ್ಲಿ, "ದೇವಪುರ ಲಕ್ಷ್ಮೀ ರ। ಮಣನಾಸ್ಯ ಚಂದ್ರನಾನಂದಮಂ ನಮಗೀಯಲಿ" ಎಂದಿರುವಲ್ಲಿ, "—। ಮಣನಾಸ್ಯ" ಎಂದು ಯತ್ಯನಂತರ ಪ್ರತೀತವಾಗಿ 'ನಾಮರೂಢಿ' ಅಳಿಯುತ್ತದೆ. ಈ ಕಾರಣದಿಂದಲೇ ಈ ಪಾದಕ್ಕೆ ಈಯೊಂದು ವ್ಯಾಕರಣ ದುಷ್ಟ ಪಾಠವುಂಟಾಗಿದೆ—"ದೇವಪುರ ನಿಲಯ ಲ। ಕ್ಷ್ಮೀರಮಣನಾಸ್ಯ ಚಂದ್ರಾನಂದ ಮೆಮಗೀಯಲಿ". ಇಲ್ಲಿ ಯತ್ಯನಂತರ "—। ಕ್ಷ್ಮೀರಮಣ" ಎಂದು ಬರುತ್ತದೆ. ಆದುದರಿಂದ ಇದೂ ಯತಿ ಭಂಗವಲ್ಲವೋ? ಎಂದರೆ, ಯತಿಯ ಇನ್ನೊಂದು ರಹಸ್ಯವನ್ನು ಗ್ರಹಿಸಿಕೊಳ್ಳುವುದೂ ಅವಶ್ಯ; ಹಿಂದೆ ಮುಂದೆ ಲಘುವಿದ್ದಲ್ಲಿ ಯತಿ ಭಂಗವಾದರೆ ಪ್ರತೀತವಾಗುವಂತೆ, ಗುರುವಿದ್ದರೆ ಆಗುವುದಿಲ್ಲ. ಇದಕ್ಕೆ ತ್ರಿಮೂರ್ತಿ ಗಣವು ಕನ್ನಡದ ಕಿವಿಗೆ ಉಂಟುಮಾಡಿದ ಅಭ್ಯಾಸವೂ ಒಂದು ಕಾರಣ; ಅಲ್ಲದೆ, ಗುರು ಯತಿಯ ಪೂರ್ವದಲ್ಲಿರುವಾಗ ತಾನಾಗಿ ವಿಶ್ರಾಂತಿ ಕಾರಣವಾಗುತ್ತದೆ. ಆದುದರಿಂದ, ಉದಾಹೃತವಾದ ಸಂದರ್ಭದಲ್ಲಿ ಹಿಂದೆ ಮುಂದೆ ಗುರುವಿರುವುದರಿಂದ ಇಲ್ಲಿ ಗಣದ, ಗಾನದ ಒಂದು ಗತಿ ವಿಶೇಷವೆಂದು ಪ್ರತೀತವಾಗಿ ಅರ್ಥ ಗ್ರಹಣೆಗೂ ಕ್ಷಮ್ಯವಾಗುತ್ತದೆ. ಇದಕ್ಕೆ ಉದಾಹರಣೆಗಳು ಅದೇ ಪದ್ಯದ ಇತರ ಯತಿ ಸ್ಥಾನಗಳಲ್ಲಿಯೂ ಕಾಣುತ್ತವೆ. ಅಲ್ಲೆಲ್ಲೂ ಯತಿ ಭಂಗವೆಂದು ಸ್ಫುರಿಸದಿರುವುದಕ್ಕೆ ಹಿಂದಾಗಲಿ, ಮುಂದಾಗಲಿ ಒಂದ ಗುರುವಿನ ಸಹಾಯವೂ, 'ನಾಮ ರೂಢಿ' ಅಳಿಯದುದೂ ಕಾರಣ.

ಶ್ರೀ ವಧುವಿ । ನಂಬಕ ಚ । ಕೋರಕಂ । ಪೊರೆಯೆ ಭ ।
ಕ್ತಾವಳಿಯ । ಹೃತ್ಕುಮುದ । ಕೋರಕಂ । ಬಿರಿಯೆ ಜಗ ।
ತೀ ವಲಯ । ದಮಲ ಸೌ । ಭಾಗ್ಯ ರ । ತ್ನಾಕರಂ । ಪೆರ್ಚಿನಿಂ । ಮೇರೆವರಿ । ಯೆ ॥
ಆವಗಂ । ಸರಸ ಕರು । ಣಾಮೃತದ । ಕಲೆಗಳಿಂ ।
ತೀವಿದೆಳ । ನಗೆಯ ಬೆ । ಳ್ದಿಂಗಳಂ । ಪಸರಿಸುವ ।
ದೇವಪುರ । ಲಕ್ಷ್ಮೀರ । ಮಣನಾಸ್ಯ । ಚಂದ್ರನಾ । ನಂದಮಂ । ನಮಗೀಯ । ಲಿ ॥

ಇಲ್ಲಿ ನಾಲ್ಕನೆಯ ಪಾದದ "ಕರು । ಣಾಮೃತ" ಎಂಬಲ್ಲಿ, 'ಅಮೃತ' ಎಂಬ 'ನಾಮ ರೂಢಿ'ಯಳಿಯಲಿಲ್ಲವೋ? 'ಸಖೇನಾಸಕೃತ್' ಎಂಬಲ್ಲಿ ಆದಂತೆ ಯತಿ ಭಂಗವಾಗಲಿಲ್ಲವೋ? ಎಂದರೆ, 'ಕರುಣಾಮೃತ' ಎಂಬ ಸಮಾಸ ಪದಾರ್ಥವೇ ಇಲ್ಲಿ ಗ್ರಾಹ್ಯವಾದುದಾದ ಕಾರಣ 'ನಾಮ ರೂಢಿ' ಅಳಿಯಲಿಲ್ಲ; ಆದುದರಿಂದ ಯತಿ ಭಂಗ ದೋಷವಿಲ್ಲ. ಅಲ್ಲದೆ, ಯಾವುದೊಂದು ಪದದ ಸಣ್ಣ ತುಂಡು ಯತ್ಯನಂತರ ಉಳಿದರೆ ಮಾತ್ರ, ಅದೂ ಗುರು ಸಹಾಯವಿಲ್ಲದಿದ್ದರೆ, ಶ್ರುತಿಗೆ ಅಸಹ್ಯವಾಗುವಷ್ಟು ಹಿಂದೆ ಉಳಿದರೆ ಆಗುವುದಿಲ್ಲ. ಇದಕ್ಕೆ "ಅಂಬಕ ಚ । ಕೋರಕಂ" ಎಂಬುದೇ ಸಾಕ್ಷಿ. ಆದರೆ, ಹೀಗೆ ಹಿಡಿಬುಡವಿಲ್ಲದ 'ಯತಿ' ಉಂಟೆನ್ನುವುದು ಹೇಗೆಂದು ಪ್ರಶ್ನಿಸುವವರು ಇದೊಂದು ನಿದರ್ಶನವನ್ನು ನೋಡಿದರೆ ಯತಿ ಭಂಗವೆಂಬುದೊಂದಿದೆ ಯೆಂದೊಪ್ಪದಿರಲಾರರು: ಉದಾ.—ಕಿಟೆಲ್ ಸಾಹೇಬರು ಮತ ಭ್ರಾಂತಿಯಿಂದ 'ರಾಜಶೇಖರ ವಿಲಾಸ'ದೊಂದು ಕಂದವನ್ನು ಕೆಡಿಸಿರುತ್ತಾರೆ.—

ಆರಾರೇರರ್ ಶಾಸ್ತ್ರ ।
ಶ್ರೀರೋಹಣ ಗಿರಿಯನಲ್ಲಿ ನವ ಕವಿತಾ ಚಿಂ ॥
ತಾ ರತ್ನಂ ದೊರೆಗುಮೆ ಮಾ ।
ರಾರಿಯ ಕೃಪೆಯಿಲ್ಲದಂಗೆ ಧರಣೀತಲದೊಳ್ ॥

ಎಂಬುದನ್ನು

.................... ।
............................ ॥
........... ದೊರೆಗುಮೆ ತೇ ।
ಜೋ ರೂಪ ಕೃಪೆಯಿರದಂಗೆ ಧರಣೀತಲದೊಳ್ ॥

ಎಂದು ಮಾಡಿದಾಗ ಆದ ವೈರೂಪ್ಯಕ್ಕೆ ವಿವರಣೆ ಅನವಶ್ಯ. ಇರಲಿ; ಇದನ್ನೆಷ್ಟು ವಿಸ್ತರಿಸಿದರೂ ಯತಿಯೆಂಬುದು ಶಯ್ಯೆ ಹೇಗೋ ಹಾಗೆ, ಅಭ್ಯಾಸ ಸಂಸ್ಕೃತವಾದ ಶ್ರುತಿ ವಿಷಯವೆಂದು ಹೇಳಿ, ಯತಿ ವಿಚಾರವನ್ನು ಮುಗಿಸುತ್ತೇನೆ.

ನಾನೀ ಉಪನ್ಯಾಸದಲ್ಲಿ ಪ್ರತಿಪಾದಿಸಿದ ವಿಷಯಗಳನ್ನು ಹೀಗೆ ಸಂಗ್ರಹಿಸಬಹುದು:—ಸಂಗೀತಕ್ಕೂ ಛಂದಸ್ಸಿಗೂ ಮೂಲವೊಂದೇ; ಛಂದೋಬಂಧವೆಂದರೂ 'ಗೀತ' (ಎಂದರೆ 'ಹಾಡು') ಎಂದರೂ ಒಂದೇ ಅರ್ಥ; ಗಾನೋಪಯುಕ್ತತೆಯೇ ಪದ್ಯದ ಪ್ರಯೋಜನ; ಬಂಧಗಳು ಲಯ ಗತಿಯನ್ನೇ ಆಶ್ರಯಿಸಿವೆ. ಕನ್ನಡಕ್ಕೆ

ವಿಶಿಷ್ಟ, ಸ್ವತಂತ್ರ ಛಂದಸ್ಸಿದೆ; ಪ್ರಥಮ ಲಘ್ವನಂತರ ಗುರು ನಿಷೇಧವು ಕನ್ನಡದ ವೈಶಿಷ್ಟ್ಯ; ತ್ರಿಮೂರ್ತಿ ಗಣಗಳೇ ಕನ್ನಡದ ಆದಿಯ ಛಂದೋಗಣಗಳು; ಇವು ಗಳಿಂದಲೇ ಷಟ್ಪದಿ ಮೊದಲಾದುವುಗಳ ಮಾತ್ರಾ ಗಣಗಳು ಹುಟ್ಟಿದುವು; ಕನ್ನಡದ ಹಾಡುಗಳಲ್ಲಿ ಇಂದಿನ ವರೆಗೂ ಆಂದಿನ ಲಕ್ಷಣಗಳು ಗೋಚರಿಸುತ್ತವೆ. ಕನ್ನಡಕ್ಕೆ ಯತಿ ಬೇಡವೆಂಬ ಮಾತಿನಲ್ಲಿ ಹುರುಳಿಲ್ಲ; ತದ್ವಿರುದ್ಧವಾಗಿ ಸಂಸ್ಕೃತದಂತೆ ವಿಷ ಮಾಂತರಗಳಲ್ಲಿ ಅಲ್ಲೊಂದು ಇಲ್ಲೊಂದು ಯತಿ ಇದ್ದರೆ ಸಾಲದು; ಪ್ರತಿಯೊಂದು ಗಣಾಂತದಲ್ಲಿ, ಅಥವಾ ತಾಲ ಖಂಡಗಳಲ್ಲಿ ಅವಶ್ಯ; ಕನ್ನಡ ಕವಿಗಳು ಇದನ್ನು ಹೆಚ್ಚಾಗಿ ಅನುಸರಿಸಿಯೇ ತಮ್ಮ ರಚನೆಗಳನ್ನು ಮಾಡಿರುತ್ತಾರೆ—ಇಷ್ಟೆ.

ಈ ವಿವೇಚನೆ ನಿರ್ದುಷ್ಟವಲ್ಲ; ಎಷ್ಟೋ ಕಡೆಗಳಲ್ಲಿ ಇನ್ನೂ ಹೆಚ್ಚಿನ ವಿಚಾರ ಗಳಿಂದ ವಿಶೇಷ ವಿಷಯಗಳು ಗೋಚರವಾಗಲು ಬಾಕಿಯಾಗಿ ಉಳಿದಿವೆ ಎಂಬುದು ನನಗೆ ಚೆನ್ನಾಗಿ ಅರಿವಿವೆಯಾದರೂ, ಕನ್ನಡ ಛಂದಶ್ಶಾಸ್ತ್ರದ ಸೂಕ್ಷ್ಮವಾದ ವಿವೇಚನೆಗೊಂದು ಪ್ರೇರಣೆಯಾಗಲೆಂಬ ಉದ್ದೇಶದಿಂದ ಈ ಪ್ರಯತ್ನವನ್ನು ಮಾಡಿದೆ ನೆಂದು ಅರಿಕೆ ಮಾಡಿ, ಈ ನೀರಸವಾದ ಉಪನ್ಯಾಸದಿಂದ ತಮ್ಮ ತಾಳ್ಮೆಯನ್ನು ಮೊದಲಿಸಿ, ನಾನು ಅಲ್ಪಜ್ಞನಾಗಿದ್ದರೂ ಬಹುಶ್ರುತರಾದವರ ಅಭಿಪ್ರಾಯಗಳನ್ನು ಅಲ್ಲಗಳೆವ ತರುಣ ಸಹಜವಾದ ಔದ್ಧತ್ಯವನ್ನು ತೋರಿದುದಕ್ಕೆ, ಬಾಲಕನೆಂದು ಕ್ಷಮಿಸ ಬೇಕೆಂದು ಬೇಡಿ, ಬೀಳ್ಕೊಳ್ಳುವೆನು.

ಸೇಡಿಯಾಪು ಕೃಷ್ಣಭಟ್ಟ

---

ವಿ. ಸೂ.—ಈ ಪ್ರಬಂಧದಲ್ಲಿ, ಮೈಸೂರಿನಲ್ಲಿ ಮುದ್ರಿತವಾದ 'ಛಂದೋಂಬುಧಿ'ಯ ಪಾಠ ಗಳನ್ನೇ (ಹೆಚ್ಚಾಗಿ) ಅನುಸರಿಸಲಾಗಿದೆ.

## ಕರ್ಣಾಟಕ

# *ಭರ್ತೃಹರಿ ನಿರ್ವೇದ ನಾಟಕಂ

---

## ಚತುರ್ಥಾಂಕಂ

ದೇವ.—[ಪೊಕ್ಕು ಸಂತಸದಿಂ] ಜೋಗಿಯಿಾತಂ ರಾಯನಂ ಮಸಣದತ್ತಣಿಂ ಮಗುಳ್ಚಿ ಯಾರವೆಯೆಡೆಗೊಯ್ಯುಸುಯ್ದುದು ಬಹೂಪಕೃತಿಯಾದುದು. ಆಸು ಮತ್ತಲೆ ತೆರಳ್ದಪೆಂ.

[ಎಂದು ನಡೆದು ನಿಟ್ಟಿಸಿ]

ಇದೇಂ! ಮಾರಾಯಂ ಜೋಗಿಯೊಡನೆ ಕುಳ್ಳಿರ್ದು ಜಾನಿಸುತಿರ್ದಪಂ! ಇಂತಿರ್ಕುಂ: ತಡೆಯೆವಟ್ಟ ಚಟ್ಟಿದುವಪ್ಪ ಶೋಕ ತರಂಗಂಗಳ್ ರಾಯನ ಬಹಿರಿಂದ್ರಿಯಂಗಳಂ ಮುಚ್ಚಿರ್ಕುಂ. ಅಂತಲ್ಲದಿರ್ದೊಡೆ—

ಕಂ ॥ ಬೇವಸದಾ ಕಾಟ್ಕಿಚ್ಚಿಂ
　ದಾವಗಮುಂ ಬಳೆಯುತಿರ್ಪ ಭಾವವನಾಂತಿ ।
　ರ್ಪಾ ವಿಷಯಗಳಂ ತಡೆಯದೆ
　ಕೇವಲ ಸಿರ್ವೃತಿಯನೊಂದಲಾರ್ತಪನಾವಂ　　　॥ ೪೭ ॥

[ಅನಂತರಂ ಯಥಾ ನಿರ್ದಿಷ್ಟನಾದ ರಾಯನುಂ ಯೋಗಿಯುಂ ಪುಗುವರ್]

ರಾಯಂ—[ಧ್ಯಾನಾವಸಾನಮಂ ನಟಿಯಿಸಿ ಸಾತ್ವಿಕ ವಿಕಾರಮನಾಂತು ಸಂತಸದಿಂ] ಪೂಜ್ಯರೆ! ತಲೆದೋಱುತಿರ್ಕುಮದೊಂದು ಬಗೆಯ ಬಿನ್ನಣದ ಸೊಗದ ಸವಿ.

ಗೋರಕ್ಷಂ.—ಅಭ್ಯಾಸದಿಂ ಪೂರ್ಣಾನಂದಮನೊಂದುವೆ. ಪೊಟ್ಟಿಱಿತಾಸು ಮಷ್ಟಾಂಗ ಭಂಗಿಯುಮಂ ಹಠ ಯೋಗಮುಮನುಪದೇಶಿಪೆಂ.

ರಾಯಂ—ಪೂಜ್ಯರೆ! ಪ್ರಾಪ್ತ ವರನಾದೆಂ. (ಎಂದಡಿಗಳೊಳ್ ಬಿಟ್ಟಿಂ)

ದೇವ.—(ಆನಂದದಿಂ) ಈ ಜೋಗಿಯಿಂದೆಮ್ಮ ರಾಯಂ ಶೋಕಮನುೞಿದು ಅಮಂದಾನಂದಮನೊಂದಿರ್ಪಂದಂ ತೋಱುತಿರ್ಕುಂ. ಅದಱಿಂದೀಗಳೆ ಆಂ ಪುಗಲ್ ತಕ್ಕ ಸಮಯಂ. [ಎಂದಾ ತಿರೆಯೆಱಿಯನಂ ಸಾರ್ದು] ದೇವ! ದೇವಿಗೆ ವಹ್ನಿ ಸಂಸ್ಕಾರಮಂ ಗೆಯಲಾಣತಿಯಸೀಯು!

---

* ಕ. ಸಾ. ಪರಿಷತ್ಪತ್ರಿಕೆಯ ೧೮ನೆಯ ಸಂಪುಟದ ೧ನೆಯ ಸಂಚಿಕೆಯ ೪೮ನೆಯ ಪುಟದಿಂದ ಮುಂದುವರಿದುದು.

[ರಾಯನುಸಿಕಮಿರ್ದಪಂ]

ದೇವ.—ಒಡೆಯ! ಪಡಿನುಡಿಯಂ ಕುಡ.

ರಾಯಂ—(ನಕ್ಕು) ಆ ಪೊೞ್ತು ಕಳೆದುದು. ಕೇಳ್—

ಕಂ॥ ನೀನೆನ್ನ ಮಂತ್ರಿಯಾನವ
ನೀ ನಾಥಂ ರಾಜ್ಯಕೋಶಮಿದೆನಸತ್ತೆಂಬ ।
ಜ್ಞಾನಂ ತೊಲಗಿದುದಾಚಾ
ರ್ಯಾನುಗ್ರಹಲಬ್ಧಸಿದ್ಧಿಯಿಂದೆ ಸಮೂಲಂ ॥ ೪೮ ॥

ಅದಱಿಂದಿದುವೊದಲಿರ್ಕೆಮ ಆಜ್ಞಾಪನಭಾರಂ ನಿನ್ನೊಳಾದೊಡಂ ರಾಜಕುವರನೊಳಾದೊಡಂ.

ದೇವ.—(ಯೋಗಿಯಂ ನಿರುಕಿಸಿ) ಯೋಗಿವರ್ಯ! ತೇಱ್ಬಿಸವಂ ಕಱಿಯುಲೆಂದು ಕರ್ಬಾಱಿಂ ಕರ್ಚಿಪುದುಚಿತಮಲ್ಲಂ.

ಗೋರಕ್ಷಂ.—ಮಂತ್ರಿಸತ್ತಮ! ಬಱಿದೆ ತೆಗೆೞ್ವುದಱಿಂದೇಂ ಪಳಂ? ರಾಯನಂ ಶೋಕಸುಲಭಮಪ್ಪ ನಿರ್ವೇದದತ್ತಣಿಂ ಪಿಂದಿರುಂಗಿಸ! ಆನುಂ ನಿನಗನುವರ್ತಿಯಾಗಿರ್ದಪೆಂ.

ದೇವ.—ರಾಯ! ಇದೇಂ?

ಕಂ॥ ಆರಯಲಾವೋದಯುತಂ
ದಾರುಣ ತೇಜಃಪ್ರಪಾಕನವನೀತಂ ಮೇಣ್ ।
ಚಾರುತರ ಸೂಪವಲನಂ
ಕಾರಣಮೇನಾಜ್ಯ ರಾಜ್ಯಮಿದು ರುಚಿಸದಿರಲ್ ॥ ೪೯ ॥

ರಾಯಂ—ಆಗಡೆ ಉಸಿರ್ದೆನಲ್ತೆ? ಆ ಪೊೞ್ತು ಕಱಿದುದು. ಈಗಳಾದೊಡೆ—

* ವೃ॥ ಅಂತರ್ದಾಹಮನೆಯ್ದೆ ಗೆಯ್ದಹಿವಿಷಂಬೊಲ್ ತೋರ್ಪ ದೋಷಜ್ವರಂ
ವಾಂತಿ ಕ್ಲಾಂತಿಯ ಜೀರ್ಣ ಮೂರ್ಛೆಗಳಣಂ ಪೊಣ್ಮುತ್ತಿರಲ್ ಮೊಕ್ಕಳಂ ।
ಸಂತಾಪಂ ಬಡೆದಂಗೆ ಜೇನ್ವರೆದ ನೆಯ್ಯಂತಾರಯಲ್ ತ್ಯಾಜ್ಯಮ
ಲ್ತೇಂ ತತ್ಪ್ರಾಜ್ಯದ ರಾಜ್ಯಮಾ ಯೆನಗೆ ಸದ್ಬೋಧಾಸ್ಪಿತಂಗಾವಗಂ ॥ ೫೦ ॥

ದೇವ.—ರಾಯ! ಗಳಿಯಿಸಿಟ್ಟೈರ್ಪೀ ಪಣಮಾದೊಡಂ ನಿನ್ನ ಮನಮನೇಕೆ ಸೆಳೆವುದಿಲ್ಲಂ?

ರಾಯಂ—

ಕಂ॥ ಪರಪೀಡನದಿಂ ಪ್ರಾಪ್ಯಂ
ಕರಮುಱಿಲಿಂ ರಕ್ಷ್ಯಮಱಿಯೆ ಪಣಮದು ಬೀಯಂ ।

* ಪಾ.—ಕಂ॥ ಸಂತತ ದುಃಖಜ್ವರದಿಂ
ದಾಂತಾ ಸಂತಾಪದತ್ತಣಿಂ ವಿಷವಿಸಿರಲ್ ।
ಎಂತು ರುಚಿಯಿಕ್ಕುಮಕಟ ಸ
ಮಂತಿಂತೀ ಯಾಜ್ಯ ರಾಜ್ಯಮೆನಗೀ ಬುವಿಯೊಳ್ ॥ ೫೦ ॥

ದೊರೆಕೊಳೆ ದುಃಖಂ ನಷ್ಟದೆ
ಮರಣಂ ಲಭಿಕುಂ ಧನಂ ಪ್ರಭೂತ ವಿಪನ್ನಂ ॥ ೫೧ ॥

ದೇವ.—ತೆಗಟಿ! ತೆಗಟಿ!! ಪೊಡವಿಯೊಳಾರುಂ ಬೇಡದಿರ್ಪ ಕಷ್ಟದುಗುಡಕೆಡೆಯಪ್ಪ ನಿರ್ಧನತೆಯನೇವೊಗಟ್ವೆ?

ರಾಯಂ—

ವೃ ॥ ದೊರೆಗಳ ಭೀತಿಯಿಲ್ಲ ಖಳವಾರದ ವೈರಮದಿಲ್ಲ ಚೋರರಾ
ಚಿರತರ ಶಂಕೆಯಿಲ್ಲ ಪರಿವಾರದ ವೇಧೆಯದಾಣಮಿಲ್ಲವಿಾ।
ಪರಿಯೊಳಧನ್ಯ ನಿರ್ಧನತೆಯೇ ಎನಗಿರ್ಕೆ ತಟಿತ್ಸಮಾನ ಸೌ
ಖ್ಯ ರಸ ಧನಿತ್ವಮಿರ್ಕೆ ನಿಮಗಾತತ ಧೀ ಮಹಿತರ್ಗೆ ಪುಣ್ಯದಂ ॥ ೫೨ ॥

ದೇವ.—ರಾಯ! ಪಲ ಬಗೆಯಿಂದಮುಮೆರ್ದೆಗೆ ಪಿರಿದುಂ ಮುದಮನೀವ ಮೇದಿನಿಯನೇತರ್ಕಿಂತು ನಿರಾಕರಿಸಿದಪಯ್?

ರಾಯಂ—ಈ ವಸುಮತಿಗಾನೆ ಬಹುಮತನಾಗಿರ್ಪುದು ನಿಕ್ಕುವಮಾದೊಡೆ ಏತರ್ಕಾನಿಂತು ನಿರಾಕರಿಸುತಿರ್ದೆಂ. ಕೇಳ್—

ವೃ ॥ ಲಾವಣ್ಯೌದಾರ್ಯ ವೀರ್ಯಾರ್ಜವ ಗುಣ ಕಲಿತರ್ ದೀರ್ಘ ಕಾಲಾನುರಕ್ತರ್
ಭಾವಜ್ಞರ್ ನೈಷಧಾದಿ ಪ್ರಿಯರವರಟಿಪಂ ಚಿತ್ತದೊಳ್ ತಾರದೆಂದುಂ।
ಓವುತ್ತಾತ್ಯಾಗಗಳ್ಕೈತರ್ಪರಸರೊಳಿಳೆ ತಾಂ ಮೋದಮಂ ತಾಳ್ದಪಳ್ ಕೇ
ಳಾ ವಾರ ಸ್ತ್ರೀಯ ಪಾಂಗಿಂ ಭುವನದ ಪಟಿಗೀಡಾದಳಂ ಕೂರ್ಪುದೆಂತೋ
॥ ೫೩ ॥

ಮತ್ತಂ—

ವೃ ॥ ಹತ ಮತಿ ಮೇದಿನೀ ವನಿತೆ ತೋಷಿಸದಿರ್ದೊಡಮಿರ್ಕೆ ತನ್ಮಹೀ
ಪತಿಗಳ ಭವ್ಯ ಪಾಲನೆಯೊಳಾರಯೆ ವೀರ ತುರಂಗ ವಲ್ಗು ವ।
ಲ್ಗಿತಕುಟಿತ ಕೋಪಿಪಳ್ ಪರಣಮಂ ತನಗಾಗಿ ವಿಸರ್ಜಿಪಾ ಧರಾ
ಪತಿಗಳ ಮೆಯ್ಯ ಗಾಯದೊಸರ್ವಾ ಬಿಸು ನೆತ್ತರಿನೆಯ್ದೆ ತೋಷಿಪಳ್
॥ ೫೪ ॥

ದೇವ.—ರಾಯ! ಪಲವುಟ್ಟುಗಳೊಳ್ ನೋಂತ ನೈಪಿಂ ಪಡೆದ ಪೊಡವಿಯೊಡೆತನಮನಾವಂ ಬಿಡಲುಜ್ಜುಗಿಪಂ?

ರಾಯಂ—(ನಕ್ಕು)

ವೃ ॥ ಪೊರೆಯಂ ಸೇರದೆ ರಾಯನೆಂದಗಿದು ಕುತ್ತಂ ಸಾರ್ಗುಮೇ ತಾಪದಿಂ
ದುರುಶೋಕಂ ಬಟಿಗೆಯ್ದದಿರ್ಕುಮೆ ವಿಪದ್ದ್ವಾರಂ ಮಹಾ ಶಂಕೆಯಿಂ।
ಸರಿದೇಂ ಪೋಕುಮೆ ಈಸರಂ ಗಡಿವನೆಂದೇಂ ಕಾಲನಂಜಿರ್ಕುಮೇ
ತಿರೆಯೊಳಾ ದುರ್ಮದಕಾಸ್ಪದಂ ನೃಪ ಪದಂ ತಾನಾವನಿಂ ಪ್ರಾರ್ಥ್ಯಮೋ!
॥ ೫೫ ॥

ದೇವ.—ಹಾ! ಕಷ್ಟಂ! ಅಳುಂಬಮುಬ್ಬಿತ್ತಿರ್ಪ ಸಂಟರಿವರನೆಂತು ನಿಶ್ಚಿಂತೆಯಿಂ ತೊಱೆದಪಯ್?

ರಾಯಂ—ನಂಟರಿವರ್ ಸಾಧುಗಳ್. ಪರಿಣಾಮದೊಳ್ ಪರಲೋಕ ಪರಾಯಣನಾಗಿರ್ಪನ್ನೊಳ್ ಅತ್ಯವಶ್ಯಂ ಪ್ರೀತಿಸುವರ್. ಪೆಱರಾದೊಡೆ—

ವೃ || ಅಱಿದಾಗಳ್ ಕರಮುಬ್ಬೆಪರ್ ಮುರುಕಮಂ ತಾಳ್ದಂದಮಂ ತೋರ್ದು ಪೊಂ
ಪುಱಗೊಳ್ವರ್ ಮನದೊಳ್ ಸಮೃದ್ಧಿ ಸಮಯಂ ಕಯ್ವಾರೆ ಕೊಂಡಾಡಿ ಪು।
ಚ್ಚಱಯಂ ಕಾಂಕ್ಷಿಪರಂತರಂಗದೆ ಮಹಾ ಸಂಪತ್ತಿಯಿಂ ತಾಮಿರಲ್
ಪಱವರ್ ಸಂಟರಿವರ್ಕಳಾವೊಡೆ ವಿಪಕ್ಷವ್ರಾತಮಿನ್ನಾವುದೋ || ೫೬ ||

ದೇವ.—ರಾಯ! ಅಂತಾದೊಡೆ ಪೆಱರೋ ತನ್ನವರೋ ಈಯವನಿಯ ನಾಕ್ರಮಿಸಿದೊಡೆ ಸೈರಿಪುದೆಂತು?

ರಾಯಂ—

ಕಂ || ಅವರೆನ್ನವರಾನವರವ
ನಿವಂ ಸುತಂ ಹಿತನಮಿತ್ರನೆಂಬರ್ ಗಾಂಪರ್।
ತವಿದುದು ಮೋಹಮದಿನ್ನೀ
ಯವನಿಯನಾಕ್ರಮಿಸುಗಾವನಾದೊಡಮಱಲೇಂ || ೫೭ ||

ದೇವ.—ಹಾ! ರಾಜಲಕ್ಷ್ಮಿ! ನೀನೀಗಳ್ ಹತಾಶಳಾದೆಯಲ್ತೆ!

ರಾಯಂ—ಅಕ್ಕುಂ. ದುರರ್ಥಮನೊಳಕೊಂಡಳಿವಳ್ ಹತಳೆ ನಿಕ್ಕುವಂ!

ವೃ || ನೊದೆಯಿಂದಂ ಸುರಸಾಲದಿಂದೆ ಬಿದುವಿಂ ಮಾಧುರ್ಯಮಂ ತ್ಯಾಗ ಸಂ
ಪದಮಂ ಸರ್ವ ಜನಾಕ್ಷಿ ಸೌಖ್ಯ ಪದಮಂ ತಾನಾನದಾ ಕಾಲಕೂ।
ಟದ ಘೋರತ್ವಮನೂರ್ಮಿ ಸಂಚಲನಮಂ ಮೇಣೌರ್ವ ಸಂತಾಪಮಂ
ಪದೆದಾಶಿರ್ಥವಮೊಂದಿದಳ್ ಸಿರಿಯಿವಳ್ ಕೇಳ್ ಪಾಪೆ ದುಗ್ಧಾಬ್ಧಿ
ಯೊಳ್ || ೫೮ ||

ಮತ್ತಂ—

ವೃ || ಇಂದಿರನೊಂದಿದಂ ಮುನಿಪ ಸುಂದರಿಯಂ ನಹುಷಂ ಸಮಂತು ಬಿ
ಟ್ಟಿಂ ದಿವದತ್ತಣಿಂ ಶಶಿ ಗುರು ಪ್ರಮದಾ ರತನಾದನೆಯ್ದಿದಂ।
ಕುಂದಿ ರಸಾತಲಕ್ಕೆ ಬಲಿ ಯಿಂತು ಭವಾಬ್ಧಿಯೊಳಬ್ಧಿರಲ್ಲರಾ
ರಿಂದಿರೆಯಿಂದೆ ಕೂಡಿ ನೊಗಮಾಂತ ಮಹಾಂತರಸಂತೆಯಲ್ಲಿ ಪೇಳ್ || ೫೯ ||

ದೇವ.—ರಾಯ! ಎಲ್ಲರುಮಂ ಪರ ಲೋಕ ಹಿತಮನೆಸಪ ದೇವತೆಗಳನಾರಾಧಿಪುದಱೊಳ್ ಅನುರಕ್ತರಂ ಮಾಱ್ಪುದಱಿಂ ರಾಜ್ಯ ಲಕ್ಷ್ಮಿ ಸದರ್ಥಮನೊಳಕೊಂಡಿರ್ಪಳೆಂದು ಪೇೞಲಕ್ಕುಮಲ್ಲದೆ ದುರರ್ಥಮನೊಳಕೊಂಡಿರ್ಪಳೆಂದೆಂತು ಪೇೞಲಕ್ಕುಂ?

ರಾಯಂ—ಸತ್ಯ ಜ್ಞಾನಂಗಳಿಂದಮೆ ಆರ್ಚ್ಯನೀ ಭಗವಂತಂ ನಾರಾಯಣನಿರೆ ಇತರ ದೇವತೆಗಳನಾರಾಧಿಪುದಱಿಂದೇಂ ಪಳಂ? ಪಲ ನುಡಿಯಿನೇಂ?

ವೃ ॥ ಒಡೆಯಂ ತನ್ನವನಾಗಿರಲ್ ಪೆಱರಿನೇಂ ದಿವ್ಯಾಗ್ನಿಯೊಪ್ಪುತ್ತಿರಲ್
ಕಿಡಿಯೊಟ್ಟಿಗ್ಗಿಂ ಪಳವೇಂ ಸುಧಾಂಶುವೆಸೆಯಲ್ಕೇನಿಂದ್ರುಗೋಪಂಗಳಿಂ ।
ಕಡು ಮರ್ದಿಂದಮದೇಂ ಸುಧಾ ರಸಮಿರಲ್ಕೇಂ ಕೂಪದಿಂ ಸ್ಪರ್ಧೆನೀ
ಜಡಮಾರಾಜಿಸಲೇಂ ಸುರೌಘದೆ ಪರಂ ನಾರಾಯಣಂ ತಾನಿರಲ್
॥ ೬೦ ॥

ದೇವ.—ರಾಯ! ಅದಂತಿರ್ಕೆ. ಜವ್ವನದೊಳ್ ವಿಷಯಂಗಳನನುಭವಿಸಿ ಚರಮ ವಯಸ್ಸಿನೊಳ್ ವಿತೃಷ್ಣನಾಗಿರ್ಪ ನಿನಗೆ ವಿಜ್ಞಾನಮಿನಿಸಿಸೊಗೆದಿರ್ಕುಂ.

ರಾಯಂ—(ನಕ್ಕು) ವಿಷಯಂಗಳನನುಭವಿಸಿದವಂಗೆಂದುಸಿರದಿರ್ ನೋಡು—

ವೃ ॥ ಭ್ರಾಂತಾತ್ಮಂಗಂತು ತೋರ್ಕುಂ ವಿಷಯ ತತಿಯನಾನುಣ್ಬೆನೆಂದಂತಿರಲ್ ತಾ
ನೆಂತಾಸಿಕ್ಕುಂ ಮಗುಟಿಚ್ ತತ್ಸುಖಮುನವನದಂತಲ್ತು ಕೇಳ್ ತೃಪ್ತಿಯಿಂ ಸೊ।
ರ್ಕಾಂತಂತೋರಂತವಾ ಸೀರಸರ ಮುದುಪರಂ ಬಟ್ಟು ಪೋಪಂತಱಿಂ ತಿ
ನ್ನುಗ್ಗಿಂ ತಾಂ ಮತ್ರ್ಯಾಳಿಯಂ ಕರ್ವಿನವೊಲೆ ವಿಷಯ ವ್ರಾತಮೆಂದಾ
ನೆಣಿಪ್ಪೆಂ ॥ ೬೧ ॥

ಮತ್ತಂ—

ಕಂ ॥ ನೆಱೆ ಭೇದಾರ್ಥವನುಸಿರ್ವುದು
ಬಱಿದೆ ಜನಂ ವಿಷಕೆ ವಿಷಯುಕಜಕಮುಜಂಗಂ ।
ಅಱಿಯೆ ತದಾಕಾರಮೆ ಪೊ
ಚ್ಚಱಿಕುಮುವಱಿತೊಳಿರ್ಪ ಭಿನ್ನತೆಯುಸಿದು ನೂನಂ ॥ ೬೨ ॥

ಇನಿತೆ ಅಲ್ಲಂ—

ಕಂ ॥ ತರುಣತೆಯೊಳ್ ತೃಷ್ಣಾ ವಧು
ಸಿರಾಶೆಯಿಂ ತೊಱೆದು ತೆರಳದಿರೆ ನೆಱೆ ಬಱಿಯುಂ ।
ತೆರಳ್ಗುಮೆ ಬರೆಸೆಳೆಯುತುಮುಸು
ಚರಿ ಜರೆ ಬಿಗಿದಪ್ಪುತಿರೆ ಧರಾತಲದಮುಮಾ ॥ ೬೩ ॥

ಮತ್ತಮಾಲಿಸು—

ವೃ ॥ ಗುರುತರ ತೃಷ್ಣೆ ತಾಂ ಮಿಗೆ ಜರಾ ಜ್ವರದಿಂ ಪರಿತಾಪಮಾಂತ ನಿ
ಶ್ಚರಣರೆನಿಪ್ಪಚೇತನರನೊತ್ತಿ ರದಂಗಳ ದಾರ್ಢ್ಯಮುಂ ಕಚ ।
ಪ್ರರುಚಿರ ಕಾರ್ಷ್ಣ್ಯಮುಂ ತನು ಯುವತ್ವವನಾಯುವ ದೀರ್ಘ ಭಾವಮುಂ
ವರ ನಯನಾತಿಶೋಭೆಯನಡಂಗಿಸಿ ಸೊರ್ಕಿ ಕಡಂಗಿ ತೋಱುಗುಂ ॥ ೬೪ ॥

ದೇವ.—ಹಾ! ಕಷ್ಟಂ. ಎಲೈ ಮಹಾ ಯೋಗಿಯೆ! ಮುಂದೆಂತು ನಡೆಯ ವೇೞ್ಕುಂ!

ಗೋರಕ್ಷಂ.—(ರಾಯನಂ ನೋಡಿ) ರಾಯ! ಬಾರ. ವೈರಾಗ್ಯಕ್ಕೆ ಬೀಜಭೂತಳೆನಿಪ ನಿನ್ನಿನೆಯಳಂ ಯೋಗ ಬಲದಿಂ ಬರ್ದುಂಕಿಸಿ ಮಂತಣದೊಳವಳೊಡನೆ ನಿನ್ನಂ ಯೋಜಿಸಿ ನಿನ್ನ ನಿರ್ವೇದಮನುಡುಗಿಸಿದಪೆಂ. [ಎಂದು ರಾಯನ ಕೈವಿಡಿದು ತೆರಳ್ದಪಂ]

ದೇವ.—(ಆನಂದದಿಂ) ಅಂತಕ್ಕೆ. ನಾನುಮಿತ್ತಲೆ ಒಂದು ರಹಸ್ಯ ಸ್ಥಲಮಂ ಸಂಪಾದಿಸುವೆಂ.

[ಎಂದು ಪೊರಮಟ್ಟಂ]

ಇಂತು ಚತುರ್ಥಾಂಕಂ

---

## ಪಂಚಮಾಂಕಂ

[ಬಟಿಕಮೇಕಾಂತದೊಳರಸನುಂ ಬರ್ದುಂಕಿದ ಭಾನುಮತಿಯುಂ ಪುಗುವರ್]

ಭಾನು.—ಆರ್ಯಪುತ್ರ! ಎನ್ನಂಗಂಗಳೆಲ್ಲಮುಂ ಬಲಹೀನಂಗಳಾಗಿರ್ಪುದಱಿಂ ನೈತಿರಲಾಱೆಂ. ಇನಿಸೆನ್ನನವಲಂಬಿಸ. [ಎಂದಪ್ಪಲೆಳಸುವಳ್]

ರಾಯಂ—(ಪೆಱಸಾರ್ದಂ)

ಭಾನು.—(ಅಚ್ಚರಿಯಿಂ) ಆರ್ಯಪುತ್ರ! ಇದೇಂ ಪೆಡಮುಗುೞ್ವೆ?

ರಾಯಂ—ಏಂ? ಪೆಡಮುಗುೞ್ವೆನೇ? ಇಲ್ಲಂ.

ಭಾನು.—ಎನ್ನ ಮೆಯ್ಯಂ ಮುಟ್ಟದೆಯೆ ಪಿಂದಿರುಂಗಲಿಲ್ಲಮೇಂ?

ರಾಯಂ—

ಕಂ || ಮಡಿಯಲ್ಕಾಂ ಮಡಿದಪೆ ನೀಂ
ಪಡಿಯನಿದರ್ಕೆಸಗುವುದೆ ಸಮಂಜಸಮಲ್ತೇ ।
ಕಡು ಯೋಗ ಬಲದಿನೆಂದುಂ
ಕಿಡದಿಹ ಬಾಳ್ವಡೆಯಲೆಳಸುತಿರ್ದಪೆನೀಗಳ್ || ೬೫ ||

ಭಾನು.—(ಅಂಜುತೆ ತನ್ನೊಳ್) ಇದೇನೀತನೆನ್ನಂ ತೊಱೆಯಲೆಳಸಿ ಯಿಂತುಸಿರ್ದನಕ್ಕುಮೆ? ಇದನೆಂತು ಮಾಣಿಪುದು? ಅಕ್ಕಟಾ!

[ಎಂದು ರಾಯನಂ ಕಿಸುಗಣ್ಣಿ ನೋೞ್ಪಳ್]

ರಾಯಂ—(ತನ್ನೊಳ್)

ಕಂ || ಪರೆದೊರ್ಚಣಮುೞಿತೆ ಮೋಹ ಕು
ಹರದೆರ್ದೆಯಂ ಮಗುೞ್ದು ಮಗುೞ್ದುಮುೞ್ದುದುದಿದೆಯಾ ।
ಗಿರವೇೞ್ಕುಂ ತರಲತರಾಂ
ಬುರುಹಾಕ್ಷಿಯ ಕಾಲಕೂಟ ಕುಟಿಲ ಕಟಾಕ್ಷಂ || ೬೬ ||

ಮತ್ತಂ—

ಕಂ ॥ ತರಲತರ ಭಾವ ಭಂಗುರ
ತರಲತರ ಕಟಾಕ್ಷ ಪಾತಮತಿ ಕಷ್ಟಂ ತೋ ।
ರ್ದಿರೆ ಲಬ್ಧ ವಿಪಾಕಮುದಂ
ತರಂಗದೊಳ್ ಗೆಯ್ವುದೇಂ ವಿವೇಕ ವರಾಕಂ ॥ ೬೭ ॥

ಭಾನು.—(ಸಂತಸದಿಂ ತನ್ನೊಳ್) ಆರ್ಯಪುತ್ರನೆನ್ನೊಳನುಕೂಲನಾಗಿರ್ಪಂತೆ ತೋರ್ಕುಂ (ಎಂದು ಮಗುಳ್ ಕಿಱು ನಗೆಯಿಂದೆ ನೋೞ್ಪಳ್)

ರಾಯಂ—(ದಿಟ್ಟಿಯಂ ಪೆಡಮಗುೞ್ಚುತ್ತೆ) ಇನ್ನೀ ಯಪಾಂಗ ಭಂಗಿ ಸಾಲ್ಗುಂ ಬಿಡೌ.

ಕಂ ॥ ಎನ್ನೆವರಂ ಹೃದಯ ಪದವ
ನುನ್ನತ ತಮಮಪಳ್ಳುದುರ್ಮಸಿಯ ಮುಚ್ಚಿಸುವೊಲಿರ್ಕುಂ ।
ಅನ್ನೆವರಮನಂಗಸ ರಂ
ಗನ್ನೆಱೆ ರುಚಿಯಿಕ್ಕುಮೇಣನಯನೆಯ ನಯನಂ ॥ ೬೮ ॥

ಭಾನು.—ಹಾ ! ದುರ್ದೈವಮೆ ! ನಿನತ್ತೀ ಪರಿಣಾಮಮವಿಂತಾದುದೆ ?

[ಎಂದು ಕಂಬನಿಗಱೆವಳ್]

ರಾಯಂ—

ವೃ ॥ ಕಿಱು ನಗೆಯುಣ್ಮೆ ಚಿತ್ರತರ ನೇತ್ರದಿನೊರ್ಮೆಯದೊರ್ಮೆ ನೋೞ್ಪೆ ನೀಂ
ಬಱು ಬಱು ದಿಟ್ಟಿಯಿಂದೆ ನಲಿದಾಡಿದುದಟ್ಟುದುಮಾದುದಿಂ ಬಿಡೌ ।
ನೆಱೆ ತೊಱೆದಿರ್ಪೆನಾಸೞಿನೆ ತದ್ರುಚಿಯಂ ಸುಗಿದೋಡೆ ಕಾಮನೇ
ನೞಿಯೆ ಫಲಿಕ್ಕುಮೇ ತೆಗೆ ಭವದ್ವ್ಯವಸಾಯಮದೇಕೆ ಮಾನಿನೀ ॥ ೬೯ ॥

ಮತ್ತಂ—

ವೃ ॥ ಜನಿಯಿಸೆ ಬುದ್ಧಿಯಾತ್ಮದಮನಂಗೆಯೆ ರಂಭೆಯೆ ಬಂದೊಡೇಂ ಸ್ಮರಂ
ಮನಸವನೆ ಬಿಟ್ಟು ಭಗ್ನಧನುವಾಗಿರೆ ಮೇನಕೆ ಸಾರ್ದೊಡೇಂ ಫಳಂ ।
ತನುವಿದು ಹೇಯಮೆಂದು ತೆಗೞ್ದಿರ್ಪೆನಮುರ್ವಶಿ ಯೆಟ್ಟಿರಲ್ಕದೇಂ
ವನಿತೆಯೆ ಮಾಯೆಯಂ ಜಯಿಸಿದಾತನನೇಂ ಗಡ ನಾರಿ ಮಾೞ್ಕುಗುಂ ॥ ೭೦ ॥

ಭಾನು.—ಆರ್ಯಪುತ್ರ ! ಅಂತಾದೊಡೆ ಜನಕನ ಮನೆಯೊಳಿರ್ಪಂಗೆಂತಂತೆಯೆ ನಿನ್ನ ಮನೆಯೊಳಿರ್ಪಂಗಂ ಜ್ಞಾನಂ ಸುಲಭಂ.

ರಾಯಂ—ಜನಕಾದಿಗಳ್ ಪಲವುಟ್ಟುಗಳಿಂದವೊಗೆದ ಸಿದ್ಧಿಯಿಂ ಜೀವನ್ಮುಕ್ತರಾಗಿರ್ದಪರ್. ಅಪಕ್ವ ಕಷಾಯರಾದೆಮ್ಮನ್ನರ್ಗಂತಲ್ಲಂ. ಅದಱಿಂ—

ಕಂ ॥ ಬೃಹದಂಧ ಕೂಪ ರೂಪದ
ಗೃಹದತ್ತಣಿನೀಗಳುದ್ಧೃತಂ ಮಚ್ಚಿತ್ತಂ ।

ಮಹಿತ ಗುರೂಪಾಸನೆಯಿಂ
ದಹಹಾ ! ಭವಪಥದೊಳೆಂದುಮಿಂ ಕೆಡೆಪೆಸದಂ || ೭೧ ||

ಮೊದಲೆ ಇದಱ ಸಾರವನಱಿತಿರ್ದೊಡಮುದರ್ಕೆ ತಕ್ಕುದಂ ಗೆಯ್ಯಲಾರ್ತೆಸಿಲ್ಲಂ. ಅದಂತೆಯಲ್ತೆ ?

ಕಂ || ಅಱಿಯುತ್ತಿರೆ ಹಿತವಸ್ತುಗ
ಳುಱಿದವಱಿೊಳ್ ಬದ್ಧಮಕ್ಕುಮಳಿಪಿಂ ಮನಮಾ ।
ಬಱಿವಿಡಿದದಱಿಂ ಮರ್ಮವ
ನೆಱಿವ ಬೆಸಂಗೆಯ್ದು ದುಃಖಭಾರಮನಾಂತೆಂ || ೭೨ ||

ಹಾ ! ತೆಗೞಿನ್ನ ಬಾಳ್ಕೆಯುಂ.

ವೃ || ಹತಮತಿಯಾದೆನಾಂ ತಪದೆ ನಿಲ್ಲದೆ ತಾಪವನಿತ್ತು ಲೋಕಕಾ
ತತಗುಹೆಯಂ ಪುಗಲ್ ಬಗೆಯದರ್ಥದೆ ಕೋಶಮನೆಯ್ದೆ ತುಂಬಿ ಪು ।
ಣ್ಯತತಿಯನಾರ್ಜಿಸಲ್ ತೊಡಗದೇನವನಾರ್ಜಿಸಿಯಂತರಂಗದ
ಚ್ಯುತನ ಪದಾರವಿಂದಮನೆ ಜಾನಿಸದಚ್ಯುತಮೋಹನಾಗಿ ಹಾ! || ೭೩ ||

[ಎಂದು ಪಿಂದಿರುಂಗಿ ತೆರಳ್ದಪಂ]

ಭಾನು.—ಎಲೆ ಮುಂಡುಕಾಱ! ಉೞಿದೆನ್ನನೆತ್ತಲೆಯ್ದಿದಪೆ? [ಎಂದುತ್ತರಿಗೆಯಂ ಪಿಡಿವಳ್]

ರಾಯಂ—[ಉತ್ತರಿಗೆಯನತ್ತಲೆ ತೂಱಿದೋಡಿದಪಂ]

ಭಾನು.—[ಅವನನೆಟ್ಟಿಟ್ಟು ಕಯ್ಗಳಂ ಪಿಡಿದಪಳ್]

ರಾಯಂ—[ನಿಲ್ತು ಮುನಿದು] ಎಲೆ ದುರರ್ಥರಾಶಿಯೇ !

ವೃ || ಮಲಮೂತ್ರಾಂತ್ರವಸಾಸ್ಥಿಪಿತ್ತಪಿಶಿತಪ್ಲೀಹಾಸ್ರಮಸ್ತಿಷ್ಕಸಂ
ಕುಲಲಾಲಾಪರಿಪೂರ್ಣಮಕ್ಕಟ ಮಹಾಜಾಲೋಪಮಾನಸ್ನಸಾ ।
ವಲಿಬದ್ಧಂ ಘನವಾಲಭೀಕರತರತ್ವಕ್ಛಾದಿತಂ ದುಷ್ಕೃತಾ
ವಿಲಮಿಾ ನಿನ್ನ ಶರೀರಭಾರಮೊಳದಿನ್ನುಂ ಭಾವಿಸಲ್ ದುರ್ಗುಣಂ || ೭೪ ||

ಅದಱಿಂ—

ವೃ || ಇಟ್ಟಪೆನೇ ಕುಚಾಖ್ಯಫಲಪಿಂಡದೆ ಪಾಣಿಯನಂತು ಗಂಡಮಂ
ನಿಟ್ಟಿಪೆನೇ ತೊವಲ್ತಿದಿಯನಂಗವನಪ್ಪಿಕೊಳಲ್ಕದೇಂ ಮನಂ ।
ಗೊಟ್ಟಪೆನೇ ಸಮಂತು ಕಫವಿಸ್ರಯುತಾಸ್ಯವನೆತ್ತಿಯೊತ್ತಿ ಮು
ತ್ತಿಟ್ಟಪೆನೇ ನಿರಸ್ಯಮಬಲಾ ನಿರಯಂ ಗಡ ಮೂತ್ರವಿಣ್ಮಯಂ || ೭೫ ||

[ಎಂದು ಕಯ್ಯ ಬಿಡಿಸಿಕೊಳ್ವಂ]

ಭಾನು.—[ಅೞುತೆ ರಾಯನಡಿಗಳೊಳ್ ಬಿೞ್ವಳ್]

ರಾಯಂ—[ಖೇದಂಗೊಂಡು ತನ್ನೊಳ್] ಆಹ ! ವಿಷಯಂಗಳನತಿಕ್ರಮಿಪುದರಿದು.

ಕಂ ॥ ಮನಮಂ ಬಜ್ಜರದಂತಿರೆ
ಘನ ವಿಷಯಿಗಳಂ ಸಮಂತು ಕಲ್ಗಳ ಪಾಂಗಿಂ ।
ಅನುವಿಂ ಗೆಯ್ಯದವಂ ವಿಷ
ಯ ನಿಕರಮಂ ಗೆಲ್ಲಲಾರ್ಪನೇ ಭೂತಲದೊಳ್ ॥ ೭೬ ॥

ದೇವ.—[ಪೊಕ್ಕು ತನ್ನೊಳ್] ರಾಯನೀಗಳ್ ಆರ್ದ್ರ ಹೃದಯನಾಗಿರ್ಪಂತೆ ತೋರ್ಕುಂ. ಇದೆ ಪೊೞ್ತು. [ಎಂದು ಬೞಿಸಾರ್ದು]

ದೇವ! ಇನ್ನಾದೊಡಮುಕ್ಕೆ ದೇವಿಯೊಳನುಗ್ರಹಂ. ಅಕಟಾ! ಈಕೆಯ ಪ್ರಣಯ ಸುಖಮನೆಂತುೞಿದಪೆ?

ರಾಯಂ—[ಅಡಿಗಳಂ ಬಿಡಿಸಿಕೊಂಡು ದೇವತಿಲಕನಂ ನೋಡಿ]

ಕಂ ॥ ಗರವೊಂದಿದ ಮಧುವೊಲ್ ಪೆಣ್
ಕರಮುಜ್ಜ್ವಲತೆಯಂ ಸಿಮಿರ್ಚಿ ಯೆರ್ದೆಗತಿ ಮುದಮಂ ।
ಸುರಿದರಸತೆಯೊಳ್ ಬಿರಯದಿ
ಸಿರುತೀವಾ ಸೌಖ್ಯಮೆಸ್ನವರಮಿರ್ದಪುದೋ ॥ ೭೭ ॥

ಮತ್ತಂ—

ವೃ ॥ ಕಿಡಿಸುತೆ ಧೈರ್ಯಮಂ ನೊಣೆಯುತೈಸಿರಿಯಂ ಘನ ಚಿತ್ತಮಂ ಮರು
ಳ್ಪಡಿಸುತೆ ಬೀೞಿಸುತ್ತಡಿಗಳೊಳ್ ತೆಗೞುತ್ತೆ ರತಾಂತದೆಂತೊ ಬಾ ।
ಯ್ಪಡಿಸುತೆ ಗೆಯ್ದು ನಿದ್ರನನಸೂಪಮರಾಗಿಹ ನಂಟರಿಂದೆ ಬೇ
ರ್ಪಡಿಸಿ ಯುವಾನನಂ ಕಿಬಿಪನಂತೆಸಪಳ್ ಗಡ ನಾರಿ ನಾರಿಯೇ ॥ ೭೮ ॥

ಭಾನು.—ಹಾ! ಎತ್ತಲೆಯ್ದಿದುವು ಪರಸ್ಪರ ಪರವಶತೆಯಿಂದೆಸಗುತಿರ್ದ ವಿಲಾಸಂಗಳ್?

ರಾಯಂ—ತೊಱತೆ ತೊಱತೆ ಯೀ ಬರಡು ನುಡಿಗಳಂ.

ವೃ ॥ ಬಂದಂ ಮತ್ಪ್ರಿಯನಿಂದೆ ಸಲ್ಲಿಳಿದೆ ತಾನಿರ್ಪಳ್ ಗಡಾ ಮುಂದೆ ನೋ
ಟ್ಪಿಂದು ಸಲ್ಲನ ಪದ್ಮ ವೃಷ್ಟಿ ಸೂಡೆ ತಾಂ ಕಾಂತಾ ಸ್ಮಿತಂ ಪ್ರೇಮಮಾ ।
ನಂದಂದೀವುಗುಮೆಮ್ಮ ಬೇಂಟಮದು ದಾವ ಪ್ರಾಯಮೆಂದೆಂಬ ವಾ
ಗ್ಬೃಂದಂ ಯೌವನ ರೋಗ ಜಾತಮುರು ಪೀಡಾ ಹೇತು ಸೋಪದ್ರವಂ ॥ ೭೯ ॥

ದೇವ.—ರಾಯ! ಜವ್ವನಮಂ ಕುತ್ತಮೆಂದೆಂತುಸಿರಲಕ್ಕುಂ!

ರಾಯಂ— ಆಲಿಸ—

ವೃ ॥ ಜನಿಯಿಸೆ ಯೌವನಾಮಯಮದಂದೊಗೆಗುಂ ಜ್ವರಮಕ್ಷಿ ವಿಭ್ರಮಂ
ಘನತರ ದುರ್ವಿಕಾರ ತತಿ ಗಂಡ ಹೃದೂರು ನಿತಂಬ ಮುಖ್ಯ ಗಾ ।
ತ್ರ ನಿಕರದುಲ್ಬಣಂ ಸುಹೃದಯರ್ಗೆ ಮನೋವ್ಯಥೆಯಾತ್ಮ ನಾಶಮುಂ
ಮನದೆ ವಿಲೋಕಿಸಲ್ ನೆರೆಗುಮೇ ಗ್ರಹಣೇ ಮುಖದಿಂದವಿಾ ತೆಱಿಂ ॥ ೮೦ ॥

ಭಾನು.—[ಮುಸುಂಕನಭಿನಯಿಸಿ ಜವನಿಕೆಯಂ ನಿಟ್ಟಿಸಿ] ಸಖಿ! ವಾಸಂತಿಕೆ! ಕುಮಾರನಂ ಕರೆತಾರ. ಅವನಂ ಮುಂದೆ ನಿಲ್ಲಿಸಿ ಆರ್ಯಪುತ್ರನ ಭ್ರಾಂತಿಯಂ ಕಳೆವೆಂ.

ರಾಯಂ—[ತನ್ನೊಳ್] ಇದುವುಂ ದುಸ್ತರಮಾಗಿರ್ಕುಂ.

[ಕುಮಾರಂ ಪೊಕ್ಕು ತಾಯ ಬಳಿಯೊಳ್ ನಿಲ್ವಂ]

ಭಾನು.—[ಕುಮಾರನಂ ರಾಯನ ಮುಂದೆ ಪಿಡಿದು ನಿಲ್ವು, ಕಣ್ಣೀರನೊರಸಿಕೊಳುತೆ] ಆರ್ಯಪುತ್ರ! ಈ ಪಸುಳೆಯಂ ಕಾಪಿಡುವರಾರ್?

ರಾಯಂ.—[ವೈರಾಗ್ಯಮುಂ ಶೋಕಮುಂ ಬೆರೆಯೆ ತನ್ನೊಳ್]

ವೃ॥ ಒಳದೆನಿತಾದೊಡಂ ತಿಳಿವಿನೆಚ್ಚರವಾಂತಿಹವಾವದೂಕರಂ
ಘಳಿಲನೆ ಗೆಲ್ವ ಭಾವನಿಚಯಂ ಸುತನಿಂದಮೆ ಪುಷ್ಟವಾಗೆ ತಾ।
ನಿಳೆಯೊಳದಾವನಾವ ಬಗೆಯಿಂದೆ ಮನಂಬಿಡಿದಿರ್ದು ಗೆಲ್ಲಮಂ
ತಳೆವನೊ ಕಾಣೆನಾಂತರಮೆನಿಪ್ಪ ತದುಗ್ರವಿಕಾರ ವಾರದೊಳ್ ॥ ೮೧ ॥

ದೇವ.—(ನೋಡಿ ಸಂತಸವಟ್ಟಂತೆ) ದೇವ! ದೇವಿಯುಸಿರ್ದುದರ್ಕೀಗಳ್ ಪಡಿನುಡಿಯಂ ಕುಡ.

ರಾಯಂ—ಎಲೆ ದೇವತಿಲಕ! ಪಾರಮಾರ್ಥಿಕ ಸುಖದೊಳ್ ತತ್ಪರನಾದವಂಗೆ ರಕ್ಷಣೆಯ ಭಾರಮೇಂ?

ವೃ॥ ಜಂತು ಪ್ರತ್ಯಯವಿಂತುಟಾತ್ಮಜನಿವಂ ತಾತಂ ಗಡೆಂದೆಂಬುದಾ
ತ್ಮಂ ತಾಂ ದೇಹದಿನನ್ಯ ದೇಹಮನೆ ಸಾರುತ್ತಿರ್ದಪಂ ಸಂತತಂ।
ಮುಂತುಂ ಸತ್ತ್ವವನಾಂತು ಸಂತತ ನಿವೃತ್ತಿ ಸ್ಫೂರ್ತಿಯುಳ್ಳಂಗದೇ
ನೆಂತಿರ್ಕುಂ ಜನಕತ್ವ ಜನ್ಯತೆಗಳಾತ್ಮಂ ಕಾಯದಿಂದಂ ಪೆಱಂ ॥ ೮೨ ॥

ಜನ್ಯ ಜನಕಭಾವವಿಂದಾತ್ಮ ನಿಷ್ಠವಾಗಿರ್ಕುಂ. ಆದೊಡಂ—

ಕಂ॥ ದೈವಮೆ ಎಲ್ಲಮನಾಳ್ಗುಂ
ದೈವಾರಕ್ಷಿತಮುಮನ್ಯ ರಕ್ಷಿತಮೊಳದೇ।
ಭಾವಿಸೆ ವಿಷ್ಣುವನುೞಿದಂ
ದಾವೊಂ ತಂದಿತ್ತನೞಿದ ವಿಪ್ರಾತ್ಮಜರಂ ॥ ೮೩ ॥

ದೇವ.—[ಬಾಲಕನಂ ತೋರ್ದು] ಅಕಟಾ! ಇವಂಗತಿ ಕಷ್ಟಮಾದುದು.

ಕಂ॥ ಕರೆದೆೞಿಕವೆರ್ದೆಯೊಳುಣ್ಮಿ
ತ್ತಿರೆ ಪರಿತಂದಣುಗನಂ ತೊಡೆಯೊಳೇಱಿಸಿ ಮುಂ।
ಗುರುಳಂ ತಿರ್ದಿ ರಜೋಧೂ
ಸರ ವದನವನಾವನೊರಸಿದಪನಿಂ ಕರೆಯಿಂ ॥ ೮೪ ॥

ರಾಯಂ—(ತನ್ನೊಳ್) ಇಂತಪ್ಪ ವಿಲಾಸಂಗಳಿನ್ನಾವನ ಹೃದಯಕ್ಕೆ ಅಂಕುಶಂಗಳಾಗಿರ್ಕುಂ? (ಪ್ರಕಾಶಂ) ಮಂತ್ರಿಯೇ!

ಕಂ॥ ಅವಿಲಮುಂ ಕ್ಷಣಿಕಮುವೆನಿ
ಪಾ ವಿಲಸಿತ ವಿತತಿ ನಿರ್ಮಲಾತ್ಮನ ಮನಮಂ।
ಬೇವಸವಡಿಸುಗುಮೇಂ ಪರಿ
ಭಾವಿಕುಮೇ ಮುಕುರದೆಸಕವಮಂ ಫೂತ್ಕಾರಂ ॥ ೮೫ ॥

ಮತ್ತಂ—

ಕಂ॥ ರೇತೋಸ್ಸೃಗ್ಭೂತಂ ಸಂ
ಜಾತಂ ಮೇಣ್ ಪೂತಿ ಗಂಧ ಪೂರಿತ ಬಿಲದಿಂ।
ದೀ ತೆರದ ಪುತ್ರ ಕೃಮಿಯಸ
ದೇತರ್ಕಬ್ಕಿರ್ತಪರ್ ಸಮಾಹಿತ ಚಿತ್ತರ್ ॥ ೮೬ ॥

ದೇವ.—ರಾಯ! ಮುಖ್ಯವಾಗಿ ಪುತ್ರರ್ ಸ್ವರ್ಗ ಸುಖಕ್ಕೆ ಹೇತುಭೂತರೆಂದ ವರಂ ಪಿರಿಯುರಾದರಿಪರಲ್ತೆ!

ರಾಯಂ—

ವೃ॥ ಚಿರಮಭ್ಯಸ್ತವೆನಿಪ್ಪ ದುಃಖದೆ ಲಭಿಕ್ಕುಂ ನಶ್ವರಂ ವಸ್ತುವಂ
ತಿರೆ ತದ್ವಸ್ತುವಿನಿಂದಸೂನ ತರ ಶಂಕಾ ಬಾಧೆಗಳ್ ತೋಱುಗುಂ।
ಅರರೇ! ಅಂತದು ನಷ್ಟಮಾಗೆ ಮಿತವಿಲ್ಲಂ ದುಃಖಕಾ ಪ್ರಾಜ್ಞರೀ
ಪರಿಯಾ ಸ್ವರ್ಗದ ಸೌಖ್ಯಮಂ ಬಯಸುವರ್ ಮತ್ತಾವುದೋ ಆಪದಂ ॥ ೮೭ ॥

ಆದುದಱಿಂದಮೆ ದುಃಖ ದುರ್ದಿನಂಗಳ ಬಾಹುಳ್ಯಮಂ ಸುಖ ಖದ್ಯೋತದ ಲಘುತ್ವಮಂ ಮಹಾತ್ಮರುದಾಹರಿಪರ್. ಮತ್ತಂ—

ಕಂ॥ ಬುವಿಯೊಳ್ ಬ್ರಹ್ಮಾನಂದಾ
ರ್ಣವದಾ ಕಣಮಲ್ತೆ ನಾಕ ಮುಖ ಸುಖಮುದಱಿಂ।
ದವೆ ನಾನಾ ಕ್ಷುದ್ರ ಸುಖದ
ಲವಮುಮನೆಂದೆಂದು ಮೆಳಸಲೊಲ್ಲಂ ಬಲ್ಲಂ ॥ ೮೮ ॥

ದೇವ.—ಅಕಟಾ! ರಾಜಾಶ್ರಿತಂಗಳಪ್ಪ ಸಂಪದಾದಿಗಳ ಪಾಡೆಂತು?

ರಾಯಂ—

ವೃ॥ ಸಿರಿ ತಾಂ ನಾಡೆಯುಪಾತ್ರಯಿಕ್ಕೆ ತೊಱೆದೀ ಯೆನ್ನಂ ಸುಖಾಪೇಕ್ಷೆಯಿಂ
ಕರೆವಾ ಮಾನವರಂ ಮಹಾಮುದಪಡಂ ಕಾಮು ಕ್ರುಧಾ ಮೇದುರಂ।

(ಕೈಮುಗಿದು)

ಗುರು ದೇವ ದ್ವಿಜರಿಂದೆ ಮಂತುವಿದು ತಾಂ ಕ್ಷಂತವ್ಯಮಾಂ ಜ್ಞಾನದಿಂ
ಕರಮಾಕೃಷ್ಟನೆನಿಂದು ಸಾರ್ದು ಬೆರೆದೆಂ ಸಾಕ್ಷಾತ್ಪರಬ್ರಹ್ಮನೊಳ್ ॥ ೮೯ ॥

ದೇವ.—ರಾಯ! ಎಲ್ಲಮಂ ತೊಱೆದಿಂತು ಬಡವನಪ್ಪ ನಿನಗೆ ಪೊಡೆವೊರೆವುದುಂ ಕಡು ಕಷ್ಟಮುಕ್ಕುಂ.

ರಾಯಂ—

ವೃ॥ ಮನವೊಸೆವಂದದಿಂ ತೊಬಿಲುತುಂಡು ರಸಾನ್ನವನಸ್ಯ ಗೇಹದೊಳ್
ಕೊನೆದೆಸಗುತ್ತೆ ಶಾಖಿಗಳ ತಣ್ಣೆಳಲೊಳ್ ಮಿದು ಕಂತೆ ವಾಸನಾಂ।
ತು ನಿಯಮಮುಂ ಯಥಾ ರುಚಿಯೊಳೊಂದುತುಮಾತಪ ಶೀತ ವಾತದಾ
ಅನುಭವಮುಂ ಸೊಗಂ ಜನಿಕುಮಿಂತಿರೆ ದೇಹದೆ ಗೇಹದೇಂ ಸೊಗಂ ॥ ೯೦ ॥

ಪೊಡೆವೊರೆದುಕೊಳ್ವ ಕಷ್ಟಮುಮಂತಿರ್ಕೆ. ಕೇಳ್—

ವೃ॥ ಅಯಿಸಮುಕ್ಕುವೊಂದು ಕಣಮಾರಯೆ ಕಾಲ ಗುರು ಪ್ರವಾಹದೊಳ್
ಹೇಯಮೆನಿಪ್ಪ ಕಾಯಮುಕಟಾ! ಇದು ನಿಲ್ಗುಮೆ ನೋಡಲಿಂತಿದಂ।
ಶ್ರೇಯಮನಿಚ್ಚಿಪರ್ ಮನದೆ ನಚ್ಚುವರೇಂ ತೆಗೆ! ನಿಲ್ಕೆ ಪೋಕೆ ತಾ
ನೀಯೆನತಾತ್ಮನೊಂದುಗೆಮು ನಿರ್ಭರ ನಿತ್ಯ ಸುಖಾನುಭೂತಿಯಂ ॥ ೯೧ ॥

ಅಂತುಮಲ್ಲದೆ—

ಕಂ॥ ಯಮನಾಜ್ಞೆಯನಾಶಿಸುತಿಹೆ
ನಮಮಾ! ಅನೆನ್ನನುಬಿಗೆ ರಾಜ್ಯಾಧಿಕ ಭೋ।
ಗಮದೆನ್ನಂ ವಂಚಿಸಿ ಕಿಡಿ
ಕುಮುದಱನದನೇಕೆ ತೊಱೆಯಲಾಗದು ಪೇೞಾ ॥ ೯೨ ॥

ಮತ್ತಮಾಲೋಚಿಸಿ ನೋಱ್ಪೊಡೆ—

ವೃ॥ ಉರು ಸಂಕಲ್ಪ ವಿಕಲ್ಪನಾ ರಚಿತಮೀ ವಿಶ್ವಂ ಚಿದಾಕಾಶದ
ಲ್ಲರರೇ! ಚಿತ್ರಮತೂಲಿಕಾದಿ ಕರಣಂ ನಿರ್ಭಿತ್ತಿಕಂ ಶಿಲ್ಪಿಯಾ।
ಒರೆವರ್ ಸ್ವಪ್ನಮಿದೆಂದು ಸಂದಿರೆ ಕೆಲರ್ ತಾಮಿಂದ್ರಜಾಲಂ ಗಡೆಂ
ದಿರದೆಂಬರ್ ಕೆಲಬರ್ ನಭಃಪುರಮೆನುತ್ತುಂ ಮೇಣ್ಕೆಲಂಬರ್ ಗಡಾ ॥ ೯೩ ॥

ಗೋರಕ್ಷಂ.—ಭಾಪು! ವತ್ಸ! ಭಾಪು! ಎಲ್ಲ ಮುಮುಕ್ಷುಗಳೊಳ್ ನೀನೆ ಪೆಂಪಂ ಪಡೆದಿರ್ದಪಯ್. [ದೇವತಿಲಕನಂ ನಿರುಕಿಸಿ] ಎಲೆ ಮಂತ್ರಿ! ಪಿಂದಿರುಂಗದನಂ ತಿರುಂಗಿಸಲೆಸಪ ಬಲ್ಲಿತನಮಿದು ಸಾಲ್ಗುಂ ನಡೆ. ಈ ರಾಜಪುತ್ರನಂ ರಾಜ್ಯದೊಳಭಿಷೇಕಿಸು. ಆನುಂ ರಾಜ್ಯ ರಕ್ಷಾ ಪಕ್ಷಪಾತಿಯಪ್ಪೀ ರಾಯನೊಡನಿರ್ದಪೆಂ.

ದೇವ.—(ನಿಡಿದುಂ ಸುಯ್ದು) ದೇವನಾಣತಿಯಂತಕ್ಕೆ.

ಭಾನು.—(ಶೋಕ ವಿಕಲೆಯಾಗಿ ಅೞ್ತಪಳ್)

ಗೋರಕ್ಷಂ.—ದೇವಿ! ಮಾರಾಯನ ಅಮೃತೀ ಕರಣ ಸಮಯದೊಳ್ ನಿನಗೆ ಪುನಸ್ಸಮಾಗಮುಮಕ್ಕುಂ ಪೋಗ. (ರಾಯನಂ ಕುಱಿತು) ರಾಯ! ನಿನಗೆ ಮತ್ತಾವ ಪ್ರಿಯಮಂ ಗೆಯ್ವೆಂ?

ರಾಯಂ—

ಕಂ॥ ಜನಿ ಮೃತಿ ವಿರಹಿತ ಪದವಿಯ
ನನುವಿಂ ದಯೆಗೆಯ್ದಿರಾಂತರಂ ತಮಮದು ಚೆ।

ಕ್ಕನೆ ಕಟಿಾದುದಿನ್ನದೇಸೊಳ
ದೆನಗೊಸೆದೆಸಪಾ ಮಹತ್ಪ್ರಿಯಂ ಗುರುವರ್ಯಾ! ॥ ೯೪ ॥

ಗೋರಕ್ಷಂ.—ಅಂತಾದೊಡವಿದಕ್ಕೆ ಭಾರತ ಭಾರತಿ —

ವೃ॥ ಸಂತರ್ ತಾಳ್ದುಗೆ ಕಾರ್ಯಸಿದ್ಧಿ ಪದಮಂ ರಾಜಂ ಪ್ರಜಾಮೋದವಂ
ತಾಂ ತಳ್ತೊಂದುಗೆ ಪಕ್ಷಪಾತಮುಟಿಾದಾ ಶ್ರೀ ಸಾರ್ಗೆ ದಾತಾರರಂ।
ಸಂತಂ ಕೊಳ್ಗೆ ನಿನತ್ತು ಬೋಧೆಯುಟಿಾಪಲ್ ಬಂದಿರ್ದ ವಿತ್ರೋತ್ಕರಂ
ಕಾಂತಂ ಪಾರಿಹರಂ ಪರೀಕ್ಷಿತ ಗುಣಂ ತಾನೆಂಬಿದಂ ಪೆರ್ಮೆಯಂ । ೯೫ ॥

[ಎಲ್ಲರುಂ ತೆರಳ್ವರ್]

## ಇಂತು ಪಂಚಮಾಂಕಂ

ವೃ॥ ಶ್ರೀಮಂತಂ ಯಾದವೇಂದ್ರಂ ಶ್ರಿತ ವಿಬುಧ ಪರಿತ್ರಾಣ ಬದ್ಧಾದರಂ ಸ
ದ್ಧಾಮಂ ಸರ್ವಜ್ಞ ಮೌಳಿ ಸ್ಥಿರ ಪದ ವಿಭವಂ ಸತ್ಪರೀತಂ ಕಲಾಢ್ಯಂ।
ಭೂಮಾನಂದ ಪ್ರದಾತಂ ಕುವಲಯ ವಿಹಿತಂ ಸಂತತಂ ಕೂರ್ಮೆಯಿಂದಂ
ಪ್ರೇಮಂಬೆತ್ತಾಳ್ಕೆ ಮೈಸೂರ್ ಜನಪದಮನಿದಂ ಕೃಷ್ಣರಾಜೇಂದ್ರ ಚಂದ್ರಂ ।

॥ ಶ್ರೀರಸ್ತು ॥

---

# ಜೈಮಿನಿ ಭಾರತ (ಆಶ್ವಮೇಧಿಕ ಪರ್ವ)

## *ಸಂಸ್ಕೃತ ಜೈಮಿನಿ ಭಾರತದ ಕನ್ನಡದ ಅನುವಾದ

---

### ಮೂವತ್ತನಾಲ್ಕನೆಯ ಅಧ್ಯಾಯ

ಬಳಿಕ ಕುಶನು ಆ ಲಕ್ಷ್ಮಣನನ್ನು ನೋಡಿ ಸಿಂಹದಂತೆ ವಿಕ್ರಮವುಳ್ಳವನಾಗಿ ಬಂದನು. ಬರುತ್ತಿರುವ ಅವನನ್ನು ಲಕ್ಷ್ಮಣನು ಐದು ಬಾಣಗಳಿಂದ ಹೊಡೆದನು. ಆ ಬಾಣಗಳಿಂದ ಹೊಡೆಯಲ್ಪಟ್ಟ ವೀರನಾದ ಕುಶನು, "ಎಲೈ ಮಹಾ ವೀರನೇ! ಹಿಮ್ಮೆಟ್ಟದೆ ಸ್ಥಿರವಾಗಿ ನಿಲ್ಲು" ಎಂದು ಹೇಳಿ ಒಂದು ಬಾಣವನ್ನು ಬಿಟ್ಟನು. ಆ ಬಾಣದಿಂದ ಲಕ್ಷ್ಮಣನು ಎರಡು ಗಳಿಗೆಗಳ ಹೊತ್ತು ರಥ ಸಹಿತವಾಗಿ ತಿರ್ರನೆ ತಿರುಗುತ್ತಿದ್ದನು; ತಿರುಗಿದ ವೇಗಕ್ಕೆ ನಾಲ್ಕು ಕುದುರೆಗಳೂ ಸತ್ತುವು. ಬಳಿಕ ಲಕ್ಷ್ಮಣನು ಮತ್ತೊಂದು ರಥವನ್ನೇರಿ ಬಾಣಗಳನ್ನು ಬಿಟ್ಟನು. ಎರಡು ಬಾಣಗಳಿಂದ ಆ ಕುಶನ ನಿರ್ಮಲವಾದ ಕವಚವನ್ನೂ ಮೂರು ಬಾಣಗಳಿಂದ ಅವನ ಕಿರೀಟವನ್ನೂ ಕತ್ತರಿಸಲು, ಅದು ಅದ್ಭುತವಾಗಿ ತೋರಿತು. ಕತ್ತರಿಸಿ ಹೋದ ಕವಚವುಳ್ಳ ಶೂರನಾದ ಆ ಕುಶನು ಆ ಯುದ್ಧದಲ್ಲಿ ಸ್ವಲ್ಪವೂ ಬಳಲದೆ, ಪೊರೆಯನ್ನು ಬಿಟ್ಟ ಸರ್ಪರಾಜನಂತೆ ಪ್ರಕಾಶಿಸುತ್ತಿದ್ದನು.

ಶೂರನಾದ ಕುಶನು ಲಕ್ಷ್ಮಣನನ್ನು ಕುರಿತು ವಿನಯಪೂರ್ವಕವಾಗಿ, "ಎಲೈ ಲಕ್ಷ್ಮಣನೇ! ನೀನು ಶತ್ರು ಭಾವವನ್ನು ಬಿಟ್ಟು ನನ್ನ ಭಾರವನ್ನು ಕಳೆದು ಉಪಕಾರ ಮಾಡಿದೆ ಎಂದು ಭಾವಿಸುವೆನು. ನಾನೂ ಹಾಗೆಯೇ ಮಾಡುವೆನು: ಈಗ ನಿನಗೆ ಸೈನ್ಯ ಭಾರವು ಹೆಚ್ಚಾಗಿದೆ; ಅದೆಲ್ಲವನ್ನೂ ನಾಶಮಾಡುತ್ತೇನೆ; ನನ್ನ ಕೈ ಚಳಕವನ್ನು ನೋಡು" ಎಂದು ಹೇಳಿ ಅಥರ್ವ ವೇದ ಪ್ರಸಿದ್ಧವಾದ ಸೂಕ್ತ ಮಂತ್ರವನ್ನು ಜಪಿಸುತ್ತ ಆಗ್ನೇಯಾಸ್ತ್ರವನ್ನು ಬಿಟ್ಟನು. ಆ ಆಗ್ನೇಯಾಸ್ತ್ರದಿಂದ ಸಹಸ್ರ ಮುಖವಾಗಿ ಉರಿಗಳೆದ್ದು ಮಹಾತ್ಮನಾದ ಲಕ್ಷ್ಮಣನ ರಥವನ್ನು ಸುಟ್ಟುಹಾಕಿದುವು; ಅವನ ಸೈನ್ಯವೂ ಧ್ವಜಗಳೂ ವಸ್ತ್ರಾಭರಣಗಳೂ ಸುಟ್ಟುಹೋದುವು; ಹೊಳೆಯುತ್ತಿರುವ ಕಂಚುಕಗಳನ್ನು ತೊಟ್ಟಿದ್ದ ವೀರರು ಸುಟ್ಟ ಶಿಖಾ ಶ್ಮಶ್ರುಗಳುಳ್ಳವರಾದರು; ಹಂಸ ವರ್ಣಗಳಾಗಿದ್ದ ಕುದುರೆಗಳ ಕೇಸರಗಳೂ ಬಾಲಗಳೂ ಉರಿದುಹೋದುವು; ರಥಗಳೂ ಅವುಗಳ ಚಕ್ರಗಳೂ ಛತ್ರ ಚಾಮರಗಳೂ ಸುಟ್ಟುವು; ಬೆಂಕಿಯಿಂದ ಆಯುಧಗಳೆಲ್ಲವೂ ಸುಟ್ಟುಹೋದುವು. ಶತ್ರು ಸಂಹಾರಕನಾದ ಲಕ್ಷ್ಮಣನು, ಸುಟ್ಟು ಹೋಗುತ್ತಿರುವ ತನ್ನ ಸೈನ್ಯವನ್ನು ನೋಡಿ ಆ ಆಗ್ನೇಯಾಸ್ತ್ರವನ್ನು ವಾರುಣಾಸ್ತ್ರ

---

* ಕ. ಸಾ. ಪರಿಷತ್ಪತ್ರಿಕೆಯ ೧೮ನೆಯ ಸಂಪುಟದ ೧ನೆಯ ಸಂಚಿಕೆಯ ೫೮ನೆಯ ಪುಟದಿಂದ ಮುಂದುವರಿದುದು.

ದಿಂದ ಶಾಂತಿಗೊಳಿಸಿದನು. ಬಳಿಕ ಮಹಾವೀರನಾದ ಕುಶನು ವಾಯವ್ಯಾಸ್ತ್ರವನ್ನು ಪ್ರಯೋಗಿಸಿದನು. ವಾಯವ್ಯಾಸ್ತ್ರದಿಂದ ಶೂರರೆಲ್ಲರೂ ಆಕಾಶದಲ್ಲಿ ಹಾರಾಡುತ್ತಿದ್ದರು ; ವಾಯು ವೇಗದಿಂದ ರಥಗಳೂ ಮತ್ತಗಜಗಳೂ ಬಿದ್ದು ಹೋಗುತ್ತಿದ್ದುವು.

ಸೇನಾಪತಿಯಾದ ಕಾಲಜಿತ್ತು ಕ್ರುದ್ಧನಾಗಿ ಲಕ್ಷ್ಮಣನನ್ನು ಕುರಿತು, "ನಾನು ಈ ಬಾಲನನ್ನು, ಡಡವು ಸಮುದ್ರವನ್ನು ಅಡಗಿಸುವಂತೆ, ಅಡಗಿಸಿ ಇವನ ತಮ್ಮನು ಬರುವುದರೊಳಗಾಗಿ ಪರಾಕ್ರಮವನ್ನು ತೋರಿಸುವೆನು" ಎಂದು ಹೇಳಿ ಕುಶನ ಮೇಲೆ ಬಂದು, "ರಾಮ ಸೈನ್ಯವನ್ನು ನಾಶಪಡಿಸುವ ನೀನು ಈಗ ಸಿಕ್ಕಿದೆ; ನಾನು ನಿನ್ನ ಮೂಲೋತ್ಪಾಟನೆಯನ್ನು ಮಾಡುವುದೇ ಸಿದ್ಧ" ಎಂದನು. ಕಾಲಜಿತ್ತಿನ ಮಾತನ್ನು ಕೇಳಿ ಕುಶನು, "ಅಡಿಗೆ ಕತ್ತಿನ ಮೊಲೆಯೂ, ಕಿವುಡನಿಗೆ ಕೇಳಲಾರದ ಕಿವಿಗಳೂ, ಬಾಲಕರಿಗೆ ಬ್ರಹ್ಮವಸ್ತುವೂ, ಹುಲ್ಲುಕಡ್ಡಿಗೆ ಬೆಂಕಿಯೂ ಹೇಗೋ ಹಾಗೆ ನಿನ್ನ ಹೆಸರು ನಿನಗೆ ವ್ಯರ್ಥವಾಗಿ ತೋರುವುದು. ನಿನ್ನಂತಹ ಹರಟೆಯವನನ್ನು ಯಾವನು ಸೇನಾಧಿಪತಿಯನ್ನಾಗಿ ಮಾಡಿದನು ? ಎಲೈ ಮೂಢನೇ! ನನ್ನ ತಮ್ಮನು ನಿನ್ನೆದುರಿಗೆ ನಿಮ್ಮ ಸೈನ್ಯವನ್ನು ನಾಶಮಾಡುವನು. ನಿನ್ನ ನಾಲಗೆಯನ್ನು ಸೀಳುವುದಕ್ಕಾಗಿ ನಾನು ಬಿಡುವ ಬಾಣವನ್ನು ಕತ್ತರಿಸು" ಎಂದು ಹೇಳಿ ಕುಶನು ಆ ಕಾಲಜಿತ್ತಿನ ನಾಲಗೆಯನ್ನು ಬಾಣದಿಂದ ಕತ್ತರಿಸಿ, "ಈಗ ನೀನು ಮೌನಿಯಾದೆ. ಸೇನೆಯಲ್ಲಿರುವ ಲವನನ್ನು ಬೇಗನೆ ಕರೆಯಿಸಿ ಪೂಜಿಸಿ ಮೌನವ್ರತವನ್ನು ಹೊಂದು" ಎಂದನು. ಕಾಲಜಿತ್ತು ಬಹಳವಾಗಿ ಕೋಪಿಸಿ, ವೇಗವಾದ ಬಾಣವನ್ನು ಕುಶನ ಎದೆಗೆ ಬಿಟ್ಟು ಅವನ ಎಡಗೈಯನ್ನು ಹೊಡೆದನು. ಕುಶನೂ ಕಾಲಜಿತ್ತಿನ ಬಲಗೈಯನ್ನು ಬಾಣಗಳಿಂದ ಕತ್ತರಿಸಿ, ಅರ್ಧಚಂದ್ರ ಬಾಣದಿಂದ, ಹೊಳೆಯುತ್ತಿರುವ ಕುಂಡಲಗಳುಳ್ಳ ಅವನ ತಲೆಯನ್ನು ಕತ್ತರಿಸಿದನು.

ಪ್ರೌಢನಾದ ಕಾಲಜಿತ್ತು ಮೃತನಾಗಲು, ಲಕ್ಷ್ಮಣನು ಸಾಲ ತಾಲ ವಟ ವೃಕ್ಷಗಳನ್ನು ಕತ್ತರಿಸುವ ಘೋರವಾದ ಬಾಣಗಳ ಮಳೆಯನ್ನು ಕರೆಯುತ್ತ ಬಲವಾದ ಆರು ಬಾಣಗಳನ್ನು ಕುಶನ ಎದೆಗೆ ಬಿಟ್ಟು ಅವನ ಮೇಲೆ ಶಕ್ತಿ, ಗದೆ, ಕುಂತ, ಖಡ್ಗ, ಪರಶು, ತೋಮರ, ಚರ್ಮ ಮೊದಲಾದ ಆಯುಧಗಳನ್ನೆಸೆದನು. ಕುಶನು ಅವು ಎಳೆಳು ತುಂಡುಗಳಾಗುವಂತೆ ಕತ್ತರಿಸಿ ಸಿಂಹದಂತೆ ಗರ್ಜಿಸುತ್ತ, "ನಿಲ್ಲು ನಿಲ್ಲು! ಬಾಣಗಳನ್ನು ತಡೆ" ಎಂದು ಹೇಳುತ್ತ ಹದ್ದಿನ ರೆಕ್ಕೆಗಳುಳ್ಳವಾಗಿಯೂ ಬಹಳ ಹರಿತವಾಗಿಯೂ ಸರ್ಪಗಳಂತೆ ಕ್ರೂರವಾಗಿಯೂ ಉರಿಯುತ್ತಿರುವ ಬೆಂಕಿಯ ಕಿಡಿಗಳುಳ್ಳವಾಗಿಯೂ ಇರುವ ವಾಲ್ಮೀಕಿ ಮುನಿ ದತ್ತವಾದ ಐದು ಬಾಣಗಳನ್ನು ಬಿಲ್ಲಿನಲ್ಲಿ ಹೂಡಿದನು. ಬಿಟ್ಟ ಕೂಡಲೆ ಮರ್ಮಭೇದಕಗಳಾದ ಆ ಬಾಣಗಳು ಆಕಾಶದಲ್ಲಿ ಉರಿಯುತ್ತ ಬಂದು ಮಹಾತ್ಮನಾದ ಲಕ್ಷ್ಮಣನ ಹೃದಯವನ್ನು ಭೇದಿಸಿದುವು. ಲಕ್ಷ್ಮಣನು ತೇಜೋಹೀನನಾಗಿ, ಸೂರ್ಯನು ಆಕಾಶದಿಂದ ನೆಲಕ್ಕೆ ಬೀಳುವಂತೆ ಬಿದ್ದುಹೋದನು; ಬಳಿಕ ಕುಶನು ಲವನ ಶಬ್ದವನ್ನು ಕೇಳಿ, ಕತ್ತಿ ಗುರಾಣಿಗಳನ್ನು

ಹಿಡಿದು ಪಕ್ಷಿರಾಜನಂತೆ ಆಕಾಶದಲ್ಲಿ ಹಾರಿಹೋಗಿ ಲವನನ್ನು ಮುತ್ತಿಕೊಂಡಿರುವ ಆನೆಗಳ ಗುಂಪನ್ನು ಕಂಡು ಕ್ರುದ್ಧನಾಗಿ, ಕತ್ತಿಯಿಂದ ಆನೆಗಳನ್ನೂ ಬಹಳ ಮಂದಿ ರಥಿಗಳನ್ನೂ ಕೊಲ್ಲುತ್ತ, ಕ್ಷಣ ಕಾಲದಲ್ಲಿ ಆ ಭ್ರುವಿುಗಳೆಲ್ಲವನ್ನೂ ನಾಶವಾಡಿ ಲವನನ್ನು ಬಿಡಿಸಿದನು. ಹೀಗೆ ವಾಲ್ಮೀಕ್ಯಾಶ್ರಮದಲ್ಲಿ ಅವರಿಬ್ಬರೂ ಸೈನ್ಯವೆಲ್ಲವನ್ನೂ ಕೊಂದು ನಿರ್ಭಯವಾಗಿ ತಮ್ಮ ಆಶ್ರಮದಲ್ಲಿದ್ದರು.

ಇಂತು ಲಕ್ಷ್ಮಣ ಸೇನಾ ಪರಾಜಯವೆಂಬ ಮೂವತ್ತನಾಲ್ಕನೆಯ ಅಧ್ಯಾಯವು.

---

## ಮೂವತ್ತೈದನೆಯ ಅಧ್ಯಾಯ

ಗಂಗಾ ತೀರದಲ್ಲಿ ಯಜ್ಞಮಂಟಪದಲ್ಲಿ ದೀಕ್ಷಿತನಾಗಿ ಮುನಿಗಳೊಡನೆ ಕುಳಿತಿದ್ದ ಶ್ರೀರಾಮನು ಭರತನನ್ನು ಕುರಿತು, "ನಿನ್ನ ತಮ್ಮನಾದ ಶತ್ರುಘ್ನನು ಯಾರಿಂದ ಪರಾಜಿತನಾಗಿದ್ದಾನೋ ಆ ಅಶ್ವಾಪಹಾರಕರಿಬ್ಬರನ್ನೂ ಜಯಿಸಿ ಶೂರನಾದ ಲಕ್ಷ್ಮಣನು ಇನ್ನೂ ಏಕೆ ಬರಲಿಲ್ಲ? ಲಕ್ಷ್ಮಣನನ್ನು ಸ್ವಪ್ನದಲ್ಲಿಯಾದರೂ ನೋಡಿದ ಮಾತ್ರಕ್ಕೆ ಈ ಚರಾಚರಾತ್ಮಕವಾದ ಲೋಕ ತ್ರಯವೂ ನಾಶವಾಗುವುದು; ಇನ್ನು ಅವನನ್ನು ಪ್ರತ್ಯಕ್ಷದಲ್ಲಿ ಯುದ್ಧದಲ್ಲಿ ಸಹಿಸುವವನು ಯಾರು? ತಮ್ಮನು ಬಿದ್ದು ಹೋದ ರೋಷದಿಂದ, ಬಹು ಮಂದಿ ಶೂರರೊಡನೆ ಕೂಡಿ, ನನ್ನಿಂದ ಆಜ್ಞಪ್ತನಾಗಿ ಹೋಗಿರುವ ಆ ಲಕ್ಷ್ಮಣನ ಮೇಲೆ ಯುದ್ಧಮಾಡಲು ಕಾಡಿನಲ್ಲಿ ಹುಟ್ಟಿ ಅಜ್ಞರಾಗಿಯೂ ಚಪಲರಾಗಿಯೂ ದಿಕ್ಕಿಲ್ಲದವರಾಗಿಯೂ ಇರುವ ಆ ಬಾಲಕರು ಸಮರ್ಥರಾಗಲಾರರು. ಲಕ್ಷ್ಮಣನ ಭಯದಿಂದ ಯಾರ ಮರೆ ಹೊಗುವರೋ? ಲೋಕ ಧರ್ಮವನ್ನನುಸರಿಸಿ ತನ್ನ ಪ್ರತಾಪವನ್ನು ತೋರಿಸಿ ಬಿದ್ದುಹೋಗಿರುವ ಶತ್ರುಘ್ನನನ್ನು ಲಕ್ಷ್ಮಣನು ಯಮ ಲೋಕದಿಂದಲಾದರೂ ಕರೆತಂದು ತಾಯಿಗೆ ತೋರಿಸುವನು. ಕುಪಿತನಾಗಿ ತನ್ನ ಮಕ್ಕಳಿಬ್ಬರನ್ನೂ ಲಕ್ಷ್ಮಣನು ಕೊಲ್ಲುತ್ತಿರುವುದನ್ನು ಕೇಳಿ ಅನಾಥಳಾದ ಅವರ ತಾಯಿಯು ಅವರನ್ನುಳಿಸಿಕೊಳ್ಳಲು ಯಾರನ್ನು ಕೇಳಿಕೊಳ್ಳುವಳೋ? ಆ ಇಬ್ಬರು ಬಾಲರು ತಮ್ಮ ನಾಶಕ್ಕಾಗಿ ಏಕೆ ನಮಗೆ ವಿಘ್ನಕಾರಿಗಳಾದರೋ? ವರ್ಷಕ್ಕೆ ಎರಡು ದಿನಗಳು ಕಡಿಮೆಯಾಗಿರುವ ಇಷ್ಟು ಕಾಲವೂ ಶತ್ರುಘ್ನನ ರಕ್ಷಣೆಯಲ್ಲಿ ರಕ್ಷಿತವಾಗಿದ್ದ ಕುದುರೆಯನ್ನು ಆ ಬಾಲಕರು ತಮ್ಮ ಕೈಗೆ ಸಿಕ್ಕಿತೆಂದು, ನನ್ನನ್ನೂ ಭರತನನ್ನೂ ಸುಗ್ರೀವನನ್ನೂ ವಿಭೀಷಣನನ್ನೂ ವಾಲಿಪುತ್ರನಾದ ಅಂಗದನನ್ನೂ ಮಹಾ ಬಲನಾದ ಹನುಮಂತನನ್ನೂ ಉಳಿದ ನಮ್ಮ ಬಂಧು ಮಿತ್ರರನ್ನೂ ಅಲಕ್ಷ್ಯ ಮಾಡಿ ತೃಣವಾಗಿ ಎಣಿಸಿ ಕಟ್ಟಿಹಾಕಿರುವರು. ಅವರ ಈ ಬಾಲ ಚೇಷ್ಟೆಯನ್ನು ನೋಡು! ಎಲೈ ಭರತನೇ! ನನ್ನ ಕುದುರೆಯು ಇರುವೆಡೆಗೆ ಜನಗಳನ್ನು ಕಳುಹಿಸು. ಅವರು ಲಕ್ಷ್ಮಣನ ಬಳಿಗೆ ಹೋಗಿ ಕುದುರೆಯನ್ನು ತರಲಿ. ಕುಪಿತನಾದರೂ ಲಕ್ಷ್ಮಣನು ಯಾವಾಗಲೂ ನನ್ನ ಮಾತನ್ನು ಕೇಳುವನು" ಎಂದನು.

ಭರತನು ಐದು ಮಂದಿ ಯೋಧರನ್ನು ಕ್ಷಣಮಾತ್ರದಲ್ಲಿ ಕರೆಯಿಸಿ ರಾಮನ ಬಳಿಯಲ್ಲಿ ನಿಲ್ಲಿಸಲು, ಶ್ರೀರಾಮನು ಅವರನ್ನು ಕುರಿತು, "ನೀವು ಲಕ್ಷ್ಮಣನ ಸಮೀಪಕ್ಕೆ

ಹೋಗಿ, 'ಎಲೈ ಲಕ್ಷ್ಮಣನೇ! ಯುದ್ಧದಲ್ಲಿ ಆ ಬಾಲಕರಿಬ್ಬರಿಗೂ, ಜೀವವಂತರಾಗಿರುವಂತೆ ಸಮ್ಮೋಹನಾಸ್ತ್ರವನ್ನು ಪ್ರಯೋಗಿಸಿ ಮೋಹಿತರನ್ನಾಗಿ ಮಾಡಿ, ಅವರು ಅಪರಾಧಿಗಳಾಗಿದ್ದರೂ ಅವರನ್ನು ರಕ್ಷಿಸಬೇಕು. ನೀನು ಶೂರನೂ ಸಮರ್ಥನೂ ರಥಾರೂಢನೂ ಸರ್ವಾಸ್ತ್ರ ಕೋವಿದರಾದ ಶೂರರಿಂದ ಕೂಡಿದವನೂ ಆಗಿದ್ದೀಯೆ. ಆ ಕುಮಾರರು ವಿರಥರು, ಆಶ್ರಯ ರಹಿತರು. ಮಕ್ಕಳಾದ ಅವರಿಬ್ಬರನ್ನೂ ಯುದ್ಧದಲ್ಲಿ ಕೆಡಹದೆ ಬೇಗನೆ ಇಲ್ಲಿಗೆ ಕರೆದುಕೊಂಡು ಬಾ. ಅನ್ಯರ ಮಕ್ಕಳಲ್ಲಿ ಯಾರು ದಯೆಯನ್ನು ಮನಃಪೂರ್ವಕವಾಗಿ ತೋರಿಸುವರೋ ಅಂತಹ ಸಾಧುಗಳು ಲೋಕದಲ್ಲಿ ಪುತ್ರ ಪೌತ್ರ ಸಹಿತರಾಗಿರುವರು. ಭೂಮಿಯಲ್ಲಿ ಹುಟ್ಟಿದ ನಾನು ಸೀತೆಯ ಮುಖಕ್ಕೆ ಸದೃಶವಾದ ಮುಖವುಳ್ಳ ಮಗನ ಮುಖವನ್ನು ನೋಡಲಿಲ್ಲ. ಆದಕಾರಣ ಅವರಿಬ್ಬರನ್ನೂ ನಾನು ಬಿಡಿಸುತ್ತೇನೆ. ಅವರು ಯಾರ ಮಕ್ಕಳು? ಏತಕ್ಕಾಗಿ ವನ ಸಂಚಾರ ಮಾಡುತ್ತಿರುವರು? ಅವರ ತಾಯಿ ಎಲ್ಲಿರುವಳು? ಎಂಬುದನ್ನು ಕೇಳಿ ಆಕೆಯನ್ನೂ ಅವರನ್ನೂ ಕರೆದುಕೊಂಡು ಬಾ' ಎಂದು ನಾನು ಹೇಳಿದೆನೆಂದು ಆತನಿಗೆ ತಿಳಿಸಿರಿ'' ಎಂದನು.

ಶ್ರೀರಾಮನು ದೂತರನ್ನು ಕುರಿತು ಹೀಗೆ ಹೇಳುತ್ತಿರುವಷ್ಟರಲ್ಲಿ, ಬಾಣಗಳಿಂದ ಸೀಳಿಹೋಗಿ ರಕ್ತಪ್ರವಾಹವು ಹರಿಯುತ್ತಿರುವ, ಲಕ್ಷ್ಮಣನ ಕಡೆಯ ಮಹಾವೀರರು, ''ರಾಮ, ರಾಮ!'' ಎಂದು ಹಂಬಲಿಸುತ್ತಲೂ ತಮಗುಂಟಾಗಿರುವ ಭಯವನ್ನು ಹೇಳಿಕೊಳ್ಳುತ್ತಲೂ ಬಂದು ಶ್ರೀರಾಮನನ್ನು ಮರೆಹೊಕ್ಕು ಹೀಗೆ ಹೇಳಿದರು:— ''ಎಲೈ ಮಹಾ ಬಾಹುವಾದ ರಾಮನೇ! ಈ ಮಹಾ ಭೀತಿಯಿಂದ ನಮ್ಮನ್ನು ರಕ್ಷಿಸು. ಆ ಶೂರನಾದ ಲಕ್ಷ್ಮಣನು ದೊಡ್ಡ ಸೈನ್ಯದಿಂದ ಕೂಡಿದವನಾಗಿ ಹೊರಟು ಶತ್ರುಘ್ನನು ಮೂರ್ಛಿತನಾಗಿ ಬಿದ್ದಿದ್ದ ಆ ಕಾಡಿಗೆ ಹೋಗಿ, ಅಲ್ಲಿ ಸಸೈನ್ಯನಾಗಿ ಕುಶನ ಬಾಣಗಳಿಂದ ಗಾಯ ಹೊಂದಿರುವನು. ಕುಶನ ಬಾಣಗಳಿಂದ ಭೇದಿಸಿಹೋಗಿ ರಕ್ತಧಾರೆಗಳನ್ನು ಸೋರಿಸುತ್ತಿರುವ ದೇಹವುಳ್ಳವರಾಗಿ ಹೂ ಬಿಟ್ಟಿರುವ ಮುಳ್ಳು ಮುತ್ತುಗದ ಮರಗಳಂತಿರುವ ಶೂರರು ಮೂರ್ಛಿತರಾಗಿರುವರು. ವಜ್ರಾಯುಧದ ಏಟುಗಳನ್ನೂ ಲಕ್ಷಿಸದೆ ವೀರರು ನಾನಾ ಶಸ್ತ್ರ ಪೀಡಿತರಾಗಿ ಮೈಮರೆತು ಬಿದ್ದಿರುವರು. ಏಕಾಕಿಯೂ ಬಾಲನೂ ಆದ ಲವನು ಮಾಡಿದ ಚೇಷ್ಟೆಗೆ ಸಹಿಸಲಾರದೆ ಆ ದೊಡ್ಡ ಸೇನೆಯು ವಿಮುಖವಾಗಿ ಓಡಿಹೋಗಿ ಬೆಟ್ಟದಲ್ಲಿ ಅಡಗಿಕೊಂಡಿರುವುದು. ಲಕ್ಷ್ಮಣನ ಸೇನಾಪತಿಯಾದ ಕಾಲಜಿತ್ತು ಕುಶನ ಬಾಣಗಳಿಂದ ನೊಂದು ಬಹು ಜನ ಸಹಿತನಾಗಿ ನೆಲಕ್ಕೆ ಬಿದ್ದುಹೋದನು. ಲಕ್ಷ್ಮಣನು ಯುದ್ಧ ಮಾಡುತ್ತ ಕಾಡಿನಲ್ಲಿ ಆ ಬಾಲರನ್ನು ನೋಡಿ ಕರಗಿದ ಮನಸ್ಸುಳ್ಳವನಾದನು. ಆಗ ಕೃಪೆಯುಳ್ಳವನಾಗಿ ತಮ್ಮನಾದ ಲವನ ಮೇಲೆ ವೈರವನ್ನು ಬಿಟ್ಟು ಅಣ್ಣನಾದ ಕುಶನನ್ನು ನೋಡಿ, 'ಎಲೈ ಕುಶನೇ! ನಿನ್ನನ್ನು ಬಿಟ್ಟಿರುವೆನು; ನಿನ್ನ ತಮ್ಮನೊಡನೆ ನಿಮ್ಮ ಮನೆಗೆ ಹೋಗಿ ಸಾಮೋಪಾಯ ಕುಶಲನಾದ ಯಾವನೋ ಒಬ್ಬನು ನನ್ನನ್ನು ಬಿಟ್ಟುಬಿಟ್ಟನು ಎಂದು ನಿಮ್ಮ ತಾಯಿಗೆ ಹೇಳು' ಎಂದನು.

"ಆ ಮಾತನ್ನು ಕೇಳಿ ಕುಶನು ಲಕ್ಷ್ಮಣನನ್ನು ಕುರಿತು, 'ಎಲೈ ಲಕ್ಷ್ಮಣನೆ! ಬಹು ದುಃಖಪಡುತ್ತಿರುವ ನಿನ್ನೊಡನೆ ಯುದ್ಧಮಾಡದೆ ನಿನ್ನನ್ನು ನಾನು ಬಿಟ್ಟಿದ್ದೇನೆ. ನೀನು ರಾಮನ ಬಳಿಗೆ ಹೋಗು. ಯಾವನು ಸಾನುಜನಾದ ನಿನ್ನನ್ನು ಕ್ಲೇಶ ಪಡಿಸುತ್ತ ತಾನು ಬಾರದೆ ಹೋದನೋ, ಅವಮಾನವನ್ನು ಮಾಡಿಯಾನೆಂದು ಯಾವನಿಗೆ ನೀನು ಹೆದರುತ್ತಿರುವೆಯೋ, ಆ ರಾಮನಲ್ಲಿ ಸ್ವಲ್ಪವೂ ಕ್ಷಮೆಯಿಲ್ಲ ವೆಂದು ಕಾಣುತ್ತದೆ. ನಿನ್ನ ವಿಷಯದಲ್ಲಿ ನನಗೆ ಕರುಣೆಯುಂಟಾಗಿರುವುದು. ನೀನು ಅಕ್ಷತನಾಗಿಯೇ ಹೊರಟುಹೋಗು. ನಿನ್ನಲ್ಲಿ ಪೌರುಷವಿದ್ದರೆ ಬೇಗನೆ ನನ್ನನ್ನು ಬಾಣಗಳಿಂದ ಹೊಡೆ' ಎಂದನು. ಬಳಿಕ ಲಕ್ಷ್ಮಣನು ಏಳು ಬಾಣಗಳಿಂದ ಕುಶನ ಎದೆಗೆ ಹೊಡೆದನು. ಆ ಯುದ್ಧದಲ್ಲಿ ಆ ತೀಕ್ಷ್ಣ ಬಾಣಗಳು ಕುಶನನ್ನು ಭೇದಿಸಿ ಆ ಕಾಡಿನಲ್ಲಿದ್ದ ಮರಗಳನ್ನೂ ಸೀಳಿಹಾಕಿ ಕೆಳಕ್ಕೆ ಬಿದ್ದುವು. ಬಳಿಕ ಕುಶನ ಬಾಣ ಸಮೂಹದಿಂದ ಲಕ್ಷ್ಮಣನ ದೇಹವು ವ್ಯಾಪ್ತವಾಗಿ, ಪೂರ್ವದಲ್ಲಿ ಮಾಡಿದ್ದ ಯಾವುದಾದರೂ ಒಂದು ಅಭ್ಯಾಸದ ಬಲದಿಂದ ಲಕ್ಷ್ಮಣನು ತನ್ನ ದೇಹವನ್ನು ಹೊಸ ದಾಗಿ ಮಾಡಿಕೊಳ್ಳಬಲ್ಲನೇನೋ ಎನ್ನುವಂತೆ, ಒಂದು ಕ್ಷಣ ಮಾತ್ರದಲ್ಲಿ ಚರ್ಮ ಹೀನವಾಯಿತು. ಹೀಗೆ ಆ ಬಾಲಕನನ್ನು ರೇಗಿಸಿ ಅವನ ಬಾಣಗಳಿಂದ ಗಾಯಹೊಂದಿ, ಆ ಧೀರನಾದ ಲಕ್ಷ್ಮಣನು ಕುಂಡಲ ಸಹಿತನಾಗಿ ಬಿದ್ದುಹೋದನು; ನಿನ್ನ ಸೇನೆಯೂ ಮುರಿದು ಹತ್ತು ದಿಕ್ಕಿಗೂ ಓಡಿತು. ನಿನ್ನ ತಮ್ಮಂದಿರೂ ಮಹಾ ವೀರರೂ ಆದ ಆ ಲಕ್ಷ್ಮಣ ಶತ್ರುಘ್ನರು ಗಾಯಪಟ್ಟರು. ಅವರಿಬ್ಬರೂ ಇಲ್ಲದುದರಿಂದ ನಾವು ನಿನಗೆ ಹೇಳುವುದಕ್ಕೆ ಬಂದೆವು. ಎಲೈ ರಾಮನೇ! ದೀಕ್ಷೆಯನ್ನು ಬಿಡು. ಕುಶನ ಬಾಣವು ಅವನ ಧನುವಿನಿಂದ ಹೊರಟು ನಿನ್ನಮೇಲೆ ಬೀಳುವಷ್ಟರೊಳಗೆ ನೀನು ಕಾಡಿಗೆ ಹೋಗಿ ಯುದ್ಧಮಾಡು. ಆ ಕುಶನೆದುರಿಗೆ ಮತ್ತೊಬ್ಬರು ನಿಲ್ಲುವಂತಿಲ್ಲ" ಎಂದರು.

ಈ ರೀತಿಯಲ್ಲಿ ಹೇಳುತ್ತಿರುವ ಆ ದೂತರ ಮಾತನ್ನು ಕೇಳಿ ಭರತನ ಅಣ್ಣನಾದ ರಾಮನು ಮೂರ್ಛಿತನಾಗಿ ನೆಲಕ್ಕೆ ಬಿದ್ದನು. ಬಳಿಕ ಭರತನು ಅವನನ್ನು ಹಿಡಿದು ಕೊಂಡು ನೀರನ್ನು ತಳಿದು ಕಣ್ಣನ್ನೊರಸಿ ಅಡಿಗಡಿಗೂ ಸಮಾಧಾನಗೊಳಿಸುತ್ತ, ರಾಮನು ಚೇತರಿಸಿಕೊಂಡ ಬಳಿಕ ಅವನನ್ನು ಕುರಿತು, "ಎಲೈ ರಾಘವನೇ! ಲಕ್ಷ್ಮಣನ ವಿಷಯದಲ್ಲಿ ಮನಸ್ಸಿಗೆ ವ್ಯಥೆಯನ್ನು ತಂದುಕೊಳ್ಳಬೇಡ. ಲಕ್ಷ್ಮಣನು ನಿನಗಾಗಿ ಹೋಗಿ ಶತ್ರುಘ್ನನೊಡನೆ ಯುದ್ಧದಲ್ಲಿ ಬಿದ್ದನು. ಅವನು ಸೀತಾ ದೇವಿಯನ್ನು ಕಾಡಿನಲ್ಲಿ ಬಿಟ್ಟು ಬಂದಂದಿನಿಂದಲೂ ಬಹಳ ದುಃಖಿತನಾಗಿ ಸ್ವದೇಹ ತ್ಯಾಗ ಮಾಡಲಪೇಕ್ಷಿಸುತ್ತಿದ್ದನು. 'ನಾನು ನಿನ್ನ ಆಜ್ಞೆಯನ್ನು ನಡೆಯಿಸಿದೆನು' ಎಂದು ಹೇಳಿಕೊಳ್ಳುವುದಕ್ಕೆ ಅವನು ಮೊದಲು ನಿನ್ನ ಬಳಿಗೆ ಬಂದಾಗಲೇ ಅವನು ಸೀತಾ ದುಃಖದಿಂದ ಮೃತಪ್ರಾಯನಾಗಿದ್ದನು. ಆದರೂ ನಿನಗೆ ಸೀತೆಯಲ್ಲಿಯೂ ಲಕ್ಷ್ಮಣನಲ್ಲಿಯೂ ಕರುಣೆ ಹುಟ್ಟಲಿಲ್ಲ. ಮರಣ ಕಾಲವನ್ನು ಇದಿರುನೋಡುತ್ತಿದ್ದ ಅವನು ಸೀತಾ ತ್ಯಾಗವನ್ನು ನೆನೆದು, ಯಜ್ಞಕಾರ್ಯದಲ್ಲಿ, ರಾಮ ನಿಮಿತ್ತದಿಂದ, ಯುದ್ಧ ವ್ಯಾಜದಿಂದ, ತಮ್ಮನೊಡನೆ ಪ್ರಾಣವನ್ನು ಬಿಟ್ಟನು. ನಿರಪರಾಧಿನಿಯಾದ

ಸೀತೆಯನ್ನು ಕಾಡಿನಲ್ಲಿ ಬಿಟ್ಟುಬಂದುದರಿಂದ ಉಂಟಾದ ಪಾಪವನ್ನು ಸದಾ ದೇಹದಲ್ಲಿ ಧರಿಸಿದ್ದನು. ಅದಕ್ಕಾಗಿ ಈಗ ಕುಶನ ಧನುವಿನಿಂದ ಹೊರಟ ಪ್ರಚಂಡ ಬಾಣ ಗಂಗೆಯು ಅವನ ದೇಹದ ಪಾಪವನ್ನು ತೊಳೆದುಬಿಟ್ಟುದರಿಂದ ಲಕ್ಷ್ಮಣನು ಶುದ್ಧನಾದನು. ಎಲೈ ರಾಘವನೇ! ಅಪರಿಶುದ್ಧನಾದ ನನಗೆ ನೀನು ಯಾವ ಕಾರ್ಯವನ್ನೂ ಹೇಳುವುದಿಲ್ಲ. ನೀನು ವನದಲ್ಲಿ ಸೀತಾ ತ್ಯಾಗ ಮಾಡಿದಾಗ ಎಲ್ಲಾ ವಿಚಾರವನ್ನೂ ಮಾಡಿದೆ. ನಾನು ಅಯೋಧ್ಯೆಯಲ್ಲಿ ಬದುಕಿದ್ದು ನನ್ನ ಶರೀರವನ್ನು ಪಾವನವನ್ನಾಗಿ ಮಾಡಿಕೊಳ್ಳುವುದು ಏತರಿಂದ ಸಾಧ್ಯವಿಲ್ಲವೊ ಆ ಪಾವನ ಕಾರ್ಯವನ್ನು ಮಾಡಿಕೊಳ್ಳಲು ಈಗ ಹೊರಡುತ್ತೇನೆ. ಸೀತಾ ಶತ್ರುಘ್ನ ಲಕ್ಷ್ಮಣರಿಲ್ಲದ ಈ ಅಯೋಧ್ಯೆಯಲ್ಲಿ ನಾನು ಹೇಗೆ ಇರಲಿ?'' ಎಂದನು.

ಹೀಗೆ ಹೇಳುತ್ತಿರುವ ಭರತನನ್ನು ಕುರಿತು ರಾಮನು, '' ಎಲೈ ಭರತನೇ! ನೀನು ಸೈನ್ಯ ಸಹಿತನಾಗಿ ಅರಣ್ಯಕ್ಕೆ ಹೋಗಿ ಆ ಬಾಲಕನು ಯಾರೆಂಬುದನ್ನು ತಿಳಿದು ಕುಶನನ್ನು ಜಯಿಸಿ, ಅವನನ್ನು ತಮ್ಮನೊಡನೆ ನನ್ನ ಬಳಿಗೆ ಕರೆದುಕೊಂಡು ಬಾ. ಮೂರ್ಛಿತರಾಗಿ ಬಿದ್ದಿರುವ ನನ್ನ ಬಾಂಧವರಿಬ್ಬರನ್ನೂ ಎಚ್ಚರಗೊಳಿಸು. ಈ ಹನುಮಂತನೂ ಜಾಂಬವಂತನೂ ವಾನರರೊಡನೆ ನಿನಗೆ ಸಹಾಯಕರಾಗಿ ನಿನ್ನ ಹಿಂದೆ ಹೊರಡಲಿ. ನೀನು ನನ್ನ ಮಾತನ್ನು ನಡೆಯಿಸು. ವನವಾಸಕ್ಕೆ ಹೊರಟ ನಾನು ತಂದೆಯ ಮಾತನ್ನು ನಡೆಯಿಸಿದೆನು. ನೀನು ಅಮೋಘವಾದ ತಂದೆಯ ಮಾತಿನಂತೆ ನಡೆಯಲಿಲ್ಲ: ನಂದಿ ಗ್ರಾಮದಲ್ಲಿ ಜಟಾ ವಲ್ಕಲಧಾರಿಯಾಗಿದ್ದುಬಿಟ್ಟೆ. ಈಗ ಆ ಪಾಪಕ್ಕೆ ಪ್ರತೀಕಾರವನ್ನು ಮಾಡು. [ಎಲೈ ಮಹಾ ಮತಿಯೇ! ನನ್ನ ಮಾತನ್ನು ನಡೆಯಿಸಿ ಪರಿಶುದ್ಧನಾಗು'' ಎಂದನು. ಅದನ್ನು ಕೇಳಿ ಭರತನು, ''ಎಲೈ ರಘೂದ್ವಹನೇ! ನಿನ್ನ ಸೈನ್ಯವನ್ನು ನಾಶ ಮಾಡಿದ ಶೂರರಾದ ಆ ಇಬ್ಬರು ಬಾಲಕರು ಯಾರೆಂಬುದನ್ನು ನೀನರಿಯೆ ; ಹನುಮಂತನು ತಿಳಿದಿರುವನೋ ಇಲ್ಲವೋ ತಿಳಿಯದು ; ನೀತಿಜ್ಞನಾಗಿಯೂ ನಿನ್ನ ಮಂತ್ರಿಯಾಗಿಯೂ ಇರುವ ಆ ಅಂಗದನೂ ಕಾಣನೆಂದು ತೋರುವುದು'' ಎಂದನು. ಅದಕ್ಕೆ ಅಂಗದನು, ''ರಾಘವನು ಯಾವ ಕಾರಣದಿಂದ ಲೋಕಾಪವಾದಕ್ಕಾಗಿ ಸೀತಾ ಪರಿತ್ಯಾಗ ಮಾಡಿದನೋ ಅಂತಹ ರಾಮನ ದುರಾಲೋಚನಾ ರೂಪವೇ ಆ ಬಾಲಕರೆಂದು ನಾನು ತಿಳಿಯುವೆನು'' ಎಂದನು.

ಹೀಗೆ ಭರತನು ರಾಮನಿಂದ ಆಜ್ಞಪ್ತನಾಗಿ ಹನುಮಂತ ಮೊದಲಾದವರೊಡನೆ ಸೇರಿ ಬೇಗನೆ ರಥವನ್ನೇರಿ ಕೋಪಾವಿಷ್ಟನಾಗಿ ಹೊರಟನು. ನರ ವಾನರರಿಂದ ಕೂಡಿದ ದೊಡ್ಡ ಸೈನ್ಯವು ರಮ್ಯವಾದ ರಾಜಧಾನಿಯಾದ ಅಯೋಧ್ಯೆಯಿಂದ ಹೊರಟು ಭೂವ್ಯಾಕಾಶಗಳಲ್ಲಿ ಹೋಗುತ್ತಿದ್ದಿತು. ಭರತನು ಅರಣ್ಯವನ್ನು ಹೊಕ್ಕು ಹನುಮಂತನನ್ನು ಕುರಿತು, ''ಎಲೈ ಹನುಮಂತನೇ! ಯುದ್ಧದಲ್ಲಿ ಕುಶನ ಬಾಣಗಳಿಂದ ಕತ್ತರಿಸಿದ ತಲೆಗಳೂ ತೋಳುಗಳೂ ಉಳ್ಳವರಾಗಿ ರಾಮನ ಶೂರರು ಒಹು ಮಂದಿ ಬಿದ್ದುಹೋಗಿರುವರು. ಆನೆಗಳೂ ರಥಗಳೂ ಕುದುರೆಗಳೂ ವೀರರೂ

ಒಂಟೆಗಳೂ ತಲೆ ಕತ್ತರಿಸಿ ಬಿದ್ದಿರುವುವು ನೋಡು! ಮುಂದೆ, ಸ್ವಸ್ಥತೆಯಿಲ್ಲದೆ ಎಲ್ಲ ಕಡೆಗೂ ಓಡುತ್ತಿರುವವರನ್ನು ನೋಡು. ಶೂರರಾದ ಲಕ್ಷ್ಮಣ ಶತ್ರುಘ್ನರು ಎಲ್ಲಿ ಬಿದ್ದಿರುವರೋ! ಮಹಾ ರಕ್ತ ಪ್ರವಾಹದಲ್ಲಿ ಯೋಧರೆಲ್ಲರೂ ಇಲ್ಲಿ ಕೊಚ್ಚಿಹೋಗುತ್ತಿರುವರು. ನಮ್ಮ ಬಂಧುಗಳಾದ ಲಕ್ಷ್ಮಣ ಶತ್ರುಘ್ನರು ಬಲಾತ್ಕಾರವಾಗಿ ಗಂಗೆಗೆ ಹೊಡೆದುಕೊಂಡು ಹೋಗಿರುವರೋ ಏನೋ! ಇಲ್ಲಿ ಅಲ್ಲಲ್ಲೇ ಮನುಷ್ಯರ ಕೈಗಳೂ ಕಾಲುಗಳೂ ಹಲ್ಲುಗಳೂ ವಾಹನಗಳೂ ತಲೆಗೂದಲುಗಳೂ ಪುಷ್ಪಮಾಲಿಕೆಗಳೂ ಕೊಚ್ಚಿಹೋಗುತ್ತಿರುವುವು. ನೀನು ಪೂರ್ವದಲ್ಲಿ ಸಮುದ್ರವನ್ನು ದಾಟಿ ಲಂಕೆಗೆ ಹೋದ ಹಾಗೆ ಈಗ ಈ ನದಿಯನ್ನು ದಾಟಿ ಆಚೆಯ ದಡಕ್ಕೆ ಹೋಗಿ ಅಲ್ಲಿ ನಮ್ಮ ಬಂಧುಗಳು ಎಲ್ಲಿ ಬಿದ್ದಿರುವರೋ ನೋಡು. ಹೇಗಾದರೂ ಮಾಡಿ ಆ ಬಾಲಕರಾದ ಕುಶ ಲವರನ್ನು ನೋಡಬೇಕು" ಎಂದನು.

ಅದಕ್ಕೆ ಹನುಮಂತನು, "ಎಲೈ ಭರತನೇ! ಆಗ ಸೀತೆಯು ನನಗೆ ಸಮ್ಮುಖಳಾಗಿದ್ದುದರಿಂದ ಸಾಗರವನ್ನು ದಾಟಿದೆನು. ಈಗ ಆಕೆಯು ವಿಮುಖಳಾಗಿರುವಂತೆ ತೋರುವುದು. ಈ ರಕ್ತ ಪ್ರವಾಹದ ನದಿಯನ್ನು ದಾಟುವುದು ಅಸಾಧ್ಯವೆಂದು ಕಾಣುತ್ತದೆ. ಆದರೂ ನಿನ್ನ ಮಾತಿನಂತೆ ಲಕ್ಷ್ಮಣ ಶತ್ರುಘ್ನರನ್ನು ನೋಡಲು ಹೊರಡುತ್ತೇನೆ" ಎಂದು ಹೇಳಿ ಆ ನದಿಯನ್ನು ದಾಟಿ ಅಲ್ಲ ಬಾಣಗಳಿಂದ ಭೇದಿಸಿದ ಸರ್ವಾಂಗವುಳ್ಳವರಾಗಿ ನೆಲದಲ್ಲಿ ಬಿದ್ದಿದ್ದ ಲಕ್ಷ್ಮಣ ಶತ್ರುಘ್ನರನ್ನು ಕಂಡನು. "ಸೀತಾ ದ್ರೋಹಿಗಳಾದ ನಮ್ಮ ಮೇಲೆ ಕೋಪಿಸದೆ ನಮಗೆ ಸ್ಥಳವನ್ನು ಕೊಡು" ಎಂದು ಸೀತಾ ಪರಿತ್ಯಾಗದಿಂದ ದುಃಖಿತಳಾಗಿದ್ದ ಭೂದೇವಿಯನ್ನು ಪ್ರಾರ್ಥಿಸುತ್ತಿರುವರೋ ಎಂಬಂತೆ ನೆಲದಲ್ಲಿ ಬಹು ಕಾಲದಿಂದ ಮೂರ್ಛೆಗೊಂಡು ಬಿದ್ದಿದ್ದ ಅವರಿಬ್ಬರನ್ನೂ ಕಂಡು ಅನಂತರ ತೋಳುಗಳಿಂದ ತಬ್ಬಿ ಹಿಡಿದುಕೊಂಡು ಹನುಮಂತನು ಭರತನ ಬಳಿಗೆ ಪುನಃ ಬಂದನು. ಭರತನು ಕುಶನ ಬಾಣಗಳಿಂದ ಭೇದಿಸಿದ ಸರ್ವಾಂಗವುಳ್ಳ ಅವರನ್ನು ನೋಡಿ ಆಶ್ಚರ್ಯ ಯುಕ್ತನಾಗಿ ರಥದಲ್ಲಿಟ್ಟು ಅವರ ರಕ್ಷಣೆಗಾಗಿ ಅಂಗದನನ್ನು ನೇಮಿಸಿ, ಹನುಮಂತನನ್ನು ಕುರಿತು, "ಎಲೈ ಹನುಮಂತನೇ! ದೇವತೆಗಳು ಬಾಲಕ ವೇಷದಿಂದ ಬಂದು ಮಹಾ ರಣದಲ್ಲಿ ಲಕ್ಷ್ಮಣ ಶತ್ರುಘ್ನರನ್ನು ಕೆಡಹಿ ಎಲ್ಲಿಯಾದರೂ ಹೋದರೋ ಏನೋ ಎಂಬಂತಿರುವ ರಾಮ ಸೈನ್ಯ ವಿನಾಶಕರಾದ ಆ ಬಾಲಕರೆಲ್ಲಿ ನೋಡು!" ಎನಲು, ಹನುಮಂತನು "ಈ ಲಕ್ಷ್ಮಣನು, ಕುಶನ ಬಾಣಗಳಿಂದ ಹೊಂದಿದ ಮೂರ್ಛೆಯನ್ನು ಇನ್ನೂ ತಿಳಿಯದಿರುವಂತೆ ಇಂದ್ರಜಿತ್ತುವಿನ ಬಾಣಗಳಿಂದಲೂ ಹೀಗೆ ಮೂರ್ಛಿತನಾಗಿರಲಿಲ್ಲ. ಮೂರ್ಛಾಕ್ರಾಂತನಾಗಿರುವ ಈ ಲಕ್ಷ್ಮಣನನ್ನು ನೋಡಿದರೆ ಇವನ ಮೂರ್ಛೆಯು ನನ್ನನ್ನೂ ಆವರಿಸುವಂತೆ ಕಾಣುತ್ತದೆ" ಎಂದನು. ಆ ಬಾಲಕರು ನಾಶಗೊಳಿಸಿದ ಸೈನ್ಯವನ್ನು ಭರತನ ಸೈನಿಕರೆಲ್ಲರೂ ನೋಡುತ್ತಿದ್ದರು.

ಇಂತು ಹನೂಮದ್ವಾಕ್ಯವೆಂಬ ಮೂವತ್ತೈದನೆಯ ಅಧ್ಯಾಯವು.

---

# ವಿವಿಧ ವಿಷಯಗಳು

**ಬಂಗಾಲಿ ಸಾಹಿತ್ಯದಲ್ಲಿ ವಾಸ್ತವಿಕತೆ (Realism).**—ರಂಜಕ ಸಾಹಿತ್ಯವು (Romantic Literature) ಜೀವನದ ಯಾವುದೋ ಒಂದು ಉದ್ದೇಶವನ್ನೇ ಲಕ್ಷ್ಯದಲ್ಲಿಟ್ಟುಕೊಂಡು ಮಿಕ್ಕುದನ್ನು ಮರೆತು ತಲ್ಲೀನವಾಗಿ ನಡೆಯುತ್ತ ನಡೆಯುತ್ತ ಅನುಭವ ವಿರುದ್ಧವಾದ ವಿಷಯಗಳನ್ನು ಕುರಿತು ಹೇಳುವುದಕ್ಕೂ ಆರಂಭಿಸುತ್ತದೆ. ಈ ಹೊತ್ತಿನ ಪೂರ್ವದೇವರು ನಿನ್ನೆಯ ದೇವರುಗಳಾಗಿದ್ದರು; ತಮಗೆ ಅಧಿಕಾರ ವಿದ್ದಾಗ ಜಗತ್ತನ್ನೇ ಕಬಳಿಸಬೇಕೆಂದು ಯತ್ನಿಸಿದರು; ತಾವೇ ಕಬಳವಾದರು. ಹಾಗೆ, ಜೀವನವನ್ನೆಲ್ಲ ಒಂದೇ ಅಚ್ಚಿಗೆ ಹಾಕಿ ಮುದ್ರೆಯೊತ್ತಿಡುವ ಪ್ರಯತ್ನವು ಎಂದಿಗೂ ಸಫಲವಾಗುವುದಿಲ್ಲ. ಯಾವುದನ್ನು ತಿರಸ್ಕರಿಸಿ ನಾವು ಹೊರದೂಡುವೆವೋ ಅದೇ ಪ್ರತಿಭಟಿಸುತ್ತದೆ, ಗೌರವ ಬೇಕೆಂದು ಮೊರೆಯುತ್ತದೆ, ಹೋರಾಟದ ಹೆಣಗಾಟದಲ್ಲಿ ನುರಿತು ನುರಿತು ಬಲಿಷ್ಠವಾಗಿ, ತನ್ನನ್ನು ತುಳಿದಿದ್ದವರನ್ನು ತುಳಿಯುತ್ತದೆ.

ವಂಗಸಾಹಿತ್ಯದಲ್ಲಿ ಆಗುತ್ತಿರುವುದು ಇದು. ಇದುವರೆಗೆ ನಾವು ತಿರಸ್ಕಾರದಿಂದ ತುಳಿದಿಟ್ಟಿದ್ದ ಕಾಮ ವಾಸನೆಗಳೂ ಕಾಮ ಚಿಂತೆಗಳೂ ಈಗ ತಮ್ಮ ವಿಚಿತ್ರ ವಿಕಾರ ನರ್ತನಕ್ಕೆ ಆರಂಭಿಸಿವೆ. ಜೀವಿತದಲ್ಲಿ ಕಾಮ ವಾಸನೆಗೆ, ಕಾಮ ತೃಪ್ತಿಗೆ ಎಡೆಯುಂಟು; ಆದರೆ ಅದೇ ಪ್ರಧಾನವಾದರೆ, ಅದನ್ನು ಬಿಟ್ಟರೆ ಇನ್ನಿಲ್ಲ, ಎಂದಾದರೆ ಅದು ಅವಾಸ್ತವ.

ಈ ದೃಷ್ಟಿಯಿಂದ ಇತ್ತೀಚಿನ ಸಾಹಿತ್ಯವು ಅವಾಸ್ತವದ ಹಾದಿಯಲ್ಲಿ ನಡೆಯುತ್ತಿದೆಯೆನ್ನಬಹುದು. ಸಾಹಿತ್ಯದ ಓಘವು ವಿಷಯ ಪ್ರಪಂಚವನ್ನು ಬಿಟ್ಟು ಮತ್ತೊಂದರಲ್ಲಿ ಲೀನವಾಗಿದ್ದುದರ ಬದಲು ಈಗ ವಿಷಯ ಪ್ರಪಂಚದಲ್ಲಿ ಲೀನವಾಗುತ್ತಿದೆಯೆಂಬುದು ಆಧುನಿಕರ ಮನಸ್ಸಿಗೆ ಬಂದಿಲ್ಲ. ಹಿಂದಿನ ಮೃದು ಮಧುರ ಜೀವಿತದ ಚಿತ್ರಗಳಿಗೆ ಬದಲಾಗಿ ಕುರೂಪದ, ಕೆಡುಕಿನ ವಿಲಕ್ಷಣ ಚಿತ್ರಗಳು ಬರುತ್ತಿವೆ. ಜೀವನವೆಲ್ಲ ಮೃದು ಮಧುರವೇ ಅಲ್ಲ; ಹಾಗೆಯೇ, ಜೀವನವು ಕೇವಲ ಕುರೂಪವೂ ಕೆಟ್ಟುದೂ ಅಲ್ಲ. ಜೀವನವೆಂದರೆ ಇದೊಂದೇ ಎಂದು ಹೇಳುವುದೂ ಒಂದನ್ನು ಮರೆತು ಇನ್ನೊಂದರಲ್ಲಿ ಲೀನವಾಗುವುದೂ ಜೀವನದ ಚಿತ್ರದ ಬೆಳಕು ಕತ್ತಲೆಗಳನ್ನು ಮರೆತಂತೆ; ಅದರ ವಿಚಿತ್ರತೆಯ ಸೌಂದರ್ಯವನ್ನೇ ಅಳಿಸಿದಂತೆ; ಅದೂ ಅವಾಸ್ತವದ ಒಂದು ಸ್ವರೂಪ.

ಇದನ್ನೇ ಇನ್ನೊಂದು ದೃಷ್ಟಿಯಿಂದ ನೋಡೋಣ: ಕಾಮ ವಿಚಾರದಲ್ಲಿ ತೋರಿಬರುವ ವಿಷಮೋತ್ಸಾಹವು, ನಮ್ಮ ಕಣ್ಣಮುಂದೆಯೇ ಕಂಡುಬರುವ

ಬಡತನ, ಅಜ್ಞಾನ, ಅನಾರೋಗ್ಯ, ಅನಾಸ್ಥೆ ಮೊದಲಾದ ಅಭಾವದ ಕಡೆಗೆ ಓಡುವುದೆ? ದೇಶದ ಸಾಹಿತ್ಯದಲ್ಲಿ ದೇಶದ ಅಧೋಗತಿ, ರಾಜಕೀಯ ದುರ್ಗತಿಗಳು ರೂಪುಗೊಂಡಿವೆಯೇ? ದೇಶದ ಆಂದೋಳನವು ಸಾಹಿತಿಗಳ ಕಣ್ಣಿಗಾದರೂ ಬಿದ್ದಿದೆಯೇ? ರಾಜಕೀಯಾಂದೋಳನವು ಸಾಹಿತ್ಯಕ್ಕೆ ವಸ್ತುವಲ್ಲವೆಂದು ಆಕ್ಷೇಪಿಸಬಹುದು; ಆದರೆ, ಜನಾಂಗದ ಹೃದಯದ ಅಂತರಾಂತರದಿಂದ ಎದ್ದು ಬರುತ್ತಿರುವ ಆಶೋತ್ತರಗಳನ್ನು ಆಧುನಿಕ ಸಾಹಿತ್ಯದಲ್ಲಿ ಚಿತ್ರಿಸದಿದ್ದರೆ ಹೇಗೆ? ಕಲಾವಂತನೂ ಸಾಹಿತಿಯೂ ಪರಿಸ್ಥಿತಿಯ ಸ್ವರೂಪವನ್ನು ಅರಿತು ಅದಕ್ಕನುಗುಣವಾಗಿ ಕೆಲಸ ಮಾಡುವವರಾಗಬೇಕು. ಅದಿಲ್ಲದೆ, ಪರಿಸ್ಥಿತಿಯನ್ನು ಅರಿಯಲಾರದವರ ಕೃತಿಗಳನ್ನು ನಾವೇನೆನ್ನಬೇಕು? ಈ ಅವಾಸ್ತವಿಕತೆಯು ನಮ್ಮಲ್ಲಿ ಅನೇಕ ರೂಪದಿಂದ ನೆಲಸಿದೆ. ರಾಜಕೀಯ ದಾಸ್ಯವೂ ಇದಕ್ಕೊಂದು ಕಾರಣ. ನಾವು ಈಗಿರುವ ಸ್ಥಿತಿಯನ್ನು ಸಹಿಸಲಾರದೆ, ನಮ್ಮ ಲೋಪಗಳನ್ನು ನೋಡಲಾರದೆ, ಈ ಅವಾಸ್ತವ ಸಾಹಿತ್ಯದ ಕನಸುಗಳಲ್ಲಿ ಒಂದು ಗಳಿಗೆಯಾದರೂ ಮುಳುಗಿರಬೇಕೆನ್ನುತ್ತೇವೆ. ನಮ್ಮಲ್ಲಿ ನಮಗೆ ನಂಬುಗೆಯಿಲ್ಲ. ಅದರಿಂದಲೇ ನಾವು ವಿಮರ್ಶೆಗೆ ಸಿದ್ಧರಾಗಿಲ್ಲ; ಪ್ರಾಚೀನ ವೈಭವವನ್ನು ಕುರಿತ ಅಭಿಮಾನ, ಭವಿಷ್ಯತ್ತಿನ ವೈಭವದ ಸ್ವಪ್ನ—ಈ ಎರಡರಲ್ಲಿ ಮುಳುಗಿ ತೇಲುತ್ತ ವರ್ತಮಾನ ಪ್ರಪಂಚದ ಕಷ್ಟನಿಷ್ಠುರಗಳನ್ನು ಗಮನಿಸದ ಭ್ರಾಂತಿಯಲ್ಲಿದ್ದೇವೆ. ಇದರ ಫಲವಾಗಿ ಸಾಹಿತ್ಯದಲ್ಲಿ, ಅದರಲ್ಲೂ ನಾಟಕದಲ್ಲಿ, ಈ ಅವಾಸ್ತವಿಕತೆಯು ತಾನೇ ತಾನಾಗಿದೆ.

ಹಾಗಾದರೆ ನಮಗೆ ಬೇಕಾದುದು ಏನು ಎಂದರೆ, 'ಜೀವಿತವೆಂಬುದು ಒಂದು ಸಾಮಾನ್ಯ ಭಾವನೆಯ ಅಚ್ಚಿನಲ್ಲಿ ಅಡಕವಾಗುವ ಒಂದು ಹಿಡಿ ಮಣ್ಣಲ್ಲ; ಅದರಲ್ಲಿ ವೈವಿಧ್ಯವಿದೆ, ವೈಚಿತ್ರ್ಯವಿದೆ, ನಾನಾ ಮುಖತೆಯಿದೆ; ಇದೇ ಅದರಲ್ಲಿರುವ ಸೊಗಸು' ಎಂಬುದನ್ನು ನಾವು ಅರಿಯಬೇಕು. ದಾಸ್ಯವು—ಯಾವ ರೀತಿಯದೇ ಆಗಲಿ—ಮನಸ್ಸನ್ನು ಕುಗ್ಗಿಸುತ್ತದೆ, ಬಗ್ಗಿಸುತ್ತದೆ; ಸ್ವಾತಂತ್ರ್ಯವೊಂದೇ ಕಲೆಯ ಉತ್ತಮೋದ್ದೇಶವನ್ನು ಸಾಧಿಸಬಲ್ಲುದು.

*Triveni*—January–February, 1933.

**ಮುದ್ದಣನ ಜಾಣ್ಮೆ**—ಪಂಡಿತ ಮುಳಿಯ ತಿಮ್ಮಪ್ಪಯ್ಯನವರು, ಜನವರಿ ೧೯ಖಿರ 'ಜಯಕರ್ನಾಟಕ'ದಲ್ಲಿ ಈ ಮೇಲಿನ ಹೆಸರಿನ ಲೇಖನವನ್ನು ಬರೆದಿದ್ದಾರೆ. ಅದರಲ್ಲಿ, "ಪೂರ್ವ ಪದ್ಧತಿಯ ನಾಟಕಕ್ಕೆ ಪೂರ್ವ ರಂಗವಿರುವಂತೆ, ಕವಿಯು ರಾಮಾಶ್ವಮೇಧಕ್ಕೆ ಈ ಕಥಾ ಮುಖವನ್ನು ಕಲ್ಪಿಸಿರಬೇಕೆಂದು ತೋರುತ್ತದೆ. ನಾಟಕದೊಳಗಿನ ನಾಂದಿಗೆ ಸರಿಯಾಗಿ ಇಲ್ಲಿ ಮಳೆಗಾಲದ ವರ್ಣನೆ; ನಟೀ ಸೂತ್ರಧಾರರ ಸಂಭಾಷಣೆಗೆ ಪ್ರತಿಯಾಗಿ ಮನೋರಮಾ ಮುದ್ದಣರ ಸಲ್ಲಾಪ; ನಾಟಕದ ಕತೆಯಂತೆ ರಾಮಾಶ್ವಮೇಧ ಕಾವ್ಯವು" ಎಂಬ ಅಭಿಪ್ರಾಯವನ್ನು ಸಯುಕ್ತಿಕವಾಗಿ ನಿರೂಪಿಸಿದ್ದಾರೆ.

**ಕರ್ಣಾಟಕ ಸಂಘಗಳು.**—ಕರ್ಣಾಟಕದ ಅಭಿಮಾನವೂ ಕನ್ನಡದ ಅಭಿಮಾನವೂ ದೇಶದ ಆದ್ಯಂತದಲ್ಲೂ ಹರಡುತ್ತಿರುವುದು ಒಂದು ವಿಶೇಷ ಸಂಗತಿ. ಹಿರಿಯರಿಗಿಂತಲೂ ಹೆಚ್ಚಾಗಿ ಕಿರಿಯರಲ್ಲಿ, ಅದರಲ್ಲೂ ತರುಣ ವಿದ್ಯಾರ್ಥಿಗಳಲ್ಲಿ, ಈ ಅಭಿಮಾನದ ಬೆಳೆಯು ಹುಲುಸಾಗಿ ಬೆಳೆದು, ಭವಿಷ್ಯದ ಭದ್ರತೆಯಲ್ಲಿ ನಂಬಿಗೆ ಯನ್ನೀಯುತ್ತಿವೆ. ಈ ಅಭಿಮಾನವು ರೂಪುಗೊಂಡು ಕರ್ಣಾಟಕದ ಮುಖ್ಯ ಮುಖ್ಯ ನಗರಗಳಲ್ಲಿ ಕರ್ಣಾಟಕ ಸಂಘಗಳು ಏರ್ಪಟ್ಟಿರುವಂತೆ, ಕರ್ಣಾಟಕಸ್ಥರು ಇರುವ ಕಲ್ಕತ್ತ, ಕಾಶಿ, ಮುಂಬಯಿ, ಮೊದಲಾದ ದೂರದ ಪಟ್ಟಣಗಳಲ್ಲಿಯೂ ಕರ್ಣಾಟಕ ಸಂಘಗಳಾಗುತ್ತಿವೆ.

ಈ ಸಂಘಗಳು ಜೇಡನ ಜಾಳಿಗೆಯಂತೆ ದೇಶದಲ್ಲೆಲ್ಲ ಇನ್ನೂ ಹರಡಿ ಸಂಸ್ಕೃತಿಯನ್ನೂ ಭಾಷೆಯನ್ನೂ ಉದ್ಧರಿಸಿ, ಕರ್ಣಾಟಕದ ಏಕೀಕರಣವೆಂಬ ಮಹತ್ಫಲವನ್ನು ಪಡೆಯಲಿ ಎಂದು ಹಾರೈಸುತ್ತೇವೆ.

**ಪಾಳೆಯಗಾರರ ಚರಿತ್ರೆ.**—ಬಳ್ಳಾರಿ ಜಿಲ್ಲೆಯ ಗೆಜೆಟಿಯರಿನಲ್ಲಿ (ಕ್ರಿ. ೧೯೦೪; ಪುಟ ೨೪೯) ಹರಪನಹಳ್ಳಿಯ ವಿಚಾರವಾಗಿ ಬರೆಯುತ್ತ, "ಈ ಜಿಲ್ಲೆಯಲ್ಲೆಲ್ಲ ಅತ್ಯಂತ ಪ್ರಬಲವಾದ ಹಿಂದಿನ ಕಾಲದ ಪಾಳೆಯಗಾರರ ವಂಶವೊಂದು ಇಲ್ಲಿ ಬಹಳ ಕಾಲ ನೆಲೆಸಿದ್ದಿತು. ಆ ವಂಶದ ಚರಿತ್ರೆಯು ದೀರ್ಘವಾದುದು" ಎಂದು ಹೇಳಿ, ಹರಪನಹಳ್ಳಿಯಲ್ಲಿ ಈ ಚರಿತ್ರೆಯ ಲಿಖಿತ ಗ್ರಂಥವಿರುವುದೆಂದೂ, ಅದನ್ನು ಸುಮಾರು ಕ್ರಿ. ೧೮೦೦ರಲ್ಲಿ ಬರೆದಿರಬಹುದೆಂದೂ, ಅದು ಬಹು ಮಟ್ಟಿಗೆ ಚಾರಿತ್ರಾತ್ಮಕ ದೃಷ್ಟಿಯಿಂದ ಸಮಂಜಸವಾಗಿರುವುದೆಂದೂ ಹೇಳಿದೆ.

ಹರಪನಹಳ್ಳಿಯಲ್ಲಿರುವ ಕರ್ಣಾಟಕಾಭಿಮಾನಿಗಳು ಈ ಗ್ರಂಥವನ್ನು ಹುಡುಕಿ ಬೆಳಕಿಗೆ ತಂದು ಉಪಕಾರ ಮಾಡಬೇಕೆಂದು ಕೋರುತ್ತೇವೆ.

———

# ಗ್ರಂಥ ವಿಮರ್ಶೆ

## ೧. ಪೂರ್ವರಂಗ

ಲೇಖಕರು.—ಮಧುರ ಚೆನ್ನ, ಧಾರವಾಡ.

ಪ್ರಕಾಶಕರು.—ಜಯಕರ್ನಾಟಕ ಗ್ರಂಥಮಾಲೆ, ಧಾರವಾಡ.

ಕ್ರೌ ಅಷ್ಟಪತ್ರ ಪುಟಗಳು ೧೦+೧೦೮ ; ಬೆಲೆ ೧೦ ಆಣೆ ; ೧೯೩೨.

ಇದು ಜಯಕರ್ನಾಟಕ ಗ್ರಂಥಮಾಲೆಯ ಹತ್ತನೆಯ ಪುಷ್ಪ ; "ಒಂದು ಆಧ್ಯಾತ್ಮಿಕ ಕಥೆ." ಶ್ರೀ ಬೇಂದ್ರೆಯವರು ಈ ಗ್ರಂಥಕ್ಕೆ ಬರೆದಿರುವ ಮುನ್ನುಡಿಯಲ್ಲಿ ಗ್ರಂಥದ ಯೋಗ್ಯತೆಯನ್ನು ಚೆನ್ನಾಗಿ ತೂಕಮಾಡಿ ಹೀಗೆ ಹೇಳಿದ್ದಾರೆ:— "ಗೆ॥ ಚೆನ್ನಮಲ್ಲಪ್ಪ ಗಲಗಲಿ (ಹಲಸಂಗಿ) ಇವರು ಈ ಪುಸ್ತಕದಲ್ಲಿ ತಮ್ಮ ಸಾಧನದ ಇತಿವೃತ್ತವನ್ನೆ ಅಧ್ಯಾತ್ಮಿಕ ಕಥೆಯಾಗಿ ಬರೆದಿದ್ದಾರೆ.....ಈ ಪುಸ್ತಕದಲ್ಲಿ ಅವರು 'ಜ್ಞಾನಭಿಕ್ಷು'ಗಳಾಗಿದ್ದಾರೆ. ....ವಸ್ತುವು ಆತ್ಮೀಯ ಇತಿವೃತ್ತ; ರೀತಿ ಸಾಹಿತಿಯದು." "ಬೇರೆಬೇರೆ ಗ್ರಂಥಗಳೊಳಗಿನ ವಿಚಾರಗಳು, ಜನರ ಮಾತುಗಳು, ಜ್ಞಾನಭಿಕ್ಷುವಿಗೆ ಸಂಶಯವನ್ನೂ, ವೈಷಮ್ಯವನ್ನೂ, ಅತೃಪ್ತಿಯನ್ನೂ ಹೇಗೆ ಹುಟ್ಟಿಸಿದುವು—ಎಂಬ ವಾಸ್ತವ ಪ್ರಸಂಗ ಕಥನವು ವೈಷಮ್ಯ ಖಂಡದಲ್ಲಿದೆ." "ವಿಚಾರಗಳು ಜ್ಞಾನಭಿಕ್ಷುವಿನ ರಾಜಸ ಬುದ್ಧಿಗೆ ತಕ್ಕಂತೆಯೆ ವಿಷಮವಾಗಿವೆ. ಆ ಕಾಲಕ್ಕೆ ಹೇಗೆ ಹೇಗೆ ಭಾವಗಳು ಎಂತೆಂತು ಉದಯವಾದವೋ ಹಾಗೆ ಹಾಗೆ ಅವುಗಳನ್ನು ವ್ಯಕ್ತಮಾಡಲಾಗಿದೆ. ಸಮನ್ವಯ ಖಂಡದಲ್ಲಿ ಈ ವಿಷಮ ವಿಚಾರಗಳ ಸಮನ್ವಯವಿಲ್ಲ: ಆದರೆ ಜ್ಞಾನಭಿಕ್ಷುವಿನ ಮನದ ವೈಷಮ್ಯವು ಶಾಂತಿಯ ಸಮತೆಯಲ್ಲಿ ಹೇಗೆ ಬಾಯಿಗೂಡಿತು—ಎಂಬುದನ್ನಷ್ಟೇ ಹೇಳಲಾಗಿದೆ." "ಸಾತ್ವಿಕ ಬುದ್ಧಿಯ ದರ್ಶನವು ಸಮನ್ವಯ ಖಂಡದಲ್ಲಿದೆ."

ಇದು ಉದಾತ್ತ ವಿಚಾರ ಪರಿಪ್ಲುತವಾದ ಉತ್ತಮ ಗ್ರಂಥ. ಇದೇ ಗ್ರಂಥಕರ್ತರ "ನನ್ನ ನಲ್ಲ" ಎಂಬ ಕಾವ್ಯವನ್ನು ವೈಷಮ್ಯ ಖಂಡವಾದ ಮೇಲೆ, ಸಮನ್ವಯ ಖಂಡಕ್ಕಿಂತ ಮುಂಚೆ, ಓದಿಕೊಂಡರೆ ಈ ಗ್ರಂಥದ ಮಹತ್ವವೂ ಉದ್ದೇಶವೂ ಸ್ಪಷ್ಟವಾಗಿ ತಿಳಿಯುವುವು. ಖಂಡ ಕಾವ್ಯ, ಸಣ್ಣ ಕಥೆ–ಇವುಗಳಿಂದ ವಿಶಾಲವಾಗುತ್ತಿರುವ ಸಾಹಿತ್ಯ ತಟಾಕವು ಆಳಗೊಂಡು ಗಭೀರವೂ ಗಂಭೀರವೂ ಆಗುವುದು ಇಂತಹ ವಿಚಾರಗಳ ಸಮಾಲೋಚನೆಯ ಗ್ರಂಥಗಳಿಂದ.

ಈ ಗ್ರಂಥದ ಲೇಖಕರನ್ನೂ ಪ್ರಕಾಶಕರನ್ನೂ ಮನಸಾರೆ ವಂದಿಸುತ್ತೇವೆ.

ದೇವುಡು.

## ೨. ಕರ್ಣಾಟಕ ಭಕ್ತ ವಿಜಯ

### (ಭಾಗ ೧)

ಲೇಖಕರು.—ಬೇಲೂರು ಕೇಶವದಾಸರು, ಹರಿಕಥಾ ವಿದ್ವಾನ್ (ಬಳ್ಳಾರಿ).

ಕ್ರೌನ್ ಅಷ್ಟಪತ್ರ ಪುಟಗಳು ೧೪+೪೧೦+೫; ಬೆಲೆ ರೂ. ೨-೮-೦; ೧೯೩೩.

ಯಾವ ಮತವಾದರೂ ಚಿರಸ್ಥಾಯಿಯಾಗಿ ನಿಲ್ಲಬೇಕಾದರೆ, 'ದಾರ್ಶನಿಕ ಗ್ರಂಥಗಳು, ಪ್ರಚಾರಕರು, ಮತ ತತ್ತ್ವಗಳನ್ನನುಭವಿಸಿ ಮಹಿಮೆಗಳನ್ನು ತೋರಿರುವ ಸಾಧು ಸಂತರ ಮತ್ತು ದಾಸರ ಚರಿತ್ರೆಗಳು' ಎಂಬ ಮೂರು ಅಂಗಗಳು ಮುಖ್ಯವಾಗಿ ಇರಲೇಬೇಕು. ದಾರ್ಶನಿಕ ಗ್ರಂಥಗಳು ಸಂಸ್ಕೃತ ಭಾಷೆಯಲ್ಲಿರುವುದರಿಂದ ಎಲ್ಲರಿಗೂ ಅರ್ಥವಾಗುವಂತಿಲ್ಲ. ಪ್ರಚಾರಕರ ಸಂಖ್ಯೆ ಅತ್ಯಲ್ಪ. ಸಾಧು ಸಂತರೂ ದಾಸರೂ ಅನೇಕರಿದ್ದರೂ ಅವರ ಚರಿತ್ರೆಗಳು ಹೆಚ್ಚಾಗಿ ಪ್ರಕಟವಾಗಿಲ್ಲ. ಇದರಿಂದ, ಮತದ ಅಡಿಗಲ್ಲುಗಳು ಸಡಿಲುವ ಸನ್ನಿವೇಶವು ಸಂಭವಿಸಬಹುದು.

ಭರತ ಖಂಡದಲ್ಲಿ ಅತ್ಯುಚ್ಛ್ರಾಯಸ್ಥಿತಿಯಲ್ಲಿರುವುದು ಶೈವ ವೈಷ್ಣವ ಮತಗಳು. ಈ ಮತಗಳಲ್ಲಿ ಭಕ್ತಿಗೆ ಹೆಚ್ಚು ಪ್ರಾಶಸ್ತ್ಯವುಂಟಲ್ಲದೆ, ಆ ಭಕ್ತಿಯಿಂದಲೇ ಮುಕ್ತಿಯನ್ನು ಪಡೆದ ಭಕ್ತರೂ ಅನೇಕರುಂಟು. ಮಹಾರಾಷ್ಟ್ರದಲ್ಲಿ ಇಂತಹ ಭಕ್ತರ ಜೀವನ ಚರಿತ್ರೆಗಳನ್ನು ಮಹೀಪತಿಯೆಂಬಾತನು 'ಭಕ್ತ ವಿಜಯ'ವೆಂಬ ಅಂಕಿತದಿಂದ ರಚಿಸಿ ಮಹೋಪಕಾರಮಾಡಿರುವನು.

ನಮ್ಮ ಕರ್ಣಾಟಕದಲ್ಲಿ ದಾಸ ಕೂಟದವರೆಂದು ಹೆಸರುಗೊಂಡು ಅನೇಕ ಮಹಿಮೆಗಳನ್ನು ತೋರಿ ವೈಷ್ಣವ ಮತ ತತ್ತ್ವಗಳನ್ನು ಹಾಡಿ, ಹೆಂಗಸರು ಮಕ್ಕಳಾದಿಯಾಗಿ ಎಲ್ಲರೂ ಭಕ್ತಿ ಪರವಶರಾಗುವಂತೆ ಮಾಡಿದ ಮಹನೀಯರನೇಕರುಂಟು. ದಾಸ ಕೂಟದವರು ದೇಶದಲ್ಲಿ ಕೇವಲ ವೈಷ್ಣವ ಮತ ಪ್ರಚಾರ ಮಾಡಿರುವುದು ಮಾತ್ರವಲ್ಲದೆ ಕನ್ನಡ ಸಾಹಿತ್ಯದ ಬೆಳೆವಣಿಗೆಗೂ ಶ್ರಮಿಸಿದ್ದಾರೆ. ಇವರು ಹಾಡಿದ ಲೆಕ್ಕವಿಲ್ಲದ ಪದಗಳಿಂದ ಭಾಷೆಯು ವೃದ್ಧಿಗೊಂಡಿದೆ. ಈ ಎರಡೂ ದೃಷ್ಟಿಗಳಿಂದ ಇವರು ಕನ್ನಡಿಗರೆಲ್ಲರಿಗೂ ಮಾನ್ಯರಾಗಿದ್ದಾರೆ. ಈ ಮಹನೀಯರ ಚರಿತ್ರೆಗಳು ಎಲ್ಲಿಯೋ ಕೆಲವು ಮಂದಿಗೆ ಮಾತ್ರ ತಿಳಿದಿದ್ದು ಎಲ್ಲರಿಗೂ ದೊರೆಯುವಂತಿರಲಿಲ್ಲ.

ಈಗ ಶ್ರೀ ಬೇಲೂರು ಕೇಶವದಾಸರು ಎಂಟು ಮಂದಿ ಮಹನೀಯರ ಮಹತ್ತ್ವಪೂರ್ಣವಾದ ಚರಿತ್ರೆಗಳನ್ನು ಒಟ್ಟುಗೂಡಿಸಿ "ಕರ್ಣಾಟಕ ಭಕ್ತ ವಿಜಯ"ವನ್ನು ಬರೆದು ಕನ್ನಡಿಗರಿಗೆ ಮಹೋಪಕಾರಮಾಡಿದ್ದಾರೆ. ಇದಕ್ಕಾಗಿ ಇವರಿಗೆ ವಂದನೆಗಳು. ಈ ಪುಸ್ತಕದಲ್ಲಿ ೫ ಚಿತ್ರ ಪಟಗಳಿವೆ.

ಗ್ರಂಥದ ಶೈಲಿಯು ಜೀವನ ಚರಿತ್ರೆಗೆ ತಕ್ಕುದಾಗಿದೆ. ಅಲ್ಲಲ್ಲಿ, ದಾಸರ ಮಹಿಮೆಗಳನ್ನು ತೋರುವ ಕೆಲವು ಪದಗಳನ್ನು ಸೇರಿಸಿರುವುದು ಓದುಗರಿಗೆ ಹರ್ಷವನ್ನುಂಟುಮಾಡದಿರದು. ಗ್ರಂಥವನ್ನು ಬರೆಯುವಾಗ ಶ್ರೀ ದಾಸರು ವ್ಯಾಕರಣ ನಿಯಮಗಳಿಗೆ ಹೆಚ್ಚು ಗಮನಕೊಟ್ಟಿದ್ದರೆ ಚೆನ್ನಾಗಿತ್ತು.

ಗ್ರಂಥಕರ್ತರು ಕಡೆಗೊಂದು ಮಾತೆಂದು, "ಈಗ ಬೇಕಾಗಿರುವುದು ಆವೇಶ ಹುಟ್ಟಿಸುವ ಪುಸ್ತಕ; ಹಿಂದಿನದನ್ನು ಅಲ್ಲಗಳೆಯುವ ಪುಸ್ತಕ; ನೀತಿಯ ಹೆಸರಿನಿಂದ ಸಮಾಜದ ಅನೀತಿಯನ್ನು ಭೂತಗನ್ನಡಿಯಲ್ಲಿಟ್ಟು ಓದುವವರ ಹೃದಯ ಗ್ರಂಥಿಯನ್ನು ವಿದಾರಿಸುವ ಪುಸ್ತಕ. ಈ ಯಾವ ತರಗತಿಗೂ ಸೇರದಿರುವುದು ನಮ್ಮ ಈ ಪುಸ್ತಕ" ಎಂದು ಬರೆದಿರುತ್ತಾರೆ. ಇದು ಅಷ್ಟು ಸಮಂಜಸವಾದುದಲ್ಲ. ಮಹತ್ತ್ವಪೂರ್ಣವಾದುದು ಹೊಸದಾಗಲಿ, ಹಳೆಯದಾಗಲಿ ಎಲ್ಲರಿಗೂ ಮಾನ್ಯವಾದುದೇ. ಇದನ್ನರಿತ ಯಾರೂ ಮೇಲಿನ ನುಡಿಗಳನ್ನೊಪ್ಪುವುದಿಲ್ಲ. ಆದುದರಿಂದ, ಹಳೆಯದರ ಮೇಲಣ ಮಮತೆಯಿಂದ ಹೊಸದನ್ನು ಹಳಿಯುವ ಸಂಪ್ರದಾಯವನ್ನು ದೂರ ಮಾಡಬೇಕೆಂದು ನಮ್ಮ ಸೂಚನೆ. ಒಟ್ಟಿನ ಮೇಲೆ, "ಕರ್ಣಾಟಕ ಭಕ್ತ ವಿಜಯ"ಕ್ಕೆ ಕನ್ನಡಿಗರ ಸಂಪೂರ್ಣ ಸಹಾನುಭೂತಿಯು ದೊರೆಯಲೆಂದು ಬಯಸುತ್ತೇವೆ.

ನೋ. ಶಂ. ಸು.

---

## ೩. ಚಂದ್ರಗುಪ್ತ

ಮೂಲ ಲೇಖಕರು.—ಸ್ವ. ವಾ. ದ್ವಿಜೇಂದ್ರಲಾಲರಾಯ್, ಎಂ.ಎ.

ಅನುವಾದಕರು ಮತ್ತು ಪ್ರಕಾಶಕರು.—ರಂಗರಾವ ಹಿರೇಕೆರೂರ, ಬಿ.ಎ, ಹುಬ್ಬಳ್ಳಿ.

ಮುದ್ರಣಕಾರರು.—ವಾಗ್ವಿಲಾಸ ಪವರ್ ಪ್ರೆಸ್, ಹುಬ್ಬಳ್ಳಿ.

ಕ್ರೌ ಅಷ್ಟಪತ್ರ ಪುಟಗಳು ೨೦೮; ಬೆಲೆ ರೂ. ೧—೪—೦; ೧೯೩೨.

೨,೩೦೦ ವರ್ಷಗಳ ಹಿಂದೆ ಮಗಧದ ದೊರೆಯಾಗಿದ್ದ ನಂದನನ್ನು ಅವನ ವೈಮಾತ್ರೇಯನಾದ ಚಂದ್ರಗುಪ್ತನು ಪಾರ್ವತೇಯರ ಸಹಾಯದಿಂದ ನಿಗ್ರಹಿಸಿ, ಮೌರ್ಯವಂಶದ ಸ್ಥಾಪನೆಯನ್ನು ಮಾಡಿದುದೂ, ಆ ರಾಜ್ಯದ ಮೇಲೆ ದಂಡೆತ್ತಿ ಬಂದ ಸೆಲ್ಯೂಕಸ್ಸನನ್ನು ಜಯಿಸಿ ಅವನ ಮಗಳನ್ನು ಮದುವೆಯಾದುದೂ ಈ ನಾಟಕದ ಕಥಾವಸ್ತು. ಇದರಲ್ಲಿ ಮೊದಲನೆಯ ಅಂಶವನ್ನೊಳಕೊಂಡ 'ಮುದ್ರಾರಾಕ್ಷಸ' ವೆಂಬ ನಾಟಕವೊಂದಿದೆ. (ಹಾಗೆಯೇ ನಮ್ಮ ಕನ್ನಡದಲ್ಲಿ ಆ ಮುದ್ರಾರಾಕ್ಷಸದ ಕಥೆಯನ್ನು ಭಾವನಾ ಶಕ್ತಿಯಿಂದ ಬೆಳೆಯಿಸಿಕೊಂಡು ಬರೆದಿರುವ 'ಮುದ್ರಾ ಮಂಜೂಷ'ವೆಂಬ ಅದ್ಭುತ ಕಾದಂಬರಿಯೂ ಇದೆ.) ಈ ನಾಟಕವು 'ಮುದ್ರಾ ರಾಕ್ಷಸ'ಕ್ಕಿಂತ ವಿಸ್ತಾರವಾದುದಲ್ಲದೆ, ಚಾರಿತ್ರಿಕಾಂಶಗಳನ್ನು ಹೆಚ್ಚಾಗಿ ಉಪಯೋಗಿಸಿಕೊಂಡಿದೆ.

ಈ ಗ್ರಂಥವನ್ನು ಮೊದಲು ಬಂಗಾಲಿಯಲ್ಲಿ ಬರೆದ ದ್ವಿಜೇಂದ್ರಲಾಲರಾಯ್ ಅವರು ವಾಚಕಪ್ರಪಂಚವನ್ನು ವಿಸ್ಮಯಗೊಳಿಸುವಂತಹ ಪ್ರತಿಭಾವಂತರು. ಈ ನಾಟಕದಲ್ಲಿ ಆ ಅಪ್ರತಿಮ ಪ್ರತಿಭಾ ಶಕ್ತಿಯ ಪರಿಚಯವಾಗುವುದು ಉತ್ತರಭಾಗದಲ್ಲಿ ಎಂದರೆ ತಪ್ಪಲ್ಲ. ಮೊದಮೊದಲು ಕೇವಲ ಛಾಯಾಮಾತ್ರರಾಗಿ ಕಾಣುತ್ತಿದ್ದ ಪಾತ್ರ

ಗಳು ಬರುಬರುತ್ತ ಅಂಗಾಂಗಗಳನ್ನುಳ್ಳ ಮನುಷ್ಯರಾಗುತ್ತಾರೆ. ಆದರೂ ಮೊದಲಿನಿಂದ ಕೊನೆಯ ವರೆಗೂ ಒಂದು ತೆರವಲ್ಲದಿದ್ದರೆ ಮತ್ತೊಂದು ತೆರವಾಗಿ ತಿರಸ್ಕಾರವೇ ತಿರಸ್ಕಾರ—ತಿರಸ್ಕಾರದ ಪರಮಾವಧಿಯು ಕಂಡುಹೋಗಿದೆ ಈ ನಾಟಕದಲ್ಲಿ. ಈ ತಿರಸ್ಕಾರದ ಪೈಶಾಚಿಕ ನರ್ತನವನ್ನೆಲ್ಲ ಕೊನೆಯ ದೃಶ್ಯವು ಅಳಿಸಿ ಒಂದು ಅಭೂತ ಪೂರ್ವವಾದ ಶಾಂತಿಯನ್ನು ತರುತ್ತದೆ.

'ನಾಟಕವು ಪ್ರಯೋಗದ ಅಂಗವೇ ಹೊರತು ಕಾವ್ಯದಂತೆ ಶ್ರಾವ್ಯವಾಗಲು ಹುಟ್ಟುವುದಲ್ಲ' ಎಂಬ ಸಿದ್ಧಾಂತವನ್ನು ಒಪ್ಪಿದರೆ, 'ಚಂದ್ರಗುಪ್ತ' ಒಳ್ಳೆಯ ನಾಟಕವೆಂದು ಹೇಳುವುದು ಸಾಹಸ. ಓದುವಾಗ ಮನಸ್ಸನ್ನು ಹಿಡಿದು ಹೃದಯ ವನ್ನು ಕಲಕುವಂತಹ ಸನ್ನಿವೇಶಗಳಿವೆ. ಆದರೆ, 'ನಾಟಕದಲ್ಲಿ ಬರುವ ಪ್ರತಿಯೊಂದು ಸಂದರ್ಭವೂ ಮನುಷ್ಯವಿಗ್ರಹಗಳ ಕಾರ್ಯಾಕಾರ್ಯ ನಿರೂಪಣೆಯ ಚಿತ್ರವಾಗಿರ ಬೇಕು; ನಾಟಕದಲ್ಲಿ ಬರುವ ಪ್ರತಿಯೊಂದು ಪಾತ್ರವೂ ಅಭಿನಯದಲ್ಲಿ ರೂಪಗೊಳ್ಳು ವಂತಹುದಾಗಿರಬೇಕು' ಎಂಬ ದೃಷ್ಟಿಯಿಂದ ನೋಡುವಾಗ, ಈ ನಾಟಕದ ನಾಟಕತ್ವವನ್ನು ಅರಿಯುವುದೂ ಅಳೆಯುವುದೂ ಅಸಾಧ್ಯ.

ಆದರೂ, ದ್ವಿಜೇಂದ್ರಲಾಲ್ ರಾಯರವರ ಕಾವ್ಯ ನಾಟಕಗಳೆಲ್ಲವೂ ನಮ್ಮ ಭಾಷೆಗೆ ಬಂದೇ ತೀರಬೇಕು. ಆ ಪ್ರತಿಭಾ ಸಂಪನ್ನನ ಪರಿಚಯವು, ಮೂಲಕ್ಕೆ ವಿರುದ್ಧವಿಲ್ಲದಂತೆ, ಕನ್ನಡಿಗರಿಗೆ ಆಗಬೇಕು. ಇಂತಹ ಉದ್ದೇಶವನ್ನು ಸಾಧಿಸಲು ಶ್ರೀಯುತ ರಂಗರಾಯರು ಪ್ರಯತ್ನಿಸಿರುವುದು ಶ್ಲಾಘ್ಯವಾದುದು. ಇವರು ಇನ್ನು ಮುಂದೆಯೂ ಈ ಕಾರ್ಯವನ್ನು ಮುಂದುವರಿಸಲೆಂದು ಹಾರೈಸುತ್ತೇವೆ.

ಭಾಷಾಂತರಕಾರರು ಮುಂದಿನ ತಮ್ಮ ಇಂತಹ ಕೃತಿಗಳಲ್ಲಿ ಮೂಲ ಕರ್ತೃವಿನ ಚರಿತ್ರೆ, ಆಯಾ ನಾಟಕದಲ್ಲಿರುವ ಮಹತ್ತ್ವ, ಆ ನಾಟಕಕ್ಕೂ ಅದರ ಆಕರಗಳಿಗೂ ಇರುವ ಸಂಬಂಧ—ಇವೇ ಮೊದಲಾದವನ್ನು ಕುರಿತು ವಿಸ್ತಾರವಾಗಿ ಪೀಠಿಕೆಯನ್ನು ಬರೆಯಬೇಕೆಂದು ನಮ್ಮ ಕೋರಿಕೆ. ಇದರಿಂದ ಕಾವ್ಯ ಪರಿಚಯವೂ ರಸಾಸ್ವಾದವೂ ಹೆಚ್ಚುವುದರಲ್ಲಿ ಸಂಶಯವಿಲ್ಲ.

ದೇವುಡು.

---

## ೪. ಫ್ರಾನ್ಸಿನ ಮಹಾ ಕ್ರಾಂತಿ

ಲೇಖಕರು.—ಪಿ. ಆರ್. ರಾಮಯ್ಯನವರು, ಬಿ.ಎಸ್‌ಸಿ., ಬೆಂಗಳೂರು.

ಮುದ್ರಣಕಾರರು.—ರಾಧಾ ಪವರ್ ಪ್ರೆಸ್, ಬೆಂಗಳೂರು.

ಕ್ರೌನ್ ಅಷ್ಟಪತ್ರ ಪುಟಗಳು ೬+೧೬೩; ಬೆಲೆ ೧ ರೂಪಾಯಿ; ೧೯೩೩.

ಈ ಗ್ರಂಥದ ವಿಷಯವು ಅನೋಘವಾದುದು. ಆಧುನಿಕ ರಾಜಕೀಯ ಸಂಸ್ಥೆ ಗಳಿಗೂ ಆರ್ಥಿಕ ತತ್ತ್ವಗಳಿಗೂ ಫ್ರಾನ್ಸಿನ ಮಹಾ ಕ್ರಾಂತಿಯು ಆಧಾರ. ಪ್ರಕೃತ ಗ್ರಂಥದಲ್ಲಿ ವಿಷಯ ಗೌರವವಿದ್ದರೂ ವಿಚಾರ ಗೌರವವಿಲ್ಲ. ಏಕೆಂದರೆ, ರಾಮಯ್ಯ

ನವರು ಕ್ರಾಂತಿಯ ಬಾಹ್ಯ ಚಿಹ್ನೆಗಳನ್ನು ಅಂತರಂಗದ ತಿರುಳಿಂದು ಅರಿತು ಚಿತ್ರಿಸಿದ್ದಾರೆ.

ಅನೇಕರಿಗೆ ಕ್ರಾಂತಿಯೆಂದರೆ, ಕೇವಲ ದೊಂಬಿ, ಗಲಭೆ ಮತ್ತು ರಕ್ತ ಪಾತ ವೆಂದೇ ಮನವರಿಕೆಯಾಗುತ್ತದೆ. ಈ ಭ್ರಮೆಗೆ ಒಂದು ಕಾರಣವುಂಟು: ಏನೆಂದರೆ, ಒಂದು ಪರಿಸ್ಥಿತಿಯ ಪ್ರಭಾವದ ವರ್ಚಸ್ಸು ಒಬ್ಬ ವ್ಯಕ್ತಿಯ ಮೇಲೆ ಬಿದ್ದರೆ, ಅವನಿಗೆ ಆ ವಾತಾವರಣದಿಂದ ಹೊರಹೊಕ್ಕು ವಿಚಾರ ಮಾಡುವ ಶಕ್ತಿ ಇರುವುದಿಲ್ಲ. ಕ್ರಾಂತಿಯಾದ ಕಾಲದಲ್ಲಿ ಘನವಿದ್ವಾಂಸನಾದ ಬರ್ಕನೆಂಬುವನು ಫ್ರಾನ್ಸಿನ ಮಹಾ ಕ್ರಾಂತಿಯನ್ನು ವಿಶ್ವದ ಪ್ರಳಯವೆಂದು ಅರಿತನು. ಏಕೆಂದರೆ, ಸಾಕ್ಷಾತ್ತಾಗಿ ರಕ್ತ ವಾಹಿನಿಯನ್ನು ನೋಡುತ್ತಿದ್ದವನಿಗೆ ಕ್ರಾಂತಿಯಲ್ಲಿ ಅಡಕವಾಗಿದ್ದ ಅಮೋಘವಾದ ತತ್ತ್ವಗಳು ಅಮರವಾಗಿ ಉಳಿಯುತ್ತವೆಂಬುದು ಮನವರಿಕೆಯಾಗಲಿಲ್ಲ. ಆದರೆ, ಈಗ ಕ್ರಾಂತಿಯ ವಾತಾವರಣವು ಕಳೆದು ಎರಡು ಶತಮಾನವಾಯಿತು. ಇಂದಿನ ದಿನ ಆ ವಿಷಯವನ್ನು ಬರೆಯುವವರು ಅದೇ ಸಂಕುಚಿತ ದೃಷ್ಟಿಕೋಣದಿಂದ ನೋಡ ಬಾರದು. ನಮಗೆ ಫ್ರಾನ್ಸಿನ ಮಹಾ ಕ್ರಾಂತಿಯಲ್ಲಿರುವ ಅಭಿಮಾನವು ಅಂದಿನವರು ಮಾಡಿದ ಅತ್ಯಾಚಾರಗಳ ಮೇಲಲ್ಲ. ಯಾವ ತತ್ತ್ವಗಳಿಗಾಗಿ ಈ ಅತ್ಯಾಚಾರಗಳು ನಡದುವೊ ಆ ತತ್ತ್ವಗಳು ಇಂದಿನ ಪ್ರಪಂಚದಲ್ಲಿ ಯಾವ ಸ್ಥಾನವನ್ನು ಹೊಂದಿವೆ? ಎಂಬುದೇ ಪ್ರಶ್ನೆ. ಈ ದೃಷ್ಟಿಯಿಂದ ಈ ಗ್ರಂಥವು ನಿರಾಶಾ ಜನಕವಾಗಿದೆ. ಬಾಹ್ಯ ಚಿಹ್ನೆಯು ರಕ್ತಮಯವಾಗಿದ್ದರೆ, ಅದರ ಸೂತಕವು ಅಂತರಂಗದ ಜ್ಯೋತಿಗೆ ಅಂಟುವುದಿಲ್ಲ.

ಫ್ರಾನ್ಸಿನ ಕ್ರಾಂತಿಯ ಅದ್ಭುತ ಧ್ಯೇಯಗಳನ್ನು ಕೆಳಗೆ ವಿವರಿಸಿರುವಂತೆ ಹೇಳಬಹುದು.

(೧) ಮಾನವನು ಜನ್ಮಾರಭ್ಯ ಸರ್ವ ಸ್ವತಂತ್ರನು. ಅವನ ಹಕ್ಕು ಬಾಧ್ಯತೆಗಳ ವಿಷಯದಲ್ಲಿ ವ್ಯಕ್ತಿ ವ್ಯಕ್ತಿಗೂ ಪಕ್ಷಪಾತವಿರಕೂಡದು. ಅಂತಹ ಪಕ್ಷಪಾತ ವಿರಬೇಕಾದರೆ ಅದಕ್ಕೆ ಪ್ರಜಾ ಹಿತವೇ ಕಾರಣ, ಮತ್ತಾವ ಕಾರಣವೂ ಇಲ್ಲ.

(೨) ಸಕಲ ರಾಜಕೀಯ ಸಂಸ್ಥೆಗಳ ಆದರ್ಶವೆಂದರೆ, ಮಾನವನ ನೈಜವಾದ ಮತ್ತು ಅಮರವಾದ ಹಕ್ಕುಗಳನ್ನು ಉಳಿಸುವುದಕ್ಕಾಗಿಯೇ. ಆ ಹಕ್ಕುಗಳು ಯಾವು ವೆಂದರೆ: ಸ್ವಾತಂತ್ರ್ಯ (Liberty), ಸ್ವತ್ತುಗಳು (Property), ಭದ್ರತೆ (Security), ಹಿಂದೆ ಹೇಳಿದ ಹಕ್ಕುಗಳಿಗೆ ಚ್ಯುತಿ ಬರುವುದಿಲ್ಲವೆಂಬ ನಂಬಿಕೆ, ಮತ್ತು ದಬ್ಬಾಳಿಕೆ ಯನ್ನು ಪ್ರತಿಭಟಿಸಿ ನಾಶ ಮಾಡುವುದು (Resistance of Oppression).

(೩) ಜನಾಂಗವೇ ಸಕಲ ಅಧಿಕಾರದ ಆಧಾರ. ಜನಾಂಗದ ಅಪ್ಪಣೆಯಿಲ್ಲದೆ, ಯಾವ ವ್ಯಕ್ತಿಯಾಗಲಿ ವ್ಯಕ್ತಿಗಳ ಸಮೂಹವಾಗಲಿ ಅಧಿಕಾರವನ್ನು ಹೊಂದುವುದು ಅನುಚಿತ.

(೪) ರಾಜಕೀಯ ಸ್ವಾತಂತ್ರ್ಯವೆಂದರೆ, ಇತರರನ್ನು ನೋಯಿಸದ ಕಾರ್ಯ ವೆಂದು ಅರಿಯಬೇಕು. ಆದರೆ, ಯಾವ ಕಾರ್ಯವು ಇತರರನ್ನು ನೋಯಿಸುವುದು,

ಅಥವಾ, ಸೋಲಿಸುವುದಿಲ್ಲ? ಎಂಬುದನ್ನು ನಿರ್ಧಾರ ಮಾಡುವವರು ಯಾವ ಒಬ್ಬ ವ್ಯಕ್ತಿಯೂ ಅಲ್ಲ; ಅದು ಕಾಯಿದೆಯಿಂದ ನಿರ್ಧಾರವಾಗಬೇಕು.

(೫) ಯಾವ ವ್ಯಕ್ತಿಯನ್ನೂ ಅವನ ಅಭಿಪ್ರಾಯಗಳಿಗಾಗಿ ಶಿಕ್ಷೆ ಮಾಡಕೂಡದು. ಆದರೆ, ಅಂತಹ ಅಭಿಪ್ರಾಯಗಳು ಪ್ರಜಾಹಿತಕ್ಕೆ ವ್ಯತಿರಿಕ್ತವಾಗಿದ್ದರೆ ಅವು ಶಿಕ್ಷಾರ್ಹ.

ಈ ತತ್ತ್ವಗಳು ಇಂದಿನ ವರೆಗೂ ಅಮರವಾಗಿ ನಿಂತಿವೆ. ಆಂಗ್ಲೇಯನಾದ ಬರ್ಕನು ಎಷ್ಟು ವಿರೋಧವಾಗಿ ಬರೆದರೂ, ಅವನ ದೇಶವೇ ಈ ತತ್ತ್ವಗಳನ್ನು ತನ್ನ ಜೀವನದಲ್ಲಿ ವಿಳಸ ಮಾಡಿದೆ. ಈ ತತ್ತ್ವಗಳನ್ನು ಪ್ರಚಾರ ಮಾಡಿದ ಕೀರ್ತಿಯು 'ರೂಸೊ' ಮತ್ತು 'ವಾಲ್ಟೇರ್' ಎಂಬ ವಿದ್ವಾಂಸರದು. ಇವರ ವಿಷಯವನ್ನು ರಾಮಯ್ಯನವರು ಕೇವಲ ಒಂದು ವಾಕ್ಯದಲ್ಲಿ ಮುಗಿಸಿಬಿಟ್ಟಿದ್ದಾರೆ. ರೂಸೊ ಬರೆದ ಗ್ರಂಥಗಳು ಯಾವುವೆಂದರೆ: ಸಾಮಾಜಿಕ ಸಮ್ಮತಿ (Contract Social) ಮತ್ತು ವ್ಯಕ್ತಿ ಸಘುತ್ವದ ಮೇಲೆ ಒಂದು ನ್ಯಾಸ (Treatise on Equality). ಮೊದಲನೆಯದರ ಮುಖ್ಯ ಸಮಸ್ಯೆ ಏನೆಂದರೆ: ವ್ಯಕ್ತಿ ವ್ಯಕ್ತಿಗೂ ಸುಖದುಃಖಗಳಲ್ಲಿ ಪರಸ್ಪರ ಅಂತರ್ಯವಿರಲು ಕಾರಣವೇನು? ಈ ಅಂತರ್ಯವು ನೈಜವಾದ ನಿಯಮಗಳಿಗೆ ಒಳಪಟ್ಟಿದೆಯೆ? ಈ ಪ್ರಶ್ನೆಗೆ ಉತ್ತರ ಹೇಳುತ್ತ ರೂಸೋವನು—ಮಾನವನು ಆಜನ್ಮಸ್ವತಂತ್ರನಾದರೆ, ವಿಶ್ವದಲ್ಲಿ ಶೃಂಖಲೆಗಳಿಂದ ಬಂಧಿಸಲ್ಪಟ್ಟಿದ್ದಾನೆಂದು ಸಾರಿದನು. ಮಾನವನ ಸಂಕಟಕ್ಕೆ ಈಶನು ಕಾರಣನಲ್ಲ, ಸಾಮಾಜಿಕ ಸಂಸ್ಥೆಗಳು. ಈ ವೇದಾಂತವು ಫ್ರಾನ್ಸಿನಲ್ಲಿ ಕಾಡುಕಿಚ್ಚಿನಂತೆ ಹಬ್ಬಿತು. ಅಂದಿನ ದಿವಸದಲ್ಲಿದ್ದ ಕ್ಷಾಮಕ್ಕೆ, ನಿರಂಕುಶವಾಗಿ ಒಬ್ಬ ವ್ಯಕ್ತಿಯೇ (ರಾಜನೇ) ರಾಜ್ಯಭಾರ ಮಾಡುತ್ತಿದ್ದುದು ಕಾರಣವೆಂದು ಜನಗಳಿಗೆ ಮಂದಟ್ಟಾಯಿತು. ಸಾಮಾಜಿಕ ಸಂಸ್ಥೆಗಳನ್ನು ಅವರು ಪರಿವರ್ತನ ಮಾಡಿದರು. ಹಾಗೆ ಪರಿವರ್ತನ ಮಾಡುವಾಗ ರಕ್ತಪಾತವಾಯಿತು. ಆದರೆ ರಕ್ತಪಾತವಾಯಿತೆಂದು ಕ್ರಾಂತಿಯಿಂದ ಆಗಿನ ಮುಂದಾಳುಗಳು ವಿಮುಖರಾಗಲಿಲ್ಲ. ಹಾಗೆ ವಿಮುಖರಾಗಿದ್ದಿದ್ದರೆ ಮಾನಸಿಕ ಭೀರು(ಹೇಡಿ)ಗಳಾಗುತ್ತಿದ್ದರು. ರಾಜಕೀಯ ಪ್ರಪಂಚದಲ್ಲಿ ರಕ್ತಪಾತವು ಅಷ್ಟು ಹೇಯವಾದುದೆಂದು ಚರಿತ್ರೆಗಳನ್ನು ಓದಿರುವವರು ಭಾವಿಸುವುದಿಲ್ಲ. ಇಂದನ ವರೆಗೂ ಚಕ್ರಾಧಿಪತ್ಯಗಳನ್ನು ಕಟ್ಟಿದ ಪೋರ್ಚುಗೀಸರೂ, ಸ್ಪೈನರೂ, ಮೊಗಲರೂ, ಬ್ರಿಟಿಷರೂ ರಕ್ತಪಾತವಾಗುತ್ತದೆಂದು ಅಂಜಲಿಲ್ಲ. ಇನ್ನು ಮುಂದೆ, ಯುದ್ಧಗಳು ಸಮಾಪ್ತಿಯಾಗುತ್ತವೆಂದು ನಂಬತಕ್ಕ ಭ್ರಾಂತರಿಗೆ ನಾವು ಏನೂ ಹೇಳುವುದಿಲ್ಲ. ರಾಷ್ಟ್ರಸಂಘವು ಜೀವಚ್ಛವವಾಗಿರುವುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಎಂದಿನ ವರೆಗೆ ಒಂದು ಜನಾಂಗವು ಮತ್ತೊಂದು ಜನಾಂಗವನ್ನು ಶೃಂಖಲೆಗಳಿಂದ ಬಂಧಿಸಿ, ತನ್ನ ಸ್ವಾರ್ಥಕ್ಕಾಗಿ ಅಡಿಯಾಳುಗಳಂತೆ ಕಾಣುವುದೋ ಅಲ್ಲಿಯ ವರೆಗೂ ರಕ್ತಪಾತವಾಗುತ್ತದೆ. ಆ ಈಶನ ಅವತಾರವಾದರೂ ಅದು ತಪ್ಪುವಹಾಗಿಲ್ಲ. ಆದರೆ, ಬಾಹ್ಯ ಚಿಹ್ನೆಗಳನ್ನು ಮಾತ್ರ ಕ್ರಾಂತಿಯ ಆತ್ಮವೆಂದು ತಿಳಿಯಬಾರದು.

ಫ್ರಾನ್ಸಿನ ಕ್ರಾಂತಿಯ ತತ್ತ್ವಗಳು ಏಷ್ಯಾ ಖಂಡವನ್ನೂ ಹೊಕ್ಕಿವೆ. ಏಷ್ಯದ ಜನರು ತಮ್ಮ ಅಧೋಗತಿಗೆ ತಮ್ಮ ಮೌಢ್ಯವೇ ಕಾರಣವೆಂದು ಅರಿಯುತ್ತಿದ್ದಾರೆ. ರಾಮಯ್ಯನವರಿಗೆ ಫ್ರಾನ್ಸಿನ ಮಹಾಕ್ರಾಂತಿಯು ಅದು ಪ್ರಾರಂಭವಾದ ಐದು ವರ್ಷಗಳಲ್ಲಿಯೇ ಮುಗಿದುಹೋಗುತ್ತದೆ. 'ರಾಬಸ್ಪಿಯರ'ನ ಮರಣಾನಂತರ, ಕ್ರಾಂತಿಯ ಉಗ್ರ ಮುಖವು ಬಾಡುತ್ತ ಬಂದಿತು. ಆದರೆ, ಕ್ರಾಂತಿಯ ಮುಖ್ಯ ತತ್ತ್ವಗಳ ಪ್ರಸಾರಣೆಯಾಗುವುದಕ್ಕೆ ಪ್ರಾರಂಭವಾದದ್ದು ಆಗಲೇ. ನೆಪೋಲಿಯನ್ನನು ಚಕ್ರವರ್ತಿಯಾದರೂ ಅವನು ಫ್ರಾನ್ಸಿನ ತತ್ತ್ವಗಳಿಗಾಗಿ ಯುದ್ಧ ಮಾಡಿದನೆಂದೇ ಹೇಳಬೇಕು. ಯೂರೋಪಿನ ಸಕಲ ರಾಜ್ಯಗಳ ಪ್ರಜೆಗಳಿಗೂ ತಮ್ಮ ನೈಜವಾದ ಸ್ವಾತಂತ್ರ್ಯವನ್ನು ಸ್ಥಾಪಿಸಲು ಅನುಕೂಲವಾಯಿತು. ಹಳೆಯ ರಾಜರು ದೇಶ ಭ್ರಷ್ಟರಾಗಬೇಕಾಯಿತು. ಫ್ರಾನ್ಸು ದೇಶವು ಒಂದು ಶತಮಾನದ ವರೆಗೂ ಯುದ್ಧ ಮಾಡಿ ವಿಜಯವನ್ನು ಹೊಂದಿದುದಕ್ಕೆ ಕಾರಣವೇನೆಂದು ಕೇಳಿದರೆ, ಈ ಮೇಲೆ ಹೇಳಿದ ತತ್ತ್ವಗಳ ನೈಜವಾದ ಬಲವೆಂದೇ ಹೇಳಬೇಕಾಗುತ್ತದೆ.

ಕ್ರಾಂತಿಯ ತತ್ತ್ವಗಳು ಈಗಲೂ ವಿಶ್ವದಲ್ಲಿ ಪ್ರಚಾರ ಹೊಂದುತ್ತಿವೆ; ವಿಶ್ವದ ಮೂಲೆಮೂಲೆಗಳನ್ನು ಅಲ್ಲೋಲ ಕಲ್ಲೋಲ ಮಾಡುತ್ತಿವೆ. ರಾಮಯ್ಯನವರು ಕ್ರಾಂತಿ ತತ್ತ್ವಗಳ ಪರಿಣಾಮವು ಇಂದಿನ ವಿಶ್ವದ ಮೇಲೆ ಏನಾಯಿತೆಂದು ವರ್ಣಿಸಿದ್ದರೆ ಚೆನ್ನಾಗಿದ್ದಿತು; ಕ್ರಾಂತಿ ಶಿಶುವಿನ ಪುತ್ರೋತ್ಸವದ ವೈಭವವನ್ನು ಹೇಳುತ್ತೇನೆಂದು ಪ್ರಾರಂಭಿಸಿ ಪ್ರಸವ ವೇದನೆಯಲ್ಲೇ ಮುಕ್ತಾಯ ಮಾಡಿದ್ದಾರೆ. ಗ್ರಂಥದಲ್ಲಿ, 'ಥಾಮಸ್ ಪೇಯಿನ್' ಎಂಬವನ ಹೆಸರು ಕೂಡ ಹೇಳಿಲ್ಲ; ಕ್ರಾಂತಿಯಿಂದ ಅಮೆರಿಕದ ಜನಾಂಗದ ಮೇಲೆ ಯಾವ ಪರಿಣಾಮವಾಯಿತೆಂದು ತಿಳಿಸಿಲ್ಲ. ಪುಸ್ತಕದಲ್ಲಿ ವಿಚಾರವೇ ಇಲ್ಲ, ಕೇವಲ ಕಥನ. ಕನ್ನಡಿಗರಿಗೆ ಆ ಕ್ರಾಂತಿಯಿಂದ ಎಂತಹ ಪ್ರಯೋಜನವಾಗುತ್ತದೆ ಎಂಬುದನ್ನು ಹೇಳಿಲ್ಲ. ಇಂದಿನ ಕನ್ನಡ ಪುಸ್ತಕಗಳಿಗೆ ಹೋಲಿಸಿದರೆ ಮುದ್ರಣವು ಅಸಮರ್ಪಕ, ಶೈಲಿಯು ಸಡಿಲ; ಆದರೂ ಪ್ರಯತ್ನವು ಅಮೋಘವಾದದ್ದು.

ಜಿ. ವಿ. ರಾಮಾಚಾರ್ಯ.

---

## ೫. The Prachi

VOLMUE I, PARTS I, II and III.

*Editor.*—BICHHANDA CHARAN PATRAIK, B.A.

Prachi Press, Cuttack.

Quarterly Organ of the Prachi Samiti:

The Premier Literary and Research Society of Utkal.

Annual Subscription Rs. 3-0-0; 1931.

ಪ್ರಾಚೀನ ಭರತ ಖಂಡದಲ್ಲಿ ಪ್ರಸಿದ್ಧವಾದ ದೇಶಗಳಲ್ಲಿ ಉತ್ಕಲವೂ ಒಂದು. ಈಗ ಅದೂ ಕರ್ಣಾಟಕದಂತೆ ಭಿನ್ನ ಭಿನ್ನವಾಗಿ ಬೇರೆ ಬೇರೆ ಪ್ರಾಂತಗಳಲ್ಲಿ ಸೇರಿ ಹೋಗಿ ಅದರ ಪ್ರಾಚೀನ ವೈಭವವೆಲ್ಲವೂ ಕನಸಾಗಿದೆ. ಹಿಂದಿನ ವೈಭವದ

ಪರಿಚಯವನ್ನು ಮಾಡಿಕೊಟ್ಟು ಮುಂದಿನ ಏಳಿಗೆಗೆ ಹದಿಯನ್ನು ಹಾಕುವ ಉದಾತ್ತೋದ್ದೇಶದಿಂದ ಹೊರಟಿರುವ ಇಂಗ್ಲಿಷಿನ ತ್ರೈಮಾಸಿಕ ಪತ್ರಿಕೆಯಿದು.

ಈಗ ನಮ್ಮ ಮುಂದಿರುವ ಈ ಮೂರು ಭಾಗಗಳಲ್ಲಿ ಉತ್ಕಲ, ಖುರ್ದದ ಈಚಿನ ದೊರೆಗಳು, ಪ್ರಾಚೀನ ಉತ್ಕಲದ ಸಮುದ್ರ ವ್ಯವಹಾರಗಳು, ಓಢ್ರರೂ ಅವರ ಪ್ರಾಬಲ್ಯವೂ ಎಂಬ ಉತ್ತಮ ಲೇಖನಗಳೂ, ಒರಿಸ್ಸ ಪ್ರಾಂತ್ಯ ಸಂಘಟನೆಯ (ಪುನರ್ಘಟನೆಯ) ಸಂಬಂಧವಾದ ಟಿಪ್ಪಣಿಗಳೂ ಇವೆ.

ಈ ಪತ್ರಿಕೆಯ ಉದ್ದೇಶಗಳು ಸಿದ್ಧಿಸಲಿ ಎಂದು ಮನಃಪೂರ್ವಕವಾಗಿ ಹಾರೈಸುತ್ತೇವೆ.

---

## ೬. ಪ್ರಾಚೀನ ಕರ್ನಾಟಕ

(ಸಂಪುಟ ೧, ಸಂಚಿಕೆ ೧ : ೧೯೩೩ನೆಯ ಏಪ್ರಿಲ್)

ಸಂಪಾದಕರು.—ಆಲೂರ ವೆಂಕಟರಾಯರು,

ಕರ್ನಾಟಕ ಇತಿಹಾಸ ಸಂಶೋಧಕ ಮಂಡಳ, ಧಾರವಾಡ—

ಇವರಿಂದ ಪ್ರಕಟಿತವಾಗುವ ಷಾಣ್ಮಾಸಿಕ ಪತ್ರಿಕೆ.

ರಾಯಲ್ ಅಷ್ಟಪತ್ರ ಪುಟಗಳು ೬೩+ರಾಕ್ಷಸ ತಂಗಡಿಯ ನಕ್ಷೆ.

ಕರ್ನಾಟಕದ ಇತಿಹಾಸಕ್ಕೆ ಸಂಬಂಧಿಸಿದ ಸಂಶೋಧನಾತ್ಮಕ ಮತ್ತು ಚಿಕಿತ್ಸಕ ಲೇಖಗಳನ್ನೂ, ತಾಮ್ರ ಶಾಸನ, ಶಿಲಾ ಲಿಪಿ, ಮೂಲ ಕಾಗದ ಪತ್ರಗಳು ಮುಂತಾದ ಇತಿಹಾಸ ಸಾಧನ ಸಾಮಗ್ರಿಗಳನ್ನೂ, ಐತಿಹಾಸಿಕ ಪ್ರಪಂಚದ ಸುದ್ದಿ ಸಮಾಚಾರಗಳನ್ನೂ ಪ್ರಕಟಿಸಿ ಕರ್ನಾಟಕದ ಪೂರ್ವೇತಿಹಾಸವನ್ನು ಕಟ್ಟುವ ಉತ್ತಮೋದ್ದೇಶದಿಂದ ಹೊರಟಿರುವ ಪತ್ರಿಕೆ.

ಈ ಸಂಚಿಕೆಯಲ್ಲಿ 'ನಮ್ಮ ನಾಡಿನ ಘನತೆ,' 'ಅನುಭವ ಮಂಟಪ,' 'ರಣಭೂಮಿಯ ನಿರ್ಣಯ,' 'ಬರಕಿ ಜನರು ಯಾರು?' ಮೊದಲಾದ ಉತ್ತಮ ವರ್ಗದ ಲೇಖಗಳು ಇವೆ. ಮುದ್ರಣಾದಿಗಳು ಅಂದವಾಗಿವೆ.

ಕನ್ನಡಿಗರೆಲ್ಲರೂ ಉದಾರ ಹಸ್ತದಿಂದ ಸಹಾಯ ಮಾಡಿ ತಮ್ಮ ಅಭಿಮಾನವನ್ನು ಕಾಯುವ ಈ ಪತ್ರಿಕೆಯನ್ನು ಕಾಯ್ದುಕೊಳ್ಳಬೇಕೆಂದು ಹಾರೈಸುತ್ತೇವೆ.

---

## ೭. The Karnatak Historical Review

(VOLME I, NO. II, September 1931)

***Editor.***—D. P. KARMARKAR, M.A., LL.B., DHARWAR.

Royal 8vo. pp. 48 + 1 Map + 1 Inscription + 1 Picture.

ಇದು ಕರ್ನಾಟಕ ಇತಿಹಾಸ ಸಂಶೋಧಕ ಮಂಡಲದವರು ಇಂಗ್ಲಿಷು ಭಾಷೆಯಲ್ಲಿ ಪ್ರಕಟಗೊಳಿಸುವ ನಿಯತ ಕಾಲಿಕ ಪತ್ರಿಕೆ. ಪ್ರಕೃತ ಸಂಚಿಕೆಯಲ್ಲಿ, 'ಕರ್ನಾಟಕದ ಇತಿಹಾಸಕ್ಕೆ ಆಧಾರಗಳು,' 'ನೈಜಾಂ ಕರ್ನಾಟಕದಲ್ಲಿ ನಡೆಯುತ್ತಿರುವ ಸಂಶೋಧನಗಳು,' 'ರಾಕ್ಷಸ ತಂಗಡಿಯ ರಣಭೂಮಿ'—ಎಂಬಿವೇ ಮುಂತಾದ ಉತ್ತಮ ಲೇಖಗಳಿವೆ. ಮೊದಲನೆಯ ಲೇಖನವನ್ನಂತೂ ಕನ್ನಡಿಗರೆಲ್ಲರೂ ಓದಲೇಬೇಕು. ಇದರಲ್ಲಿ ಕೊಟ್ಟಿರುವ ಪಟ್ಟಿಯನ್ನು ಬಹು ಶ್ರಮದಿಂದ ಸಿದ್ಧಪಡಿಸಿರುವ ಶ್ರೀ ಕರಮರಕರ್ ಅವರನ್ನು ನಾವು ಅಭಿನಂದಿಸುತ್ತೇವೆ.

ನಮ್ಮ ವಿಷಯಗಳನ್ನು ನಾವು ಅರಿತುಕೊಳ್ಳಬೇಕಾಗಿರುವಂತೆ ಇತರರಿಗೆ ಅರಿಯಿಸಲೂ ಬೇಕಾಗಿದೆ. ಈ ಉದ್ದೇಶವನ್ನು ನೆರವೇರಿಸುವುದಕ್ಕಾಗಿ ಜನ್ಮವೆತ್ತಿರುವ ಈ ಸಂಚಿಕೆಗೆ ಹೃತ್ಪೂರ್ವಕವಾದ ಸ್ವಾಗತವನ್ನೀಯುತ್ತೇವೆ.

---

ಶ್ರೀಃ

# ಕರ್ಣಾಟಕ
# ಸಾಹಿತ್ಯ ಪರಿಷತ್ಪತ್ರಿಕೆ

ಸಂಪುಟ ೧೮] ಶ್ರೀಮುಖ ಸಂವತ್ಸರ ಆಶ್ವಯುಜ ಮಾಸ [ಸಂಚಿಕೆ ೩



ವಾರ್ಷಿಕ ಚಂದಾ ರೂ. ೪] [ಬಿಡಿ ಸಂಚಿಕೆ ರೂ. ೧-೮-೦

ಅಕ್ಟೋಬರು ೧೯೩೩

2316—33.—ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟಾದ
ಟಿ. ಸುಬ್ರಹ್ಮಣ್ಯ ಅಯ್ಯರವರಿಂದ ಮುದ್ರಿಸಲ್ಪಟ್ಟಿತು.

## ವಿಷಯ ಸೂಚಿಕೆ

ಶ್ರೀಃ

ಕರ್ಣಾಟಕ ಸಾಹಿತ್ಯ

# ಪರಿಷತ್ಪತ್ರಿಕೆ



ಸಂಪುಟ ೧೮]    ಶ್ರೀಮುಖ ಸಂ॥ ಆಶ್ವಯುಜ ಮಾಸ    [ಸಂಚಿಕೆ ೩

## ಕರ್ಣಾಟಕ ಸಂಸ್ಕೃತಿ—III

## ಹೆಂಗುಸರ ಹಾಡುಗಳು

ಹಿಂದೆ ಹೇಳಿದಂತೆ ಹೆಂಗುಸರ ಹಾಡುಗಳು ರಾಗ ಪ್ರಧಾನವಾದವು. ಇಲ್ಲಿ ತಾಳವುಂಟು; ಆದರೂ ಗಂಡುಸರ ಹಾಡುಗಳಲ್ಲಿರುವ ತಾಳ ವೈವಿಧ್ಯವೂ ಬಿಗಿಯೂ ಬಿಕ್ಕಟ್ಟೂ ಇಲ್ಲಿ ಇಲ್ಲವೆಂದರೂ ಒಪ್ಪುವುದು.[1] ಈ ಹಾಡುಗಳಲ್ಲಿ ಶಾರೀರದ ಇಂಪು ಸೊಂಪುಗಳು ಮುಖ್ಯವಾದವು. ಸ್ವಭಾವ ಮಧುರವಾದ ಶಾರೀರದ ಸುಖವನ್ನು ಬೀರಿ ರಸ ಭಾವ ತರಂಗಗಳನ್ನು ಪ್ರೇರಿಸುತ್ತ ತಾಳದ ಸುಲಭ ಗತಿಯನ್ನು ಹಿಡಿದು ಹೆಂಗುಸರು ಇವುಗಳನ್ನು ಹಾಡುವರು.

ಹಿಂದಿನ ಹಾಡುಗಳಲ್ಲಿ ಕಾಣಬರುವ ಶೈಲಿ, ಪ್ರಾಸಾದಿಗಳೂ, ಬಂಧ ಮೊದಲಾದ ಕಾವ್ಯ ಗುಣಗಳೂ ಈ ಹಾಡುಗಳಲ್ಲಿಯೂ ಕಂಡುಬಂದರೂ, ಇವು "ವಾಗ್ದೇವಿಯ ಭಂಡಾರವನ್ನೊಡೆದ ಕವಿತ್ವ"ವಲ್ಲ; ಅಂತೆಯೇ, "ಪಂಡಿತರು ತಗುಳ್ದು ಬಿಚ್ಚರಿಸೆ ಪೇಳಲೊಡರ್ಚಿದ ಪ್ರಬಂಧ"ಗಳೂ ಅಲ್ಲ. ಇವು ಪಾಮರರಿಗೋಸುಗವೇ ಬರೆದವು. ಪಂಡಿತರೂ ಈ ಹಾಡುಗಳನ್ನು ರಚಿಸಿರುವುದುಂಟು; ಆದರೂ ಈ ಹಾಡುಗಳು ಯಾರಿಗಾಗಿ ವಿರಚಿತವಾದವು ಎಂಬುದನ್ನು ಅವರು ಮರೆಯುವುದಿಲ್ಲ. ಈ ಪಂಡಿತ ಕೃತಿಗಳ ಜೊತೆಗೆ ಅನಕ್ಷರರಾದ ಹೆಂಗುಸರೂ ನಿಸರ್ಗ ಸಿದ್ಧವಾದ ಕಾವ್ಯಾನಂದ ಲಹರಿಯಲ್ಲಿ ಬೆರೆತು ಹಾಡಿಕೊಂಡಿರುವ "ಆವೇಶ ಕಾವ್ಯ"ಗಳೂ ಉಂಟು.

ಗಂಡುಸರ ಹಾಡುಗಳು ಸಾಮಾನ್ಯವಾಗಿ ಬ್ರಾಹ್ಮಣೇತರರಲ್ಲಿಯೇ ಇರುವುವು. ಆದರೆ ಹೆಂಗುಸರ ಹಾಡುಗಳ ವ್ಯಾಪ್ತಿಯು ಈ ದೃಷ್ಟಿಯಿಂದ ಅತಿ ವಿಶಾಲವಾದುದು.

---

1. ಕೊರವಂಜ ಹಾಡು, ಯಕ್ಷಗಾನ—ಇವು ಗಂಡುಸರ ಹಾಡಿಗೂ ಹೆಂಗುಸರ ಹಾಡಿಗೂ ನಡುವೆ ಇವೆ. ಇವು ಚಂಪೂ ಜಾತಿಗೆ ಸೇರಿದ ಪ್ರಬಂಧಗಳು. ಇವುಗಳಲ್ಲಿ ರಾಗವೈವಿಧ್ಯ, ತಾಳ ವೈವಿಧ್ಯಗಳು ಬೇಕಾದ ಹಾಗೆ ಉಂಟು. ಅಲ್ಲಲ್ಲಿ ತಾಳವನ್ನು ಹಾಕದೆ ರಾಗವನ್ನು ಮಾತ್ರ ಸೂಚಿಸಿರುವಂತೆ, ರಾಗವನ್ನು ಹೇಳದೆ ತಾಳವನ್ನು ಮಾತ್ರ ಹೇಳಿರುವುದೂ ಉಂಟು. ಹೆಂಗುಸರು ಈ ಪ್ರಸಂಗಗಳನ್ನು ಹಾಡಿಕೊಳ್ಳುವಾಗ ಅವರು ಈ "ತಾಳ ಗೀತ" ಗಳನ್ನು ಅಷ್ಟಾಗಿ ಗಮನಿಸದೆ, ಸ್ಥಾಯಿಯನ್ನು ಬದಲಾಯಿಸಿ ಹೇಳುವರೆಂದು ತೋರುತ್ತದೆ.

ವೈರಾಗ್ಯ ಸಂಪನ್ನೆಯಾದ ಬ್ರಾಹ್ಮಣಿಯಿಂದ ಹಿಡಿದು, ಜೀವನಕ್ಕೆ ಒಂದು ಉದ್ದೇಶವೂ ಇರಬೇಕು ಎಂಬುದನ್ನು ಸ್ವತಂತ್ರವಾಗಿ ಅರಿತುಕೊಳ್ಳಲಾರದ ಕಿಕ್ಕೀಳು ಜಾತಿಯವಳ ವರೆಗೂ ಎಲ್ಲರಲ್ಲಿಯೂ ಈ ಹಾಡುಗಳುಂಟು. ಇವುಗಳಲ್ಲಿ, ಈ ಕೊನೆಯಲ್ಲಿರುವ ಉತ್ತಮ ವರ್ಗದವರೆಂದೆನ್ನಿಸಿಕೊಂಡಿರುವವರ ಹಾಡುಗಳಲ್ಲಿ ಅನುಭವ ವೇದಾಂತ, ಆಚಾರದಲ್ಲಿರುವ ಶಾಸ್ತ್ರ ಸಂಪ್ರದಾಯುಗಳು, ವೈರಾಗ್ಯ ಬೋಧೆಗಳು, ಭಕ್ತಿ ಮಾರ್ಗದ ಸದುಪದೇಶಗಳು—ಇವು ಸ್ಪಷ್ಟವಾಗಿ ಕಾಣಿಸಿದರೆ, ಅತ್ತಕಡೆಯಲ್ಲಿರುವ ಕೀಳು ಜಾತಿಯವರ ಹಾಡುಗಳಲ್ಲಿ ಇವು ಅಸ್ಪಷ್ಟವಾಗಿ ಕಾಣಿಸುವುವು.

ಹೀಗಿರುವುದರಿಂದ, ನಾವು ನಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವುದಕ್ಕಾಗಿಯೂ, ಒಂದೇ ಸಂಸ್ಕೃತಿಯು ಬೇರೆ ಬೇರೆ ಮಟ್ಟಗಳಲ್ಲಿ ಹೇಗೆ ಹೇಗೆ ಬದಲಿಸುವುದು ಎಂಬುದನ್ನು ತೋರಿಸುವುದಕ್ಕಾಗಿಯೂ ಈ ವಿಭಾಗದಲ್ಲಿ ಬ್ರಾಹ್ಮಣಿಯ ಹಾಡುಗಳು, ಶೂದ್ರಾಣಿಯ ಹಾಡುಗಳು, ಎಲ್ಲೆಲ್ಲಿಯೂ ಇರುವ ಸಾಮಾನ್ಯ ಪದಗಳು—ಎಂದು ಮೂರು ಭಾಗಗಳನ್ನು ಮಾಡುವೆವು. ಈ ಗುಂಪಿನಲ್ಲಿಯೂ, ಹಿಂದೆ ಹೇಳಿರುವಂತೆ, ಶಾಸ್ತ್ರದ ಹಾಡುಗಳು, ವಿನೋದದ ಹಾಡುಗಳು ಮುಂತಾದ ವಿಭಾಗಗಳು ಸಾಧ್ಯ. ಅಂತೆಯೇ, ಇನ್ನೂ ಬೇರೆಬೇರೆ ದೃಷ್ಟಿಗಳಿಂದಲೂ ವರ್ಗೀಕರಣವು ಅಸಾಧ್ಯವಲ್ಲ.

## ೧. ಬ್ರಾಹ್ಮಣಿಯ ಹಾಡುಗಳು

ಬ್ರಾಹ್ಮಣಿಯ ಹಾಡುಗಳಲ್ಲಿ ನಿತ್ಯ, ನೈಮಿತ್ತಿಕ ಎಂಬ ಎರಡು ಉಪವರ್ಗಗಳನ್ನು ಮಾಡಬಹುದು. ಹಾಸುಗೆಯಿಂದ ಎದ್ದೇಳುವಾಗಿನಿಂದ ಹಿಡಿದು ಮತ್ತೆ ನಿದ್ದೆಯಲ್ಲಿ ಮೈಮರೆಯುವ ವರೆಗೂ ಹಾಡುಗಳನ್ನು ಹೇಳಿಕೊಳ್ಳುತ್ತಿರುವವರು ಅನೇಕರನ್ನು ಕಂಡು ಬಲ್ಲವರು ಹಲವು ಮಂದಿ ಇರುವಾಗ, ಈ "ನಿತ್ಯದ ಹಾಡುಗಳು" ಎಂದರೆ ಏನೆಂಬುದನ್ನು ವಿವರಿಸಬೇಕಾಗಿಲ್ಲ. ಒಟ್ಟಿನಲ್ಲಿ, ಉದಯ ರಾಗಗಳು, ಗುರು ಸ್ತೋತ್ರಾದಿಗಳು, ವೇದಾಂತದ ಹಾಡುಗಳು, ಪುರಾಣದ ಹಾಡುಗಳು, ಲಾಲಿಗಳು, ಜಾವಡಿಗಳು, ದಾಸರ ಪದಗಳು—ಇವಿಷ್ಟೂ ನಿತ್ಯ ವರ್ಗದಲ್ಲಿಯೇ ಬರುವುವು ಎಂದು ಮಾತ್ರ ಹೇಳುವೆವು.

ಹಾಗೆಯೇ, ನೈಮಿತ್ತಿಕ ವರ್ಗದಲ್ಲಿ, "ಆರತಿಯೆತ್ತಿರೆ" ಹಾಡಿನಿಂದ ಹಿಡಿದು, ಭೂಮಕ್ಕೆ ಬಡಿಸುವುದು, ಚೆಟ್ಟು ಬಡಿಯುವುದು ಮೊದಲಾದ ವಿಶೇಷ ಸಂದರ್ಭಗಳಲ್ಲಿ ಮಾತ್ರ ಉಪಯುಕ್ತವಾಗುವವು (ಬೀಗರ ಹಾಡು ಸೇರಿ) ಬರುವುವು. ಈ ಹಾಡುಗಳನ್ನು ಹೇಳುವುದರಲ್ಲಿ ಪ್ರಕಟವಾಗುವ ಸ್ಮರಣ ಧಾರಣಾ ಶಕ್ತಿಗಳು ಪ್ರಬುದ್ಧರನ್ನೂ ವಿಸ್ಮಯುಗೊಳಿಸುವಂತಹವು.

### (ಅ) ನಿತ್ಯವರ್ಗ

ಇನ್ನು, ನಿತ್ಯ ನೈಮಿತ್ತಿಕದ ಹಾಡುಗಳಿಗೆ ಉದಾಹರಣೆಗಳನ್ನು ಕೊಟ್ಟುಕೊಂಡು ಹೋಗುತ್ತ ನಮ್ಮ ಅಭಿಪ್ರಾಯವನ್ನು ಇವು ಎಷ್ಟು ದೂರ ಸಮರ್ಥಿಸುವುವು

ಎಂಬುದನ್ನು ನೋಡೋಣ. ಈ ಹಾಡುಗಳಲ್ಲಿ ಒಂದೊಂದೂ ಸಹಸ್ರಾವಧಿಯಿರುವುವು ಎಂಬಂಶವನ್ನು ನೆನಪಿಗೆ ತಂದುಕೊಂಡು, ಒಂದೆರಡು ಉದಾಹರಣೆಗಳಿಂದ ತೃಪ್ತರಾಗೋಣ.

ಈ ಹಾಡುಗಳನ್ನು ಗಂಡುಸರ ಹಾಡಿನಂತೆ ಬಿಡಿ ಬಿಡಿಯಾಗಿ ನೋಡುವುದಕ್ಕಿಂತಲು ಅವುಗಳನ್ನು ಆಯಾ ಪರಿಸ್ಥಿತಿಯ ನಡುವೆಯೇ ನೋಡುವುದು ಉತ್ತಮ. ಆದರಿಂದ ನಾವು ಸಂದರ್ಭಗಳನ್ನು ಕಲ್ಪಿಸುವ ಸ್ವಾತಂತ್ರ್ಯವನ್ನು ವಹಿಸುವೆವು.

ಗೃಹಿಣಿಯು ಮುಂಜಾನೆಯೆದ್ದಿದ್ದಾಳೆ. ಮುಂಜಾವದ ಸುಖ ನಿದ್ರೆಗಿಂತಲೂ ಮನೆಗೆಲಸದ ಆತುರವು ಬಲವೆಂದೋ, ಅಥವಾ ಸೂರ್ಯೋದಯ ಕಾಲಕ್ಕೆ ಸರಿಯಾಗಿ ಸ್ನಾನಾದಿಗಳನ್ನು ಮುಗಿಸಿಕೊಂಡು ಸೂರ್ಯಾರ್ಘ್ಯವನ್ನು ಕೊಡಬೇಕೆಂಬ ಶಾಸ್ತ್ರವಿಧಿಯನ್ನು ಪಾಲಿಸಬೇಕೆಂಬ ಶ್ರದ್ಧೆಯೋ, ಅಂತು, ಗೃಹಿಣಿಯು ಅರುಣೋದಯಕ್ಕೆ ಮುಂಚೆ ನಿದ್ದೆ ತಿಳಿದು ಉಪ್ಪವಡಿಸಿದ್ದಾಳೆ. ಚಳಿಗೆ ಹೆದರಿಯೋ, ಜನ ಸಂಚಾರವು ಹೆಚ್ಚಿಲ್ಲದ ಕಾಲದಲ್ಲಿ ಬೀದಿಗೆ ಬರುವುದು ಅಷ್ಟು ಸಾಧುವಲ್ಲೆಂದೋ, ಅಂತು, ಮನೆಯೊಳಗೇ ಮಾಡುವ ಕಸ ಮುಸರೆಗಳನ್ನು ಮಾಡುತ್ತಿದ್ದಾಳೆ. ಆಗ, ಇನ್ನೂ ಮಕ್ಕಳು ಮರಿಗಳೂ ಸೋಮಾರಿಗಳೂ ಕಿರು ನಿದ್ದೆಯ ಸಣ್ಣ ಕನಸಿನಲ್ಲಿ ತಣಿಯುತ್ತಿರುವಾಗ, ಸಣ್ಣ ದನಿಯಿಂಪ ಆ ಕಾಲಕ್ಕೆ ಒಪ್ಪುವ ರಾಗದಲ್ಲಿ, ತಾನು ಎರಡು ಕುರುಕು ಪದಗಳನ್ನು ಹಾಡುತ್ತಿದ್ದಾಳೆ. ಇತರರಿಗೆ ಕೇಳಿಸಲೆಂಬ ಆಶೆಯಿಲ್ಲವಾದರೂ ಉಪಾಂಶು ಜಪದಂತೆ ಅಕ್ಷರಗಳು ಬಾಯಲ್ಲಿಯೇ ಅಂತರ್ಧಾನವಾಗದೆ ಹೊರಬಿದ್ದು, ಕಿವಿಗೊಟ್ಟು ಕೇಳಿದರೆ ಕೇಳಿಸುವಷ್ಟು ಸ್ಪಷ್ಟವಾಗಿವೆ. ನಾವೂ ಕೇಳೋಣ:

೧. ಭಯ ನಿವಾರಣವು ಶ್ರೀ ಹರಿಯ ನಾಮಾ ॥ ಪ ॥
ಜಯ ಪಾಂಡುರಂಗ ವಿಟ್ಠಲ ನಿಮ್ಮ ನಾಮಾ ॥ ಅ ॥

ಮೊರೆಯ ಲಾಲಿಸಿ ಮುನ್ನ ಜಗವ ಸಲಹಿದ ನಾಮ ।
ಕರುಣದಿಂ ದ್ರೌಪದಿಯ ಕಾಯ್ದ ನಾಮಾ ॥
ಮರುಗುತಿಹ ಧ್ರುವಗೆ ಉನ್ನತಿಯ ಮಾಡಿದ ನಾಮ ।
ಪರಕೆ ಪರತತ್ತ್ವವಲ್ಲವೆ ನಿಮ್ಮ ನಾಮಾ ॥ ೧ ॥

ಇದರಲ್ಲಿ, ಸಾಮಾನ್ಯವಾಗಿ ಸರ್ವರಿಗೂ ಪರಿಚಿತವಾಗಿರುವ—

ನಾಮ ಸ್ಮರಣಾದನ್ಯೋಪಾಯಂ । ನಹಿ ಪಶ್ಯಾಮೋ ಭವ ತರಣೇ ॥
ರಾಮ ಹರೇ ಕೃಷ್ಣ ಹರೇ ರಾಮ । ಕೃಷ್ಣ ಜಗದೀಶ ಹರೇ ॥

ಎಂಬ ಅರ್ಥ ವಾದವೂ,

ಭೀಷಾಽಸ್ಮಾದ್ವಾತಃ ಪವತೇ । ಭೀಷೋದೇತಿ ಸೂರ್ಯಃ ॥

ಇತ್ಯಾದಿಯಾದ ಉಪನಿಷದ್ವಾಕ್ಯದಲ್ಲಿ ಹೇಳಿರುವಂತೆ, ಪ್ರಪಂಚದ ಕಾರ್ಯ ನಿರ್ವಾಹಕ್ಕೆ ಕಾರಣವಾಗಿರುವ ಭಯವನ್ನು ನಿವಾರಿಸಬಲ್ಲ ಪರಮಾತ್ಮನ ಸರ್ವಶಕ್ತಿಮತ್ವವೂ ವ್ಯಕ್ತವಾಗಿವೆ. ಅದರ ಜೊತೆಗೆ, ಜಗತ್ತನ್ನೇ ಸಲಹಬಲ್ಲ ಅಪಾರ ಕರುಣಾ

ಸಿದ್ಧಿಯಾದ ಪರಮಾತ್ಮನು ಸುಲಭವಾಗಿ ಒಲಿಯುವನೆಂಬ ನಂಬಿಕೆಯೂ ಎಷ್ಟು ಸ್ಪಷ್ಟವಾಗಿದೆ!—

೨. ಗೋವಿಂದಾ ರಾಮ । ಗೋವಿಂದಾ ರಾಮಾ । ಗೋವಿಂದಾ ನಾರಾಯಣ ।
ಗೋವರ್ಧನ ಗಿರಿಯನೆತ್ತಿದ ಗೋವಿಂದ ನಮ್ಮ ರಕ್ಷಿಸೋ ॥ ಪ ॥

ಅರ್ಥವ್ಯಾರಿಗೆ ಪುತ್ರರ್‍ಯಾರಿಗೆ ಮಿತ್ರ ಬಾಂಧವರಾರಿಗೆ ।
ಕರ್ತು ಯಮನೊರು ಎಳೆದು ಒಯ್ವಾಗ ।
ಅರ್ಥ ಪುತ್ರರು ಕಾಯ್ವರೇ ।
ಹೊತ್ತು ಬಿದ್ದುದು ನಾಳೆಗೆ । ಗೋವಿಂದ ॥ ೧ ॥

ಮಂಚ ಬಾರದು ಮಡದಿ ಬಾರಳು ।
ಕಂಚು ಕನ್ನಡಿ ಬಾರದು ॥
ಸಂಚಿತಾರ್ಥವು ಜೊತೆಗೆ ಬಾರದು ।
ಮುಂಚೆ ಮಾಡಿರೊ ಧರ್ಮವಾ ॥ ೨ ॥

ಇದರಲ್ಲಿ, ಮೇಲಿನ ಹಾಡಿನಲ್ಲಿ ಕಂಡುಬಂದ ನಾಮಸ್ಮರಣದ ಪ್ರೀತಿಯ ಜೊತೆಗೆ ಇತ್ತಲಿಂದ ಅತ್ತಲಿಗೆ ಹೊಡೆದು ತಿರುಗಿಸುವ ಜಗನ್ಮಿಥ್ಯಾ ವಾದವೂ ಸೇರಿದೆ. (ಎರಡನೆಯ ನುಡಿಯಲ್ಲಿ ಕಂಡುಬರುವ ಸೌಖ್ಯ ಸೌಭಾಗ್ಯ ಸೂಚಕಗಳಾದ ಶಬ್ದಗಳ ಪ್ರಯೋಗವನ್ನು ಗಮನಿಸಿರಿ.)

೩. ಹಕ್ಕಿ ಚಿಲಿಪಿಲಿ ಯೆನ್ನಲಿ ರಂಗಾ ।
ಕಾಕಿ ಕಾ ಕಾ ಯೆನ್ನಲಿ ಹರಿಯೇ ।
ಕೋಗಿಲೆ ಸ್ವರಗೈಯಲಿ ರಾಮಾ ।
ನಾಗ ಸಂಪಿಗೆಯರಳಲಿ ಕೃಷ್ಣಾ ।
ಭಾನು ವುದಯವಾಗಲೀ ॥ ಪ ॥

ಎದ್ದು ಮುಖತೊಳೆ ಯೇಳು । ತಿದ್ದು ಕಸ್ತುರಿ ತಿಲಕ ।
ಮುದ್ದೆ ಬೆಣ್ಣೆಯ ನಿನಗೆ ನಾನು ಕೊಡುವೆ ॥
ಹೊದ್ದಿದೆ ಕತ್ತಲು ಬೆಳಕು ಹರಿಯಲೊ ರಂಗ ।
ನಿದ್ದೆ ತಿಳಿದೆದ್ದು ನೀನೆಸ್ದು ಕುಂಡ್ರೈಯ್ಯ ಸ್ವಾಮಿ ॥ ೧ ॥

ಬಿಸಿಯ ದೋಸೆಯ ಹೊಯ್ದು । ಮೊಸರು ಗಡ್ಡೆಯ ತೆಗೆದು ।
ಹಸನಾದ ಕಲಸನ್ನ । ಹೆಸರುಬ್ಯಾಳೀ ಹುಗ್ಗಿ ॥
ಹಸುಳೆ ನಿನಗಾರೋಗಣೆಗೆ ಕೃಷ್ಣಾ ॥ ೨ ॥

ಈ ಹಾಡಿನಲ್ಲಿ ಅದೆಷ್ಟು ಕಾವ್ಯ ಸಂಪತ್ತಿಯಿದೆ ನೋಡಿರಿ! ಮೊದಲಿನ ನುಡಿಯಂತಿರುವ ಪಲ್ಲವಿಯಲ್ಲಿ ಉದಯ ಕಾಲದ ಪ್ರಕೃತಿಯ ವರ್ಣನೆ; ಎರಡನೆಯದರಲ್ಲಿ, ದೊಡ್ಡವರು ಮಾಡುವ, ಮೊಗ ತೊಳೆದು ಹಣೆಗೆ ಹಚ್ಚಿ, ಮೊಸರು ಕಡೆಯುವ ಮನೆಗೆಲಸಗಳ ಕಥನ; ಮೂರನೆಯ ಭಾಗದಲ್ಲಿ, ಹಿಂದಿನ ಕಾಲದಲ್ಲಿ ಆಢ್ಯರ ಮನೆಯಲ್ಲಿ

ಹುಡುಗರಿಗೆ ಬೆಳಗಿನ ಹೊತ್ತು ದೊರೆಯುತ್ತಿದ್ದ ತಿಂಡಿಯ ಪ್ರಲೋಭನ—ಒಂದ ಕ್ಕೊಂದು ಎಷ್ಟು ಚೆನ್ನಾಗಿ ಹೊಂದಿಕೊಂಡಿವೆ! ಗೃಹಿಣಿಯ ಪ್ರಾತಃ ಕಾರ್ಯಗಳೆಲ್ಲ ಅದೆಷ್ಟು ಮುದ್ದಾಗಿ, ಸುಲಭವಾಗಿ, ಸ್ವತಂತ್ರವಾಗಿ ಸೇರಿಕೊಂಡು ಹಾಡಾಗಿವೆ! ಇಲ್ಲಿ ಬಿಟ್ಟಿರುವ ಒಂದೆರಡು ಅಂಶಗಳನ್ನು ಇನ್ನೊಂದು ಹಾಡು ಸೂಚಿಸುತ್ತದೆ.—

೪. ದಿನ ಮಣಿಯು ಮೈದೋರೆ ಕೃಷ್ಣನ । ಜನನಿ ಮಂಚವನಿಳಿದಳು ।
ಕನಕ ಕಳಶದಿ ಮುಖವ ತೊಳೆದಳು । ತನುವ ಶೃಂಗರವಾದಳು ॥ ಕೃಷ್ಣಾ ॥

ಹೀಗೆ ಉದಯ ರಾಗಗಳನ್ನು ಹೇಳಿಕೊಳ್ಳುತ್ತ ಗೃಹಿಣಿಯು ದಿನದ ಮೊದಲ ಜಾವವನ್ನು ಕಳೆದಿದ್ದಾಳೆ. ಆ ವೇಳೆಗೆ ನೀರು ಕಾದು ಸಿದ್ಧವಾಗಿದೆ. ಮಿಂದು ಮಡಿಯುಟ್ಟು ಅಡಿಗೆಗೆ ಎಸರಿಟ್ಟು ಮಡಿ ನೀರು ತಂದಿದ್ದಾಳೆ. ಈ ಕಾರ್ಯಗಳನ್ನು ಮಾಡುವಾಗ ಅಭ್ಯಾಸದ ಬಲವೇ ಸಾಲದೆ, ಮನಸ್ಸೂ ಆ ಕಾರ್ಯದಲ್ಲಿಯೇ ವ್ಯಗ್ರ ವಾಗಿದೆ. ಅನಂತರ ಮತ್ತೆ ಕೊಂಚ ಅವಕಾಶವಾಗಿದೆ. ಆ ಅವಕಾಶದಲ್ಲಿ ತನ್ನ ನಿತ್ಯ ಗೌರಿಯ ಪೂಜೆಯನ್ನು ಮುಗಿಸಿಕೊಳ್ಳುತ್ತಾಳೆ. ಪೂಜೆಗೆ ಮಂತ್ರಗಳಿಲ್ಲ; ಮಂತ್ರಕ್ಕೆ ಬದಲಾಗಿ ಹಾಡು. ಶಿವ ಸತಿಯ ಪೂಜೆಯೆಂದೇನೊ ಭೈರವಿ ರಾಗ ಈ ಹಾಡಿಗೆ:—

೫. ಹಳ್ಳದಲಿ ಮೈತೊಳೆದು ಒಳ್ಳೆಯಾ ಮಡಿಯುಟ್ಟು ।
ಮೆಲ್ಲನೆ ಶಿವಪೂಜೆಗಣಿಮಾಡುತ ॥
ಕಳ್ಳತನದಲಿ ಹೋಗಿ ಶಿವಗೆ ಹೆಂಡತಿಯಾದ ।
ಗುಳ್ಳದಾ ಗೌರಿಗಾರತಿ ಯೆತ್ತಿರೇ ॥
ಜಯಮಂಗಳಂ ನಿತ್ಯ ಶುಭಮಂಗಳಂ ॥ ॥ ೧ ॥

ನಂದಿಬಟ್ಟಲ ಹೂವು ದುಂಡುಮಲ್ಲಿಗೆ ದಂಡೆ ।
ಚಂದ್ರಮನ ಬೈತಲೆಗೆ ಮುತ್ತು ತುಂಬಿ ॥

* * * *

ಆ ಮಣೀ ಸರದೊಲೆ ಆಣಿ ಮುತ್ತಿನ ಬುಗುಡಿ ।
ಲಾಮಂಚ ಪಗಡೆ ಹೂವಿನ ಸೀರೆಯೂ ॥
ಮೇಲ್ಕಟ್ಟು ಹೊಂಬಾಳೆ ಫಲ ಮಾವು ಫಲ ವಸ್ತು ।
ಆನೆಯಾ ಗೌರಿಗಾರತಿ ಯೆತ್ತಿರೇ ॥
ಜಯ ಮಂಗಳಂ ನಿತ್ಯ ಶುಭ ಮಂಗಳಂ ॥ ೩ ॥

ಇದರಲ್ಲಿರುವ ಕಾವ್ಯ ಝುರಿಯನ್ನು ನೋಡಿರಿ.

ಪೂಜೆಯು ಮುಗಿಯಿತು. ಸಾರಿಗೆ ಒಗ್ಗರಣೆಯನ್ನು ಹಾಕಿ ಅಡುಗೆಯನ್ನೆಲ್ಲ ಓರಣವಾಗಿ ಮುಚ್ಚಿಟ್ಟಿದ್ದಾಳೆ. ಇನ್ನು, ತನ್ನ ಪತಿದೇವನು ಬಂದು ಭೋಜನ ಸೇವೆ ಯನ್ನು ಸ್ವೀಕರಿಸಬೇಕು. ಅದುವರೆಗೆ ಇರುವ ಅವಕಾಶದಲ್ಲಿ ಆಕೆ ಸುಮ್ಮನೆ ಕುಳಿತು ಕೊಳ್ಳುವಳೇನು? ಇಲ್ಲ; ಊಟಕ್ಕೆ ಎರಡು ಎಲೆಯನ್ನು ಹಚ್ಚುತ್ತಾಳೆ. ಕೈಯೂ ಕಣ್ಣೂ ಎಲೆಯನ್ನು ಹಚ್ಚುವ ಕೆಲಸದಲ್ಲಿದ್ದರೆ ಬಾಯೇಕೆ ಸುಮ್ಮನಿರಬೇಕು? ಮನವೇಕೆ

ಫಲವಿಲ್ಲದ ಯೋಚನೆಯಲ್ಲಿ ಆಳಾಳಿ ಮುಳಿಗೇಳಬೇಕು? ಅದರಿಂದ, ಒಂದೆರಡು ಹಾಡು ಮತ್ತೆ. ಆದರೀಗ ಮಡಿಯುಲ್ಲಿದ್ದಾಳೆ. ಶುಚಿಯಾದ ಮೆಯ್ಯಲ್ಲಿ ಪೂಜಾದಿಗಳಿಂದ ಪರಿಶುದ್ಧವಾದ ಮನಸ್ಸು ಶುದ್ಧವಾದ ಜೀವನದ ಕೊನೆಗಾಲಕ್ಕೆ ಕೊನೆಯ ಗುರಿಯಾಗಿ ಒದಗುವ ವೇದಾಂತದ ಹಾದಿಯನ್ನೇ ಹಿಡಿದಿದೆ. ಹೇಳಿ ಕೇಳಿ ಬಂದಿರುವ ಹಾಡು; ನೆರಳಲ್ಲಿ, ನಿಶ್ಶಂಕವಾಗಿ, ನಿಶ್ಚಿಂತೆಯಿಂದ ಕುಳಿತಿರುವ ಹಕ್ಕಿಯ ಕಂಠದಿಂದ ಹೊರ ಸೂಸುವ ಮನೋಹರ ಕಾಕಲಿಯಂತೆ ಹೊರ ಹೊಮ್ಮುತ್ತದೆ. ತೃಪ್ತಿಯ ಓಲಾಟದಲ್ಲಿರುವ ಮನಸ್ಸು ಆನಂದವನ್ನೇ ಕುರಿತು ಚಿಂತಿಸುತ್ತದೆ. ಸಂಸ್ಕಾರ ಬಲದಿಂದ ವಿಷಯಾನಂದವನ್ನು ಮೀರಿ ಮೇಲಕ್ಕೆ ಹಾರಿದೆ. ಹಾಡು ಕಾಲಾನುಗುಣವಾದ ಮಧ್ಯಮಾವತಿಯಲ್ಲಿದೆ.—

೬. ಬ್ರಹ್ಮಾನಂದದೊಳಿರುವದೆ ಚೆಂದ । ಗುರು ಕರುಣದಿಂದ ॥ ಪ ॥

ನಾಸಿಕಾಗ್ರದಿ ದೃಷ್ಟಿಯನಿಟ್ಟು ಸುಷುಮ್ನಾದಿ । ಲೇಸಾಗಿ ಮನವಳವಟ್ಟು ।
ಈಡಾ ಪಿಂಗಳಾ ಆಕಾಶಕೇರಿಸಿಬಿಟ್ಟು । ಬ್ರಹ್ಮಾನಂದದ ರಾಶಿಯೊಳಗೊಡಂಬಟ್ಟು ।
ಸಾಸಿರ ದಳಗಳ ಕಮಲದಿ ವಾಸವಾಗಿರುವ ಶಿವನೊಳು ಬೆರೆದು ॥ ೧ ॥

ಆರು ಸ್ಥಳಗಳನ್ನೇ ಮೀರಿ । ಉನ್ಮನಿಯೊಳು ಸೇರಿ ।
ಆ ಮಹಾಲಿಂಗದ ಮೇಲೆ ಹಾರಿ ।
ಚಿಜ್ಜ್ಯೋತಿ ಪ್ರಭೆಯ ಮೀರಿ । ಶಾಂತಿ ಶರಧಿ ಕೈಸೇರಿ ।
ಅಪಾರರಿಯದ ಆನಂದವು ಇದು ।
ಮೀರಿದ ರುಚಿಯನು ಮಿಗಿಲು ಸೇವಿಸರಿಗೆ ॥ ೨ ॥

ಹರಿ ಹರ ಬ್ರಹ್ಮಗಳವಲ್ಲ । ಉರುತರದಲ್ಲಿರುವ ।
ಗುರುಪುತ್ರನೊಬ್ಬನೆ ಬಲ್ಲ ॥
ಶಾಂತಿ ಸ್ಮರಣೆಯಿರವ ಕಂಡವರಿಗಿದೆಲ್ಲ ।
ಪರಮ ಪುರುಷ ಹರಿ ಚರಣ ಕಮಲವನು ।
ಗುರಿಯ ಮಾಡಿಕೊಂಡಿರುವ ಮಹಾತ್ಮಗೆ ॥ ೩ ॥

ಈ ಯೋಚನೆಯು ತೀವ್ರವಾಗಿ ತನ್ನ ಸುತ್ತಿಕೊಂಡಿರುವ ಸಣ್ಣತನವೆಂಬ ಸಂಸಾರದ ನೆನಪಾಗಿ ಇದು ಹೇಗೆ ತೀರಿ ಆ ದೊಡ್ಡತನವು ಬಂದೀತೆಂದು ಶಂಕೆಯೊಂದು ಮೂಡಿದೆ; ಜೊತೆಯಲ್ಲಿಯೇ ಸಂಸ್ಕಾರ ಶುದ್ಧವಾದ ಮನಸ್ಸೇ ಉತ್ತರ ಕೊಡುತ್ತದೆ:

೭. (ತೋಡಿ) ಹ್ಯಾಗಾದರೂ ನಿನ್ನ ನೀನೇ ಕಂಡಲ್ಲದೆ ।
ನೀಗದು ಭವ ಬಂಧ ॥ ಪ ॥

ಹೀಗೆ ವಿಷಯ ರುಚಿ ವಾಸನಾ ಬಲದಿಂದ ।
ಭೋಗ ಕಾಲದಿ ಚಿತ್ರದೊಳೆಣೆಗೊಂಡಾರು ।
ಈಗಲೇ ಕೆಡಿಸುವುದು ಪರಮ ವಿರಾಗ ಮುಖದಿಂದಲ್ಲದಿದ್ದರೆ ।
ರೋಗವೇ ಬಲಿದಂತೆ ತನ್ನನು ಮೂಗು ಮಾರಿಯ ಮಾಡಿಬಿಡುವುದು ॥ ೧ ॥

ಮನಕೆ ನಿಶ್ಚಯವಾ ಸಂಪಾದಿಪುದೈ ಈಗಲನುಭವ ಬಲದೊಳು ।
ಇನಿತೊಂದು ವಿಷಯಗಳು ಕ್ಷಣಿಕವಾದುದರಿಂದ ।
ತನಗೆ ರೋಗಗಳಿಂದ ಸುಖವಿಯೋಗಗಳಿಂದ ।
ಜನರ ಕಲಹಗಳಿಂದ । ಮನದ ಸಂಕಲ್ಪಾರ್ಥ ಪೂರ್ತಿಯ ।
ಅನುಗಮಿಸದಿದ್ದ ಕಾರಣ । ಮನವಿಪತ್ತದೆಂಬೊ ಭಾವವು ।
ಇನಿತು ಕೆಡದಂದದಲಿ ಧೈರ್ಯದಿ ॥ ೩ ॥

"ನಿನ್ನ ನೀ ಕಾಣುವ" ಭಾವವು ಬಲಿತು ಇನ್ನೂ ಮುಂದೆ ಹೋಗಿದೆ. ಆ ಪರ ವಸ್ತುವನ್ನು ಕುರಿತು ಚಿಂತಿಸುತ್ತ ಉಪನಿಷತ್ಸಾರವನ್ನು ಹಾಡಾಗಿ ಪರಿಭಾವಿಸಿ ಕೊಳ್ಳುವ ಸ್ಥಿತಿಗೆ ಮನವು ಏರಿದೆ. ಆ ಧೀರ ಗಂಭೀರ ಭಾವಾನುಗುಣವಾಗಿ ಹಾಡೂ ಶಂಕರಾಭರಣದಲ್ಲಿಯೇ ಇದೆ.—

೮. ಹಂಸ ನೀ ಪರಮಾತ್ಮನೆಂದು ಭಾವನೆ ಮಾಡು ಸಂಸಾರಿ ನೀನಲ್ಲ ಹಂಸಾ ।
ಸಂಶಯ ಮೊದಲಾದ ಅಜ್ಞಾನ ಕಾರ್ಯವ ಧ್ವಂಸಮಾಡೆಲೋ ಹಂಸಾ ॥

ಶುದ್ಧ ಬುದ್ಧ ಮುಕ್ತ ನಿತ್ಯ ಚಿದಾನಂದ ಅದ್ವಯ ರೂಪ ನೀ ಹಂಸಾ ।
ಬದ್ಧ ನಾನೆಂದ ವಿದ್ಯಾ ವಾಸನನಾಗಿ ಬಿದ್ದು ಮರೆತೆಯೋ ನೀ ಹಂಸಾ ॥ ೧ ॥

ಇದ್ದು ತ್ರಿಗುಣದೊಳಜ ಶಾಂಭವ ವಿಷ್ಣು ರುದ್ರನೆಂದದಿ ತೋರ್ಪೆ ಹಂಸಾ ।
ವಿದ್ಯೋಪಾಧಿಕನಾಗಿ ಸರ್ವೇಶನೆಂದು ಪ್ರಸಿದ್ಧನಾದವ ನೀನೆ ಹಂಸಾ ॥ ೨ ॥

ಅನ್ನಮಯಾದಿ ಕೋಶ ಧರ್ಮಂಗಳ ನಿನ್ನೊಳಾರೋಪಿಸಿ ಹಂಸಾ ।
ಸಣ್ಣನಾದೆ ಸ್ಥೂಲನಾದೆ ನಾನೆಂದೆಂಬೆಯೋ ನಿನ್ನ ನೀ ತಿಳಿಯದೆ ಹಂಸಾ ॥ ೩ ॥

ಹೆಣ್ಣು[2] ಹೊನ್ನು ಗೃಹ ಕ್ಷೇತ್ರಕ್ಕೆ ಮಿಡುಕುತ್ತ ಸನ್ಮಾರ್ಗವನು ಬಿಟ್ಟೆ ಹಂಸಾ ।
ಸುಣ್ಣ ನೀರೊಳು ಬಿದ್ದ ತೆರನಂತೆ ಕುದಿಯುವೆ ನಿನ್ನ ನೀ ತಿಳಿಯದೆ ಹಂಸಾ ॥ ೪ ॥

---

2. ಇಲ್ಲಿ ಹೆಣ್ಣು, ಹೊನ್ನು, ಮಣ್ಣು ಎಂದು ಹೇಳಿರುವುದರಲ್ಲಿ ಒಂದು ರಹಸ್ಯವಿದೆ: ಯೋಗಿಗಳು ಪ್ರಪಂಚವನ್ನೆಲ್ಲ ಕ್ರಿಯಾ ವಸ್ತು, ಕ್ರೀಡಾ ವಸ್ತು ಎಂದು ಎರಡು ಭಾಗವಾಗಿ ಹಂಚುತ್ತಾರೆ. ಕ್ರಿಯಾ ವಸ್ತುವು ಬಹಿರ್ಮುಖವಾಗಿದ್ದು ಕ್ರೀಡಾ ವಸ್ತುವಿನೊಡನೆ ಆಟವಾಡುತ್ತ ಇರುವುದು ಪ್ರಪಂಚ; ಅದೇ ಅಂತರ್ಮುಖವಾಗಿ ತನ್ನ ಕಡೆಗೆ ತಾನು ತಿರುಗಿಕೊಳ್ಳುವುದು ಪರಮಾರ್ಥ. ಈ ಕ್ರೀಡಾ ವಸ್ತುಗಳಲ್ಲಿ ಆವರಣ ವಿಕ್ಷೇಪಗಳ ಪ್ರಭಾವದಿಂದ ಎರಡು ಜಾತಿ. ಇವೆರಡಕ್ಕೂ ಅಧಿಷ್ಠಾನವಾದ ದುರ್ಗ ಸ್ಥಾನದಿಂದ ಮತ್ತೊಂದು—ಹೀಗೆ ಮೂರು ಜಾತಿಗಳು ಹುಟ್ಟುತ್ತವೆ. ಇದನ್ನೇ ದಾಸರಾಯರು, "ಅರುಹಿತವರು ನಿನಗೆ ಮೂರು ಮಂದಿಗಳೊಳಗೆ ನಾರಿಯೋ, ಧಾರಿಣಿಯೋ, ಬಲು ಮಡದ ಸಿರಿಯೋ" ಎಂದು ಹಾಡಿದ್ದಾರೆ.

ಪ್ರಾಚೀನರು ಕ್ರೀಡಾ ವಸ್ತುಗಳಲ್ಲಿ ಪ್ರಬಲತಮವಾದುದನ್ನು ಹೆಣ್ಣು ಎಂದು ವ್ಯವಹಾರ ಮಾಡಿರುವುದು ದೇಹಾತ್ಮವಾದಿಗಳಾದ ಆಧುನಿಕರಿಗೆ ರುಚಿಸುವುದಿಲ್ಲ. ಆದರೆ ಅವರಂತೆಯೇ, 'ದೇಹದಲ್ಲಿ ದೇಹಿಯೊಬ್ಬನಿದ್ದಾನೆ; ಅವನು ವಿವಿಧ ಪಾತ್ರಧಾರಿಯಾಗಬಲ್ಲ ಚತುರನಾದ ನಟನಂತೆ ಬೇರೆ ಬೇರೆ ದೇಹಗಳನ್ನು ಧರಿಸಿ ಬರುತ್ತಾನೆ; ಒಂದು ವೇಳೆ ಹೆಣ್ಣಾದವನು ಮತ್ತೊಂದು ವೇಳೆ ಗಂಡಾಗುತ್ತಾನೆ' ಎಂಬ ಜನ್ಮಾಂತರ ವಾದವನ್ನು ಒಪ್ಪಿಕೊಂಡರೆ, ಆಗ 'ಈ ಅಭಿಪ್ರಾಯವು ದುರಭಿಮಾನ (Prejudice) ಮೂಲವಾದುದಲ್ಲ, ವಿಶಿಷ್ಟ ದೇಹ ಧರ್ಮಗಳನ್ನು ಕುರಿತು ಆಡಿರುವ ಸತ್ಯವಾಕ್ಯ' ಎಂಬುದು ಅರಿವಾಗಿ ಬೇಸರವು ನಿರ್ಮೂಲವಾಗುವುದು.

ಪ್ರಾಣವು ದಾಹ ತಪನದಿಂ ತಪಿಸಲು ನಾನೇ ತಪಿಸೆನೆಂಬೆ ಹಂಸಾ ।
ಹೀನ ಮನವು ಶೋಕ ಮೋಹವ ಹೊಂದಲು ನಾನೇ ಹೊಂದಿದೆನೆಂಬೆ ಹಂಸಾ
|| ೫ ||

*　　*　　*　　*

ದೇಹಾಂತರಕೆ ಲಿಂಗಜೀವವು ನಡೆದರೆ ಸಾವು ಕಲ್ಪಿಸಿಕೊಂಡೆ ಹಂಸಾ ||

*　　*　　*　　*

ಕರ ಪಾದ ನೇತ್ರವಿಲ್ಲದೆ ಸರ್ವ ಲೋಕವು ತಿರುಗುತ್ತಲಿರುವೆ ಹಂಸಾ ।
ಗುರು ರಾಮ ಬ್ರಹ್ಮನೊಳೇಕತ್ತ್ವವಾಗಲು ಪರಿಹರವಾಗೋದು ಭವ ಬಂಧ ಹಂಸಾ
|| ೬ ||

ಹೀಗೆ, ಒಳಗೆ ಹಂಸಾನುಸಂಧಾನ ಮಾಡುತ್ತಿದ್ದರೂ, "ನ ಜಾತು ತಿಷ್ಠತ್ಯಕರ್ಮಕೃತ್" ಎಂಬ ನ್ಯಾಯದಂತೆ, ಹೊರಗೆ ಎಲೆ ಹಚ್ಚುತ್ತಿರುವ ಈ ಪುಣ್ಯವತಿಗೆ ಮಗು ಅಳುವುದು ಕೇಳಿಸಿದೆ. ಮಾತೃಭಾವವು ಪ್ರಬುದ್ಧವಾಗಿ, ದೇಹವಿರುವ ತನಕ ದೇಹೇಂದ್ರಿಯ ವ್ಯಾಪಾರಗಳು ಅಳಿಯುವುದಿಲ್ಲ. ತೊಟ್ಟಿಲಿನಲ್ಲಿರುವ ಮಗುವನ್ನು ತೂಗಲು ಹೋಗುತ್ತಾಳೆ. ಆದರೂ, ಆ ಅದ್ವೈತ ಭಾವನೆಯತ್ತ ಹೊರಳಿರುವ ಮನವು ಹೊರ ಮೊಗವಾಗಿ ಹೊರಟುಬಂದಿಲ್ಲ. ಆ ತೂಗುವ ವ್ಯಾಪಾರಕ್ಕೆ ಅನುಗುಣವಾದ ಆ ಹಂಸನ ತೂಗುವಿಕೆಯನ್ನೇ ನೆನೆದು, ಪುತ್ರ ಮೋಹದಲ್ಲಿರುವ ಆ ಭದ್ರೆಯು ಹಾಡನ್ನು ಮೋಹನದಲ್ಲಿ ಆರಂಭಿಸುತ್ತಾಳೆ.—

೯. ತೂಗುತಿದೆ ಹಂಸ ಸೋಹಮ್ಮೆಂದು ಸಮನಾಗಿ ।
ತೂಗಿದಂದದಿ ಕಾಲ ಕರ್ಮಗಳ ನೀಗಿ || ಪ ||

(ಮೊದಲಲ್ಲಿ 'ತೂಗುತಿದೆ' ಎಂದು ಕ್ರಿಯಾ ಸ್ವರೂಪವನ್ನು ನಿರ್ವಚಿಸಿ, ಮತ್ತೆ 'ತೂಗಿದಂದದಿ' ಎಂದು ಹೇಳಿ, ಆ ಹಂಸನ ನಿಷ್ಕ್ರಿಯತ್ವವನ್ನು ಹೇಳುವ ಚಾತುರ್ಯವನ್ನು ನೋಡಿರಿ.)

ಜಾಗರಣೆ ಸ್ವಪ್ನ ಸುಷುಪ್ತಿಗಳೆಂಬ ತೊಡರಿಲ್ಲ ।
ಭೋಗ ಯೋಗ ವಿಯೋಗ ಭ್ರಾಂತಿಗಳು ಇಲ್ಲ ||
ಮೂಕಾಂಧ ಬಧಿರ ಜಡ ಯೋಗಿ ಬಾಲಾದಿ ।
ಬೇಗೆಗಳುಕದೆ ತಾ ಸರಾಗದಿಂದೆಡೆಬಿಡದೆ　　|| ೧ ||

ಚಂಡಾಲ ಶ್ವಪಚ ಶುಚಿಯಶುಚಿಯೆಂಬ ತೊಡರಿಲ್ಲ ।
ಗಂಡು ಹೆಣ್ಣೆಂಬ ಜಡ ಧರ್ಮವಿಲ್ಲ ||
ಅಂಡಜ ಸ್ವೇದಜೋದ್ಭಿಜ್ಜಾದಿಗಳು ಮೊದಲಾದ-
-ಖಂಡ ಮಯವಾಗಿದ್ದು ಸರ್ವ ಜೀವರೊಳು　　|| ೨ ||

ಮುಟ್ಟು ಮೈಲಿಗೆಯೆಂಬ ಮರುಳಾಟ ಮುನ್ನಿಲ್ಲ ।
ಕಷ್ಟ ಸುಖವೆಂಬೋ ಕಲಾಪವಿಲ್ಲ ||

ತುಟ್ಟ ತುದಿ ಮಧ್ಯ ಮೊದಲೆಂಬಿನಿಕೆಗಳನಡಗಿ ।
ದಿಟ್ಟತನದಲಿ ತಾನೆ ತನ್ಮಯನಾಗಿ ॥ ೩ ॥

ಉಂಬಾಗ ಉಡುವಾಗ ನಡೆದು ಸಂತೋಷಿಸುವಾಗ ।
ಹಂಬಲಿಸಿ ಹಾಡಿ ಹೊಗಳುವ ಕಾಲದಿ ।
ಜಂಭಾರಿ ಬ್ರಹ್ಮ ಪರಿಯಂತರದೊಳೀ ಪರಿಯ ।
ತುಂಬಿ ತುಳುಕಾಡಿ ಮಣಿ ಗಣ ಸೂತ್ರದಂದದಲಿ ॥ ೪ ॥

ಇಷ್ಟೂ ಹೇಳಿ ಆಕೆಗೆ, ಹೇಳಿದುದನ್ನೆಲ್ಲ ಕೇಳಿ ಮತ್ತೆಯೂ, ''ವ್ಯಾಮಿಶ್ರೇಣೈವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ'' ಎಂದ ನರನಂತೆ, ಸ್ವಭಾವ ಚಂಚಲವಾದ ಮನಸ್ಸು, 'ಇದಿಷ್ಟೂ ನಿಜವೇ? ಇದೆಲ್ಲವೂ ಪ್ರಜ್ಞಾವಾದವಲ್ಲವೇ?' ಎಂದುಕೊಂಡಿತೇನೊ? ಅದಕ್ಕೂ ಸಮಾಧಾನವಿದೆ ಹಾಡಿನಲ್ಲಿ.—

ಬರಿಯ ಮಾರುತನಾಟವೆನ್ನದಿರು ಮಾನಸವೇ! ನೀ ।
ನರಿಯದಂತಹ ಚಿದ್ಘನದ ರಹಸ್ಯ ಧರ್ಮಗಳ ॥
ವಿರತಿಗತಿಶಯವಾದ ಗುರುವೇಂಕಟಾರ್ಯಕನ ।
ಬಿಡದೆ ಸತ್ಯ ಜ್ಞಾನ ಪರಿಪೂರ್ಣನೆಂದು ತಿಳೀ ॥ ೫ ॥

(೫ರಿಂದ ೯ರ ವರೆಗಿನ ಹಾಡುಗಳು ಹೆಂಗುಸರೇ ಬರೆದವು.)

ಆ ವೇಳೆಗೆ ಯಜಮಾನರು ಬಂದಿದ್ದಾರೆ; ಊಟ ಉಪಚಾರಗಳು ನಡೆದಿವೆ. ಆಕೆಗೂ ಊಟವಾಗುವ ವೇಳೆಗೆ ಸುಮಾರು ಹೊತ್ತಾಗಿದೆ. ಆಕೆಯು ಆಗಿನ ಸಣ್ಣ ಪುಟ್ಟ ಕೆಲಸಗಳನ್ನ ಮುಗಿಸಿಕೊಂಡು ಬಂದು ನಡು ಮನೆಯಲ್ಲಿ ಕುಳಿತುಕೊಳ್ಳುವ ವೇಳೆಗೆ ನೆರೆ ಹೊರೆಯ ಹೆಂಗುಸರೆಲ್ಲ ಬಂದಿದ್ದಾರೆ. ಎಲ್ಲರೂ ದಿನ ದಿನದ ಸುಖ ದುಃಖಗಳ ವಿಚಾರವನ್ನು ಅಷ್ಟಷ್ಟರಲ್ಲಿ ಮುಗಿಯಿಸಿ—ಸಂಗೀತ ಕಚೇರಿಯ ಆರಂಭದಲ್ಲಿ ವಾದ್ಯಗಳನ್ನು ಸಿದ್ಧ ಮಾಡಿಕೊಳ್ಳುವಾಗ ಕೇಳಿಬರುವ ಕರ್ಣ ಕಠೋರವಾದ ಅಪ ಶ್ರುತಿಗಳಂತೆ ಕ್ಷಣಿಕವಾಗಿ—ಪುರಾಣದ ಹಾಡುಗಳನ್ನು ಕೇಳುವುದಕ್ಕೆ ಕುಳಿತುಕೊಳ್ಳುತ್ತಾರೆ. ಸೌಭಾಗ್ಯವತಿಯೊಬ್ಬಳು ಹಾಡುವುದಕ್ಕೆ ಆರಂಭಿಸುತ್ತಾಳೆ.—

## ೧೦. ಪಾರ್ವತೀ ಕೊರವಂಜಿ [3]

ಶ್ರೀ ವೇಂಕಟೇಶ್ವರ, ಲಕ್ಷ್ಮೀದೇವಿ, ಗಂಗಾಧರೇಶ್ವರ, ಬಾಲ ತ್ರಿಪುರ ಸುಂದರಿ, ವಿಘ್ನೇಶ್ವರ, ಶಾರದಾ ದೇವಿಯರನ್ನು ಭಜಿಸಿ ದೇವ ಕವಿಗಳಂ ಕೊಂಡಾಡಿ.—

3. "ಹಳ್ಳಿಗಳಲ್ಲಿಯೂ ಚಿಕ್ಕ ಚಿಕ್ಕ ಊರುಗಳಲ್ಲಿಯೂ ಕಣಿಯನ್ನು ಹೇಳುವ ಹೆಂಗುಸರು 'ಕೊರವಂಜಿ' ಎಂಬ ಹಾಡುಗಳನ್ನು ಹಾಡುತ್ತ ಬರುವುದುಂಟು. ಈ ಹಾಡುಗಳಲ್ಲಿ, ಪ್ರಾಯಶಃ ಒಬ್ಬ ಪುರುಷನು ಸ್ತ್ರೀವೇಷವನ್ನು ಹಾಕಿಕೊಂಡು ತನ್ನ ಪ್ರಿಯೆಗೆ ಕಣಿ ಹೇಳುವ ನೆಪದಿಂದ ಅವಳ ಅನುರಾಗವನ್ನು ಸಂಪಾದಿಸುವ ಕಥೆಯು ಹೇಳಲ್ಪಡುತ್ತದೆ. 'ಅರ್ಜುನ ಕೊರವಂಜಿ', 'ಪಾರ್ವತಿಯ ಕೊರವಂಜಿ' ಮೊದಲಾದವು ಈ ಜಾತಿಯ ಗ್ರಂಥಗಳು. ಈ ಗ್ರಂಥಕರ್ತರು ಇಂತಹವರೆಂದು ಇನ್ನೂ ಗೊತ್ತಾಗಿಲ್ಲ. ಆದರೆ ಗ್ರಂಥದ ಶೈಲಿಯನ್ನೂ ಪ್ರಯೋಗದ ರೀತಿಯನ್ನೂ ನೋಡಿದರೆ ಇವರು ಆಧುನಿಕ ಕವಿಗಳೆಂದು ತೋರುತ್ತದೆ'' ಎಂದು ವಿದ್ಯಾಭ್ಯಾಸದ ಇಲಾಖೆಯ ಪದ್ಯಸಾರದಲ್ಲಿ (ಕ್ರಿ. ೧೯೩೪: ಪ್ರಥಮ

ವಚನ—. . . ಪಾರ್ವತೀ ದೇವಿಯು ದಶರಥ ರಾಯನ ಅರಸಿಯಾದ ಕೌಸಲ್ಯಾ ದೇವಿಗೆ ಪುತ್ರೋತ್ಸವದ ವಾರ್ತೆಯಂ ಪೇಳಿದ ಕೊರವಂಜಿ ಕಟ್ಟಳೆಯಂ ಯಕ್ಷಗಾನ ಕಥಾ ಪ್ರಸಂಗದಿಂ ಪೇಳ್ವೆನದೆಂತೆನೆ. . . .

* * * *

ಅವನೀಶ ದಶರಥೇಶ್ವರನರ್ತಿಯಿಂದ ।
ಕೌಸಲ್ಯೆ ಸೌಮಿತ್ರಿ ಕೈಕೆಯಾರಿಂದ ॥

ಬಹು ಭಾಗ್ಯಯುತನಾಗಿ ವನಿತೆಯರೊಡಗೂಡಿ ।
ಧರೆಯ ಪಾಲಿಸುತಿರ್ದ ಧರ್ಮ ವೃತ್ತಿಯಲಿ ॥

(ಹೀಗಿರುವ ಅರಸನು ಒಂದು ದಿನ, ತನಗೆ ಸಂತಾನವಿಲ್ಲವೆಂದು ತನ್ನ ಸತಿಯೊಳು ಪೇಳಿ ಚಿಂತಿಸುತಿರ್ದನದೆಂತೆನೆ—)

ಸೊಬಗಿದ ಸೋನೆ ವರ್ಣ

ಒಪ್ಪುವ ರಾಯರೊಳ್ ಬಂಜೆ ಯೆಂಬರು ಯೆನ್ನ ।
ಪುತ್ರ ಸಂತಾನ ಯೆನಗಿಲ್ಲ ॥ ೨ ॥

* * * *

ಅಂತ್ಯ ಕಾಲಗಳೊದಗಿದ ಮೇಲೆ ಗತಿಯಿಲ್ಲ ।
ಸಂತಾನವಿಲ್ಲದ ಬಳಿಕ ॥ ೫ ॥

* * * *

ತ್ಯಾಗಮನೆ—ಆಟ ತಾಳ

ನಾವು ಮುನ್ನ ಪಡೆಯಲಿಲ್ಲ ಎಲೆ ನಾರಿ ।
ಬ್ರಹ್ಮ ಫಣೆಯೊಳಗೇನ ಬರೆದಿಹನೊ ಎಲೆ ನಾರಿ ॥ ೧ ॥

ಪೂರ್ವ ಜನ್ಮದಲಿನ್ನು ಎಲೆ ನಾರಿ ನಾವು ।
ಯಾರ ನೋಡಿ ಕರಗಿದೆವೋ ಎಲೆ ನಾರಿ ॥ ೩ ॥

ತರಿದೇವೋ ದಾರೀಯ ಮರನ ಎಲೆ ನಾರಿ ನಾವು ।
ತೊರೆಸಿದೆವೊ ಗಿಳಿಯ ಮರಿಯ ಎಲೆ ನಾರಿ ॥ ೬ ॥

---

ಭಾಗ, ಪುಟ ೧) ಹೇಳಿದೆ. (These poems belong to) the class Kuṛiñji, *i.e.*, those that deal with the pre-nuptial love, characteristic of the hill country. *Vide*: P. T. Srinivasa Iyengar's *History of the Tamils*, page 165. But his observation—"that such poems are characterised by the fact that the Sanskirt words do not occur in them. Moreover, the customs referred to in them are pure Tamil ones; there is no reference at all to Aryan ideas"—does not seem to hold good in respect of the Kannada Koravanji songs.

ಅರ್ಜುನ ಕೊರವಂಜಿ, ಕೃಷ್ಣ ಕೊರವಂಜಿಗಳೇನೋ ನಾಯಕನು ನಾಯಿಕೆಯ ಅನುರಾಗ ಸಂಪಾದನಾರ್ಥವಾಗಿ ವೇಷಧಾರಿಯಾಗಿ ಹೋದ ಕಥೆಗಳನ್ನು ಹೇಳುವವೇ ಅಹುದು. ಆದರೆ, ಪಾರ್ವತಿಯ ಕೊರವಂಜಿಯ ಕಥೆ (ಕಟ್ಟೆ?) ಯು ಹಾಗಲ್ಲವೆಂದು, ಉದಾಹರಿಸಿರುವ ಭಾಗದಿಂದಲೇ ಸ್ಪಷ್ಟವಾಗುವುದು.

ಉದಾಹರಿಸಿರುವ ಹಾಡಿನಲ್ಲಿರುವ ವೈವಿಧ್ಯವನ್ನು ನೋಡಿರಿ. ಪಟ್ಟದಿಗಳ ಬಿಂಡಗಳನ್ನು ತ್ರಿಪುಡೆ, ಜಂಪೆ ಎಂಬ ತಾಳಗಳ ಹೆಸರಿನಿಂದ ವ್ಯವಹರಿಸಿರುವುದನ್ನು ಗಮನಿಸಿರಿ.

ಭವ ಭವಗಳಿಂದ ಎಲೆ ನಾರೀ ನಾವು ।
ಶಿವನ ಪೂಜೆ ಮಾಡಲಿಲ್ಲ ಎಲೆ ನಾರಿ ॥ ೭ ॥

(ಎಂದು ಚಿಂತಿಸಲು) ಕೌಸಲ್ಯೆಯು—

ಕಂ॥ ಎನ್ನಾಳ್ದವರೇ ಕೇಳಿರಿ ।
ಚೆನ್ನಾಗಿಯೆ ವಿಧಿಯು ನಮ್ಮ ಫಣೆಯೊಳು ಲಿಖಿಸೇ ॥
ಇನ್ನುಂ ಪುತ್ರರ ಪಡೆವೆವು ।
ಮನ್ನಣೆಯೊಳು ಬಾಳ್ವೆವೀಗಲಿನ್ನೀ ಧರೆಯೊಳ್ ॥

ಎಂದು ಸಮಾಧಾನ ಹೇಳುತ್ತಿದ್ದಳು. ಆ ಸಮಯದಲ್ಲಿ ನಾರದ ಮುನೀಶ್ವರನು ಬಂದನದೆಂತೆನೆ.—

ದ್ವಿಪದಿ ॥ ಕಟ್ಟಿದ ಜಡೆಸುತ್ತ ಕೈಯ್ಯಲ್ಲಿ ವೀಣೆ ।
ತೊಟ್ಟ ರುದ್ರಾಕ್ಷಿಯ ಭಸಿತ ತ್ರಿಪುಂಡ್ರ ॥
ಉಟ್ಟ ಧವಳಾಂಬರವು ಒಲಿವ ಜಪ ಸರವು ।
ಮೆಟ್ಟಿ ಪಾದುಕೆ ವರ ಕೃಷ್ಣಾಜಿನವು ॥
ನೊಸಲ ಕಸ್ತೂರಿ ತಿಲಕ ಕೊರಳ ಶ್ರಾವುಡವು (?)
ಸಲ್ಲಲಿತ ಕರದಲಿ ದಂಡಾಕ್ಷ ಮಾಲೆ ।
ಕೆಂಜೆಡೆಯು ಸುಲಿ ಪಲ್ಲು ಕೇರಿ ಕೇರಿಯೊಳು ।
ಕಂಜ ನೇತ್ರನ ನುತಿಯ ಪಾಡುತ ಬಂದ ।

ಅರಸನು ಆತನಿಗೆ ಭಕ್ತಿಯಿಂದ ಷೋಡಶೋಪಚಾರಗಳನ್ನು ಮಾಡಿದನು. ನಾರದನು—

ತ್ರಿಪುಡೆ ॥ ಚಿಂತೆಯಾತಕೆ ನಿನ್ನ ಗರ್ಭದಿ ।
ಕಂತುವನು ಪಡೆದಾತ ಬರುವನು ।
ಮುಂತೆ ರಾಮಾವತಾರದಲಿ ನಿನಗುದಯಿಸುವ ಮುದದಿ ॥ ೧ ॥

ಎಂದು ಆಶ್ವಾಸನ ಮಾಡಿದನು. ಈ ವಿಚಾರವನ್ನು ಅರಸನು ಗುರು ಪುರೋಹಿತ ಮಂತ್ರಿಗಳಿಗೆ ತಿಳಿಸಲು, ಅವರು—

ತ್ರಿಪುಡೆ ॥ ಪುತ್ರ ಕಾಮೇಷ್ಟೀಯ ಮಾಡಿಸು ।
ಪೃಥ್ವಿಪತಿ ಕೇಳ್ ನಿನ್ನ ಜಠರದಿ ।
ಅರ್ಥಿಯಿಂದಲಿ ಸುತರು ಜನಿಪರು । ಕೀರ್ತಿ ಸಂಯುತರು ॥ ೨ ॥

ಎಂದು, ಅದಕ್ಕೆ ಬೇಕಾದ ಸನ್ನಾಹಾದಿಗಳನ್ನು ವಿವರಿಸಿದರು. ಅರಸನು ಅವರು ಹೇಳಿದಂತೆ ಕಾಮೇಷ್ಟಿಯನ್ನು ಆಚರಿಸಿ ದೈವಾನುಗ್ರಹವನ್ನು ಪಡೆದನು. ಆತನ ಹೆಂಡತಿಯರು ಗರ್ಭವತಿಯರಾದರು.

ಇತ್ತ, ಪರಮೇಶ್ವರನು ಪಾರ್ವತಿಯನ್ನು ಕರೆದು—

ಏಕ ತಾಳ ॥ ಕೊರವಂಜಿ ವೇಷದಲಿ ಧರೆಗೆ ಪೋಗುವುದು ॥ ೧ ॥

ಅರಸಿ ಕೌಸಲೆಗೆ ನೀ ಕಣಿಯ ಹೇಳುವುದು ॥ ೨ ॥

ಎಂದು ಕಟ್ಟಳೆಯಂ ಮಾಡಿದನು.

ಆಕೆಯು, 'ಅಪ್ಪಣೆ'ಯೆಂದು ಕೈಮುಗಿದು, ವಿನಾಯಕನನ್ನು ಮುಗು ಮಾಡಿ "ಬೆನ್ನಿನೊಳ್ ಅಳವಡಿಸಿಕೊಂಡು । ಪರಮೇಶ್ವರಂಗೆ ವಂದಿಸಿ ಕಳುಹಿಸಿಕೊಂಡು"—

ಕಂದ ॥ ಸುರಗಿ ಸುರಹೊನ್ನೆ ಕೇದಿಗೆ ।
ಯಿರುವಂತಿಗೆ ಜಾಜಿ ಪುಷ್ಪ ಮಲ್ಲಿಗೆಯರಲಂ ॥
ತುರುಬಿನೊಳು ತುಂಬಿ ಮೆರೆಯುತ ।
*　　*　　*
ಹರುಷದೊಳು ಗಿರಿಜೆ ಬಂದಳು ।
ಅರಸಿಯು ಕೌಂಸಲೆಗೆ ಕಣಿಯನರುಹುವೆನೆನುತಂ ॥

ಆ ಕೊರವಂಜಿ ವೀಧಿಕಾಗ್ರದೊಳ್ ಬರುತಿರ್ದಳದೆಂತೆನೆ.—

ಸಂಗೀತ ವರ್ಣ

ನೆತ್ತಾದ ಹಲಿಗೆಯಂದದಿ ಚಿನ್ನದ ನಳಿ ತೋಳು ।
ಮತ್ತ ಗಜದ ಮಸ್ತಕರವು ॥ ೧ ॥

ಚಿತ್ತಾರದ ಪ್ರತಿಮೆಯಂದದಿ ರೂಪು ಸೊಬಗುಳ್ಳ ।
ಯೆತ್ತಾಣ ಕೊರವಂಜಿಯಿವಳೂ ॥ ೨ ॥

ರಂಗೂ ನೀಲದ ಬಳೆ ಮುಂಗೈಯ್ಯ ಮೂರಾರಿ ।
ಶೃಂಗಾರ ನಡುವಿನೊಡ್ಯಾಣ ॥ ೩ ॥

ಮುತ್ತೀನ ಮುಡಿ ಮಿಸುನೀಯ ಕಂಕಾಣಗಳು ।
*　　*　　*
ಹಿಡಿದ ಕೈಯೊಳು ಹೊನ್ನ ಬೆತ್ತ (ಎಡದಾ?) ॥
ಕಡು ಚೆಲ್ವೆ ಶಿಶುವು ಬೆನ್ನಿನೊಳಿರೆ ಕೊರವಂಜಿ ।
ಮುದದಿ ಬಂದಳು ಕೇರಿವೊಳಗೆ ॥ ೧೧ ॥

ಕಸ್ತೂರಿ ಮೃಗ ಬಂದ ಬಟ್ಟೆಯೊಳಾದುದು ।
ವಿಸ್ತಾರಿಸುವರಳವಲ್ಲಾ ॥ ೧೨ ॥

ಹೀಗೆ ಬಂದ ಕೊರವಂಜಿಯುನ್ನು ಕೌಸಲ್ಯೆಯು ಕಂಡು ತನ್ನ ಕಡೆಯುವರಿಂದ ವಿಚಾರಿಸಿ, "ದಶರಥನರಸಿಗೆ ಪುತ್ರ ಸುವಾರ್ತೆಯ ಹೇಳಬಂದ"ಳೆಂದು ತಿಳಿದು, ಅವಳನ್ನು ತನ್ನ ಸೌಂದರ್ಯ ವಿಲಾಸದ ತೊಟ್ಟಿಗೆ ಕರೆಯಿಸಿಕೊಂಡಳು. ಆ ಕೊರವಂಜಿಗೆ ಪರಿಚಾರಕರ ಕೈಯಿಂದ ಉಪಚಾರಂಗಳಂ ಮಾಡಿಸಿ, ಕಣಿಯ ಕೇಳುವುದಕ್ಕೆ ಅಲಂಕಾರ ಭೂಷಿತೆಯಾಗಿ ಬರುತಿರ್ದಳದೆಂತೆನೆ.—

ಏಕ ತಾಳ

ಪರಿಮಾಳ ತೈಲವನೊತ್ತಿ ಪನ್ನೀರು ಜಳಕ ಗೈದು ।
ಅಗಿಲು ಕುಂಕುಮ ಗಂಧ ಅಂಗಕ್ಕೆ ಪೂಸಿ ॥ ೧ ॥

ಕಾಂಚೀ ದಾಮವನುಟ್ಟು ಕನಕ ಭೂಷಣವಿಟ್ಟು ।
ವಾಂಛಲ್ಯ ಮನದೊಳಿಟ್ಟು ಒಪ್ಪಾದಿಂ ಪೊರಟೂ ॥ ೨ ॥

ಬಂದು ರತ್ನ ಗದ್ದಿಗೆಯೊಳು ಮಂಡಿಸಿದಳು. ಎದುರು ಕುಳಿತಿರುವ ಕೊರವಂಜಿಯ ರೂಪವನ್ನು ನೋಡಿ ಆಶ್ಚರ್ಯಪಟ್ಟು—

ನಾನು ನಿನ್ನಂತ ರೂಪು ಕಾಣೆ ಕೊರವಂಜಿ ।
ಮಂಡಾಲದೊಳು ಚೆಲ್ವೆ ಕೊರವಂಜ ನಿನ್ನಾ ।
ಗಂಡಾನಿನ್ನೆಂತೋನೆ ಕೊರವಂಜಿ ॥

ಎಂದು ಕೇಳಿದಳು. ಅದಕ್ಕೆ ಉತ್ತರವಾಗಿ—

ನನ್ನ ಗಂಡನು ।
ಭೂತ ಹಿಂಡುಗಳೊಳಗೆ ಪುಲಿಯ ಚರ್ಮವ ಪೊದ್ದು ।
ಭೂತಳವ ಚರಿಸುವನು ಬೂದಿಯನು ಪೂಸಿ ॥ ೩ ॥

ಕಣ್ಣು ಕೆಂಪಗೆ ಮಾಡಿ ಕರದಿ ಬುರುಡೆಯ ಪಿಡಿದು ।
ತನ್ನ ತಾನರಿಯದೇ ತಾಂಡವಾಡುವನೂ ॥ ೪ ॥

ವಿಷವ ಕೊರಳೊಳಗಿಟ್ಟು ವೀರನಂದದಿ ಬಹನು ।
ಮಸೆದಲಗು ಮೂರರಿಂದ ಮಾತನಾಡಿಸುವನೂ ॥ ೫ ॥

* * *

ಮರಿ ಹಾವುಗಳ ಸುತ್ತಿ ಆಲದೆಲೆಯ ಹೆಗಲಲ್ಲಿ (?)
ಶಿ ದ ಮೇಲೊಂದು ನೀರ ಕೊಡನ ಹೊತ್ತಿಹನೂ ॥ ೮ ॥

ಸೊಲ್ಲಿಸಲು ಸುಮ್ಮನೆಯೆ ಕಲ್ಲಿನಂದದಿ ಯಿರುವ ।
ಬಲ್ಲವರ ಬಾಗಿಲನು ಕಾಯ್ದುಕೊಂಡಿಹನು ॥ ೯ ॥

ಹೀಗೆಯೇ, ವ್ಯಂಗ್ಯವಾಗಿ ತನ್ನ ತವರು, ತನ್ನ ಸವತಿ, ತನ್ನ ಮಕ್ಕಳು ಮೊದಲಾದ ವಿಷಯುಗಳನ್ನೆಲ್ಲ ಯಥಾವತ್ತಾಗಿ ವರ್ಣಿಸಿ ಹೇಳಿ, ತಾನು "ಹರಿಹರ ಬ್ರಹ್ಮೇಂದ್ರ ಸುರ ಮುನಿಗಳ ಹದಿನಾಲ್ಕು ಪರ ಲೋಕದರಿಕೆಯುವಳು, ದುಂಡಿಕ್ಕೈ ಮುಗಿದು ಕೇಳು ಕಣಿಯಾ" ಎಂದಳು. ಆಗ—

ರಾಗ—ಭೂಪಾಳಿ, ದ್ವಿಪದ

ಮುತ್ತಿನ ಗದ್ದುಗೆ ಕೊರವಂಜಿಗಿತ್ತು ।
ರತ್ನ ಪೀಠದ ಮೇಲೆ ಕುಳಿತು ಕೌಸಲ್ಯೆ ॥ ೧ ॥

ಹೊನ್ನ ಮೊರದೊಳಗೊಂದು ವಕ್ಕಳ ಮುತ್ತು ।
ಕನ್ಯೆ ಬೇಗದಿ ತಾನೆ ಕಾಂತೆ ಮುಂದರಿಸೆ ॥ ೨ ॥

ಮನಸಿನಲಿದ್ದಂತಾ ಮಾತ ಪೇಳುವೆನು ।
ನೀನೆನೆಸಿದ ನೆನೆಪೆಲ್ಲ ನೆಲೆಯಾಗಿ ॥ ೪ ॥

ತರುಣಿ ಯೆನ್ನ ಮಾತು ತವೆಯುಮೃತ ವಾಕ್ಕು ।
ಕರೆಯು ಕಾಣಿಸದು ಕೊಲ್ಲಾಪುರದಮ್ಮ ನಾಣೆ || ೫ ||

ಅನುಕೂಲವಾದಮೇಲಮ್ಮ ಕೇಳೆನ್ನ ।
ನೆನೆಸುತ್ತಲಿರು ಎಂದು ಸೇಮದೊಳಿಂದು || ೬ ||

ವಚನ || ಇಂತೆಂದು ಮುತ್ತಿನ ಶಾಸೆಯಂ ಮೂರು ಗುಡ್ಡೆಯಂ ಮಾಡಿ ಪಣೆಗೆ ಕೈಯಂ ನೆಗಪಿ ಚಿನ್ನದ ಬೆತ್ತಮಂ ಪಿಡಿದು ಚದುರೆ ಸಂತೋಷವಡೆದು ಕೊರನಂಜ ಕಣಿಯ ಪೇಳುವುದಕ್ಕೆ ತನ್ನ ಇಷ್ಟ ದೇವತಾ ಪ್ರಾರ್ಥನೆಯಂ ಗೈದಳದೆಂತೆನೆ.—

ರಾಗ || ವೋ ಕೊಲ್ಲಾಪುರದಮ್ಮ ಗೋವಿಂದ ರಾಜ ।
ಸೊಭಾನದೈಯ್ಯನ ಸೋಮೇಶ ಲಿಂಗ ।
ಕೊಂಡಲಗಿರಿ ತಿಮ್ಮ ಕೋನೇಟಿ ರಾಯ ।
ಚೆಲುವ ಅಹೋಬಲ ರಾಯ ಜಾನಕೀ ರಮಣ ||

ಕಂಬದ ರಾಯನೆ ಕಕುದ್ಗಿರೀಶ ಕಲ್ಯಾಣ ಬಸವಂಣ ।
ಕರುಣದ ರಂಗಾ ಕಾಮ ನಂದೀಶನೆ ಪೆಂನೋಬಳೈಯ್ಯ ।
ಹಂಪೆಯ ವಿರುಪಾಕ್ಷ ಹರನೆ ನಂಜುಂಡ ||

ಹೀಗೆಯೇ, ನಾಲ್ಕು ದಿಕ್ಕುಗಳಲ್ಲಿಯೂ ಪ್ರಸಿದ್ಧರಾದ ದೇವಾದಿ ದೇವರನ್ನೆಲ್ಲ ವಂದಿಸಿ, "ತನಿಗೆ ಸೊಲ್ಲು ಕೊಡು ಎಂದು ಬೇಡಿಕೊಂಡಳು ಸೊಬಗಿನಿಂದಾ"—

ಯಾಲ ಪದ

ಒಂದ ಲೇಸಾ ನೆನೆದೇಯಮ್ಮಾ ವನಿತೆ ನಿನ್ನ ಗರ್ಭದಲ್ಲಿ ।
ಮಂದರಾ ಧರನು ಜನಿಸ್ಯಾನೆ ಕೌಸಲ್ಯಾದೇವಿ ಕಂದನಾಗೀ ವಿಷ್ಣು ರೂಪಿನಲಿ || ೧ ||

ವನ್ನೆ ರನ್ನೆ ಮೂಲೆ ನಾಳೆ ಒಂಭತ್ತಾನೆ ತಿಂಗಳೊಳಗೆ ।
ಗಂಡು ಮಗ ಕಡು ಚೆಲ್ವಾನೆ ಕೌಸಲ್ಯಾದೇವಿ ।
ಚಂಡ ದೈತ್ಯರನ್ನು ಕೊಲ್ವನೆ || ೨ ||

ನನ್ನ ಮಾತು ಸಟೆಯೆನ್ನಬೇಡ ನಿನ್ನ ಗರ್ಭಾದಲ್ಲಿ ಕೇಳು ।
ಚೆಲ್ವ ರಾಮ ಜನಿಸಿ ಬರುವಾನೇ ಕೌಸಲ್ಯಾದೇವಿ ।
ಚೆನ್ನಾಗಿ ಕೇಳಮ್ಮ ಕಣಿಯಾ || ೩ ||

ಎಂದು ಹೇಳಿ, "ಬ್ರಹ್ಮನೈಯ್ಯನು ಎಂತು ಮರ್ತ್ಯಕೆ ಯೆನ್ನ ಗರ್ಭದಿ ಬರುವ" ಎಂದು ಸಂಶಯಪಟ್ಟ ಕೌಸಲ್ಯೆಗೆ ದೈತ್ಯ ಭೀತರಾದ ದೇವತೆಗಳಿಗೆ ವಿಷ್ಣುವು ವರ ಪ್ರದಾನ ಮಾಡಿರುವ ಕಥೆಯನ್ನು ಹೇಳಿ ನಂಬಿಸಿದಳು. ಕೌಸಲ್ಯೆಯು ಸಂತುಷ್ಟಾಂತರಂಗಳಾಗಿದ್ದರೂ ಮಾನವ ಸ್ವಭಾವವನ್ನು ಅನುಸರಿಸಿ ಹೇಳಿದಳು—

ರಾಗ–ವರಾಳಿ

ಮಕ್ಕಳ ಪುಣ್ಯವ ಮಡದಿ ನೋಂತುದಿಲ್ಲ ಮಂದಯಾನೇ ।
ಚಿಕ್ಕ ವಯಸು ಹೋದ ಮೇಲೆ ಯೆಲ್ಲಿಯ ಮಕ್ಕಳು ಮಂದಯಾನೇ || ೧ ||

ಅಕ್ಕ ನಿನ್ನಯ ಮಾತು ಅನುಕೂಲವಾದರೆ ಮಂದಯಾನೇ ನಿನಗೆ ।
ಚೊಕ್ಕ ಚಿನ್ನದುಡಿಗೆಯು ತೊಡಿಸುವೆನಮ್ಮ ಮಂದಯಾನೇ ॥ ೨ ॥

*　　*　　*

ಮದನನೈಯನು ಯೆನ್ನ ಮಗನಾದುದುಂಟಾಗೆ ಮಂದಯಾನೇ ।
ನಿನಗಿದುರೆದ್ದು ನಾನಿಷ್ಟ ದೈವವೆಂದು ಕಾಂಬೆನು ಮಂದಯಾನೇ ॥ ೬ ॥

ಕೊರಚಿಯು ಮತ್ತೆ ರಾಮಾಯಣದ ಕಥೆಯನ್ನೆಲ್ಲ "ಕಂದ, ತಂದ, ಕೊಂದ," ಎಂಬ ಮೂರು ಮಾತಿನಲ್ಲಿ ಮುಗಿಸುವಂತೆ ಹೇಳಿದಳು. ಇವಳಿತ್ತ ಇಂತೆಂದು ವಿವರಂಗಳಂ ಪೇಳುತ್ತಿರಲು, ಇತ್ತ ಸಿಂಗಾಸಾನಿಯನರಸುತ್ತ ಯಾರುಕಲಸಿಂಗನು ಬಂದನದೆಂತೆನೆ—

ಯಾಲ ಪದ

ಬಲ್ಲಿ ನಾಮ ಫಣೆಯೊಳಿಟ್ಟು ಜಲ್ಲಿ ಕೊಕ್ಕರೆ ಗರಿಯ ಸುತ್ತಿ ।
ಯೆಲ್ಲ ದಿಕ್ಕು ನೋಡಿ ನಗುತಲೀ ವೋ ಸಿಂಗಿಯೆನುತಾ ।
ಜೊಲ್ಲು ವೀಳ್ಯವು ಸೋರುತ ಬಾಯೊಳು ॥ ೧ ॥

ಕಂಕುಳೊಳಗೆ ಒಂದು ಬುಟ್ಟಿ ಕೈಯಲ್ಲಿ ಕಪಿ ಹಾವುಗಳೂ ।
ಡೊಂಕು ನಡುವಿಗೊಂದು ಕುಡುಗೋಲು ವೋ ಸಿಂಗಿಯೆನುತಾ ।
ಶಂಕೆಯಿಲ್ಲದೆ ಬಂದ ಸಿಂಗಾನು ॥ ೨ ॥

ಚಿಕ್ಕು ಕಣ್ಣು ಭೇರಿ ಹೊಟ್ಟೆ ಚಿಕ್ಕೀದಂತೆ ವಾರೆ ಮೂಗು ।
ಚಿಕ್ಕ ವುಳ್ಳೀ ಗಡ್ಡೆ ಮೀಸೆಯೂ ವೋ ಸಿಂಗಿಯೆನುತಾ ।
ಅಕ್ಕರಿಂದ ಬಂದಾ ಸಿಂಗಾನು ॥ ೩ ॥

ಬಾನೆಯಂತೆ ಬಾಯಿದೆರೆಯು ಬಾಯದುಟಿ ಮೀರಿದ ಹಲ್ಲು ।
ಕಾಣ ಕಡ್ಡಿಯಂತೆ ಕೈಕಾಲು ವೋ ಸಿಂಗಿಯೆನುತಾ ।
ವಾರೆ ನೋಟದಿಂದ ನಗುತಾ ॥ ೪ ॥

ಹಕ್ಕಿಗಳ ಕಾಲಾ ಹುರಿಯು ಸೆಕ್ಕಿದೊಂದು ಕಂಬಳಿಯು ।
ದಿಕ್ಕು ದಿಕ್ಕು ನೋಡಿ ನಗುತಾ ವೋ ಸಿಂಗಿಯೆನುತಾ ।
ಚೊಕ್ಕ ಕೊರಚಿಯ ಕಾಣೆರೆನುತ ॥ ೫ ॥

ಅತ್ತಲಾ ಪಾರ್ವತಿದೇವಿಯಾದ ಕೊರವಂಜಿಯು ಕೌಸಲ್ಯಾದೇವಿಗೆ ಪುತ್ರೋತ್ಸವದ ವಾರ್ತೆಯಂ ಪೇಳಿ ಅಪ್ಪಣೆಯಂ ಕೇಳಲು, ಕೌಸಲ್ಯಾದೇವಿ ಕೊರವಂಜಿಗೆ ಮುತ್ತು, ರತ್ನಂಗಳಂ ಬುಟ್ಟಿಯೊಳ್ತುಂಬಿ ಬುರುಕನಿಗೆ (ಮಗುವಿಗೆ) ಹಾಲು ತುಪ್ಪವನೆರೆದು ಅನೇಕ ವಸ್ತ್ರಾಭರಣಗಳಿಂದ ಅಲಂಕರಿಸಿ ಕಳುಹಿದಳು. ಕೊರಮನೂ ಕೊರವಂಜಿಯೂ—

ಅಕ್ಕಯ್ಯ ನೋಡಿಂತಾ ಅತಿ ಚೋದ್ಯವಾದಂತಾ ।
ಚಿಕ್ಕ ಪ್ರಾಯದ ಕೊರಚಿ ಚೊಕ್ಕ ರೂಪಿನವಳೂ . ॥ ೧ ॥

ಪೂರ್ವ ಕಾಲದಿ ಬ್ರಹ್ಮ ಬರೆದಿಟ್ಟ ಲಿಖಿತ ।
ಮೀರಲಾರಳವಮ್ಮ ಧಾರುಣಿಯ ಜನಕೆ　　|| ೨ ||

ಚಿಕ್ಕ ಪ್ರಾಯದಾ ಕೊರಚಿ ಮುಪ್ಪಿನ ಕೊರಮನಿವ ।
ಅಕ್ಕಯ್ಯ ನೋಡಿರೆ ಅತಿ ಚೋದ್ಯಗಳನು.　　|| ೩ ||

ಎಂದು ವಿಸ್ಮಯ ಪಡುತ್ತಿರುವ ಪುರ ಜನಗಳನ್ನು ನೋಡುತ್ತ ತಮ್ಮ ಕೈಲಾಸಕ್ಕೆ ತೆರಳಿದರು.

ಸಂಗೀತ ವರ್ಣ

ಧರೆಯೊಳಗೀ ಕೃತಿ ಕೇಳ್ದು ಹೇಳ್ದವರಿಗೆ ।
ಹರ ಕೊಡುವ ಇಷ್ಟಾರ್ಥಗಳನೂ　　|| ೧ ||

*　　*　　*　　*

ದ್ವಿಪದ || ಶೇಷಾಚಲೇಶ್ವರ ಚೆಲುವ ವೇಂಕಟಗೆ ।
ಸಾಷ್ಟಾಂಗದಿಂ ನಮಿಸಿ ಸದ್ಭಕ್ತಿಯಿಂದ　　|| ೫ ||

ಮೆಳೆಯ ಕೋಟೆಯ ತಿರುಮಲ್ಲೈಯ್ಯನ ಕುಮಾರ ।
ಇಳೆಯೊಳು ಗೋವಿಂದ ವೇಂಕಟ ಕವಿಯು　　|| ೬ ||

ಧರೆಯೊಳಗಾಚಂದ್ರ ತಾರಾರ್ಕಮಾಗಿ ।
ಸ್ಥಿರದಿಂದಲಿರುವಂತೆ ಹರಸಿ ಈ ಕೃತಿಯ　　|| ೭ ||

ವಿರಚಿಸಿದನು.

ಮಂಗಳ || ಗಂಗೆಯನು ಪೊತ್ತು ಶಿವ ಲಿಂಗ ರೂಪಾದವಗೆ ।
ಹಿಂಗದೇ ಭಕ್ತರನು ಪರಿಪಾಲಿಪಗೇ ||
ಬೆಂಗಳೂರಿನ ರಂಗಧಾಮನಾ ಮೈದುನಗೆ ।
ಅಂಗನೆಯರೆಲ್ಲರಾರತಿಯ ಬೆಳಗೀರೆ ||
ಜಯ ಮಂಗಳಂ ನಿತ್ಯ ಶುಭಮಂಗಳಂ ||

[ಹೀಗೆಯೇ, ಯಕ್ಷಗಾನವಾಗಿ ಬರೆದಿರುವ ರಾಮಾಯಣ, ಭಾಗವತ, ಭಾರತ ಗಳೆಲ್ಲ ಉಂಟು. ಅವುಗಳಲ್ಲಿ ಮೂಲ ಗ್ರಂಥವನ್ನು ಅನುಸರಿಸಿಹೋಗಬೇಕೆಂಬ ನಿಯಮವನ್ನು ಅಷ್ಟು ಕಟ್ಟುನಿಟ್ಟಾಗಿ ಪಾಲಿಸಿರುವಂತೆ ತೋರುವುದಿಲ್ಲ. ಮೈಸೂರು ಓರಿಯಂಟಲ್ ಲೈಬ್ರೆರಿಯ ಅಮುದ್ರಿತ ಪುಸ್ತಕಗಳ ಪಟ್ಟಿಯನ್ನು ತೆಗೆದು ನೋಡಿದರೆ ಈ ಯಕ್ಷಗಾನ ಸಾಹಿತ್ಯವು ಎಷ್ಟಿದೆಯೆಂಬುದು ವ್ಯಕ್ತವಾಗುವುದು. ಮತ್ತೊಮ್ಮೆ ಈ ಯಕ್ಷಗಾನವನ್ನು ಕುರಿತು ಪ್ರಸ್ತಾಪಿಸಬೇಕಾಗಿರುವುದರಿಂದ ಈಗ ಇಲ್ಲಿಗೇ ಬಿಟ್ಟು ಮುಂದಕ್ಕೆ ಹೋಗೋಣ.]

ಈ ವೇಳೆಗೆ ಎಲ್ಲರಿಗೂ ಮನೆಗೆ ಹೋಗುವ ಹೊತ್ತಾಗಿದೆ. ಆದರೂ ವಿನೋದ ಪ್ರಿಯರು ಇಲ್ಲದೆ ಇರುವುದುಂಟೆ? ಒಬ್ಬರು ಪಸಂದು ಮಾಡಿ ಒಂದು ವಿನೋದದ ಫ಼ದವನ್ನು ಮತ್ತೊಬ್ಬರಿಂದ ಹಾಡಿಸುತ್ತಾರೆ.—

೧೧. ಇಂದು ನಮಗೆ ಏಕಾದಶಿ ॥ ಪ ॥
ತಿಂದು ಬಂದೆವು ನಲವತ್ತು ದೋಸೆ ॥ ಅ ॥

ಹದಿನೇಳು ಕೋಡಬಳೆ । ಕಡಲೇಬೇಳೆ ವುಸುಳಿ ॥
ಅದರ ಮೇಲೆ ನೆಲಗಡಲೆ । ಹೆದರಿಕಿಲ್ಲದೆ ಹೇಳ್ತೇನೆ ಕೇಳಿ ॥ ೧ ॥

ಅವಲಕ್ಕಿ ಹಾಲು ಸಕ್ಕರೆ । ಸೌತೆಕಾಯಿ ಕೋಸುಂಬರಿ ॥
ಬಾಳೆಹಣ್ಣು ಹೊಸ ಬೆಲ್ಲವು । ವುತ್ತುತ್ತಿ ಮೇಲ್ ದ್ರಾಕ್ಷಿಯು ಕೊಬ್ಬರಿ ॥ ೨ ॥

ತಾಲಿಪಿಟ್ಟು ಉಪ್ಪಿಟ್ಟು । ಕಲಸಿದ ಮೆಂತ್ಯದ ಹಿಟ್ಟು ॥
ಚೆನ್ನಾಗಿ ಮುಗಿಸಿಟ್ಟು । ಕರಿದ ಕಡಬುಗಳು ಮೇಲೇಳೆಂಟು ॥ ೩ ॥

ನೆರೆಮನೆಯ ಒಬ್ಬಾಕೆ, "ಹೇಗಿದ್ದರೂ ಹೊತ್ತಾಯಿತು; ಆ ಆಕಳ ಹಾಡು ಒಂದು ಹೇಳಿಬಿಡಿರಮ್ಮಾ, ಕೇಳಿ ಹೊರಟುಹೋಗೋಣ" ಎಂದು ಕೇಳುತ್ತಾಳೆ. ಪೂರ್ಣಾವತಾರಿಯಾದ ಶ್ರೀ ಕೃಷ್ಣನ ಲೀಲಾ ಪ್ರಸಂಗವು ಯಾರಿಗೆ ಬೇಡ? ಎಲ್ಲರೂ ಆಗಬಹುದೆನ್ನುತ್ತಾರೆ.—

(ಧಾಟಿ—ಕಾವಡಿಚಂದಿನಂತೆ)

ಮುಂಜಾನೆದ್ದು ನಾನೀಗ । ಆಕಳನಾದರೆ ಹೊಡೆದು ಬಂದೆ ॥
ಅಸ್ತಮಾನಾವಾಯಿತು । ಆಕಳು ಕರೆಯುವ ಹೊತ್ತಾಯಿತು ॥
ಆಕಳು ಕೊಡೋ ಕೃಷ್ಣ । ನಮ್ಮಾಕಳು ಕೊಡೋ ॥ ೧ ॥

ಆಕಳನಾದರೆ ಕಾಣಾಲಿಲ್ಲ । ಆಕೇ ನಮಗೇ ಹೇಳಾಲಿಲ್ಲ ॥
ಸೆರಗು ಹಿಡಿದೂ ನಿಲ್ಲಿಸಿದ್ರೀಗ । ಸಾವಿರ ಆಕಳ ತಂದು ಕೊಡುವೇ ॥
ಆಕಳು ಕಾಣೇ ನಾನಿಮ್ಮಾಕಳು ಕಾಣೇ ॥ ೨ ॥

ಸಣ್ಣಾ ರೋಮದ ಆಕಳು ಕಾಣೋ । ಸರದಾ ಮುತ್ತಿನ ಮಲಕೂ ಕಾಣೋ ॥
ಬೆನ್ನಲ್ಲಿ ಬಿಳುಪಿರುವುದು ಕಾಣೋ । ಬಾಲಾ ಬೀಸುತ ಬರುವುದು ಕಾಣೋ ॥
ಆಕಳು ಕೊಡೋ ಕೃಷ್ಣಾ ನಮ್ಮಾಕಳು ಕೊಡೋ ॥ ೩ ॥

ಹಳ್ಳದ್ದಂಡೆಲಿ ಮೇಯುತಿತ್ತು । ಕಳ್ಳೀ ಮರೆಯಲಿ ನಿಂತಿತ್ತು ॥
ಕರುವನ್ನಾದರು ಉಣಿಸೂತಿತ್ತು । ಮನೆಯ ದಾರಿಯ ಹಿಡಿಯೂತಿತ್ತು ॥
ಆಕಳು ಕೊಡೋ ಕೃಷ್ಣಾ ನಮ್ಮಾಕಳು ಕೊಡೋ ॥ ೪ ॥

ಎಂಟೂ ಯೆಂಟೂ ದಿನಕೆ ರೊಕ್ಕ । ಯೆಣಿಸಿಕೊಂಡು ಹೋಗುತೀಯೆ ॥
ಗಂಟೂ ಕಳ್ಳೀ ಗೋವಿನ್ನಾ । ನೆಂಟಾರಲ್ಲಿ ಬಿಟ್ಟೂ ಬಂದ್ಯಾ ॥
ಆಕಳು ಕಾಣೇನಾ ನಿಮ್ಮಾಕಳು ಕಾಣೇ ॥ ೫ ॥

ಬೇಡಿದರಿಷ್ಟೂ ಒಲಿವೋರಿಲ್ಲ । ಕೇಳಿದರಿಷ್ಟೂ ಕೊಡುವೋರಿಲ್ಲ ॥
ನಿನ್ನ ಬಾಲನ ಕಳಿಸಿ ಕರೆಸೀಕೊ । ಇಲ್ಲಾ್ಯರನ ಬೆದರಿಸಬಂದೇನೀ ॥
ನಾಕಳು ಕಾಣೇ ನಾ ನಿಮ್ಮಾಕಳು ಕಾಣೇ ॥ ೬ ॥

ಅರಸಿಗಾದರೆ ಹೇಳುತೇನೆ । ಅಲ್ಲಿಗೆ ನಿನ್ನ ಕರೆಸುತೇನೆ ॥
ಕದ್ದದ್ದುಂಟು ಮಾಡಿಸುತೇನೆ । ಕಪಟಾ ಬುದ್ಧಿ ಬಿಡಿಸುತೇನೆ ॥
ಆಕಳು ಕೊಡೋ ಕೃಷ್ಣಾ ನಮ್ಮಾಕಳು ಕೊಡೋ || ೭ ||

ಯಾವಾ ಅರಸಿಗೆ ಹೇಳುತೀಯೆ । ಎಲ್ಲಿಗೆ ನನ್ನ ಕರೆಸುತೀಯೆ ॥
ಬಾಯಾ ಮಾಡೀ ಕೊಲ್ಲಿಸುತೀಯಾ । ಮಾಯಾಗಾತೀ ಹೆಣ್ಣೇ ನೀನು ॥
ಆಕಳು ಕಾಣೇ ನಾ ನಿಮ್ಮಾಕಳು ಕಾಣೇ || ೮ ||

ಆಕಳು ತಂದು ಕೊಟ್ಟಾರೀಗ । ಬೇಕಾದ್ದಚ್ಚಡವನ್ನೂ ಕೊಡುವೆ ॥
ತುಪ್ಪದ್ದೀಪಾ ಹಚ್ಚೂವೇ । ಸಕ್ಕಾರೆ ತಂದೂ ಹಂಚೂವೆ ॥
ಆಕಳು ಕೊಡೋ ಕೃಷ್ಣಾ ನಮ್ಮಾಕಳು ಕೊಡೋ || ೯ ||

ಆಕೇ ಹರಿಕೇ ಹೊತ್ತೂಕೊಂಡೂ । ಆಕಳು ತಂದೂ ಮನೆಗೆ ಬಿಟ್ಟೂ ॥
ಜೋಕೇ ಎಂದೂ ಹೇಳೀ ನಡೆದ । ಪುರಂದರ ವಿಠಲಾ ರಾಯಾ ॥
ಆಕಳೂ ಬಂತೂ ಮನೆಗೆ ಆಕಳೂ ಬಂತೂ || ೧೦ ||

ಹಾಡನ್ನು ಕೇಳಿದವರೆಲ್ಲ ಅಂತರಂಗದಲ್ಲಿ ಒಮ್ಮೆ ಲೀಲಾ ಮಾನುಷ ವಿಗ್ರಹನಾದ ಆ ಸ್ವಾಮಿಯನ್ನೂ—ಅವನ ಸರ್ವ ಪ್ರಿಯವಾದ ತುಂಟತನವನ್ನೂ ನೆನೆದು ಸಂತೋಷ ಭರಿತರಾಗಿ ಒಂದು ಗಳಿಗೆ ಮೈಮರೆತಿದ್ದಾರೆ. ಅವರಲ್ಲಿ ಯಾರೋ ಒಬ್ಬಳು—

ನಿಜವಮ್ಮಾ ! ಆಕಳೂ ಬಂತೂ ಮನೆಗೆ ಆಕಳು ಬಂತೂ ॥
ಕಟ್ಟಿಹಾಕದಿದ್ದರೆ ಒಳಗೆ ಎಲ್ಲಾವನ್ನೂ ತಿಂತು । ಎಲ್ಲಾ ತಿಂತು ॥

"ಆದರಿಂದ, ನಡೆಯಿರಿ ಮನೆಗೆ ಹೋಗೋಣ!" ಎನ್ನುತ್ತಾಳೆ.

ಎಲ್ಲರೂ ಕೇಳಿ ಯಥಾ ರುಚಿಯಾಗಿ ನಕ್ಕು, ದೀಪ ಹೊತ್ತಿಸುವ ಹೊತ್ತಾಯಿತೆಂದು ಹಣೆಗೆ ಕುಂಕುಮವಿಟ್ಟುಕೊಂಡು ಹೊರಡುತ್ತಾರೆ.

ನಮ್ಮ ಆಕೆಗೂ ಸಡಗರ: ಹಸು ಕರು ಮನೆಗೆ ಬಂದಿವೆ. ಅವುಗಳನ್ನು ಗೊತ್ತಿನಲ್ಲಿ ಕಟ್ಟಿ, ಮಡಿಯುಟ್ಟು, ದೇವರಿಗೆ ಸಂಜೆ ದೀವಿಗೆಯಿಟ್ಟು, ಒಕ್ಕಲಗಿತ್ತಿಯು ಒಗೆದು ತಂದಿರಿಸಿರುವ ಬಟ್ಟೆಗಳಿಗೆ ಮಡಿ ನೀರು ಹಾಕಿ ಹಿಂಡಿ ಒಣಗಿಹಾಕಿ ಬರುತ್ತಾಳೆ. ಆಟವಾಡಿ ದಣಿದು ಹಸಿದು ಬಂದಿರುವ ಮಕ್ಕಳು ಕೈ ಕಾಲು ತೊಳೆದುಕೊಂಡು ದೇವರಿಗೆ ಅಡ್ಡಬಿದ್ದು ತಾಯಿಯ ಹಾದಿಯನ್ನು ಕಾದಿದ್ದಾರೆ. ತಾಯಿಯೂ ಬಂದು ಮಕ್ಕಳಿಗೆ ಬಡಿಸುತ್ತಾಳೆ. ಮದುವೆಯ ಮನೆಯ ಹಾಗೆ ಸಂಭ್ರಮವಾಗಿ ಕೋಲಾಹಲವಾಗಿ (ಮನೆಯೊಡತಿಯು ಪ್ರಸನ್ನೆಯಾಗಿದ್ದರೆ ಮಾತ್ರ) ಮಕ್ಕಳು ಕೇಕೆ ಹಾಕಿಕೊಂಡು ಆನಂದದಿಂದ ಅಂಬಲಿಯೋ, ಪರಮಾನ್ನವೋ ಹೊಟ್ಟೆತುಂಬ ಉಂಡು ಏಳುತ್ತವೆ.

ತಾಯಿಯು ಮಗುವನ್ನು ಮತ್ತೆ ತೊಟ್ಟಿಲಿಗೆ ಹಾಕುತ್ತಾಳೆ. ಜೋಗುಳಗಳಿಗೆ ಆರಂಭವಾಗುತ್ತದೆ.—

೧೨. ಹೊಳ್ಳೊಳ್ಳ ಹಾಯಿಯಿಯಾ ೯ ೯ ಹಣ್ಣು ಮೆಣಸಿನ ಕಾಯೀ ೯ ೯ ೯ ೯ ॥ ಪ ॥

ನಿದ್ದೆಬಾರದ ಕಣ್ಗೆ ಮದ್ದ್ಯಾರೆ ಬಲ್ಲವರು । ಗದ್ದೇಲಿ ಬೆಳೆವ ಗರಗಾ ॥
ಗರಗಾದ ಸೊಪ್ಪನ್ನೆ ತಂದು । ಛಪ್ರೆ ಕಾಡೀಗೆ ಮಾಡಿದಾಳು ॥ ೧ ॥

ಬೆಳ್ಳಿ ಬೆಳ್ಳೀ ಮುದ್ದು ಬೆಳ್ಳಿ ತಾವರೆ ಮುದ್ದು । ಹಣ್ಣಿಳ್ಳ ಮರಕೆ ಗಿಣಿ ಮುದ್ದು ॥
ಗಿಣಿ ಮುದ್ದು ನಮ್ಮಯ್ಯ । ನಮ್ಮ ನೆಗೆ ಯೆಲ್ಲ ನೀ ಮುದ್ದು ॥ ೨ ॥

ಅತ್ತು ಕಾಡುವನಲ್ಲ ರಚ್ಚೆ ಮಾಡುವನಲ್ಲ । ಲಕ್ಷಣಾವಂತ ಸಿರಿವಂತ ॥
ಸಿರಿವಂತ ನಿನ್ನಂತ । ಮಕ್ಕಳಾಡಲಿ ಮನೆ ತುಂಬ ॥ ೩ ॥

(ಈ ಜಾತಿಯಲ್ಲಿ, ಮಾಡುತ್ತಿರುವ ಕೆಲಸಕ್ಕೆ ಸಂಬಂಧವೇ ಇಲ್ಲದ ವಿಷಯಾಂತರಗಳೂ ಬರುವುದುಂಟು)

ಬೆಟ್ಟದಾ ತಿಮ್ಮಪ್ಪ ಬೇಲೂರು ಚೆನ್ನೀಗ ।
ನಾಗಮಂಗಲದ ನರಸಿಂಹ ।
ಇವರು ಮೂರೂ ಮಂದಿ । ಗೀರು ಗಂಧದಲಿ ಚೆಲುವಾರು ॥ ೪ ॥

ಸೂಳೀಗೆ ಸುತ್ತೋಲೆ ಮಡದೀಗೆ ಮುತ್ತೋಲೆ ।
ಮೆಚ್ಚಿ ಬಂದವಳಿಗೆ ಬಿಚ್ಚೋಲೆ ।
ಅಪ್ಪ ಅಣ್ಣಯ್ಯನ । ಪಟ್ಟದಾ ಹೆಂಡತಿಗೆ ಹರಳೋಲೆ ॥ ೫ ॥

ಜೋಗುಳದ ಸಾಹಿತ್ಯವು ಕನ್ನಡದಲ್ಲಿ ಅಪಾರವಾಗಿದೆ. ಇದು ನೋಡುವುದಕ್ಕೆ ತ್ರಿಪದಿಯ ಕಟ್ಟಿನಲ್ಲಿದ್ದರೂ, ಹಾಡುವಾಗ ಎರಡನೆಯ ಪಾದದಲ್ಲಿ ಅರೆಯಾಗಿ ಮುರಿದು ಅರ್ಥಕ್ಕೆ ನಿಲ್ಲಿಸಿಕೊಂಡಿದ್ದು, ಮತ್ತೆ ಆ ಮುರುಕಿನ ಉತ್ತರಾರ್ಧದಿಂದ ಎತ್ತಿ ಹಾಡುವುದರಿಂದ, ಒಂದು ಜಾತಿಯ ಚೌಪದಿಯ ಹಾಗಿದೆಯೆನ್ನಬಹುದು ; ಅಥವಾ, ಕಟ್ಟಿನಿಂದ ತ್ರಿಪದಿ ಹಾಡುವಾಗ ಚೌಪದಿಯೆಂದರೂ ಸಲ್ಲುವುದು.

ಹಾಡುವುದರಲ್ಲಿ ಈ ಜಾತಿಗೂ ಸಾಂಗತ್ಯಕ್ಕೂ ಇರುವ ವ್ಯತ್ಯಾಸವು ಗಮನಿಸಬೇಕಾದುದು.

ಇಲ್ಲಿ ಕೊಟ್ಟಿರುವ ಐದು ಪದ್ಯಗಳೂ ಛಂದೋ ದೃಷ್ಟಿಯಿಂದ ಎಷ್ಟು ಅಸಮಾನವಾಗಿವೆ!

ಹಾಗೆಯೇ, ಈ ಜಾತಿಯಲ್ಲಿರುವ ವಿಷಯ ವೈವಿಧ್ಯವೂ ಲಕ್ಷಿಸಬೇಕಾದುದು. ವೈದ್ಯ, ಜೋಯಿಸ, ನೀತಿ, ಸಂಪ್ರದಾಯ, ನಂಬಿಕೆ ಮೊದಲಾದ ಸರ್ವ ವಿಷಯಗಳನ್ನೂ ಇಲ್ಲಿ ಕಾಣಬಹುದು. ಅಷ್ಟೇನು? ಸರ್ವಜ್ಞನ ವಚನಗಳಂತೆ ಇವೂ ಒಂದು ವಿಶ್ವಕೋಶವೆನ್ನಬಹುದು. 'ಗರತಿಯ ಹಾಡು' ಪ್ರಕಟವಾಗಿದೆಯಾದುದರಿಂದ ಈ ವಿಷಯದಲ್ಲಿ ನಾವು ಹೆಚ್ಚಿಗೆ ಹೇಳಬೇಕಾಗಿಲ್ಲ.

ಇದೇ ಹಾಡುಗಳು ಶೂದ್ರಾಣಿಯ ರಾಗಿ ಬೀಸುವ ಹಾಡುಗಳಾಗಿವೆ. ಅಲ್ಲಿ ಭಾಷೆಯೂ ಇನ್ನೂ ಒಂದು ಮೆಟ್ಟಿಲಿಳಿದು ಗ್ರಾಮ್ಯ ಮುದ್ರೆಯನ್ನು ಸಂಪೂರ್ಣ

ವಾಗಿ ತಳೆದಿದೆ. ಆದರೂ, ಎರಡೂ ಒಂದೇ ಜಾತಿಯೆಂದು ಹೇಳಲು ನಾವು ಹಿಂದೆಗೆಯುವುದಿಲ್ಲ.

ಈ ಜೋಗುಳಗಳಲ್ಲಿ 'ಲಾಲಿ' ಪದಗಳೂ 'ಜೋ ಜೋ' ಪದಗಳೂ ಉಂಟು. ಆದರೆ ಅವು ನೈಮಿತ್ತಿಕ ವರ್ಗಕ್ಕೆ ಸೇರಿದವು ಎಂದು ನಮ್ಮ ಅಭಿಪ್ರಾಯ. ಈ ಪದಗಳನ್ನು ಸಾಮಾನ್ಯವಾಗಿ ತೊಟ್ಟಿಲಿಡುವಾಗ 'ಗುಂಡಪ್ಪ'ನಿಗೇ ಹೇಳುವುದು. ಈ ಪದಗಳು ಮೇಲೆ ಹೇಳಿದ 'ಹೊಳ್ಳೊಳ್ಳ ಹಾಯೀ' ಪದಗಳಂತೆ ಸದ್ದು ಗದ್ದಲವಿಲ್ಲದ ಜಾತಿಯಲ್ಲವಾಗಿ, ತಟ್ಟಿ ನಿದ್ದೆಗೆಯ್ಯಿಸುವಂತಹ ಶಾಂತ ಕರ್ಮಕ್ಕೆ ಸರಿಹೋಗುವುದಿಲ್ಲವೆಂದು ಇವಕ್ಕೆ ಬಹಿಷ್ಕಾರ ಬಿದ್ದಿರಬಹುದು. ಮಕ್ಕಳು ಕೊಂಚ ಪ್ರಬುದ್ಧರಾದ ಮೇಲೆ, ಅರೆ ಮಾತು ಆಡುವುದು ಕಲಿತ ಮೇಲೆ, ಈ 'ಲಾಲಿ', 'ಜೋ ಜೋ'ಗಳನ್ನು ಬಹುವಾಗಿ ಮೆಚ್ಚುವರು.

ಜಾಣೆಯರಾದ ಹೆಂಗುಸರು ಎಂತಹ ಹಾಡನ್ನಾದರೂ ಹೇಳಿ ಮಕ್ಕಳನ್ನು ತಟ್ಟಿ ನಿದ್ದೆಗೆಯ್ಯಿಸಬಲ್ಲರು. ಆದರಿಂದ ನಾವಿಲ್ಲಿ ಮಾಡಿರುವ ಸಾಮಾನ್ಯ ವಿಭಾಗಕ್ಕೆ ಚ್ಯುತಿ ಬರುವುದಿಲ್ಲ.

### (ಆ) ನೈಮಿತ್ತಿಕ ವರ್ಗ

ಈ ಗುಂಪಿನಲ್ಲಿ, ಶಾಸ್ತ್ರದ ಹಾಡುಗಳು, ಆಶೀರ್ವಾದದ ಹಾಡುಗಳು, ವಾರದ ಹಾಡುಗಳು, ಉರುಟಣೆ, ಸುವ್ವಿ, ಚೆಟ್ಟು, ಎಣ್ಣೆಯೊತ್ತುವುದು, ಬಳೆ ತೊಡಿಸುವುದು, ಆರತಿ, ಬೀಗರ ಹಾಡುಗಳು—ಇವೆಲ್ಲವೂ ಬರುವುವು. ಇದರಲ್ಲಿ ಕೊನೆಯದು, ಗಂಡುಸರ ಹಾಡುಗಳಲ್ಲಿ ಬರುವ 'ವಿನೋದದ ಪದ'ಗಳೆಂಬ ಗುಂಪಿಗೆ ಸೇರಿದದುದು; ಉಳಿದವು ಅರ್ಥವಾದಗಳ ಗುಂಪಿಗೆ ಸೇರಿದವು. ಶಾಸ್ತ್ರದ ಹಾಡುಗಳು ಅಲ್ಲಿ ನಡೆಯುವ ಕ್ರಿಯೆಯನ್ನು ಬಣ್ಣಿಸುವವು; ಆಶೀರ್ವಾದಗಳು ಮಂತ್ರ ಸ್ಥಾನೀಯಗಳಾದ ಹರಕೆಗಳು. ಇವಕ್ಕೆಲ್ಲ ಒಂದೊಂದು ಉದಾಹರಣೆಯನ್ನು ಕೊಟ್ಟು ಮುಂದಕ್ಕೆ ಹೋಗೋಣ.—

### (೧) ಶಾಸ್ತ್ರದ ಹಾಡುಗಳು

೧೩. ಉರಟಣೆ ಹಾಡು.—

ಇದರಲ್ಲಿ, 'ನಲುಗು' ಇಡುವಾಗ ಒಂದು, ಗಂಧ ಪುಷ್ಪ ತಾಂಬೂಲಗಳನ್ನು ಒಪ್ಪಿಸುವಾಗ ಒಂದೊಂದು, ಆರತಿಗೊಂದು—ಹೀಗೆ ಹಲವು ಹಾಡುಗಳನ್ನು ಹೇಳುವುದುಂಟು. ಗ್ರಂಥ ವಿಸ್ತರ ಭಯದಿಂದ ನಾವು ಒಂದರಲ್ಲಿಯೇ ತೃಪ್ತರಾಗೋಣ.—

ಭೂಪಾಳಿ॥ ಉರಟಾಣೆಗೇಳೊ ಹರಿಯೆ । ಉರಗ ಶಯನ ದೊರೆಯೆ ॥ ಪ ॥
ನಂದಗೋಪೀ ಕುಮಾರ । ನತ ಜಗದುದ್ಧಾರ ॥ ಅ ॥

ನಂದ ನಂದನ ಸಿಂಧು ಶಯನ । ನೀ ಬಾರೈ ।
ಬಂದು ರತುನ ಮಂಟಪದೊಳು ಮುದದಿಂದಲಿ ॥ ೧ ॥

೧೪. ಚೆಟ್ಟು ಬಡಿಯುವ ಹಾಡು.—

ಪಂಕಜ ಗಂಧಿನಿಯರು । ಕುಂಕುಮವ ಹದ ಮಾಡಿ ॥
ಶಂಕರನ ಪಟ್ಟದರಸಿಯನು ।
ಅರಸಿಯನು ಎಬ್ಬಿಸಿ । ಕುಂಕುಮದ ಚೆಟ್ಟು ಬಡಿದಾರು ॥ ಶೋಭಾನೆ ॥ ॥ ೧ ॥

೧೫. ಸುವ್ವಿ ಪದಗಳು.—

ಸುವ್ವಿ ರಾಮಚಂದ್ರ ಸುವ್ವಿ । ಸುವ್ವಿ ರಾಮಭದ್ರ ಸುವ್ವಿ ॥
ಸುವ್ವಿ ರಾ-ಮಾ-ಭಿರಾಮ ಸುವ್ವಲಾಲೆ ॥ ಪ ॥
ಜಾನಕೀಯ ವಿವಹವೆಂದು । ಮಾನಿನಿಯರು ನೆರೆದು ಮುದದಿ ।
ಸಾನುರಾಗದಿಂದ ಮಧುರ । ಗಾನ ಮಾಡುತ ॥
ಪೊಳೆವ ಚಂದ್ರಕಾಂತಿ ಧವಳ ಶಿಲೆಯ ಒರಳಿನಲ್ಲಿ ರತುನ ।
ಗಳನು ಹಾಕಿ ಹರುಷದಿಂದ ನಳಿನಮುಖಿಯರು ॥ ೧ ॥

೧೬. ಮಡಲು ತುಂಬುವುದು.—

ಸಿದ್ಧಿ ವಿನಾಯಕನ ಪಾದ ಪದ್ಮಕ್ಕೆರಗಿ ।
ಮುದ್ದು ಶಾರದೇಯು ಭಜಿಸಿ ಸದ್ಗುರುವಿಗೆ ವಂದಿಸಿ ।
ಮುಕ್ತಿ ಕಾಂತೆಯು ಮಡಿಲ ತುಂಬುವ ಪದನ ।
ಪದ್ಧತಿಯ-ನು-ಕೇಳಿ ಜನರೆಲ್ಲ ॥ ಶೋಭಾನೆ ॥

೧೭. ಎಣ್ಣೆಯೊತ್ತುವುದು.—

ಎಣ್ಣೆಯ ನೊತ್ತಿದರು । ಯದು ಕುಲ ತಿಲಕಗೆ ॥ ಪ ॥
ದಶರಥ ಸುತನಿಗೆ । ಧರ್ಮ ಪರಿಪಾಲನಿಗೆ ।
ನಿರ್ಮಲ ರೂಪ ಶ್ರೀ । ರಾಮಚಂದ್ರಗೆ ॥ ಶೋಭಾನೆ ॥ ॥ ೧ ॥

೧೮. ಆರತಿಯೆತ್ತುವುದು.—

ಮಧುರೇಲಿ ಪುಟ್ಟಿ ಪಳ್ಳಿಗೆ ನಡೆತಂದು ।
ಒದೆದು ಪೂತನಿಯ ಅಸುವನೆ ಪೀರಿ ಕೊಂದೆ ।
ಮುದದಿಂದಲಸುರರ ಶಿರವ ಚೆಂಡಾಡಿ ।
ಅವನ ಶಿರವ ಚೆಂಡಾಡಿ ।
ಚದುರಿಂದ ಗೋವಕ್ಕಳೊಡನಾಡಿ ಬೆಳೆದ ।
ಹದವರಿತಂಘ್ರಿಯ ಪದುಳದಿ ನೆನೆವರ ।
ಹೃದಯದಿ ನೆಲಸಿದ ಬುಧ ಜನ ಪ್ರಿಯನಿಗೆ ।
ಪದುಮಾದಾರಾತೀಯ ಬೆ-ಳ-ಗೀ-ರೆ ॥ ಶೋಭಾನೆ ॥

## (೨) ಆಶೀರ್ವಾದ

೧೯. ಲೇಸಾಗಿ ಜನನಿ ಬಸುರಲಿ ಬಂದು । ಸಾಸೀರ ಬಾಲ ತೊಡಿಗೆನೆ ತೊಟ್ಟು ।
ದೇಶವನಾಳುವ ಪತಿಯ ಕೈ ಹಿಡಿದು ಹೊಸ ಕೂಸು ತಂಗಮ್ಮ ।
ನೀ ಸುಖಿಯಾಗಿರು ಎಂದು ಅಹಲ್ಯಾ ದೇವಿ ಹರಸೀದಳು ॥ ೧ ॥

ಒಡನೆ ಹುಟ್ಟಿದವರ ಒಡನಾಡು । ನೀ । ಹೊಕ್ಕ ಮನೆಗೆ ಹೆಸರನೆ ನಡೆಸು ।
ಹುಟ್ಟಿದ ಮನೆಗೆ ಮಾಣಿಕ್ಯವಾಗು । ಅಷ್ಟೈಶ್ವರ್ಯವು ಪುತ್ರ ಸಂತಾನವು ।
ಪಡೆದು ಸಾವಿರ ಕಾಲ ಮುತ್ತೈದೆಯಾಗಿ ನೀ ಬಾಳೆಂದು ಹರಸೀದರೂ ।
। ಶೋಭಾನೆ ॥ ॥ ೨ ॥

## (೩) ವಾರದ ಹಾಡುಗಳು

ಒಂದೊಂದು ವಾರಕ್ಕೆ ಒಂದೊಂದು ಹಾಡು ಇದೆ. ಆದರೂ, ವ್ಯಾಪ್ತಿಯ ದೃಷ್ಟಿಯಿಂದ ಮಂಗಳ ಗೌರಿಯ ಹಾಡು ಹೆಚ್ಚೆಂದು ಅದನ್ನೇ ಇಲ್ಲಿ ಉದಾಹರಣೆಯಾಗಿ ಕೊಡುವೆವು. ಇದು ಒಂದು ವ್ರತದ ಕಥೆ. ವಾರದ ಹಾಡುಗಳೆಲ್ಲ ಅಷ್ಟೇ.

೨೮. ಪರಮ ಸಂತೋಷದಲಿ ಪತಿಯ ಪಾದಕ್ಕೆರಗಿ । ವರದ ಗಣಪತಿಗೆ ವಂದನೆಯ ಮಾಡಿ ॥
ಹರನರಸಿ ಮಂಗಳಾ ಗೌರಿ ದೇವಿಯ ಕಥೆಯ । ಒರೆವೆ ಬಲ್ಲಂಥ ಸಜ್ಜನರು ಕೇಳಿ ॥ ೧ ॥

ಜೂಜಾಡಿ ಪಾಂಡವರು ವನಕ್ಕೆ ಹೋದಾಗ, ಅವರನ್ನು ನೋಡಲು ಕೃಷ್ಣನು ಅಲ್ಲಿಗೆ ಹೋದನು. ಅವರಿಗೆ ಮತ್ತೆ ರಾಜ್ಯ ಲಾಭವಾಗಲೆಂದು ಈ ವ್ರತವನ್ನು ಕೃಷ್ಣನು ಅವರಿಗೆ ಉಪದೇಶಿಸಿದನು. ಅವರು—

ಯಾರು ಮಾಡಿದರು ಈ ವ್ರತದ ಮಹಿಮೆಗಳೇನು ।
ಏನು ಫಲವೆಂದು ದ್ರೌಪದಿ ಕೇಳಲು ।
ನಾನು ಹೇಳುವೆ ಕೇಳು ಮುನ್ನ ಕರ್ಣಾಟ ದೇಶದೊಳಗೊಬ್ಬ ಧೊರೆಯಿರುತ್ತಿದ್ದನು ॥ ೭ ॥

ಆ ಅರಸನ ಹೆಂಡತಿ ಕನಕಮಂಜುಳಿಯು ಒಂದು ದಿನ ಭಿಕ್ಷುಕ ರೂಪಿನಲ್ಲಿ ಬಂದ ಹರನಿಗೆ ಭಿಕ್ಷವನ್ನು ಇಕ್ಕಲು ಹೋದಳು. ಅವನು ಅದನ್ನು ಚೆಲ್ಲಿ ಹೊರಟು ಹೋದನು. ಮರು ದಿನವೂ ಆ ಭಿಕ್ಷುಕನು ಬಂದನು. ಆ ದಿನವೂ ಹಾಗೆಯೇ ಆಗಲು, ದಂಪತಿಗಳು ಕಾರಣವೇನೆಂದು ವಿಚಾರಿಸಿ, ಅವರ ಅಪುತ್ರತ್ವವೇ ಕಾರಣ ವೆಂದು ತಿಳಿದು ಆ ಪಾಪವನ್ನು ಕಳೆದುಕೊಳ್ಳಲು ಅವನನ್ನೇ ಮರೆಹೊಕ್ಕರು. ಅವನು ಹದಿನಾರು ವರ್ಷ ಮಾತ್ರ ಬದುಕುವ ಮಗನನ್ನು ಕೊಟ್ಟನು.

ಆ ಹುಡುಗನಿಗೆ ಹದಿನಾರನೆಯ ವರ್ಷವು ಸಮೀಪಿಸಲು, ಅವನನ್ನು ಸೋದರ ಮಾವನ ಜೊತೆಯಲ್ಲಿ ಅಪಮೃತ್ಯು ನಿವಾರಣೆಯಾಗಲೆಂದು ಕಾಶಿಗೆ ಕಳುಹಿಸಿದರು. ದಾರಿಯಲ್ಲಿ ಅವರು ಗೊಂಡಾರಣ್ಯಪುರದರಸು ಮಂಡೋರಾಯನ ಉದ್ಯಾನದಲ್ಲಿ ನಿಂತರು. ಅಲ್ಲಿಗೆ ರಾಯನ ಮಗಳು ಸಂಗಾತಿಯರೊಡನೆ ಹೂವಿಗಾಗಿ ಬಂದಳು. ಅವರಲ್ಲಿ—

. . . . . . ಒಬ್ಬಳು ಕೋಪಿಸಿ ।
ರಾಜ್ಯಾಧಿಪತಿಯ ಮಗಳೆಂದು ನೋಡದೆ ಅವಳು ।
ಬಹಳ ಕಷ್ಟದ ಮಾತು ನುಡಿದಳಾಗ । ॥ ೨೩ ॥
ನುಡಿದ ಮಾತನು ಕೇಳಿ ನಗುತ ಮನದಲ್ಲಿ ।
ಮಂಗಳಾ ಗೌರಿಯು ದಯವುಂಟು ಯೆನಗೆ ॥

ಮುಂದ ಮತಿ ನೀ ನುಡಿದರೇನಾಯಿತೇ ಯೆನಗೆ ।
ಬಂದ ಮೃತ್ಯುಗಳ ಜೈಸುವೆನೆಂದಳು ॥ ೨೪ ॥

ಈ ಮಾತುಗಳನ್ನು ಕೇಳಿ ಅರಸುಮಗನು, "ಮಾವಯ್ಯಾ! ದೇವರ ದಯವಿದ್ದರೆ ಈ ಹೆಣ್ಣನ್ನು ಮದುವೆಯಾಗಬೇಕು" ಎಂದನು. ಇವರು ಇನ್ನೂ ಅಲ್ಲಿರುವಾಗಲೇ ಅಲ್ಲಿಗೆ ದಿಬ್ಬಣ ಬಂದಿತು. ಅವರು ಈ ಹುಡುಗನನ್ನು ನೋಡಿ, "ಇವನನ್ನು ಒಂದು ಗಳಿಗೆ ಸಾಲ ಕೊಡುವಿರಾ?" ಎಂದು ಕೇಳಿದರು. ಅದಕ್ಕೆ ಹುಡುಗನ ಮಾವನು ನಕ್ಕು—

ಹೊನ್ನು ಹಣ ಬೆಳ್ಳಿ ಭಂಗಾರ ಎರವುಂಟು ।
ಕನ್ನಿಕೆಗೆ ವರನನು ಎರವ ಕೇಳುವರ ।
ಕಣ್ಣಲ್ಲಿ ಕಾಣೆನು ॥

ಎಂದನು, ಆದರೂ—

ಯಾರ ಪುಣ್ಯದಲಿ ಬದುಕಿದರೆ ಸಾಕು ಮದುವೆ । ಆಗು ಹೋಗು ॥

ಎಂದು ಅಳಿಯನನ್ನು ಕಳುಹಿಸಿದನು. ಮದುವೆಯಾದ ಮೇಲೆ ವಧೂವರರಿಬ್ಬರೂ

ಮಂಗಳಾ ಗೌರಿಯ ಮುಂದೆ । ಸಂಗಾತ ಉಂಡು ಮಲಗಿರೆ ।
* ಚಂದ್ರಶೇಖರರಾಯ ಹಸಿದೆನೆಂದು ಹೆಂಡತಿಯ ಕೂಡೆ ಹೇಳಿದ ವಿನಯದಿ ।

* (ಅರಸು ಮಗ)

ಆಗ ಅವಳು ಬಟ್ಟಲಲ್ಲಿ ಲಡ್ಡಿಗೆ ತುಪ್ಪ ತಂದು ಕೊಟ್ಟಳು. ಊಟ ಮಾಡುವಾಗ ಅವನ ಉಂಗುರವು ಬಟ್ಟಲೊಳಗೆ ಬಿದ್ದಿತು. ಅವಳು ಅದನ್ನು ತೆಗೆದುಕೊಂಡು ದೇವರ ಮನೆಯಲ್ಲಿ ಇಟ್ಟು ಮಲಗಿದಳು.

ಇಬ್ಬರೂ ಮಲಗಿರುವಾಗ ಘಟಸರ್ಪವೊಂದು ಮಂಚದ ಬಳಿಗೆ ಬಂದಿತು. ರಾಜಪುತ್ರಿಯು ಮಂಗಳಗೌರಿಯ ಪ್ರಸಾದವನ್ನು ಅದರ ಮೇಲೆ ತಳೆಯಲು, "ಅದರಾಯುಷ್ಯವು ಕ್ಷೀಣವಾಯಿತು"; ಅವಳ ಗಂಡನು ಚಿರಾಯುವಾದನು. ಅವಳು ಆ ಹಾವನ್ನು ಒಂದು ಕಲಶಕ್ಕೆ ಹಾಕಿ ಮುಚ್ಚಿಟ್ಟು ಮಲಗಿಕೊಂಡಳು. ರಾಜಕುಮಾರನು ಉದಯಕ್ಕೆ ಮುಂಚೆ ಗುಟ್ಟಾಗಿ ಎದ್ದು ಮಾವನೊಡನೆ ಕಾಶಿಗೆ ಹೊರಟು ಹೋದನು.

ಮರುದಿನ ದಿಬ್ಬಣದವರು ತಮ್ಮ ಕೋಷ್ಟ ಹತ್ತಿದ ವರನನ್ನು ತಂದು ಹಸೆಯ ಮೇಲೆ ಕುಳ್ಳಿರಿಸಲು, ರಾಜಪುತ್ರಿಯು ಮೋಸವನ್ನರಿತು ಧಿಕ್ಕರಿಸಿದಳು. ದಿಬ್ಬಣದವರು ನಾರು ಮಾತಾಡದೆ ಹಿಂದಿರುಗಿದರು. ಅವಳು ತಂದೆಯನ್ನೊಪ್ಪಿಸಿ ಒಂದು ಅನ್ನ ಸತ್ರವನ್ನು ಹಾಕಿಸಿ, ಅಲ್ಲಿಗೆ ಊಟಕ್ಕೆ ಬಂದವರಿಗೆಲ್ಲ ತಾನೇ ವೀಳೆಯವನ್ನು ಕೊಡುತ್ತಿದ್ದಳು.

ಇತ್ತ, ಭಾಗೀರಥಿಗೆ ಹೋದವರು ಆರೇಳು ತಿಂಗಳಾದ ಮೇಲೆ ಕಾವಡಿಯೊಡನೆ ತಿರುಗಿದರು. ರಾಜಪುತ್ರಿಯು ಅವರನ್ನು ಗುರುತಿಸಿ ಅರಮನೆಗೆ ಕರೆತಂದಳು. ಎಲ್ಲರೂ ಗುರುತೇನೆಂದು ಕೇಳಲು, ಬಟ್ಟಲಲ್ಲಿ ಬಿದ್ದ ಉಂಗುರವನ್ನು ತಂದು ತೋರಿಸಿ ನಂಬಿಸಿದಳು. ಆ ದಿನದ ರಾತ್ರಿ ಕಚ್ಚಲು ಬಂದಿದ್ದ ಘಟಸರ್ಪವು ಇಟ್ಟಿದ್ದ ಕಲಶದಲ್ಲಿಯೇ

ಕಂಠಮಾಲೆಯಾಗಿದ್ದಿತು. ಅದನ್ನೇ ಕೊರಳಿಗೆ ಹಾಕಿ ಅವಳು ಚಂದ್ರಶೇಖರನನ್ನು ವರಿಸಿದಳು.

ಕಾಲ ಕ್ರಮದಲ್ಲಿ ಮಾವನ ಅಪ್ಪಣೆ ಪಡೆದು ಚಂದ್ರಶೇಖರನು ಹೆಂಡತಿಯೊಡನೆ ಬಂದು ಪುರವನ್ನು ಸೇರಿ ಎಲ್ಲರಿಗೂ ಸಂತೋಷವನ್ನು ಉಂಟುಮಾಡಿದನು. ಅದರಿಂದ—

ಸೃಷ್ಟಿಗೀಶ್ವರನರಸಿ ಗೌರಿಯನೆ ಪೂಜಿಸಿ । ಮುತ್ತೈದೆತನವನು ಪಡೆದಳು ||
ಅಷ್ಟ ಐಶ್ವರ್ಯವನು ಪುತ್ರ ಸಂತಾನವನು । ಕೊಟ್ಟು ರಕ್ಷಿಪಳು ಮಂಗಳಾ ಗೌರಿಯು || ೬ ||

ಈ ಕಥೆಯು ಎಷ್ಟು ಸುಂದರವಾದುದು! ಸದಾರಮೆಯ ನಾಟಕದ ಉತ್ತರ ಭಾಗಕ್ಕೆ ಇದರಿಂದ ಎಷ್ಟು ಉಪಕಾರವಾಗಿದೆ ನೋಡಿರಿ!

### (೪) ಬೀಗರ ಹಾಡುಗಳು

ಬೀಗರ ಹಾಡುಗಳು ಎಲ್ಲರಿಗೂ ಪರಿಚಿತವಾದುವು. ಇವು ಗಂಡುಸರ ಹಾಡುಗಳಲ್ಲಿ ಬರುವ ಜಾತಿಯ ಸವಾಲುಗಳಂತಿದ್ದು ಒಬ್ಬರ ದೋಷವನ್ನು—ವಾಸ್ತವ್ಯವೋ ಕಲ್ಪಿತವೋ ಎಂಬ ಯೋಚನೆಯಿಲ್ಲದೆ ವಾಚಾಮಗೋಚರವಾಗಿ—ಉದ್ಘಾಟಿಸಿ, ಅಲ್ಲ ಸಲ್ಲದ ರೀತಿಯಲ್ಲಿ ನಿಂದಾ ಪ್ರಧಾನವಾಗಿ ಪ್ರವಹಿಸುವವು. ಒಂದು ಮದುವೆಯು ಗೊತ್ತಾದ ಕೂಡಲೆ ವಧೂವರರ ಕಡೆಯವರು ತಮ್ಮ ತಮ್ಮ "ಬೀಗರ ಹಾಡುಗಳ" ಭಂಡಾರವನ್ನು ಹೆಚ್ಚಿಸಿಕೊಳ್ಳುವ ಪ್ರಯತ್ನವು ರಮಾರಮಿಯಾಗಿ ನಡೆಯುತ್ತಿದ್ದುದು ಸರ್ವರಿಗೂ ವಿದಿತವಾದ ಅಂಶ. ಈಗ ಈ ವಿನೋದವು ಮದುವೆಗಳಲ್ಲಿ—ಊಟ ಮಾಡುವಾಗ ಶ್ಲೋಕ ಹೇಳುವ ಪದ್ಧತಿಯಂತೆ—ಶಿಥಿಲವಾಗುತ್ತಿದೆ.

ಹೊಸದಾಗಿ ಸಂಬಂಧಿಗಳಾದವರು ಸರಸವಾಗಿ ನಗು ನಗುತ್ತ, ಬಯ್ದಾಡುವವರೆಗೂ ಇಳಿದು, ಬಾಂಧವ್ಯವನ್ನು ನಗೆಯ ಸಿಮೆಂಟಿನಿಂದ ಭದ್ರಪಡಿಸಿಕೊಳ್ಳಲೆಂದು ಈ ಸಂಪ್ರದಾಯವು ಬಂದಿತು ಎಂದು ಒಪ್ಪುವುದಾದರೆ, ಅಂತರ್ಧಾನವಾಗದಂತೆ ಇದನ್ನು ಕಾಪಾಡಿಕೊಳ್ಳುವುದು ಒಳ್ಳೆಯದು.

ಇವಕ್ಕೆ ಉದಾಹರಣೆಗಳು ಬೇಕಾಗಿಲ್ಲ.

(ಮುಂದುವರಿಯುವುದು)

---



---

# ಉಪನಿಷತ್ತುಗಳಲ್ಲಿ ಕಾವ್ಯಧ್ವನಿ

ತತ್ತ್ವ ಜ್ಞಾನವನ್ನು ವಿವೇಚಿಸುವದಕ್ಕಾಗಿ ಹೊರಟ ಉಪನಿಷತ್ತುಗಳಲ್ಲಿ ಕಾವ್ಯ ಧ್ವನಿಯು ಎಲ್ಲಿಂದ ಬರಬೇಕು? ಏಕೆಂದರೆ, ತಾತ್ತ್ವಿಕರು ರಸ ರಹಿತರಿರುವರು. ಕವಿತಾ ಕನ್ಯೆಯು ಈ ಮಣ್ಣಿನ ಬೊಂಬೆಗಳನ್ನು ವರಣ ಮಾಲೆಯಿಂದ ವರಿಸಲು ಹೊರಡಬಹುದೆ? ಈ 'ವೇದಾಭ್ಯಾಸ ಜಡ'ರ ಸಮೀಪಕ್ಕೆ ಕವಿತಾ ರಮಣಿಯು ತನ್ನ ಭ್ರೂ ವಿಲಾಸದಿಂದ, ಕಡೆಗಣ್ಣಿನ ಸೊಬಗಿನಿಂದ, ಮಂದ ಹಾಸವನ್ನು ಬೀರುತ್ತ ಸಂಚರಿಸಬಹುದೆ? ಈ 'ವಿಷಯ ವ್ಯಾವೃತ್ತ ಕೌತೂಹಲಿ' ಗಳ ಹತ್ತಿರ ಕವಿತಾ ಕಾಂತೆಯು ಕಂಕಣಗಳ ಝೇಂಕಾರವೆತ್ತಣಿಂದ ಕೇಳಿಸಬೇಕು? ಜಟಾ ವಲ್ಕಲ ಧಾರಿಗಳಾದ ಋಷಿಗಳ ಬಳಿಯಲ್ಲಿ ಈ ಒನಪಿನ ಒಯ್ಯಾರಿಯು ಏತಕ್ಕೆ ಸುಳಿದಾಳು? ಬ್ರಹ್ಮ ಬ್ರಹ್ಮವೆಂದು ಕುಣಿದಾಡುವ ಹುಚ್ಚರ ಹತ್ತಿರ ಏತಕ್ಕೆ ಈ ಕವಿತಾ ನಟಿಯು ತನ್ನ ನಟನವನ್ನು ತೋರಿಸಬೇಕು? ಆದುದರಿಂದ, ಈ ವೃದ್ಧ ಋಷಿಗಳ ಜೀರ್ಣ ಶೀರ್ಣ ವಾಣಿಯಲ್ಲಿ ಕಾವ್ಯ ಧ್ವನಿಯನ್ನು ಕೇಳಬಯಸುವದು, ಮೂಕರಿಂದ ಸಂಗೀತವನ್ನು ಕೇಳಬಯಸಿದಂತೆ: ಏಕೆಂದರೆ ಈ ಋಷಿಗಳೂ ಒಂದು ದೃಷ್ಟಿಯಿಂದ ಮೂಕರೇ. ಬ್ರಹ್ಮವು ಹೇಗಿರುವದೆಂದು ಕೇಳಿದರೆ, "ಅನಿರ್ವಚನೀಯ" ಎನ್ನುವರು; "ಗುರೋಸ್ತು ಮೌನಂ ವ್ಯಾಖ್ಯಾನಂ" ಎನ್ನುವರು. ಎಂದ ಬಳಿಕ, ಇವರ ವಾಣಿಯಲ್ಲಿ ಕಾವ್ಯ ವಾಣಿಯನ್ನು ಹುಡುಕುವದು ಮರು ಭೂಮಿಯಲ್ಲಿ ಕಾಂತ ಪ್ರಭಾ ಕಮಲವನ್ನು ಹುಡುಕಿದಂತೆ.

ಹೀಗಾದ ಬಳಿಕ, ನಾವು ಉತ್ಕೃಷ್ಟ ಕಾವ್ಯ ಧ್ವನಿಯನ್ನು ಎಲ್ಲಿ ಕೇಳಬೇಕು? ಉತ್ತಮ ಕಾವ್ಯವು ಯಾವನಿಂದ ಹೊರಡುವದು? "ನಾನೃಷಿಃ ಕುರುತೇ ಕಾವ್ಯಂ": ಋಷಿಯಲ್ಲದವನಿಗೆ ಉತ್ತಮ ಕಾವ್ಯವು ಎಂದಾದರೂ ಸಿದ್ಧಿಸುವದೇ? ಎನ್ನುವುದುಂಟು. ಈ ವಚನದಲ್ಲಿ ಸತ್ಯಾಂಶವಿಲ್ಲದಿಲ್ಲ: ಲೌಕಿಕ ಪ್ರಪಂಚದಿಂದ ಒಂದು ಉತ್ತಮ ಭೂಮಿಕೆಯಲ್ಲಿ ಬಂದಾಗಲೇ, ಎಂದರೆ ಸಮಾಧಿಯಂತಹ ಒಂದು ಅವಸ್ಥೆಯನ್ನು ಹೊಂದಿದಾಗಲೇ, ಕವಿಯ ಮುಖದಿಂದ ಉತ್ಕೃಷ್ಟ ಕಾವ್ಯ ನಿರ್ಝರವು ಹೊರಡುವದು. ಇದು ಎಲ್ಲರಿಗೂ ಒಪ್ಪಿಗೆಯಾದ ವಿಷಯ. ಎಂದ ಬಳಿಕ, ಲೌಕಿಕ ಕವಿಯು ಅಂತಹ ಅವಸ್ಥೆಯನ್ನು ಮುಟ್ಟಿದಾಗ, ಅರ್ಥಾತ್, ಅವನು ಋಷಿತ್ವದ ಬಹ್ವಂಶವನ್ನು ಮುಟ್ಟಿದಾಗ, ಉತ್ತಮ ಕಾವ್ಯದ ಜನಕತ್ವವು ಅವನಿಗೊದಗುವದು. ಒಂದು ವೇಳೆ ಇಂತಹ ಸಮಾಧಿ ಸ್ಥಿತಿಯು ಕೆಲ ಕಾಲ ಅವನಲ್ಲುಳಿಯುವದು. ಎಂದ ಬಳಿಕ, ಕವಿಯು ಋಷಿ ಧರ್ಮವನ್ನು ಮುಟ್ಟುವನೆಂಬಂತಾಯಿತು. ಬಂಗಾಲಿ ಕವಿಯಾದ ರಾಮ ಪ್ರಸಾದನ ಬಗ್ಗೆ ಹೀಗೆಯೇ ಕಥೆಯನ್ನು ಹೇಳುತ್ತಾರೆ: 'ಅವನು ಕಾಲಿಯ ಧ್ಯಾನವನ್ನು ಮಾಡುತ್ತ ಮಾಡುತ್ತ ಸಮಾಧಿಯನ್ನು ಹೊಂದುವನು. ಕೆಲ ಕಾಲ

ಸಮಾಧಿಯಲ್ಲಿ ಕುಳಿತು ಬಳಿಕ ಜಾಗೃತನಾಗುವನು. ಈ ಪರಮಾನಂದದ ಸ್ಥಿತಿಯಲ್ಲಿಯೇ ಅವನಿಂದ ಅನೇಕಾನೇಕ ಅಮೃತ ನಿಷ್ಯಂದಿನಿಯಾದ ಗೀತಿಕೆಗಳು ಹೊರಹೊರಡುವವು.' ಇಂತಹ ಕತೆಗಳನ್ನೆಲ್ಲ ಕೇಳಿದರೆ, ಓದಿದರೆ, ಕವಿಗಳಿಗೂ ಋಷಿಗಳಿಗೂ ಅಂತಹ ಜನ್ಮ ಶತ್ರುತ್ವವೇನೂ ಇಲ್ಲವೆಂಬಂತಾಯಿತು. ಇದು ಹೊರಗಣ ದೃಷ್ಟಿ. ಕನಕ ಕಾಂತೆಯರನ್ನು ಬಣ್ಣಿಸುವ ಕವಿಗಳಿಗೂ, ಅವನ್ನು ಧಿಕ್ಕರಿಸಿದ ಋಷಿಗಳಿಗೂ ವಿರೋಧವಿರಬೇಕೆಂದು ಕವಿಯು ಕನಕ ಕಾಂತೆಯರನ್ನೇ ಬಣ್ಣಿಸಲಿ. ಆದರೆ ಒಳಗಣ್ಣಿನಿಂದ ಅವನ ಸೌಂದರ್ಯೋಪಾಸಕ ಶಕ್ತಿಯನ್ನು ನಿರೀಕ್ಷಿಸಿದರೆ, ಅವನಿಗೆ ನಾವು ಋಷಿ ಪದವನ್ನು ಕೊಡಬೇಕಾಗುವದು. ಎಂದ ಬಳಿಕ, ಕವಿಗಳಲ್ಲಿ ಋಷಿ ಧರ್ಮವು ಅಡಕವಾಗಿದ್ದ ಮೇಲೆ ಋಷಿಗಳಲ್ಲಿ ಕವಿ ಧರ್ಮವೇಕೆ ಅಡಕವಾಗಿರಬಾರದು? ಕವಿಯು ಲೌಕಿಕ ಪ್ರಪಂಚವನ್ನು ಬಣ್ಣಿಸಲಿ, ಋಷಿಯು ಅಲೌಕಿಕ ಪ್ರಪಂಚವನ್ನು ಬಣ್ಣಿಸಲಿ; ಕವಿಯ ವಾಣಿಯಲ್ಲಿ ರಸಿಕತೆಯಿರುವಂತೆ ಋಷಿಯ ವಾಣಿಯಲ್ಲಿಯೂ ನಾವು ರಾಸಿಕ್ಯವನ್ನು ಕಾಣಬಹುದಾಗಿದೆ.

ಉಪನಿಷತ್ತುಗಳನ್ನು ಸೂಕ್ಷ್ಮವಾಗಿ ರಾಸಿಕ್ಯ ದೃಷ್ಟಿಯಿಂದ ವಿಲೋಕಿಸಿದರೆ, ಕವಿಯ ವಾಣಿಯು ರಸದ ಆಗರವಾಗಿರುವಂತೆ, ಋಷಿಗಳ ಕೆಲವು ವಚನಗಳಲ್ಲಿ ರಸದ ಖನಿಯನ್ನು ಕಾಣುವೆವು. ಕವಿಯ ವಾಣಿಯಲ್ಲಿ ಉಪಮೆ, ಉತ್ಪ್ರೇಕ್ಷಾದಿಗಳ ಸೌಂದರ್ಯವಿರುವಂತೆ, ಉಪನಿಷದಗಳ ಕೆಲವು ಗೀತಗಳಲ್ಲಿ ಉಪಮೆ, ಉತ್ಪ್ರೇಕ್ಷೆಗಳನ್ನು ನೋಡುವೆವು. ಕವಿಯ ವಾಣಿಯಲ್ಲಿ ಮಾಧುರ್ಯ, ಪ್ರಸಾದ, ಓಜೋಗುಣಗಳಿರುವಂತೆ, ಋಷಿಯ ವಾಣಿಯಲ್ಲಿಯೂ ನಾವು ಈ ಗುಣ ತ್ರಯವನ್ನು (ಕೇವಲ ಸತ್ವ ರಜಸ್ತಮೋ ಗುಣಗಳಲ್ಲ) ಕಾಣುವೆವು. ಕವಿಯ ವಾಣಿಯಂತೆ ಅಲ್ಲಿಯೂ ಶಬ್ದ ಸೌಂದರ್ಯವಿರುವದು, ಅರ್ಥ ಸೌಂದರ್ಯವಿರುವದು.. ಕೇವಲ ಕಾವ್ಯ ವಾಣಿಯನ್ನು ಕೇಳಿದ ಅನಭ್ಯಸ್ತ ಶ್ರವಣಗಳಿಗೆ ಅಲ್ಲಿ ಶಬ್ದ ವೈರೂಪ್ಯವು ತೋರಿದರೂ ವೈದಿಕ ವಾಙ್ಮಯಾಭ್ಯಸ್ತ ಕರ್ಣಗಳಿಗೆ ಅಲ್ಲಿ ಶಬ್ದ ರಾಮಣೀಯಕತೆ ಇಂಪಾಗಿ ಕೇಳಿಸದಿರದು. ಇಷ್ಟೇ ಅಲ್ಲ; ಎಷ್ಟೋ ಲೌಕಿಕ ಕವಿಗಳ ಕಾವ್ಯ ರತ್ನಗಳಿಗೆ ಉಪನಿಷತ್ತುಗಳು ಆಕರವಾಗಿರುವವು; ಎಷ್ಟೋ ಲೌಕಿಕ ಕವಿಗಳು ಉಪನಿಷತ್ತುಗಳಿಂದಲೇ ನವ ಸ್ಫೂರ್ತಿಯನ್ನು ಪಡೆದಿರುವರು.

ಮೊದಲು ನಾವು ಕಠೋಪನಿಷತ್ತನ್ನು ನಿರೀಕ್ಷಿಸುವಾ: ನಚಿಕೇತನು ಕುಮಾರನು; ತನ್ನ ತಂದೆಯು ವಿಶ್ವಜಿದ್ಯಾಗದಲ್ಲಿ, ಹಿಂಡದಿರುವ, ಹಡೆಯದಿರುವ ಬಂಜೆ ಆಕಳುಗಳನ್ನು ಬ್ರಾಹ್ಮಣರಿಗೆ ದಾನಕೊಟ್ಟದ್ದಕ್ಕಾಗಿ ಅತೀವ ವಿಷಾದಪಟ್ಟನು. ಏಕೆಂದರೆ, ಇದರಿಂದ ದಾನ ಕೊಡುವವರು ಆನಂದವಿಲ್ಲದ ಲೋಕಕ್ಕೆ ಹೋಗುತ್ತಾರೆಂದು ಅವನ ತಿಳಿವಳಿಕೆ. ಸರ್ವಸ್ವ ದಕ್ಷಿಣೆಯನ್ನು ಕೊಡಲು ಯೋಗ್ಯವಾದ ಈ ಯಜ್ಞದಲ್ಲಿ ತಾನೇ ದಾನವಾಗಿ ಹೋಗಿ ತನ್ನ ತಂದೆಗೆ ಪುಣ್ಯ ದೊರಕಿಸಿ ಕೊಡಬೇಕೆಂದು ಅವನಿಗೆ ಬುದ್ಧಿ ಹುಟ್ಟಿತು. ಅವನು ತಂದೆಯ ಬಳಿಗೆ ಬಂದು ಕೇಳಿದನು: "ತಂದೆಯೇ! ನನ್ನನ್ನು ಯಾರಿಗೆ ದಾನ ಕೊಡುವೆ?" ಕುಮಾರನ ಪ್ರಶ್ನೆಯು ಅಜ್ಞಾನ ಜನ್ಯವೆಂದು ತಂದೆಯು ಅವನಿಗೆ

ಮೊದಲು ಉತ್ತರವನ್ನೇ ಕೊಡಲಿಲ್ಲ. ನಚಿಕೇತನು ಪುನಃ ಪುನಃ ಪೀಡಿಸಿ ಕೇಳಲು, ತಂದೆಯು ಸಿಟ್ಟಿಗೆದ್ದು ಉತ್ತರಕೊಟ್ಟನು: "ನಿನ್ನನ್ನು ಮೃತ್ಯುವಿಗೆ ಕೊಡುವೆನು".

ನಾವೂ ನೀವೂ ಸಿಟ್ಟಿಗೆದ್ದಾಗ ಮಕ್ಕಳಿಗೆ ನುಡಿಯುವದಿಲ್ಲವೇ ?—"ನಿನ್ನನ್ನು ಸುಡುಗಾಡಿಗಿಕ್ಕಲಿ" ಇತ್ಯಾದಿ; ಆದರಂತೆ. ಆದರೆ ನಚಿಕೇತನು ಸಾಧಾರಣ ಮಗುವಲ್ಲ: ಆಗಲಿ, ಎಂದನು. ತಂದೆಯ ಕೋಪವು ಹೋಯಿತು. ಪ್ರಯೋಜನ ವೇನು ? "ತಂದೆಯೇ! ನಿನ್ನ ವಚನವನ್ನು ಪಾಲಿಸು; ಮೋಹಗೊಳ್ಳಬೇಡ" ಎಂದು ರಾಮನಂತೆ ತಂದೆಯ ವಚನವನ್ನು ಪಾಲಿಸುವದಕ್ಕಾಗಿ ನಚಿಕೇತನು ಯಮನ ಸನ್ನಿಧಿಗೆ ಹೊರಟನು. ಹೊರಡುವಾಗ, ಅವನ ಮನದ ವಿಚಾರಗಳಿವು:—"ನಾನೇನು ಯಮನ ಬಳಿಗೆ ಇತರರಂತೆ ಸಂಚಿತ ಕರ್ಮದ ಫಲವನ್ನು ಅನುಭವಿಸುವದಕ್ಕಾಗಿ ಹೊರಟಿಲ್ಲ; ಪ್ರಥಮ ಶ್ರೇಣಿಯವರಂತೆ ಹೋಗದಿದ್ದರೂ ಮಧ್ಯಮ ಶ್ರೇಣಿಯವ ರಂತಾದರೂ ಹೋಗುವೆನು; ಕನಿಷ್ಠ ತರಗತಿಯವನಲ್ಲ". ತನ್ನನ್ನು ಯಮನ ಬಳಿಗೆ ಕಳುಹಿಸಲು ಹಿಂಜರಿಯುವ ತಂದೆಗೆ ನುಡಿಯುತ್ತಾನೆ: "ಪೂರ್ವಜರ ಕಡೆಗೆ ನೋಡಿರಿ; ಈಗಿನವರ ಕಡೆಗೆ ನೋಡಿರಿ. ಮನುಷ್ಯನು ಸಸ್ಯದಂತೆ ಸವೆದು ಸಾಯುವನು, ಸಸ್ಯದಂತೆ ಮರಳಿ ಹುಟ್ಟುವನು. ಶೋಕಿಸಲು ಕಾರಣವೇನು ?"

ಸಸ್ಯಮಿವ ಮರ್ತ್ಯಃ ಪಚ್ಯತೇ । ಸಸ್ಯಮಿವಾಜಾಯತೇ ಪುನಃ ।

ಇಲ್ಲಿ ಉಪಮಾಲಂಕಾರದ ಧ್ವನಿಯು ಸ್ಪಷ್ಟವಾಗಿ ಕೇಳಿಸುವದೆಂಬದನ್ನು ನಾವು ಬೇರೆ ಹೇಳಬೇಕಾಗಿಲ್ಲ.

(೧) ಮುಂದೆ, ನಚಿಕೇತನು ಮೃತ್ಯುವಿನ ಬಳಿಗೆ ಹೋದನು. ಆಗ ಮೃತ್ಯುವು ಮನೆಯಲ್ಲಿರಲಿಲ್ಲ. ಅಕಾಲದಲ್ಲಿ ಬಂದ ಇವನನ್ನು ಯಾರೂ ಲಕ್ಷಿಸಲಿಲ್ಲ. ಮೃತ್ಯುವು ಮನೆಗೆ ಬರುವುದಕ್ಕೆ ಮೂರು ದಿನಗಳಾಯಿತು. ಅದುವರೆಗೂ ನಚಿಕೇತನು ಉಪವಾಸ ಕುಳಿತಿದ್ದನು.

(೨) ತನ್ನವರ ಉಪೇಕ್ಷೆಯಿಂದ ಉಪವಾಸ ಬಿದ್ದಿದ್ದ ಬ್ರಾಹ್ಮಣ ಕುಮಾರನನ್ನು ನೋಡಿ ಮೃತ್ಯುವು ಹೆದರಿದನು. ಆ ಪಾಪದ ಪ್ರಾಯಶ್ಚಿತ್ತವಾಗಿ, "ಮೂರು ವರಗಳನ್ನು ಪರಿಗ್ರಹಿಸು" ಎಂದು ನಚಿಕೇತನಿಗೆ ಹೇಳಿದನು.

ನಚಿಕೇತನು ಒಂದರಿಂದ ತಂದೆಯ ಪ್ರಸಾದವನ್ನೂ, ಎರಡನೆಯ ವರದಿಂದ ಅಗ್ನಿಯ ಸಾಕ್ಷಾತ್ಕಾರವನ್ನೂ ಪಡೆದು, ಮೂರನೆಯ ವರದಿಂದ ಆತ್ಮ ಜ್ಞಾನವನ್ನು ಕೇಳಿಕೊಳ್ಳುವನು. ಯಮನು ಎರಡು ವರಗಳನ್ನು ನಿರ್ವಿಶಂಕವಾಗಿ ಕೊಟ್ಟು ಬಿಟ್ಟನು; ಮೂರನೆಯ ವರವನ್ನು ಒಮ್ಮೆಲೆ ಕೊಡಲಿಕ್ಕೆ ಒಪ್ಪಲಿಲ್ಲ. "ಉಳಿದ ಬೇಕಾದ ವರವನ್ನು ಬೇಡಿಕೊ ಕೊಡುವೆನು; ಇದನ್ನು ಕೇಳಬೇಡ" ಎಂದು ನಚಿಕೇತನಿಗೆ ಸಂಪತ್ತಿಯ ಮೋಹವನ್ನು ತೋರಿಸುವನು.

ಯಮನ ಕಾವ್ಯ ಮಯವಾದ ಮೋಹಕ ವಾಕ್ಯಗಳಿವು:—

ಶತಾಯುಷಃ ಪುತ್ರ ಪೌತ್ರಾನ್ ವೃಣೀಷ್ವ । ಬಹೂನ್ ಪಶೂನ್ ಹಸ್ತಿ ಹಿರಣ್ಯಮಶ್ವಾನ್ ।
ಭೂಮೇರ್ಮಹದಾಯತನಂ ವೃಣೀಷ್ವ । ಸ್ವಯಂಚ ಜೀವ ಶರದೋ ಯಾವದಿಚ್ಛಸಿ ॥

ಏತತ್ತುಲ್ಯಂ ಯದಿ ಮನ್ಯಸೇ ವರಂ
ವೃಣೀಷ್ವ ವಿತ್ತಂ ಚಿರ ಜೀವಿಕಾಂಚ ।
ಮಹಾ ಭೂಮೌ ನಚಿಕೇತಸ್ತ್ವಮೇಧಿ
ಕಾಮಾನಾಂತ್ವಾ ಕಾಮ ಭಾಜಂ ಕರೋಮಿ ॥

ಯೇಯೇ ಕಾಮಾ ದುರ್ಲಭಾ ಮರ್ತ್ಯ ಲೋಕೇ
ಸರ್ವಾನ್ ಕಾಮಾಂಶ್ಛಂದತಃ ಪ್ರಾರ್ಥಯಸ್ವ ।
ಇಮಾ ರಾಮಾಸ್ಸರಥಾಸ್ಸತೂರ್ಯಾ
ನಹೀ ದೃಶಾ ಲಂಭನೀಯಾ ಮನುಷ್ಯೈಃ ॥

ಆಭಿರ್ಮತ್ಪ್ರತ್ತಾಭಿಃ ಪರಿಚಾರಯಸ್ವ
ನಚಿಕೇತೊ ಮರಣಂ ಮಾನುಪ್ರಾಕ್ಷೀಃ ॥

("ನಚಿಕೇತಾ! ಅದನ್ನೊಂದು ಮಾತ್ರ ಕೇಳಬೇಡ ನೋಡು. ಉಳಿದದ್ದು ಬೇಕಾದದ್ದನ್ನು ಕೇಳಿಕೊ ಕೊಡುವೆನು. ನಿನಗೇನು ಬೇಕು ಹೇಳು: ಹೊನ್ನು, ಹೆಣ್ಣು, ಏನು ಬೇಕು ಕೇಳಿಕೊ. ನೂರು ವರುಷ ಬಾಳುವ ಮಕ್ಕಳು ಮೊಮ್ಮಕ್ಕಳನ್ನು ಬೇಡಿಕೊ. ಆನೆ ಕುದುರೆಗಳು ಬೇಕೆ? ವಿಶಾಲವಾದ ಭೂಮಿಯ ಆಧಿಪತ್ಯವು ಬೇಕಾಗಿದ್ದರೆ ಹೇಳು. ಸೌವರ್ಣ ನಿಧಿ, ನಿನಗೆ ಬೇಕಾದಷ್ಟು ವರುಷಗಳ ಆಯುಷ್ಯ, ಅಥವಾ ಇದಕ್ಕೆ ಸಮಾನವಾದ ಮತ್ತಾವ ಸಂಪತ್ತನ್ನಾದರೂ ಬೇಡಿಕೊ. ನಿನ್ನನ್ನು ಭೂಮಿಯ ಒಡೆಯನನ್ನಾಗಿ ಮಾಡುವೆನು. ಸರ್ವ ಭೋಗಗಳನ್ನು ಉಪಭೋಗಿಸುವವನನ್ನಾಗಿ ನಿನ್ನನ್ನು ಮಾಡುವೆನು. ಬೇಕಾದ ವರಗಳನ್ನು ಬೇಡಿಕೊ. ಮರ್ತ್ಯ ಲೋಕದಲ್ಲಿ ದುರ್ಲಭವಾಗಿರುವ, ಕಡೆಗಣ್ಣಿನ ಸೊಬಗಿನಿಂದ ಮೆರೆಯುವ ಅನೇಕ ಸುರ ಸುಂದರಿಯರ ಸುಖವನ್ನು ನಿನಗೆ ಸೂರೆ ಮಾಡುವೆನು.")

ಈ ಯಮನ ವಚನಗಳಲ್ಲಿ ಕಾವ್ಯದ ಮೋಹಕ ಶಕ್ತಿಯಿರುವದು. ಒಂದೆರಡು ಸ್ಥಾನದಲ್ಲಿ ಪುನರುಕ್ತಿಯಾದಂತೆ ತೋರಿದರೂ ಅದರಲ್ಲಿ ಅಲಂಕಾರದ ಸೊಬಗು ಇದೆ. ಇಂತಹ ದಿವ್ಯ ವಾಣಿಯನ್ನು ಕಿವಿದೆರೆದು ಆಲಿಸಿದರೆ, ಅದರ ಮಾಧುರ್ಯವು ಅರಿವಾಗದಿರದು.

ಇಂತಹ ದಿವ್ಯ ದಾತಾರನು ಗಂಟುಬಿದ್ದಿದ್ದರೆ ಲೌಕಿಕರಾದ ನಾವೂ ನೀವೂ ಏನೆನ್ನುತ್ತಿದ್ದೆವು? ಹುಚ್ಚರಂತೆ,

ಕಿಂ ನೊ ರಾಜ್ಯೇನ ಗೋವಿಂದ । ಕಿಂ ಭೋಗೈರ್ಜೀವಿತೇನ ವಾ ॥

("ರಾಜ್ಯದಿಂದ ನಮಗೇನಾಗಬೇಕು? ಗೋವಿಂದ! ಈ ಭೋಗಗಳೇಕೆ? ಈ ಜೀವಿತವಾದರೂ ಏಕೆ?")

ಎಂದು ವೈರಾಗ್ಯದ ನುಡಿಗಳನ್ನಾಡುತ್ತಿದ್ದೆವೆ? ಇಲ್ಲ, ಎಂದಿಗೂ ಇಲ್ಲ. ಅವುಗಳಲ್ಲಿ ಅಂತಹ ಮೋಹಕ ಶಕ್ತಿಯೇ ಇರುವದು. "ನಾನ್ಯಃ ಪಂಥಾ ವಿದ್ಯತೇ ಆಯನಾಯ" ಎಂಬಂತೆ, ಅದನ್ನು ತಿಳಿದುಕೊಂಡ ಹೊರತು ಮುಕ್ತಿಗೆ

ಮತ್ತೊಂದು ದಾರಿಯೇ ಇಲ್ಲ. ನಚಿಕೇತನಿಗೆ ಈ ಗುಟ್ಟು ಗೊತ್ತಿತ್ತು. ಅವನು ಯಮನ ಮೋಹಕ ವಾಣಿಯಿಂದ ಮರುಳಾಗಲಿಲ್ಲ. ನಚಿಕೇತನು ರಸಿಕನಿಗೆ ಒಪ್ಪುವ ಉತ್ತರವನ್ನು ಕೊಟ್ಟನು: ಇವೆಲ್ಲ ವಸ್ತುಗಳೂ ಕ್ಷಣಿಕವಾದವುಗಳು; ಇಂದಿದ್ದು ನಾಳೆ ಇಲ್ಲದಂತಾಗುವವು.—

ಇಂದ್ರಿಯಾಣಾಂ ಜರಯಂತಿ ತೇಜಃ
ಅಪಿ ಸರ್ವಂ ಜೀವಿತಮಲ್ಪಮೇವ
ತವೈವ ವಾಹಾಸ್ತವ ನೃತ್ಯ ಗೀತೆ ॥

("ಭೋಗಾರ್ಹ ವಸ್ತುಗಳೆಲ್ಲ ಇಂದ್ರಿಯ ತೇಜಸ್ಸನ್ನು ಕಳೆಗುಂದಿಸುವವು. ಬಾಳುವೆ ಮುಗಿದ ಬಳಿಕ ಇವೆಲ್ಲವೂ ನಿನ್ನವೇ.")

ಸತ್ಯಂ ಮನೋರಮಾ ರಾಮಾಃ । ಸತ್ಯಂ ರಮ್ಯಾ ವಿಭೂತಯಃ ।
ಕಿಂತು ಮತ್ತಾಂಗನಾಪಾಂಗ । ಭಂಗ ಲೋಲಂ ಹಿ ಜೀವಿತಂ ॥

("ಸುಂದರಿಯರು ಮನೋಹಾರಿಣಿಯರು ನಿಜ; ಐಶ್ವರ್ಯಗಳೂ ರಮ್ಯವಾದವು ನಿಜ. ಆದರೇನು? ಈ ಮಾನವನ ಬಾಳುವೆಯು ತರುಣಿಯರ ಕಟಾಕ್ಷದಂತೆ ಚಂಚಲ ವಾಗಿರುವುದಲ್ಲಾ!")

ಎಂಬ ಕವಿಯ ವಾಣಿಯಲ್ಲಿರುವ ಮಾಧುರ್ಯವೂ, "ಸರ್ವಂ ಯಸ್ಯ ವಶಾದಗಾತ್ ಸ್ಮೃತಿ ಪಥಂ ಕಾಲಾಯ ತಸ್ಮೈ ನಮಃ" ಎಂಬ ಕವಿ ವಚನದಲ್ಲಿರುವ ಹೃದ್ಯತೆಯೂ ಮೇಲೆ ಹೇಳಿದ ನಚಿಕೇತನ ಉತ್ತರದಲ್ಲಿ ಇಲ್ಲವೆಂದು ಹೇಳುವರಾರು?

ನಚಿಕೇತನ ಶ್ರದ್ಧೆಯಿಂದ, ನಿಷ್ಠೆಯಿಂದ ಸಂತುಷ್ಟನಾದ ಯಮನು ಅವನಿಗೆ ಬೇಕಾದ ಪ್ರಶ್ನದ ಉತ್ತರವನ್ನು ಕೊಟ್ಟನು: ಒಮ್ಮೆ ಋಷಿಯ ವಾಣಿಗೆ ಸೆಲೆಯೊಡೆದರೆ ತೀರಿತು; ಅದು ಹೇಗೆ ಅವಿಚ್ಛಿನ್ನ ಧಾರೆಯಾಗಿ ಹರಿಯುವದೆಂಬದನ್ನು ಈ ಯಮನ ಉತ್ತರದಲ್ಲಿ ನೋಡಬೇಕು. ಯಮನು ನಚಿಕೇತನಿಗೆ ಹೇಳುವನು:—

ಅವಿದ್ಯಾಯಾಮಂತರೆ ವರ್ತಮಾನಾಃ
ಸ್ವಯಂ ಧೀರಾಃ ಪಂಡಿತಂ ಮನ್ಯಮಾನಾಃ ।
ದಂದ್ರಮ್ಯಮಾಣಾಃ ಪರಿಯಂತಿ ಮೂಢಾಃ
ಅಂಧೇನೈವ ನೀಯಮಾನಾ ಯಥಾಂಧಾಃ ॥

("ಅವಿದ್ಯೆಯಲ್ಲಿರುವವರು ತಾವೇ ಧೀರರೆಂದೂ ಪಂಡಿತರೆಂದೂ ತಿಳಿದುಕೊಂಡಿರುವರು; ಕುರುಡರ ಬೆನ್ನು ಹತ್ತಿದ ಕುರುಡರಂತೆ ಅಡ್ಡ ಹಾದಿಯಲ್ಲಿ ಸುತ್ತುತ್ತಲಿರುವರು. ಆತ್ಮ ಜ್ಞಾನವಿಲ್ಲದ ಮೂಢರು ಕುರುಡರೇ ಸರಿ.")

ಎಂಥ ಸುಂದರವಾದ ಉಪಮೆ!

ಯಮನು ಮಾಡಿದ ಆತ್ಮ ತತ್ತ್ವದ ವರ್ಣನೆ ಚಿತ್ತಾಕರ್ಷಕವಾಗಿದೆ. ಇದರಲ್ಲಿಯ ಕೆಲವು ಶ್ಲೋಕಗಳೇ ಭಗವದ್ಗೀತೆಯಲ್ಲಿ ಸ್ವಲ್ಪ ಪರಿವರ್ತನೆಯಿಂದ ಉದ್ಧರಿಸಲ್ಪಟ್ಟಿರುವವು.

ಅಣೋರಣೀಯಾನ್ ಮಹಿತೋ ಮಹೀಯಾನ್.
ಆಸೀನೋ ದೂರಂ ವ್ರಜತಿ ಶಯಾನೋ ಯಾತಿ ಸರ್ವತಃ.

ಎಂಬ ಮಂತ್ರಗಳಲ್ಲಿ ಆತ್ಮನ ವಿಲಕ್ಷಣ ಧರ್ಮಗಳು ಬಣ್ಣಿಸಲ್ಪಟ್ಟಿವೆ.

ನಾಯಮಾತ್ಮಾ ಪ್ರವಚನೇನಲಭ್ಯೋ ನಮೇಧಯಾ ನ ಬಹುನಾ ಶ್ರುತೇನ ।
ಯಮೇವೈಷ ವೃಣುತೇ ತೇನಲಭ್ಯಃ ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್ ॥

("ಪ್ರವಚನಾದಿಗಳಿಂದ ಮಾತ್ರ ಆತ್ಮಜ್ಞಾನವುಂಟಾಗುವದಿಲ್ಲ; ವಿಪುಲ ಪಾಂಡಿತ್ಯದಿಂದ ಇದು ಲಬ್ಧವಾಗುವದಿಲ್ಲ ; ಯಾವನ ಮೇಲೆ ಆತ್ಮದೇವತೆಯು ಪ್ರಸಾದವನ್ನು ಮಾಡುವಳೋ ಅವನನ್ನೇ ಅವಳು ವರಿಸುವಳು. ಚಿತ್ತ ಪ್ರಸನ್ನತೆಯನ್ನು ಪಡೆದವನನ್ನೇ ಆಕೆಯು ವರಿಸುವಳು.")

ಇಂತಹ ಮಾತುಗಳಲ್ಲೆಲ್ಲ ಅಲಂಕಾರಿಕ ಕವಿಯ ವಾಣಿಯ ಮಧುರಧ್ವನಿ ಇರುವದೆಂದು ವಿವರಿಸಿ ಹೇಳಬೇಕಾಗಿಲ್ಲ.

ಆತ್ಮಾನಂ ರಥಿನಂ ವಿದ್ಧಿ । ಶರೀರಂ ರಥಮೇವಚ ।
ಬುದ್ಧಿಂತು ಸಾರಥಿಂ ವಿದ್ಧಿ । ಮನಃ ಪ್ರಗ್ರಹಮೇವಚ ॥

ಇಂದ್ರಿಯಾಣಿ ಹಯಾನಾಹುಃ । ವಿಷಯಾಂಸ್ತೇಷು ಗೋಚರಾನ್ ।
ಆತ್ಮೇಂದ್ರಿಯ ಮನೋ ಯುಕ್ತಂ । ಭೋಕ್ತೇತ್ಯಾಹುರ್ಮನೀಷಿಣಃ ॥

ಯಸ್ತ್ವ ವಿಜ್ಞಾನವಾನ್ ಭವತ್ಯಯುಕ್ತೇನಮನಸಾ ಸದಾ ।
ತಸ್ಯೇಂದ್ರಿಯಾಣ್ಯವಶ್ಯಾನಿ । ದುಷ್ಟಾಶ್ವಾ ಇವ ಸಾರಥೇಃ ॥

(" ಆತ್ಮನನ್ನು ರಥಿಕನೆಂದೂ ದೇಹವನ್ನು ರಥವೆಂದೂ ಬುದ್ಧಿಯನ್ನು ಸಾರಥಿಯೆಂದೂ ಮನಸ್ಸನ್ನು ಹಗ್ಗವೆಂದೂ ತಿಳಿ. ಇಂದ್ರಿಯಗಳನ್ನು ವಿಷಯಗಳಲ್ಲಿ ಅಲೆಯುವ ಕುದುರೆಗಳೆಂದು ತಿಳಿ. ತಿಳಿದವರು ಇಂದ್ರಿಯ ಮನೋ ಯುಕ್ತನಾದ ಆತ್ಮನನ್ನು 'ಭೋಕ್ತಾ' ಎನ್ನುವರು. ಯಾವನು ಮನಸ್ಸಿನೊಡನೆ ಸೇರಿ ವಿಜ್ಞಾನಿಯಾಗುವುದಿಲ್ಲವೋ ಅವನ ಇಂದ್ರಿಯಗಳು ಸಾರಥಿಯ ವಶಕ್ಕೆ ಬಂದ ದುಷ್ಟಾಶ್ವಗಳಂತಿರುವವು.")

ಇತ್ಯಾದಿಗಳಲ್ಲಿರುವ ರೂಪಕ ಉಪಮೆಗಳು ರಸಿಕರ ಮನೋರಂಜನೆಯನ್ನುಂಟುಮಾಡುವದರಲ್ಲಿ ಸಂದೇಹವಿಲ್ಲ.

ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ ।
ದುರ್ಗಂ ಪಥಸ್ತತ್ಕವಯೋ ವದಂತಿ ॥

("ಆತ್ಮಜ್ಞಾನದ ದಾರಿಯು ಕತ್ತಿಯ ಅಲಗಿನ ಮೇಲೆ ನಡೆದಂತೆ ಕಷ್ಟತರವಾಗಿರುವುದು.")

ಮುಂಡಕೋಪನಿಷತ್ತಿನಲ್ಲಿರುವ ಬ್ರಹ್ಮವಶೀಕರಣೋಪಾಯವನ್ನು ಕೇಳಿರಿ. ಕಾವ್ಯ ಸರಣಿಯಲ್ಲಿಯೇ ಋಷಿಯು ಹೇಳಿರುವನು.—

ಧನುರ್ಗೃಹೀತ್ವೌಪನಿಷದಂ ಮಹಾಸ್ತ್ರಂ
ಶರಂ ಹ್ಯುಪಾಸಾ ನಿಶಿತಂ ಸಂದಧೀಯತ ।

ಆಯಮ್ಯ ತದ್ಭಾವ ಗತೇನ ಚೇತಸಾ
ಲಕ್ಷ್ಯಂ ತದೇವಾಕ್ಷರಂ ಸೋಮ್ಯ ವಿದ್ಧಿ ॥

ಪ್ರಣವೋ ಧನುಃ ಶರೋಹ್ಯಾತ್ಮಾ । ಬ್ರಹ್ಮ ತಲ್ಲಕ್ಷ್ಯಮುಚ್ಯತೇ ॥
ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ॥

("ಮಹಾಸ್ತ್ರದಂತಿರುವ ಉಪನಿಷತ್ತೆಂಬ ಧನುಸ್ಸನ್ನು ತೆಗೆದುಕೊಂಡು, ಉಪಾಸನೆಯಿಂದ ತೀಕ್ಷ್ಣವಾದ ಬಾಣವನ್ನು ಹಚ್ಚಿ, ಬ್ರಹ್ಮನನ್ನೇ ಏಕತಾನವಾಗಿ ಲಕ್ಷಿಸಿದ ಚಿತ್ತದಿಂದ ಗುರಿಯಿಟ್ಟು ಹೊಡೆ. ಓಂಕಾರವೇ ಧನುಸ್ಸು, ಆತ್ಮನೇ ಬಾಣ, ಬ್ರಹ್ಮವೇ ಗುರಿ. ಏಕಾಗ್ರ ಚಿತ್ತದಿಂದ ಹೊಡೆಯುವವನು, ಶರವು ಲಕ್ಷ್ಯಮಯ ವಾಗುವಂತೆ, ಬ್ರಹ್ಮಮಯನಾಗುವನು.")

ಇದೇ ಉಪನಿಷತ್ತಿನಲ್ಲಿ ಒಂದು ಗಿಡದಲ್ಲಿರುವ ಎರಡು ಹಕ್ಕಿಗಳ ಮಿಷದಿಂದ ಆತ್ಮ ಪರಮಾತ್ಮಕ ಕಥೆಯನ್ನು ಹೇಳಿದೆ. ಉಪಮೇಯ ಪದಗಳನ್ನು ಹೇಳದೆ ಉಪಮಾನ ಪದಗಳಿಂದಲೇ ಕಾರ್ಯವನ್ನು ಸಾಗಿಸುವ ಅತಿಶಯೋಕ್ತ್ಯಲಂಕಾರದ ಒಂದು ರೀತಿಯನ್ನು ಇದು ನೆನಪಿಗೆ ತಂದುಕೊಡುವದು.

ತದೇತತ್ಸತ್ಯಂ ಯಥಾ ಸುದೀಪ್ತಾತ್ಪಾವಕಾದ್ವಿಸ್ಫುಲಿಂಗಾಃ
ಸಹಸ್ರಶಃ ಪ್ರಭವಂತೇ ಸರೂಪಾಃ ।
ತಥಾಕ್ಷರಾದ್ವಿವಿಧಾಃ ಸೋಮ್ಯ ಭಾವಾಃ
ಪ್ರಜಾಯಂತೆ ತತ್ರ ಚೈವಾಪಿಯಂತಿ ॥

("ತೇಜಸ್ವಿಯಾದ ಅಗ್ನಿಯಿಂದ ಅನೇಕ ತತ್ಸ್ವರೂಪವಾದ ಸಾವಿರಾರು ಕಿಡಿಗಳು ಉತ್ಪನ್ನವಾಗುವಂತೆ, ಆ ಅಕ್ಷರ ಬ್ರಹ್ಮನಿಂದ ನಾನಾ ಜೀವಗಳು ಉತ್ಪನ್ನ ವಾಗಿ ಅಲ್ಲಿಯೇ ಲಯವನ್ನು ಪಡೆಯುವವು.")

ಇದು ಎಂತಹ ಸುಂದರವಾದ ಉಪಮೆ!

ನ ತತ್ರ ಸೂರ್ಯೋ ಭಾತಿ ನ ಚಂದ್ರ ತಾರಕಂ । ನೇಮಾ ವಿದ್ಯುತೋ ಭಾಂತಿ ಕುತೋಯಮಗ್ನಿಃ ।
ತಮೇವ ಭಾಂತಮನುಭಾತಿ ಸರ್ವಂ । ತಸ್ಯ ಭಾಸಾ ಸರ್ವಮಿದಂ ವಿಭಾತಿ ॥

ಮುಂಡಕೋಪನಿಷತ್ತಿನೊಳಗಿನ ಇಂತಹ ಕೆಲವು ಗೀತೆಗಳು ಭಾವ ಗೀತೆ ಗಳೆಂದು ಹೇಳಬಹುದು.

ಬ್ರಹ್ಮಾನಂದದಲ್ಲಿ ಮಗ್ನನಾದ ಋಷಿಯ ಆನಂದ ಗೀತದ ಮಾದರಿಯನ್ನು ನೋಡಬೇಕಾದರೆ ಕೆಳಗಿನ ತೈತ್ತಿರೀಯೋಪನಿಷತ್ತಿನಲ್ಲಿರುವ ಗೀತವು ಒಳ್ಳೆಯ ದೃಷ್ಟಾಂತವಾಗಿರುವದು :—

ಸಯ ಏವಂ ವಿತ್ ಅಸ್ಮಾಲ್ಲೋಕಾತ್ ಪ್ರೇತ್ಯ ।
ಏತಮನ್ನಮಯಮಾತ್ಮಾನಮುಪಸಂಕ್ರಮ್ಯ ।
ಏತಂ ಪ್ರಾಣಮಯಮಾತ್ಮಾನ ಮುಪಸಂಕ್ರಮ್ಯ ।
ಏತಂ ಮನೋಮಯಮಾತ್ಮಾನಮುಪಸಂಕ್ರಮ್ಯ ।

ಏತಂ ವಿಜ್ಞಾನಮಯಮಾತ್ಮಾನಮುಪಸಂಕ್ರಮ್ಯ ।
ಏತಮಾನಂದಮಯಮಾತ್ಮಾನಮುಪಸಂಕ್ರಮ್ಯ ॥
ಇಮಾಲ್ಲೋಕಾನ್ಕಾಮಾನ್ನೀಕಾಮ್ಯರೂಪ್ಯನುಸಂಚರ್ರ ।
ಏತತ್ಸಾಮಗಾಯನ್ನಾಸ್ತೇ ಹಾ ೩ ವು ಹಾ ೩ ವು ಹಾ ೩ ವು ।
ಅಹಮನ್ನಮಹಮನ್ನಮಹಮನ್ನಮ್ ।
ಅಹಮನ್ನಾದೋ ೩ ಹಮನ್ನಾದೋ ೩ ಹಮನ್ನಾದಃ ।
ಅಹಂ ಶ್ಲೋಕಕೃದಹಂ ಶ್ಲೋಕಕೃದಹಂ ಶ್ಲೋಕಕೃತ್ ।
ಅಹಮಸ್ಮಿ ಪ್ರಥಮಜಾ ಋತಾ ೩ ಸ್ಯ ।
ಪೂರ್ವಂ ದೇವೇಭ್ಯೋಽಮೃತಸ್ಯನಾ ೩ ಭಾಯಿ ।
ಯೋಮಾ ದದಾತಿ ಸ ಇದೇವಮಾ ೩ ವಾಃ ।
ಅಹಮನ್ನಮನ್ನ ಮದಂತಮಾ ೩ ದ್ಮಿ ।
ಅಹಂ ವಿಶ್ವಂ ಭುವನಮಭ್ಯಭವಾ ೩ ಮ್ ।
ಸುವರ್ನಜ್ಯೋತೀಃ ಯ ಏವಂವೇದ ॥

ಅದ್ವಯಾನಂದವನ್ನು ಅನುಭವಿಸಿದ ಬ್ರಹ್ಮಾನುಭವಿಯ ಗೀತವಿದು. ಈ ಲೋಕದ ಬಂಧನವನ್ನು ಹರಿದೊಗೆದು, ಅನ್ನಮಯ ಕೋಶವನ್ನು ದಾಟಿ, ಪ್ರಾಣ ಮಯ ಕೋಶವನ್ನು ಮಿಕ್ಕಿ, ಮನೋಮಯ ಕೋಶವನ್ನುಲ್ಲಂಘಿಸಿ, ವಿಜ್ಞಾನ ಮಯ ಕೋಶವನ್ನು ಬದಿಗಿಕ್ಕಿ, ಆನಂದಮಯ ಕೋಶವನ್ನು ಮೀರಿ ನಿಂತು ಸಾಮ ಗಾಯನವನ್ನು ಮಾಡುತ್ತಾನೆ.—

("ಏನಾನಂದ! ಏನಾನಂದ!! ಏನಾನಂದ!!! ನಾನೇ ಅನ್ನವು! ನಾನೇ ಅನ್ನವು!! ನಾನೇ ಅನ್ನವು!!! ಅನ್ನವನ್ನುಣ್ಣುವವನೂ ನಾನೆ; ನಾನೂ ನಾನೇ ; ಇವೆರಡನ್ನು (ಜಡ ಚೈತನ್ಯಗಳನ್ನು) ಕೂಡಿಸುವವನೂ ನಾನೇ. ಜ್ಞಾತಾರನೂ ಜ್ಞೇಯನೂ ನಾನೇ. ಧರ್ಮ ಪುತ್ರನು ನಾನು; ಪುರಾಣ ಪುರುಷನು ನಾನು; ಅಮೃತ ಗರ್ಭನು ನಾನು; ಸರ್ವ ಭಕ್ಷಕ ಕಾಲನು ನಾನು; ಸುವರ್ಣ ತೇಜಸ್ಸನ್ನು ಬ್ರಹ್ಮಾಂಡದಲ್ಲೆಲ್ಲ ಹಚ್ಚಿಸಿ ಮೆರೆವವನು ನಾನು.")

ಇಂತಹ ಆನಂದ ಗೀತಗಳಲ್ಲಿ ಅದೆಂತಹ ಮಧುರ ಭಾವನೆ ತುಂಬಿಕೊಂಡಿದೆ ನೋಡಿರಿ!

ಔಪನಿಷದ ಕವಿಗಳ ವ್ಯಾಜ ನಿಂದೆಯ ಸೌಂದರ್ಯವೊಂದು ನಮಗೆ ಛಾಂದೋಗ್ಯೋಪನಿಷತ್ತಿನ ಮೊದಲನೆಯ ಅಧ್ಯಾಯದ ದ್ವಾದಶ ಖಂಡದಲ್ಲಿ ಸಿಕ್ಕುವದು. ವಿಷಯ ವಾಸನೆಯಿಂದಲೇ ಮಂತ್ರಾನುಷ್ಠಾನವನ್ನು ಮಾಡುವವರನ್ನು ಕವಿಯು ಚೆನ್ನಾಗಿ ಹಳಿದಿರುವನು.—

ಅಥಾತಃ ಶೈಬ ಉದ್ಗೀಥಸ್ತದ್ಧ ಬಕೊ ದಾಲ್ಭ್ಯೋ ಗ್ಲಾವೊ ವಾ ಮೈತ್ರೇಯಃ
ಸ್ವಾಧ್ಯಾಯ ಮುದ್ವವ್ರಾಜ ತಸ್ಮೈ ಶ್ವಾಶ್ವೇತಃ ಪ್ರಾದುರ್ಬಭೂವ ತಮನ್ಯೇ ಶ್ವಾನ
ಉಪಾಸಮೇತ್ಯೋಚ್ಚುರನ್ನಂನೊ ಭಗವಾನಾಗಾಯತ್ವಶನಾಯಾಮವಾ ಇತಿ ।

ತಾ॒ಹೋವಾಚೆಹೈವ ಮಾ ಪ್ರಾತರುಪಸಮಿಾಯಾತೇತಿತದ್ಧ ಬಕೊ ದಾಲ್ಭ್ಯೋ
ಗ್ಲಾವೊ ವಾ ಮೈತ್ರೇಯಃ ಪ್ರತಿಪಾಲಯಾಂ ಚಕಾರ ।
ತೇಹ ಯಥೈ ವೇದಂ ಬಹಿಷ್ಪವಮಾನೇನಸ್ತೋಷ್ಯಮಾಣಾಃ ಸಂರಬ್ಧಾಃ
ಸರ್ಪಂತೀತ್ಯೇವಮಾಸಸೃಪುಸ್ತೆ ಹ ಸಮುಪವಿಶ್ಯ ಹಿಂ ಚಕ್ರುಃ ॥
ಓ ೩ ಮದಾ ೩ ಮೋಂ ೩ ಪಿಬಾ ೩ ಮೋಂ ೩ ದೇವೋ ವರುಣಃ ಪ್ರಜಾಪತಿಃ
ಸವಿತಾ ೨ ನ್ನ ಮಿಹಾ ೨ ಹರದನ್ನಪತೇ ೩ ನ್ನ ಮಿಹಾ ೨ ಹರಾ ೨ ಹರೋ ೩ ಮಿತಿ ॥

(" ಮೈತ್ರೇಯನು ವೇದಾಧ್ಯಯನಕ್ಕೋಸುಗ ಏಕಾಂತ ಸ್ಥಾನಕ್ಕೆ ತೆರಳಿದನು; ಅಲ್ಲಿ ನಿಂತಿರುವ ಒಂದು ಶುಭ್ರ ಶ್ವಾನವನ್ನು ಕಂಡನು. ಆ ನಾಯಿಯ ಹತ್ತಿರ, ಉಳಿದ ಹಲವು ನಾಯಿಗಳು ಬಂದು ಆ ನಾಯಿಗಳ ನಾಯಕನನ್ನು . . . . . . . . 'ನಾವು ಹಸಿದಿದ್ದೇವೆ, ಬಳಲಿದ್ದೇವೆ, ಕಂಗೆಟ್ಟಿದ್ದೇವೆ. ಮಂತ್ರವನ್ನು ಪಠಿಸಿ ನಮಗೆ ಅನ್ನವನ್ನು ದೊರಕಿಸಿ ಕೊಡಬೇಕು' ಎಂದು ಕೇಳಿಕೊಂಡವು. 'ನಾಳೆ ಬೆಳಗ್ಗೆ ನನ್ನ ಬಳಿಗೆ ಬನ್ನಿರಿ' ಎಂದು ಆ ಕುಕ್ಕುರ ನಾಯಕನು ನುಡಿದನು. ಇದನ್ನೆಲ್ಲ ಕಂಡು ಕುತೂಹಲಗೊಂಡ ಆ ದಾಲ್ಭ್ಯ ಗೋತ್ರಜ ಮೈತ್ರೇಯನು ಆ ಶುನಕಗಳು ಹೇಗೆ ಮಂತ್ರವನ್ನು ಪಠಿಸುವವೆಂದು ಬೆಳಗಾಗುವ ವರೆಗೂ ಕಾಯುತ್ತ ಕುಳಿತನು. ಮರು ದಿವಸ ನಸುಕಿನಲ್ಲಿ ನಾಯಿಗಳ ಗುಂಪು ಬಂದಿತು. ಎಲ್ಲ ನಾಯಿಗಳೂ ಕೂಡಿದವು. ಯಜ್ಞದಲ್ಲಿ ಉದ್ಗಾತೃ ಪುರುಷನು ಬಹಿಷ್ಪವಮಾನ ಸ್ತೋತ್ರದಿಂದ (ಒಬ್ಬನ ದೋತರವನ್ನು ಇನ್ನೊಬ್ಬನು ಹಿಡಿದು ಮೆರೆವಣಿಗೆ ಹೊರಟಿರುವ ಪುರೋಹಿತರಂತೆ) ಸ್ತೋತ್ರ ಮಾಡುತ್ತ, ಒಂದರ ಹಿಂದೊಂದು ಪರಿಭ್ರಮಣ ಮಾಡಿದವು. ಬಳಿಕ, ಕೆಳಗೆ ವ್ಯವಸ್ಥಿತವಾಗಿ ಕುಳಿತು ಎಲ್ಲವೂ ಹಿಂಕಾರ (ಬೇಕಾದರೆ, ಭುಂಕಾರವೆನ್ನಿರಿ) ವನ್ನು ಮಾಡಿದವು. ಬಳಿಕ ಮಂತ್ರವನ್ನು ಪಠಿಸಿದವು. " ಓಂ! ನಾವು ಅನ್ನವನ್ನು ತಿನ್ನುವಾ! ಓಂ! ನಾವು ನೀರನ್ನು ಕುಡಿಯುವಾ! ವರುಣ, ಪ್ರಜಾಪತಿ, ಸವಿತಾ—ಈ ದೇವತೆಗಳು ನಮಗೆ ಅನ್ನವನ್ನು ದಯಪಾಲಿಸಲಿ! ದಯಪಾಲಿಸಲಿ!! ದಯಪಾಲಿಸಲಿ!!! ಓಂ!!! ")

ಕೇವಲ ಕಾಮ್ಯ ಕರ್ಮಾಸಕ್ತರನ್ನು ಹೇಗೆ ಈ ಕಥೆಯು ನಿಂದಿಸುತ್ತದೆಂಬದನ್ನು ಬೇರೆ ವಿವರಿಸಿ ಹೇಳಬೇಕಾಗಿಲ್ಲ. ಇಲ್ಲಿ ವ್ಯಾಜ ನಿಂದೆಯ ಸೌಂದರ್ಯವು ಅಚ್ಚಳಿಯದೆ ಕಂಗೊಳಿಸುವದು.

ಭರ್ತೃಹರಿ, ಶಂಕರಾಚಾರ್ಯ ಮೊದಲಾದ ಕವಿಗಳು ಕೆಲವೆಡೆಗಳಲ್ಲಿ ಹಾಡಿದ ನಿರಾಶಾ ವಾದದ ಗೀತಗಳು ಎಲ್ಲರ ಪರಿಚಯದವು. ಮಜ್ಜಾಸ್ಥಿ ಪಿತ್ತ ಕಫ ರಕ್ತ ಮಲಾದಿ ಪೂರ್ಣವು ಸ್ತ್ರೀಯರ ದೇಹ; ಚರ್ಮದಿಂದ ವೇಷ್ಟಿತವಾಗಿದೆ. ಇದಕ್ಕೇಕೆ ಮೋಹ?

ನಾರೀ ಸ್ಥನ ಭರ ನಾಭೀ ದೇಶಂ ದೃಷ್ಟ್ವಾ ಮಾಗಾ ಮೋಹಾವೇಶಂ ।

ಈ ನಿರಾಶಾ ವಾದದ ಸುಂದರ ವಿಚಾರಗಳ ಖನಿಯೇ ಮೈತ್ರ್ಯುಪನಿಷತ್ತಿನಲ್ಲಿರುವದು. ಅಲ್ಲಿ ಬೃಹದ್ರಥ ರಾಜನು ಗುರುಗಳ ಬಳಿಯಲ್ಲಿ ಈ ವಿಚಾರಗಳನ್ನು ಕಾವ್ಯಮಯವಾಗಿ ಉಸುರಿದ್ದಾನೆ.—" ರಕ್ತ ಕಫಾದಿಗಳಿಂದ ಕೂಡಿದ, ದುರ್ಗಂಧಕ್ಕಾಗರ

ವಾದ, ಸತ್ವಹೀನವಾದ ಶರೀರದಿಂದ ಭೋಗ ವಿಲಾಸವನ್ನು ಪಡೆದರೇನು? ಬಿಟ್ಟರೇನು? ಇಷ್ಟರಾದವರು ಹೊರಟುಹೋಗುವರು; ಅನಿಷ್ಟರಾದವರು ಗಂಟುಬೀಳುವರು. ತೃಷ್ಣಾ, ಕ್ಷುಧೆ, ರೋಗ, ಮರಣಗಳಿಂದ ದೇಹವು ಜರ್ಜರಿತವಾಗುವದು. ನೊಣ ನೊರಜುಗಳಂತೆ ಮಾನವನ ಗತಿ'' ಎಂದು ನಿರಾಶಾ ಗೀತವನ್ನು ಪಾಡುತ್ತ, 'ಶುಷ್ಕ ವಾಪಿಯೊಳಗಿನಿಂದ ಮಂಡೂಕವನ್ನು ಮೇಲಕ್ಕೆತ್ತುವಂತೆ, ನನ್ನನ್ನು ಈ ನಿಸ್ಸಾರ ಸಂಸಾರದಿಂದ ಮೇಲಕ್ಕೆ ಉದ್ಧರಿಸಿ' ಎಂದು ಬೇಡಿಕೊಂಡಿರುವನು.

ಆಧುನಿಕ ನವ ಕನ್ನಡ ಕವಿಗಳಿಗೆ ನಮ್ಮದೊಂದು ವಿಜ್ಞಾಪನೆ:—ನವ್ಯಾಕರ್ನಾಟಕದಲ್ಲಿ ಈ ಆಧುನಿಕ ಕವಿಗಳನೇಕರು ಭಾವನೋದ್ದೀಪಕವಾದ ಕವಿತ್ವಗಳನ್ನು ರಚಿಸುವ ಒಲವುಳ್ಳವರಾಗಿರುವರು. ಹಲವು ಕವಿಗಳ ಹೊಸ ಕವಿತೆಗಳು ಎಷ್ಟೋ ಭಾವನೋದ್ದೀಪಕವಾಗಿರುವದೂ ನಿಜ. ಅವರಿಗೋ ಸ್ಫೂರ್ತಿಯು ಬಹುಮಟ್ಟಿಗೆ ಆಂಗ್ಲ ಕವಿಗಳ ಕಾವ್ಯ ಪಠನದಿಂದುಂಟಾಗಿದೆ. ಇದು ಅಭಿನಂದನೀಯವೇ ಸರಿ. ಆದರೆ ಪಾಶ್ಚಾತ್ಯರ ಎಷ್ಟೋ ಭಾವನೆಗಳು ನಮ್ಮ ಭಾರತೀಯರ ಹೃದಯಕ್ಕೆ ನಿಲುಕುವದಿಲ್ಲ. ನಮ್ಮ ಆಧುನಿಕ ಕವಿಗಳು ನಮ್ಮದೇ ಆದ ಪ್ರಾಚೀನ ಔಪನಿಷದ ವಾಙ್ಮಯದ ಅಭ್ಯಾಸವನ್ನು ಮಾಡಿದ್ದಾದರೆ, ಆ ಖನಿಜೋದಕ ಪಾನದಿಂದ ಇನ್ನಿಷ್ಟು ಪುಷ್ಟಿಯುಂಟಾಗಿ ನಮ್ಮ ಭಾರತೀಯರ ಹೃದಯಕ್ಕೆ ತಾಕುವ ಭಾವನೆಗಳುಳ್ಳ ಕವಿತೆಗಳನ್ನು ರಚಿಸಲು ಸಮರ್ಥರಾಗುವರು. ಕಾವ್ಯದ ಮುಖ್ಯೋದ್ದೇಶವು ಆನಂದವನ್ನು ಹುಟ್ಟಿಸುವದೇ ಆಗಿದ್ದರೂ, ತತ್ತ್ವೋಪದೇಶವೂ ನೀತ್ಯುಪದೇಶವೂ ಅದರಲ್ಲಿ ಅಡಕವಾಗಿದ್ದರೆ, ಹಾಲಲ್ಲಿ ಕಲ್ಲುಸಕ್ಕರೆ ಹಾಕಿ ಮರಳಿಸಿಕೊಟ್ಟಂತಾಗುವದು. ಇಂತಹ ತತ್ತ್ವಗಳ ತಿಳಿವಳಿಕೆಯೂ ವಿಶ್ವಕ್ಕೆ ವಂದ್ಯವಾದ ನೀತಿ ತತ್ತ್ವಗಳ ಅರಿವೂ ನಮಗೆ ಔಪನಿಷದ ವಾಙ್ಮಯಾಭ್ಯಾಸದಿಂದ ಉಂಟಾಗುವದೆಂಬುದರಲ್ಲಿ ಸಂದೇಹವಿಲ್ಲ.

ಕೇಶವಶರ್ಮಾ ಗಲಗಲಿ

———

# ಜೈಮಿನಿ ಭಾರತ (ಅಶ್ವಮೇಧಿಕ ಪರ್ವ)

## *ಸಂಸ್ಕೃತ ಜೈಮಿನಿ ಭಾರತದ ಕನ್ನಡದ ಅನುವಾದ

---

### ಮೂವತ್ತಾರನೆಯ ಅಧ್ಯಾಯ

ಅಷ್ಟರಲ್ಲಿ ಕುಶನು ಧನುಷ್ಟಂಕಾರ ಮಾಡುತ್ತ ಬಂದನು. ಶೂರನಾದ ಲವನು ಕತ್ತಿ ಗುರಾಣಿಗಳನ್ನು ಹಿಡಿದು ಯುದ್ಧಕ್ಕೆ ಬಂದನು. ಸೂರ್ಯನು ಸಮುದ್ರ ಮುದ್ರಿತವಾದ ಭೂಮಿಯನ್ನೆಲ್ಲ ತನ್ನ ಕಿರಣಗಳಿಂದ ಬೆಳಗಿ ಅಸ್ತಂಗತನಾದನು. ಅಂಧಕಾರವು ಮುಚ್ಚಿಕೊಳ್ಳಲು, ಪಕ್ಷ ಪ್ರತಿಪಕ್ಷಗಳ ವೀರರನ್ನೊಬ್ಬರೊಬ್ಬರು ತಿಳಿಯಲಾರದೆ ರಣವೀರರೆಲ್ಲರೂ ಒಬ್ಬರನ್ನೊಬ್ಬರು ಹೆಸರುಹಿಡಿದು ಕೂಗುತ್ತಿದ್ದರು. ಮದ ಗಜಗಳು ನುಗ್ಗಿ ಓಡುತ್ತ ತಮ್ಮ ಕಾಲ ತುಳಿತದಿಂದ ಅನೇಕ ರಥಗಳನ್ನು ಪುಡಿ ಪುಡಿ ಮಾಡಿದುವು. ರಥಗಳ ವೇಗದಿಂದ ರಾವುತರು ಕುದುರೆಗಳ ಬೆನ್ನಿನಿಂದ ಬಿದ್ದು ಹೋಗುತ್ತಿದ್ದರು. ಕುದುರೆಗಳ ವೇಗದಿಂದ ಅಶ್ವಾರೋಹಕರೂ ಪದಾತಿಗಳೂ ನೆಲಕ್ಕೆ ಬೀಳುತ್ತಿದ್ದರು. ಆಗ ಲವನು ಕತ್ತಿಯನ್ನು ಝಳಪಿಸುತ್ತ ಮಹಾ ಸೈನ್ಯವನ್ನು ಹೊಕ್ಕು ತಲೆಗೆ ಗುರಾಣಿಯನ್ನು ಮರೆಮಾಡಿಕೊಂಡು, ಖಡ್ಗದಿಂದ ಕುದುರೆಗಳ ಕಾಲನ್ನು ಬೇಗನೆ ಕಡಿದನು; ಹಾಗೆಯೇ ಆನೆಗಳ ಉದ್ದವಾದ ಸೊಂಡಿಲುಗಳನ್ನು ಕತ್ತರಿಸಿದನು. ತನ್ನ ಉದ್ದವಾದ ತೋಳುಗಳ ಆಧಾರದಿಂದ ಆನೆಗಳ ಮೇಲೆ ಹತ್ತಿ, ಕೊಡಲಿಯವನು ಕಟ್ಟಿಗೆಯನ್ನು ಸೀಳುವಂತೆ, ಅವುಗಳ ಕುಂಭಸ್ಥಳಗಳನ್ನು ಸೀಳಿ ಮುಕ್ತಾಫಲಗಳನ್ನು ಹಿಡಿ ಹಿಡಿಯಾಗಿ ತೆಗೆದುಕೊಂಡು ನೆಲಕ್ಕೆರಚಿದನು. ಆನೆಗಳ ದಂತಗಳ ಮೇಲೆ ಹೊಡೆದ ಕತ್ತಿಗಳಿಂದ ಹುಟ್ಟಿದ ಭಯಂಕರವಾದ ಬೆಂಕಿಯ ಕಿಡಿಗಳು ಸೈನಿಕರನ್ನು ಸುಡುತ್ತಿದ್ದುವು.

ಅಷ್ಟರಲ್ಲಿ, ಕ್ರುದ್ಧನಾದ ಕುಶನು ಬಾಣಗಳನ್ನು ಬಿಟ್ಟು, ಶೂರರ ತಲೆಗಳನ್ನೂ ತೋಳ ಬಂದಿಗಳಿಂದಲಂಕೃತವಾಗಿದ್ದ ಬಾಹುಗಳನ್ನೂ ಕತ್ತರಿಸಿ, ಆನೆಗಳ ತಲೆಗಳನ್ನು ಪ್ರತಾಪದಿಂದ ಆಕಾಶಕ್ಕೆ ಹಾರಿಸಿದನು. ಅವು ಆಕಾಶದಲ್ಲಿ ಒಟ್ಟಿಗೆ ಸೇರಿದುವು. ಅವಕ್ಕಿಂತಲೂ ಬೇರೆ ನಕ್ಷತ್ರವು ಹಿಂದೆಯೂ ಇರಲಿಲ್ಲ, ಮುಂದೆಯೂ ಹುಟ್ಟಲಾರದು. ಆದಕಾರಣ, ಹೀಗೆ ಆನೆಗಳ ಸೊಂಡಿಲುಗಳು ಆಕಾಶದಲ್ಲಿ ನಕ್ಷತ್ರತ್ವವನ್ನು ಪಡೆದು ಹಸ್ತ ನಕ್ಷತ್ರಗಳಾದುವು. ಆ ಹಸ್ತ ನಕ್ಷತ್ರಗಳು ಈಗಲೂ ದಾನೋದಕವನ್ನು ಬಹಳವಾಗಿ ವರ್ಷಿಸುತ್ತಿರುವುವು. ಅದರಿಂದ ಹಸ್ತದ ಮಳೆಯ ನೀರ ಹನಿಗಳು ಮುತ್ತಾಗುವುದಕ್ಕೆ ಕಾರಣವಾಗಿದೆ. ಹೀಗೆ ವೀರನಾದ ಕುಶನು ಬಹಳವಾಗಿ ಆನೆಗಳ ತಲೆಗಳನ್ನು ಕತ್ತರಿಸಿದುದು ಅದ್ಭುತವಾಗಿದ್ದಿತು. ಬಳಿಕ ಧನುಷ್ಟಂಕಾರದಿಂದ

---

* ಕ. ಸಾ. ಪರಿಷತ್ಪತ್ರಿಕೆಯ ೧೮ನೆಯ ಸಂಪುಟದ ೨ನೆಯ ಸಂಚಿಕೆಯ ೧೬೮ನೆಯ ಪುಟದಿಂದ ಮುಂದುವರಿದುದು.

ದಿಗ್ಗಜಗಳನ್ನು ಕಿವುಡಾಗಿ ಮಾಡುತ್ತ ಭರತನು, ವನವನ್ನು ದಹಿಸುವ ಪವನಾಗ್ನಿಗಳಂತೆ ತಮ್ಮ ಸೈನ್ಯವನ್ನು ನಾಶಮಾಡಿದ ಅವರಿಬ್ಬರನ್ನೂ ನೋಡಿ, "ಇವರೇನು ಷಣ್ಮುಖ ಗಣೇಶರೋ"! ಎಂದುಕೊಂಡು ಮೇಘವು ಜಲಧಾರೆಗಳನ್ನು ಸುರಿಸುವಂತೆ ಹರಿತವಾದ ಬಾಣಗಳನ್ನು ಬಿಟ್ಟನು.

ಹನುಮಂತನು ಮೇಘ ಶ್ಯಾಮರಾಗಿಯೂ ಕಾಕ ಪಕ್ಷ ಧರರಾಗಿಯೂ ಧನುರ್ಧರರಾಗಿಯೂ ಜೊತೆಯಾಗಿಯೂ ಇರುವ ಆ ಬಾಲಕರನ್ನು ನೋಡಿ, "ರಾಮನ ಸೈನ್ಯವನ್ನು ನೋಡುತ್ತಿರುವ ಈ ಬಾಲರು ರಾಮನ ಆಕಾರವಾಗಿಯೇ ಇರುವರು. ಭರತನೇ ಮೊದಲಾದ ಶೂರರೆಲ್ಲರೂ ಸಿದ್ಧರಾಗಿ ನಿಲ್ಲಿ" ಎಂದು ಹೇಳುತ್ತಿರಲು,. ಕುಶನು ಲವನನ್ನು ಕುರಿತು, "ಎಲೈ ಲವನೇ! ಕುದುರೆಯನ್ನು ತೆಗೆದುಕೊಂಡು ಹೋಗಬೇಕೆಂಬ ಅಪೇಕ್ಷೆಯಿಂದ ಬಂದಿರುವ ಈ ಸೈನ್ಯವನ್ನು ನೋಡು. ಈ ಸೈನ್ಯದ ಮೇಲೆ ನಾನು ಹೊರಡುವೆನು. ನೀನು ಕುದುರೆಯನ್ನು ರಕ್ಷಿಸಿಕೊಂಡಿರು" ಎಂದನು. ಬಳಿಕ ಕುಶನು ಭರತನನ್ನು ನೋಡಿ, "ಶತ್ರುಘ್ನ ಲಕ್ಷ್ಮಣರಿಬ್ಬರೂ ಮೂರ್ಛೆ ಬಿದ್ದಿರುವರು. ಬಲವೆಲ್ಲವೂ ನಾಶವಾಯ್ತು. ನೀನು ನನ್ನ ಹೆಸರನ್ನು ಅರಿಯೆಯೊ? ಯುದ್ಧಕ್ಕೆ ಬಂದಿರುವ ನಾನು ಶತ್ರುವಾದ ಕುಶನೆಂಬುದನ್ನು ಕಾಣೆಯೊ?" ಎಂದು ಕೇಳಿದನು.

ಅದಕ್ಕೆ ಭರತನು, "ಎಲೈ ಕುಶನೇ! ನಾನು ಯುದ್ಧದಲ್ಲಿ ನಿನ್ನನ್ನು ಸೋಲಿಸಿ ಹುಡುಗನಾದ ನಿನ್ನನ್ನು ನಿನ್ನ ತಮ್ಮನೊಡನೆ ನಮ್ಮ ಪಟ್ಟಣಕ್ಕೆ ಕರೆದುಕೊಂಡು ಹೋಗುವೆನು. ಬೇಗನೆ ಕುದುರೆಯನ್ನು ಬಿಟ್ಟು ಹೊರಟುಹೋಗು. ತಾಪಸಿಯಾದ ನಿಮ್ಮ ತಾಯಿಯನ್ನು ನೋಡಿದರೆ ನನಗೆ ಕರುಣೆಯುಂಟಾಗುತ್ತದೆ. ನನ್ನನ್ನೂ ನನ್ನ ತಮ್ಮನನ್ನೂ ಭರತನು ಬಿಡುಗಡೆ ಮಾಡಿದನೆಂದು ನಿಮ್ಮ ತಾಯಿಗೆ ಹೇಳು. ನೀನು ನಮ್ಮ ಸೈನ್ಯವನ್ನು ನಾಶಪಡಿಸಿದುದನ್ನು ಕ್ಷಮಿಸಿದ್ದೇನೆ" ಎಂದು ಹೇಳಿದನು. ಕುಶನು ಆ ಮಾತನ್ನು ಕೇಳಿ ಭರತನನ್ನು ಏಳು ಬಾಣಗಳಿಂದಲೂ, ವಾನರರನ್ನು ಹನ್ನೆರಡು ಬಾಣಗಳಿಂದಲೂ, ಹನುಮಂತನನ್ನು ನೂರು ಬಾಣಗಳಿಂದಲೂ ಹೊಡೆದನು. ಹಾಗೆಯೇ ನಸು ನಗುತ್ತ ಅಂಗದನನ್ನು ಸಾವಿರ ಬಾಣಗಳಿಂದಲೂ, ನೀಲನನ್ನು ಐನೂರು ಬಾಣಗಳಿಂದಲೂ, ನಳನನ್ನು ಎಪ್ಪತ್ತು ಬಾಣಗಳಿಂದಲೂ, ಜಾಂಬವಂತನನ್ನು ಮೂರು ಸಾವಿರ ಬಾಣಗಳಿಂದಲೂ ಆ ಯುದ್ಧದಲ್ಲಿ ಕೋಪದಿಂದ ಹೊಡೆದನು. ಯಾರ ಯಾರ ಎದೆಯಲ್ಲಿ ಕುಶನು ಹೊಡೆದ ಬಾಣಗಳು ಬಲವಾಗಿ ನಟ್ಟುವೋ ಅವರೆಲ್ಲರೂ ಮೂರ್ಛಿತರಾಗಿ ಬಿದ್ದುಹೋದರು. ಬಲಿಷ್ಠನಾದ ಲವನು ಆರು ಬಾಣಗಳನ್ನು ಬಿಟ್ಟು ಭರತನ ಬಿಲ್ಲನ್ನು ಕತ್ತರಿಸಿ ಅವನ ರಥವನ್ನು ಚೂರು ಚೂರು ಮಾಡಿದನು. ಕುಶನ ಬಿಲ್ಲಿನಿಂದ ಹೊರಟ ಬಾಣಗಳಿಂದ ಭರತನು ಮೈಮರೆತನು. ಭರತನು ಮೂರ್ಛಾಗತನಾದುದನ್ನು ಹನುಮಂತನು ನೋಡಿ ಯೋಜನ ವಿಸ್ತಾರವಾದ ಪರ್ವತವನ್ನು ಕಿತ್ತು ಕುಶ ಲವರ ತಲೆಯ ಮೇಲೆ ಎಸೆದನು. ವಿಶಾಲಾಕ್ಷರಾದ ಅವರಿಬ್ಬರೂ ಬಾಣಗಳನ್ನು ಬಿಟ್ಟು ಆ ಪರ್ವತವನ್ನು ಆಕಾಶದಲ್ಲಿಯೇ, ಈಶ್ವರನ

ದೇಹದ ಭಸ್ಮದ ರೇಣುಗಳಂತೆ ಸುಖಕರವಾಗಿರುವ ಹಾಗೆ, ಧೂಳಿ ಧೂಳಿಯಾಗಿ ಕತ್ತರಿಸಿ ಪುಡಿ ಮಾಡಿದರು. ಕುಶನು ಪೌರುಷದಿಂದ ಕನಕ ಚಿತ್ರಗಳುಳ್ಳ ಐದು ಬಾಣಗಳನ್ನು ಹನುಮಂತನ ಮೇಲೆ ಬಿಟ್ಟು ಅವನ ದೇಹವು ಭಿನ್ನವಾಗಿ ಅವನು ಮೂರ್ಛಿತನಾಗುವಂತೆ ಮಾಡಿದನು. ಬಳಿಕ ಸೈನ್ಯವೆಲ್ಲವೂ ಬಿದ್ದುಹೋಗಲು, ಉಳಿದವರು ರಾಮನ ಬಳಿಗೆ ಓಡಿಹೋಗಿ ಎಲ್ಲವನ್ನೂ ತಿಳಿಸಿದರು.

ಮಹಾ ಬಾಹುವಾದ ಶ್ರೀರಾಮನು ಆ ಸಂಗತಿಯನ್ನು ಕೇಳಿ ತಮ್ಮಂದಿರ ದುರವಸ್ಥೆಗಾಗಿ ದುಃಖಿಸುತ್ತ, ರಥಾರೂಢನಾಗಿ ಸುಗ್ರೀವ ವಿಭೀಷಣರೊಡನೆ ಹೊರಟು ಕಾಡಿಗೆ ಬಂದು, ಆಶ್ಚರ್ಯದಿಂದ ತೆರೆದ ಕಣ್ಣುಳ್ಳವನಾಗಿ, ಬಾಣದ ಪೆಟ್ಟಿನಿಂದ ನೊಂದು 'ರಾಮ, ರಾಮ' ಎಂದು ಹಂಬಲಿಸುತ್ತ ಬಿದ್ದಿರುವ ಆ ಸೈನ್ಯವನ್ನು ನೋಡಿದನು. ಧನುರ್ಧರಾಗ್ರೇಸರರಾಗಿಯೂ, ತನ್ನಂತೆ ಆಕೃತಿಯುಳ್ಳವರಾಗಿಯೂ ಇರುವ ಆ ಬಾಲಕರನ್ನು ಕಂಡು ರಾಮನು, "ಎಲೈ ಬಾಲಕರೆ! ನೀವು ನಮ್ಮ ಸೈನ್ಯವನ್ನೆಲ್ಲ ಧ್ವಂಸ ಮಾಡಿದಿರಷ್ಟೆ! ನೀವು ಯಾರಲ್ಲಿ ಧನುರ್ವಿದ್ಯಾಭ್ಯಾಸ ಮಾಡಿದಿರಿ? ನಿಮಗೆ ವಿಧಿವತ್ತಾಗಿ ಉಪನಯನ ಮಾಡಿದವರಾರು? ವೇದಾಧ್ಯಯನವನ್ನೂ ಕಲಾಭ್ಯಾಸವನ್ನೂ ಮಾಡಿರುವಿರಾ? ಧರ್ಮ ಶ್ರವಣ ತತ್ಪರರಾಗಿರುವಿರಾ? ಪರ ಸ್ತ್ರೀಯರೆಡೆಗೆ ನಿಮ್ಮ ದೃಷ್ಟಿಯು ಸೆಳೆಯದಂತಿರುವುದೆ? ಬ್ರಾಹ್ಮಣರ ವಿಷಯದಲ್ಲಿ ಪ್ರತಿಜ್ಞಾ ಪರಿಪಾಲನೆಯನ್ನು ಮಾಡುತ್ತಿರುವಿರಾ? ನಿಮ್ಮ ತಂದೆ ತಾಯಿಗಳಾರು? ನಿಮ್ಮ ವಾಸಸ್ಥಾನ ವಾವುದು? ತಿಳಿಸಿರಿ" ಎಂದು ಕೇಳಿದನು. ಆ ಮಾತನ್ನು ಕೇಳಿ ಕುಶನು, "ಎಲೈ ರಾಜನೆ! ನಮ್ಮ ವಂಶ ಚರಿತ್ರೆಯಿಂದ ನಿನಗೆ ಪ್ರಯೋಜನವೇನು? ನಿಮ್ಮಂತಹವರು ಕ್ಷಾತ್ರ ಪೌರುಷವನ್ನುಳಿದು ಮಾತಾಡಬಹುದೆ? ಬೇಗನೆ ಯುದ್ಧಮಾಡು; ವಿಳಂಬ ಮಾಡುವುದೇಕೆ? ಕುದುರೆಯು ನಮ್ಮದಲ್ಲವೆಂದು ಹೇಳು! ಇಲ್ಲದಿದ್ದರೆ ಯುದ್ಧ ಮಾಡು" ಎಂದನು. ಅದನ್ನು ಕೇಳಿ ಶ್ರೀರಾಮನು, "ನಿಮ್ಮ ಕುಲವನ್ನು ತಿಳಿಸದಲ್ಲದೆ ನಾನು ಯುದ್ಧಮಾಡೆನು" ಎಂದನು.

ಆಗ ಕುಶನು ರಾಮನನ್ನು ಕುರಿತು, "ಕ್ಷಮಾ ಶೀಲರಾದ ನಮ್ಮಿಬ್ಬರನ್ನೂ ಸೀತಾ ದೇವಿಯು ಕಾಡಿನಲ್ಲಿ ಪ್ರಸವಿಸಿದಳು. ನಮಗೆ ಜಾತ ಕರ್ಮಾದಿಗಳೆಲ್ಲವನ್ನೂ ವಾಲ್ಮೀಕಿ ಮುನಿಯು ನೆರವೇರಿಸಿ ಉಪನಯನವನ್ನೂ ಮಾಡಿ ಚೆನ್ನಾಗಿ ವೇದಾಭ್ಯಾಸ ಮಾಡಿಸಿದನು. ಅಲ್ಲದೆ, ಸಜ್ಜನರ ಮನಸ್ಸಿಗೆ ಸೌಖ್ಯ ಪ್ರದವಾದ ರಾಮ ಕಥೆಯನ್ನೂ ನಮಗೆ ಕಲಿಸಿದನು. ಆಯಾ ಅಭ್ಯಾಸ ಬಲದಿಂದ ನಿರ್ಮಲ ದೃಷ್ಟಿಯೂ ಬುದ್ಧಿ ಸ್ವಾಸ್ಥ್ಯ ಮನಃಸ್ವಾಸ್ಥ್ಯಗಳೂ ಉಂಟಾಗಿ ಪರಾಕ್ರಮವೂ ವೃದ್ಧಿಗೊಳ್ಳುತ್ತದೆ. ಆದ ಕಾರಣ, ನಿನ್ನ ಸೈನ್ಯವನ್ನೆಲ್ಲ ನಿನ್ನೆದುರಿಗೆ ನಾಶ ಮಾಡಿದೆವು. ನಿನಗೆ ದಾರಾ ಪುತ್ರ ಧನಾದಿಗಳಲ್ಲಿ ಮಮತೆಯಿಲ್ಲ. ಅದರಿಂದ, ನಾಶವಾದ ಸೈನ್ಯದ ವಿಷಯದಲ್ಲಿ ನಿನಗೇನೂ ಲಕ್ಷ್ಯವಿಲ್ಲವೆಂದು ತೋರುವುದು. ನಿನಗೆ ಶಕ್ತಿಯೇ ಇಲ್ಲವೊ? ಇದ್ದ ಶಕ್ತಿಯನ್ನು ನೀನು ಕಾಡಿನಲ್ಲಿದ್ದಾಗಲೇ ಬಿಟ್ಟಿರಬಹುದಲ್ಲವೆ? ಶಕ್ತಿ ಹೀನನಾದವನು ಯಾವನು ತಾನೆ ತೀಕ್ಷ್ಣ ಬಾಣಗಳಿಂದ ಯುದ್ಧಮಾಡಬಹುದು?" ಎಂದನು.

ಆಗ ರಾಮನು, ಸೀತಾ ಪುತ್ರರೆಂದು ಹೇಳಿದುದರಿಂದ ಆ ಇಬ್ಬರು ಬಾಲರನ್ನೂ ತನ್ನ ಮಕ್ಕಳೆಂದು ತಿಳಿದು, "ನಮಗೆ ಇನ್ನು ಯುದ್ಧವು ಅಯುಕ್ತವಾದುದು" ಎಂದು ಹೇಳಿ ಧನುವನ್ನು ಕೈಬಿಟ್ಟು, ಹಾಗೆಯೇ ರಥದಲ್ಲಿ ಬಿದ್ದು ಮೂರ್ಛಿತನಾದನು. ಬಳಿಕ, ಸತ್ಯ ಪರಾಕ್ರಮನೂ ಧರ್ಮಾತ್ಮನೂ ಧೀರನೂ ಪರಪುರಂಜಯನೂ ಆದ ರಾಮನು ಮೂರ್ಛೆಯಿಂದೆಚ್ಚತ್ತು ಸುಗ್ರೀವನನ್ನು ಕುರಿತು, "ಎಲೈ ಕಪಿಶ್ರೇಷ್ಠನೇ! ಈ ಶೂರರಿಬ್ಬರೂ ಯಾರ ಮಕ್ಕಳೆಂಬುದನ್ನು ವಿಚಾರಿಸಿ ತಿಳಿ" ಎಂದನು. ಅದಕ್ಕೆ ಸುಗ್ರೀವನು, "ಎಲೈ ರಾಮನೆ! ಇವರಿಬ್ಬರೂ ಪುರಾಣ ಪುರುಷನಾದ ಆ ವಿಷ್ಣುವಿನ ಮಕ್ಕಳೆಂದು ತೋರುವುದು. ಇಲ್ಲಿ ವನಮಧ್ಯದಲ್ಲಿ ನೋಡಿದರೆ ಇವರು ನಿನ್ನ ಪ್ರತಿಬಿಂಬದಂತೆ ಇರುವರು. ಒಡೆಯನೇ ಇಲ್ಲದೆ ಯುದ್ಧದಲ್ಲಿ ಜಯಶಾಲಿಯಾಗುವ ಮತ್ತೊಬ್ಬನನ್ನು ಕಾಣಲಿಲ್ಲ. ಇವರ ಮೇಲೆ ಯುದ್ಧಮಾಡಲು ನಿನ್ನೆದುರಿಗೆ ಈಗ ತೆರಳುವೆನು" ಎಂದು ಹೇಳಿ ಒಂದು ಮರವನ್ನು ಕಿತ್ತು ಅವರ ಮುಂದೆ ಹಾಕಿದನು. ಅವರು ಆ ಮರವನ್ನು ಹರಿತವಾದ ಬಾಣಗಳಿಂದ ಚೂರು ಚೂರು ಮಾಡಿ ಆ ಸುಗ್ರೀವನನ್ನು ಮೂರ್ಛೆಗೊಳಿಸಿದರು. ಅಷ್ಟರಲ್ಲಿ ನೀಲನು ಯುದ್ಧಕ್ಕೆ ನಿಂತನು. ಕುಶನು ಕೋಪಾವಿಷ್ಟನಾಗಿ ನೀಲನನ್ನು ಬಾಣದಿಂದ ಹೊಡೆದನು. ಆ ನೀಲನ ರಕ್ತದಿಂದ ಬಹು ಮಂದಿ ನೀಲರು ಹುಟ್ಟುತ್ತ ಬರಲು, ಮಹಾ ಬಲಶಾಲಿಗಳಾದ ಅನೇಕ ನೀಲರಿಂದ ಯುದ್ಧಭೂಮಿಯು ತುಂಬಿ ಹೋಗುವಂತಾಯ್ತು. ಆಗ ಕುಶನು ಮನಸ್ಸಿನಲ್ಲಿ ಚೆನ್ನಾಗಿ ವಿಚಾರಮಾಡಿ ನೋಡಿ ಜಲೂಕಾಸ್ತ್ರ (ಜಿಗಣೆಯ ರೂಪವಾದ ಬಾಣ)ವನ್ನು ಪ್ರಯೋಗಿಸಿ ಅವರೆಲ್ಲರನ್ನೂ ಹೊಡೆದು ಕೆಡಹಿದನು. ನೀಲನೂ ಮುರಿದುಬಿದ್ದನು; ಸೈನಿಕರೂ ಭಗ್ನರಾದರು. ಸೈನಿಕರು ಯಾರೂ ಇಲ್ಲದುದರಿಂದ ರಾಮನು ಏಕಾಕಿಯಾಗಿ ನಿಂತು, ತೀಕ್ಷ್ಣಗಳಾಗಿ ಕಾಲಾಗ್ನಿಗೆ ಸಮಾನವಾದ ತೇಜಸ್ಸುಳ್ಳವಾಗಿರುವ ಬಾಣಗಳನ್ನು ಪ್ರಯೋಗಿಸಲು, ಆ ಬಾಣಗಳು, ಕೃಪಣನಾಗಿಯೂ ದರಿದ್ರನಾಗಿಯೂ ಇರುವವನ ಮನೋರಥಗಳಂತೆಯೂ ಆಕಾಶದಲ್ಲಿ ಶರತ್ಕಾಲದ ಮೇಘಗಳಂತೆಯೂ, ನಿಷ್ಫಲಗಳಾಗಿ ಬಿದ್ದು ಹೋದುವು. ರಾಮನು ಕುಪಿತನಾಗಿ ಯುದ್ಧದಲ್ಲಿ ಯಾವ ಬಾಣಗಳನ್ನು ಬಿಟ್ಟರೂ ಅವುಗಳನ್ನು ಅವರಿಬ್ಬರೂ ಎರಡೆರಡು ತುಂಡಾಗಿ ಕತ್ತರಿಸಲು, ಅವು ನಾಲ್ಕು ತುಂಡುಗಳಾಗಿ ಬಿದ್ದುಹೋದುವು. ಹೀಗೆ ಯುದ್ಧವು ಲೋಕಕ್ಕೆ ವಿಸ್ಮಯವನ್ನುಂಟುಮಾಡಿತು. ರಾಮನು ಆ ಬಾಲಕರಿಗಿರುವ ತನ್ನ ಸಮಾನ ಬಲವನ್ನೂ ಸೀತೆಯ ಮುಖದಂತಿರುವ ಮುಖವನ್ನೂ ಚೆನ್ನಾಗಿ ತಿಳಿದು ಅವರ ಬಾಣದ ಪೆಟ್ಟಿನಿಂದ ಮೂರ್ಛಿತನಾಗಿ ರಥದಲ್ಲಿ ಬಿದ್ದನು.

ಬಳಿಕ ಕುಶಲವರು ರಾಮನು ಮೂರ್ಛಿತನಾಗಿ ಬಿದ್ದಿರುವುದನ್ನು ಕಂಡು ರಥವನ್ನು ಹತ್ತಿ, ಅವನ ಕುಂಡಲಗಳನ್ನೂ, ಕೇಯೂರ ಕಂಠಹಾರಗಳನ್ನೂ, ಲಕ್ಷ್ಮಣನ ಸರ್ವಾಭರಣಗಳನ್ನೂ, ರಣಭೂಮಿಯಲ್ಲಿ ಬಿದ್ದಿದ್ದ ಉಳಿದ ಎಲ್ಲ ವೀರರ ಆಭರಣಗಳನ್ನೂ ತೆಗೆದುಕೊಂಡರು. ಅಷ್ಟರಲ್ಲಿ ಲವನು ಕುಶನನ್ನು ಕುರಿತು, "ಎಲೈ ಅಣ್ಣನಾದ ಕುಶನೇ! ಮಹಾ ಬಲನಾದ ಹನುಮಂತನನ್ನು ಹಿಡಿದುಕೊಂಡು

ಬರುವೆನು; ಆ ಕಪಿಯನ್ನು ನೋಡಿದರೆ ಸೀತಾದೇವಿಯು ಸಂತೋಷವನ್ನು ಹೊಂದುವಳೆಂಬುದಕ್ಕೆ ಸಂದೇಹವಿಲ್ಲ. ನೀನು ದುರ್ಜಯವಾದ ಶ್ರೀರಾಮನ ರಥವನ್ನು ಹತ್ತು, ನಾನು ರಮ್ಯವಾದ ಲಕ್ಷ್ಮಣನ ರಥವನ್ನೇರಿ ಹೊರಡುವೆನು. ಜಾಂಬವಂತನೇ ಮೊದಲಾದ ವೀರರನ್ನು ನಿನ್ನ ರಥದಲ್ಲಿ ಉರುಳಿಸಿಬಿಡು" ಎಂದನು. ಮೂರ್ಛೆಹೊಂದದ ಹನುಮಂತನೂ ಜಾಂಬವನೂ, 'ಈಗ ನಾವೂ ಕಣ್ಣು ಮುಚ್ಚಿಕೊಳ್ಳೋಣ' ಎಂದು ನಿರ್ಧರವಾಗಿ ಹೇಳಿಕೊಂಡರು. ಹನುಮಂತನು ಜಾಂಬವಂತನನ್ನು ನೋಡಿ, "ಎಲೈ ಜಾಂಬವನೇ! ರಾಮಾದಿ ವೀರರೆಲ್ಲರೂ ಈ ಬಾಲಕರ ಬಾಣಗಳಿಂದ ಮೂರ್ಛಿತರಾಗಿರುವುದನ್ನು ನೋಡು. ರಾಮನ ಮಗನು ನನ್ನನ್ನೂ ಮೂರ್ಛಿತನನ್ನಾಗಿ ಮಾಡುತ್ತಿದ್ದಾನೆ. ಕುಶನು ನನ್ನನ್ನು ಬಲಾತ್ಕಾರವಾಗಿ ಸೀತೆಯ ಬಳಿಗೆ ತೆಗೆದುಕೊಂಡು ಹೋದರೆ ನಾನೇನು ಮಾಡಲಿ? ನನಗೆ ಮರಣವೇ ಉಂಟಾಗುವುದು; ಇದಕ್ಕೆ ಸಂಶಯವಿಲ್ಲ" ಎಂದು ಹೇಳುತ್ತಿರಲು, ಯುದ್ಧಭೂಮಿಯಲ್ಲಿದ್ದ ಲವನು ಸಂತೋಷದಿಂದ ಬಂದು, ಕಪಟ ಮೂರ್ಛಿತರಾಗಿದ್ದ ಶೂರರಾದ ಹನುಮಂತನನ್ನೂ ಜಾಂಬವಂತನನ್ನೂ ತೆಗೆದುಕೊಂಡನು. ತರುವಾಯ ಕುಶ ಲವರು ಸೀತೆಯ ಬಳಿಗೆ ಬಂದು ಎಲ್ಲವನ್ನೂ ತಿಳಿಸಿದರು. ಲವನು "ಅಮ್ಮಾ! ಸೇನಾ ಸಹಿತನಾದ ರಾಮನನ್ನು ಜಯಿಸಿ ಆಭರಣಗಳೆಲ್ಲವನ್ನೂ ತಂದಿರುವೆವು. ವಿನೋದಾರ್ಥವಾಗಿ ವಾನರರಿಬ್ಬರನ್ನು ನಾನು ಹಿಡಿದು ತಂದಿರುವೆನು, ನೋಡು. ಅಣ್ಣನು ಯುದ್ಧ ಮಾಡಿ ಜಯಶಾಲಿಯಾಗಿ ಬಂದನು" ಎಂದು ಹೇಳಿದನು. ಸೀತಾದೇವಿಯು ಮಕ್ಕಳನ್ನು ತಬ್ಬಿಕೊಂಡು ಲವನನ್ನು ಕುರಿತು, "ಮಗನೇ! ಮಾನಿಷ್ಠರಾದ ಈ ವಾನರರನ್ನು ತೆಗೆದುಕೊಂಡು ಹೋಗಿ ಯುದ್ಧಭೂಮಿಯಲ್ಲಿ ಬಿಡು. ಇವರು ನನ್ನನ್ನು ನೋಡಿದರೆ ಪ್ರಾಣವನ್ನು ಬಿಡುವರು" ಎಂದು ಹೇಳಲು, ಬುದ್ಧಿಶಾಲಿಯಾದ ಲವನು ಅವರಿಬ್ಬರನ್ನೂ ಯುದ್ಧ ಭೂಮಿಯಲ್ಲಿ ಬಿಟ್ಟು ಬಂದನು.

ಅಷ್ಟರಲ್ಲಿ ವಾಲ್ಮೀಕಿ ಮುನಿಯು ವರುಣ ಲೋಕದಿಂದ ಹೊರಟು ಮುನಿಗಳೊಡನೆ ಅಲ್ಲಿಗೆ ಬಂದು ಸೇರಿದನು. ಬಾಲಕರಿಬ್ಬರೂ ಆತನ ಬಳಿಗೆ ಬಂದು ತಾವು ಮಾಡಿದ ಕಾರ್ಯವನ್ನೆಲ್ಲ ತಿಳಿಸಿದರು. ವಾಲ್ಮೀಕಿಯು ಎಲ್ಲವನ್ನೂ ತಿಳಿದು ಅಮೃತಮಯವಾದ ಉದಕದಿಂದ ಪ್ರೋಕ್ಷಣೆ ಮಾಡಿ ರಾಮ ಲಕ್ಷ್ಮಣರೆಲ್ಲರನ್ನೂ ಎಬ್ಬಿಸಿ, ರಾಮನನ್ನು ಕುರಿತು, "ಮಹಾರಾಜನಾದ ರಘುನಂದನನೇ! ಇವರಿಬ್ಬರೂ ನಿನ್ನ ಮಕ್ಕಳು; ಇವರನ್ನು ಪರಿಗ್ರಹಿಸು. ಸೀತೆಯು ದೋಷ ರಹಿತಳೆಂದು ನಿನಗೆ ತೋರಿದರೆ ಆಕೆಯನ್ನೂ ಕರೆದುಕೊಂಡು ಹೋಗಬಹುದು" ಎಂದನು. ರಾಮನು ಎದ್ದು ಸೇನಾ ಸಮೇತನಾಗಿ ಹೊರಟು ಅಯೋಧ್ಯೆಯನ್ನು ಸೇರಿದನು. ವಾಲ್ಮೀಕಿಯು ನಸು ನಗುತ್ತ ಯಜ್ಞಾಶ್ವವನ್ನು ಬಿಟ್ಟು ಬಿಡಲು, ಆ ಶೂರರು ಅದನ್ನು ರಕ್ಷಣೆ ಮಾಡಿಕೊಂಡರು. ಬಳಿಕ ಯಜ್ಞವು ನಡೆಯಿತು. ಯಜ್ಞವು ನಡೆಯುತ್ತಿರುವಾಗ ವಾಲ್ಮೀಕಿ ಮುನಿಯು ಮಕ್ಕಳೊಡನೆ ಸೀತಾದೇವಿಯನ್ನು ಕರೆದುಕೊಂಡು ಹೋಗಿ ರಾಮನ ಬಳಿಗೆ ಬಿಟ್ಟನು. ಶ್ರೀರಾಮನು ಪತ್ನೀ ಪುತ್ರ ಸಮೇತನಾಗಿ ಯಜ್ಞ ಪೂರ್ತಿಯಾದ

ಬಳಿಕ ಋಷಿಗಳನ್ನು ಪುರಸ್ಕರಿಸಿ ಕಳುಹಿಸಿಕೊಟ್ಟನು. ಶ್ರೀರಾಮನು ಸೀತಾದೇವಿಯಲ್ಲಿ ತನಗಿದ್ದ ಪ್ರೀತಿಯನ್ನು ತನ್ನ ಮಕ್ಕಳಲ್ಲಿಯೂ ಇಟ್ಟನು.

"ಹೀಗೆ ಪೂರ್ವದಲ್ಲಿ ಶ್ರೀರಾಮನಿಗೆ ತನ್ನ ಪುತ್ರರೊಡನೆ ಹೇಗೆ ಯುದ್ಧವು ಸಂಭವಿಸಿತೋ ಹಾಗೆಯೇ ಅರ್ಜುನನಿಗೂ ಅವನ ಮಗನಿಗೂ ಅದ್ಭುತವಾದ ಯುದ್ಧವು ನಡೆಯಿತು" ಎಂದು ಜೈಮಿನಿಯು ಎಲ್ಲವನ್ನೂ ಪರೀಕ್ಷಿದ್ರಾಜನಿಗೆ ಹೇಳಿದನು. "ಎಲೈ ಮುನಿಗಳಿರಾ! ನಾನು ಅದನ್ನೇ ನಿಮ್ಮೆಲ್ಲರಿಗೂ ತಿಳಿಸಿದೆನು. ವಾಲ್ಮೀಕಿಯು ತಂದೆ ಮಕ್ಕಳಿಗಾದ ಈ ಯುದ್ಧವನ್ನು ರಾಮಾಯಣದಲ್ಲಿ ಹೇಳಲಿಲ್ಲ. ಹಾಗೆ ಹೇಳಿದ್ದರೆ ಈ ಲೋಕವು ಕರುಣಾ ಸಮುದ್ರದಲ್ಲಿ ಮುಳುಗಿ ಹೋಗುತ್ತಿದ್ದಿತು. ಈ ಆಖ್ಯಾನವನ್ನು ಯಾವ ನರ ಶ್ರೇಷ್ಠರು ಕೇಳುತ್ತಾರೆಯೋ ಅವರು ಪುತ್ರ ಪೌತ್ರ ಸಹಿತರಾಗಿ ಮನೋಹರವಾದ ಭೋಗಗಳನ್ನನುಭವಿಸಿ ಸರ್ವ ಪಾಪ ವಿಮುಕ್ತರಾಗಿ ಶಾಶ್ವತವಾದ ವಿಷ್ಣುಪದವನ್ನು ಪಡೆಯುವರು. ಈ ಉತ್ತಮವಾದ ಇತಿಹಾಸವನ್ನು ಹೇಳಿದವನೂ ಕೇಳಿದವನೂ ರಾಜಸೂಯಾಶ್ವಮೇಧಗಳ ಫಲವನ್ನು ಹೊಂದುವುದಲ್ಲದೆ ಸ್ವರ್ಣ ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ಹೋಗುತ್ತಾನೆ; ಮತ್ತೆ ರೂಪ ಲಕ್ಷಣೈಶ್ವರ್ಯ ಸಂಪನ್ನನಾಗಿ ಶುದ್ಧ ವಂಶದಲ್ಲಿ ಜನಿಸುತ್ತಾನೆ. ಶ್ರಾವ್ಯವಾದ ಈ ಉಪಾಖ್ಯಾನವನ್ನು ಕೇಳಿದರೆ, ಕೋಕಿಲೆಯ ಶಬ್ದವನ್ನು ಕೇಳಿದ ಮೇಲೆ ಕ್ರೂರವಾದ ಕಾಕ ಧ್ವನಿಯು ರುಚಿಸದಂತೆ, ಮತ್ತೊಂದು ಉಪಾಖ್ಯಾನವು ರುಚಿಸಲಾರದು."

ಇಂತು ರಾಮಾಶ್ವಮೇಧ ಪರಿಸಮಾಪ್ತಿಯಲ್ಲಿ ಫಲಸ್ತುತಿ ವರ್ಣನವೆಂಬ
ಮೂವತ್ತಾರನೆಯ ಅಧ್ಯಾಯವು.

---

## ಮೂವತ್ತೇಳನೆಯ ಅಧ್ಯಾಯ

ಹಂಸಧ್ವಜನು ಬಭ್ರುವಾಹನನ ಬಾಣಗಳನ್ನೂ ರಥ ಸಹಸ್ರವನ್ನೂ ಕತ್ತರಿಸಿ ಬಲವಾದ ಯುದ್ಧ ಮಾಡಿ ಬಭ್ರುವಾಹನನ ಅಸ್ತ್ರಗಳನ್ನೆಲ್ಲ ವ್ಯರ್ಥಪಡಿಸಿ ಅವನನ್ನು ರಥ ಸಹಿತವಾಗಿ ಕೆಳಕ್ಕೆ ಕೆಡಹಿ ಬಾಣಗಳಿಂದ ಅವನ ದೇಹವನ್ನು ಭೇದಿಸಿ ಐದು ಅಕ್ಷೌಹಿಣೀ ಸೈನ್ಯವನ್ನು ಕೊಂದನು. ತನ್ನ ಮಕ್ಕಳು ಯುದ್ಧದಲ್ಲಿ ಮುರಿದು ಬೀಳುವರೆಂದು ಹೇಳಿದ್ದ ಶ್ರೀಕೃಷ್ಣನ ವಾಕ್ಯವನ್ನು ನೆನೆದು ಬಭ್ರುವಾಹನನು ಅರ್ಜುನನ ಮೇಲೆ ಬಾಣವನ್ನು ಬಿಡುತ್ತಬಂದನು. ಅವನು ಸಾವಿರಾರು ಮಂದಿ ಸೈನಿಕರನ್ನು ಕೆಡಹಿದನು. ಅವನ ಬಾಣ ಸಮೂಹದಿಂದ ಹಂಸಧ್ವಜನ ಕುದುರೆಗಳೂ ರಥವೂ ಯುದ್ಧದಲ್ಲಿ ಚೂರ್ಣವಾದುವು. ಹಂಸಧ್ವಜನ ಎದೆಯು ಸೀಳಿಹೋಗಲು, ಅವನು ಮೂರ್ಛಿತನಾಗಿ ಬಿದ್ದನು. ಮಹಾ ಪರಾಕ್ರಮಶಾಲಿಯಾಗಿಯೂ ಮಹಾತ್ಮನಾಗಿಯೂ ಇರುವ ಹಂಸಧ್ವಜನು ಬಿದ್ದ ಕೂಡಲೆ ಸುವೇಗನು ಬಭ್ರುವಾಹನನೊಡನೆ ಯುದ್ಧಕ್ಕೆ ನಿಂತನು. ಅವನು ಬಭ್ರುವಾಹನನ ಎದೆಗೆ ಒಂಬತ್ತು ಬಾಣಗಳನ್ನು ಹೊಡೆದು ಅವನ ಛತ್ರ ಧ್ವಜಗಳನ್ನು ಮೂರು ಬಾಣಗಳಿಂದ ಕತ್ತರಿಸಿಹಾಕಿದನು; ಬಳಿಕ ಅನೇಕ ಶತ ಸಹಸ್ರ

ಬಾಣಗಳನ್ನು ಅವನ ಎದೆಗೆ ಬಿಟ್ಟನು. ಅಲ್ಲದೆ, ಸಾವಿರಾರು ಮಂದಿ ವೀರರ ಮೇಲೆ ಯುದ್ಧ ಮಾಡಿ ಚಂದ್ರನಂತೆ ಶುಭ್ರವಾಗಿರುವ ನೂರಾರು ಆನೆಗಳನ್ನು ಕೊಂದು ನೆಲ ವೆಲ್ಲವೂ ಮಾಂಸದ ಕೆಸರಿನಿಂದ ಭಯಂಕರವಾಗುವಂತೆ ಮಾಡಿದನು. ಆ ಯುದ್ಧ ಭೂಮಿಯೆಲ್ಲವೂ ಆನೆಗಳ ತಲೆಗಳಿಂದ ಉತ್ತು, ತಳ ಮೇಲು ಮಾಡಿದಂತಾಗಲು, ಭೈರವಗಳು ಆನೆ ಕುದುರೆಗಳ ಹೆಗಲುಗಳಿಗೆ ಮೂರಿಳೆಯಾಗಿ ಹೊಸೆದ ಕರುಳಿನ ಹಗ್ಗವನ್ನು ಕಟ್ಟಿ, ಆನೆಯ ತಲೆಗಳನ್ನು ಗೆಡ್ಡೆಗಳಂತೆ ನೆಲದಲ್ಲಿ ಹೂಳುತ್ತ, ಮುತ್ತುಗಳನ್ನು ಬೀಜಗಳಂತೆ ಬಿತ್ತುತ್ತಲೂ ಇದ್ದುವು. ಯಕ್ಷಿಣಿಯರು ಕತ್ತರಿಸಿಹೋದ ಆನೆಗಳ ಕಾಲುಗಳನ್ನು ಒನಕೆಗಳನ್ನಾಗಿ ಮಾಡಿಕೊಂಡು ಹಾಡು ಹೇಳುತ್ತ ನರ ಶಿರಸ್ಸುಗಳನ್ನು ಕುಟ್ಟುತ್ತಿದ್ದರು. ಹಾಗೆ ಕುಟ್ಟಿದುದನ್ನು ಮತ್ತೆ ಕೆಲವರು, ಕತ್ತರಿಸಿ ಹೋದ ಆನೆಗಳ ಮುಖವೆಂಬ ಯಂತ್ರಗಳಿಂದ ಜಲ್ಲಿಸಿ ಪುಡಿ ಮಾಡುತ್ತಿದ್ದರು. ಸುವೇಗನು ಕಾಲಾಗ್ನಿಗೆ ಸಮಾನವಾದ ಬಾಣವನ್ನು ಸಂಧಾನ ಮಾಡಿ ಬಿಡಲು, ಬಭ್ರುವಾಹನನು ಅದನ್ನು ಮಧ್ಯಕ್ಕೆ ಎರಡು ತುಂಡು ಮಾಡಿದನು. ಹಾಗಾದರೂ ಅದರ ಅಗ್ರ ಭಾಗವು ಅವನೆದುರಿಗೆ ಬರಲು, ಅದನ್ನೂ ಮತ್ತೆ ಎರಡು ತುಂಡಾಗಿ ಮಾಡಿ ನೋಡುತ್ತಿದ್ದನು. ಈ ಎರಡನೆಯ ಅರ್ಧವು ಪುನಃ ತನ್ನ ಎದುರಿಗೆ ಬರುತ್ತಿರಲು, ಅದನ್ನೂ ಎರಡು ತುಂಡು ಮಾಡಿದನು. ಆ ಬಾಣವು ನಾಲ್ಕು ಚೂರುಗಳಾಗಿ ನೆಲಕ್ಕೆ ಬಿದ್ದುಹೋಯಿತು. ತುದಿಯ ಭಾಗವಾಗಿ ಸೇರಿಕೊಂಡಿದ್ದ ಐದನೆಯ ಚೂರು ಬಂದು ಬಭ್ರುವಾಹನನ ಎದೆಯಲ್ಲಿ ನುಗ್ಗಲು ಅವನು ಮೂರ್ಛಿತನಾದನು.

ಅಷ್ಟರಲ್ಲಿಯೇ ಅವನು ಹೇಗೊ ಮೂರ್ಛೆಯಿಂದೆಚ್ಚತ್ತು ಪ್ರಲಯಾಗ್ನಿಯಂತೆ ಉರಿಯುತ್ತ ಅರ್ಜುನನ ರಥಕ್ಕೆ ಸಹಾಯವಾಗಿ ನಿಂತಿದ್ದ ಸೇನೆಯ ಮೇಲೆ ಬಾಣ ಪ್ರಯೋಗ ಮಾಡಿದನು. ಆ ದಿನದ ಯುದ್ಧದಲ್ಲಿ ಅರ್ಜುನ ಪುತ್ರನೂ ಕರ್ಣ ಪುತ್ರನೂ, ದೇಹ ನಾಶವಾದರೆ ಜೀವವು ಹೇಗೆ ಅಡಗಿ ನಿಲ್ಲುವುದೋ ಹಾಗೆ, ಪರಸ್ಪರವಾಗಿ ಯುದ್ಧಕ್ಕೆ ನಿಂತರು. ಮೂರ್ಛಿತರಾದ ಉಳಿದ ಯೋಧರನ್ನು ಜೀವ ಸಹಿತವಾಗಿ ಯುದ್ಧ ಭೂಮಿಯಿಂದ ಹೊರಕ್ಕೆ ಸಾಗಿಸಿದರು. ಪೂರ್ವದಲ್ಲಿ ತೀರ್ಥ ಯಾತ್ರೆಯ ಕಾಲದಲ್ಲಿ, ಅರ್ಜುನನ ಆಯುಧದ ಗಾಯಗಳನ್ನು ವಿಧ ವಿಧವಾದ ಔಷಧಗಳಿಂದ ಗುಣ ಮಾಡಿ ಮಹಾ ಶಾಪದಿಂದ ತಪ್ಪಿಸಿದ್ದ ನಾಗರಾಜ ಪುತ್ರಿಯರಾದ ಉಲೂಪಿಯೂ ಚಿತ್ರಾಂಗದೆಯೂ ದೈವ ಯೋಗದಿಂದ ಅರ್ಜುನನ ಬಳಿಗೆ ಬಂದು ಸೇರಿ ದರು. ಆಗ ಅರ್ಜುನನು ವೃಷಕೇತುವನ್ನು ಕುರಿತು, "ಎಲೈ ವೃಷಕೇತುವೇ! ನನ್ನ ಸೈನ್ಯವು ನಾಶವಾಯಿತು. ನಮ್ಮ ಸಮಸ್ತ ವಸ್ತುಗಳನ್ನೂ ಶತ್ರುಗಳು ಅಪಹರಿಸಿದರು. ಹಂಸಧ್ವಜನೇ ಮೊದಲಾದ ವೀರರೆಲ್ಲರೂ ನನ್ನೆದುರಿಗೇ ಬಿದ್ದು ಹೋದರು. ಪ್ರದ್ಯುಮ್ನನನ್ನೂ ಅವನ ಮಗನನ್ನೂ ಶತ್ರುಗಳು ಸೆರೆ ಹಿಡಿದು ಮಣಿ ಪುರಕ್ಕೆ ತೆಗೆದುಕೊಂಡು ಹೋದರು. ಅವರಿಬ್ಬರೂ ನನಗಾಗಿ ಯುದ್ಧ ಮಾಡಿ ಬಾಣ ಗಳಿಂದ ಸೀಳಿದ ದೇಹವುಳ್ಳವರಾದರು. ಅನುಸಾಲ್ವನು ಯುದ್ಧದಲ್ಲಿ ಎಲ್ಲಿ ಬಿದ್ದನೋ ಗೊತ್ತೇ ಇಲ್ಲ. ಈಗ ತಾನೆ ಸುವೇಗನು ಮೃತನಾಗಲು, ನಮ್ಮ ವೀರರು ಅವನನ್ನು ಛತ್ರ, ಚಾಮರ, ಧ್ವಜ, ಧನುರ್ವಸ್ತ್ರ ಸಹಿತವಾಗಿ ಸಾಗಿಸಿಕೊಂಡು ಹೋದರು.

ಉಳಿದಿರುವವನು ನೀನೊಬ್ಬನೇ; ಮತ್ತೊಬ್ಬನೂ ಕಾಣಿಸಲಿಲ್ಲ. ನೀನು ಹಸ್ತಿನಪುರಕ್ಕೆ ಹೊರಟು ಹೋಗಿ ಧರ್ಮಜ ಕೃಷ್ಣರ ಬಳಿಯನ್ನು ಸೇರು. ದಾತೃಗಳೆಲ್ಲರಿಗೂ ಬೀಜ ಭೂತನಾಗಿರುವ ಕುಲ ಪುತ್ರನಾದ ನಿನಗೆ ಶುಭವಾಗಲಿ" ಎಂದು ಹೇಳುತ್ತಿರುವಾಗ ಅರ್ಜುನನ ಕಿರೀಟದ ಮೇಲೆ ಒಂದು ಹದ್ದು ಕುಳಿತು ಗಟ್ಟಿಯಾಗಿ ಕೂಗಿತು. ಆಗ ಅರ್ಜುನನು ತನ್ನ ತಲೆಯ ಮೇಲೆ ಕುಳಿತು ತನಗೆ ಮೃತ್ಯುವನ್ನು ಸೂಚಿಸುತ್ತಿರುವ ಹದ್ದನ್ನೂ, ತನ್ನ ರಥದಲ್ಲಿ ಗೂಡು ಕಟ್ಟಿಕೊಂಡು ಅದರಲ್ಲಿ ಮಲಗಿರುವ ಪಾರಿವಾಳ ವನ್ನೂ, ತಲೆಗಾಣಿಸದ ತನ್ನ ನೆಳಲನ್ನೂ, ಮೂಗಿಲ್ಲದೆ ಕಾಣುವ ತನ್ನ ಮುಖವನ್ನೂ, ತೇಜೋ ಹೀನವಾದ ಕಣ್ಣುಗಳನ್ನೂ ನೋಡಿ, "ಎಲೈ ಪುತ್ರನೇ! ನೀನು ಪಟ್ಟಣಕ್ಕೆ ಹೋಗಿ ನನಗೆ ಯುದ್ಧದಲ್ಲಿ ತೋರುತ್ತಿರುವ ಭಯಂಕರಗಳಾದ ದುರ್ನಿಮಿತ್ತಗಳನ್ನು ಧರ್ಮ ಭೀಮ ಕೃಷ್ಣರಿಗೆ ತಿಳಿಸು. ನೀನೂ ನನ್ನೊಡನೆ ಯುದ್ಧದಲ್ಲಿ ಮೃತನಾದರೆ ನಿನ್ನ ನಾಶದಿಂದ ಅವರೆಲ್ಲರೂ ಪ್ರಾಣ ತ್ಯಾಗ ಮಾಡುವರು. ನೀನು ಬಹಳವಾಗಿ ಯುದ್ಧ ಮಾಡಿದ್ದೀಯೆ; ನಿನ್ನ ದೇಹವೆಲ್ಲ ಬಾಣಗಳಿಂದ ಸೀಳಿಹೋಗಿದೆ. ನಿನ್ನನ್ನು ಬಿಟ್ಟು ಪೃಥೆಯು ಬದುಕಿರುವುದಿಲ್ಲ. ಆದಕಾರಣ ನೀನು ನನ್ನನ್ನು ಬಿಟ್ಟು ಹೋಗು. ನನ್ನಿಂದ ಕೆಲಸವು ಕೆಟ್ಟುಹೋಯಿತು. ಧರ್ಮರಾಜನು ದೀಕ್ಷೆಯನ್ನು ಧರಿಸಿ ಅಸಿ ಪತ್ರ ವ್ರತಾಚರಣೆಯನ್ನು ಮಾಡುತ್ತಿರುವನು. ಯಜ್ಞ ಕರ್ಮವು ಹೇಗೆ ನಡೆಯು ವುದು? ಯುಧಿಷ್ಠಿರನಿಗೆ ಯಜ್ಞಾಂತದ ಅವಭೃಥ ಸ್ನಾನಾದಿಗಳು ನಡೆಯಲಿಲ್ಲ; ಅರುವತ್ತುನಾಲ್ಕು ದಂಪತಿಗಳು ಜಲಾ ಹರಣಕ್ಕಾಗಿ ಹೊರಡಲಿಲ್ಲ; ಯುಧಿಷ್ಠಿರ ಭೀಮಾದಿ ವೀರರು ನನ್ನ ಬಂಧುಗಳು. ನೂರು ಕಡ್ಡಿಗಳಿಂದಲೂ ಹುಲಿಯ ಚರ್ಮದಿಂದಲೂ ಕೂಡಿದ ಛತ್ರವನ್ನು ಯಜ್ಞಾರಂಭದಲ್ಲಿ ಧರ್ಮಜನೆದುರಿಗೆ ಹಿಡಿಯಲಿಲ್ಲ; ಗೌರೀ ಸಂಜ್ಞೆ ಯುಳ್ಳ ಸಹಸ್ರ ಸ್ತ್ರೀಯರು (ಹತ್ತು ವರುಷದ ಹುಡುಗಿಯರು) ಚಾಮರಗಳನ್ನು ಹಿಡಿದು ಧರ್ಮನಂದನನೆದುರಿಗೆ ಹೊರಡಲಿಲ್ಲ; ಲಾಜಾಕ್ಷತೆಗಳ ಮಳೆಯು ಸುರಿಯಲಿಲ್ಲ; ಬ್ರಾಹ್ಮಣರ ವೇದ ಘೋಷವು ದೇವ ಲೋಕದ ವರೆಗೂ ವ್ಯಾಪಿಸಲಿಲ್ಲ; ಚಿನ್ನದ ಸ್ರುವ ಗಳನ್ನು ಮಾಡಿಸಲಿಲ್ಲ; ಸ್ರುಕ್ಕುಗಳ ಸಂಸ್ಕಾರವಾಗಲಿಲ್ಲ; ಯಜ್ಞದಲ್ಲಿ ವೈಕಂಕತ, ಚಷಾಲಗಳೆಂಬ ಪಾತ್ರೆಗಳು ಪ್ರಕಾಶಿಸಲಿಲ್ಲ; ಬಿಲ್ವ, ಎಲಚಿ, ಮುತ್ತುಗ, ಕಗ್ಗಲಿ— ಇವುಗಳಿಂದ ಮಾಡಿದ ಯೂಪ ಸ್ತಂಭಗಳನ್ನೂ ಪತಾಕೆಗಳನ್ನೂ ನಮ್ಮವರು ಪೂಜಿಸ ಲಿಲ್ಲ; ಶ್ರೀಕೃಷ್ಣ ಸಹಿತಳಾದ ರುಕ್ಮಿಣಿಯನ್ನು ಸಂತೋಷಪಡಿಸಲಿಲ್ಲ; ಧರ್ಮರಾಜನು ಯಜ್ಞಾಂತದಲ್ಲಿ ಅನಸೂಯಾರುಂಧತಿ ಮೊದಲಾದ ಮುತ್ತೈದೆಯರಾದ ಮುನಿ ಪತ್ನಿಯರನ್ನು ಅವರ ಪತಿಗಳೊಡನೆ ನಮಸ್ಕರಿಸಿ ಅವರ ಆಶೀರ್ವಾದಕ್ಕೆ ಪಾತ್ರನಾಗ ಲಿಲ್ಲ. ನನ್ನ ಜೀವನವು ನಿಂದಿತವೂ ವ್ಯರ್ಥವೂ ಆದುದೆಂದು ತಿಳಿವೆನು. ಆದಕಾರಣ ಯುದ್ಧ ಮಾಡುತ್ತೇನೆ" ಎಂದು ಹೇಳಿದನು.

ವೃಷಕೇತುವು ಆ ಮಾತನ್ನು ಕೇಳಿ, "ಅರ್ಜುನನನ್ನು ಯುದ್ಧದಲ್ಲಿ ಬಿಟ್ಟು ನಾನು ಮೃತ್ಯು ಭಯದಿಂದ ತಲೆ ತಪ್ಪಿಸಿಕೊಂಡು ಹೋಗಲಾರೆನು. ಪ್ರಕಾಶಿಸುತ್ತಿರುವ ನಮ್ಮ ಪಿತಾಮಹನಾದ ಸೂರ್ಯನು ನನ್ನಿಂದ ಅವಮಾನವನ್ನು ಹೊಂದಿ ಬಿದ್ದುಹೋಗು ವನು. ಭಗ್ನನಾಗದವನು ಭಂಗವನ್ನು ಪಡೆಯುತ್ತಾನೆ. ಆದರಿಂದ ಮೃತ್ಯುವೆಂತ

ಹುದು? ನಾನು ಹಿಂದಿರುಗುವುದೆಂದರೇನು? ನೀನು ಹೊರಡು. ಯುದ್ಧ ವಿಮುಖನಾಗಿ ನಿನ್ನನ್ನು ಬಿಟ್ಟುಹೋಗಿರುವ ನನ್ನನ್ನು ಏಕಪತ್ನಿಯಾದ ನನ್ನ ಪತ್ನಿಯು ನೋಡುವುದಿಲ್ಲ; ಇದು ಸತ್ಯ. ಎಲೈ ಪಾರ್ಥನೇ! ನನ್ನ ಪೌರುಷವನ್ನು ನೋಡು: ಸೇನಾ ಸಹಿತನಾಗಿ ಬಂದಿರುವ ಆ ಬಭ್ರುವಾಹನನ ಮೇಲೆ ನಾನು ನಿನ್ನೆದುರಿಗೆ ಯುದ್ಧ ಮಾಡುತ್ತೇನೆ. ಯಾವನು ಮಿತ್ರನಿಗಾಗಿಯೂ ಗೋವಿಗಾಗಿಯೂ ಬ್ರಾಹ್ಮಣನಿಗಾಗಿಯೂ ಸ್ವಾಮಿ ಕಾರ್ಯಕ್ಕಾಗಿಯೂ ಯುದ್ಧದಲ್ಲಿ ಪ್ರಾಣಗಳನ್ನು ಬಿಡುವನೋ ಅವನಿಗೆ ಪುಣ್ಯ ಲೋಕ ಪ್ರಾಪ್ತಿಯಾಗುವುದಲ್ಲದೆ ಮುಕ್ತಿಯೂ ದೊರೆಯುವುದು; ಇದಕ್ಕೆ ಸಂದೇಹವಿಲ್ಲ. ಮಹಾ ಬಾಹುವಾದ ಪಾರ್ಥನು ಎಲ್ಲಿಯ ವರೆಗೂ ಯುದ್ಧ ಭೂಮಿಯಲ್ಲಿರುವನೋ ಅಲ್ಲಿಯ ವರೆಗೆ ಈ ಯಜ್ಞವು ನಡೆಯುವುದು. ಏಕೆ ವೃಥಾ ನನ್ನೊಡನೆ ಹೇಳುವೆ?" ಎಂದು ಹೇಳಿ ನಮಸ್ಕಾರಮಾಡಿ ಸಂತೋಷದಿಂದ ರಥ ಪತಾಕೆಗಳೊಡನೆ ಹೋಗಿ ಬಭ್ರುವಾಹನನನ್ನು ಕರೆದು, "ನೀನು ಯುದ್ಧದಲ್ಲಿ ಈ ವರೆಗೆ ಕೊಂದ ಪಾರ್ಥನ ಕಡೆಯ ಶೂರರೆಲ್ಲರಿಗೂ ಈಗ ದೊಡ್ಡ ಶಾಂತಿಯನ್ನು ಮಾಡುವೆನು" ಎಂದು ಹೇಳುತ್ತಿರಲು, ಬಭ್ರುವಾಹನನು ವೃಷಕೇತುವನ್ನು ಮೂರು ಬಾಣಗಳಿಂದ ಹೊಡೆದನು. ಅವು ಅವನ ಎದೆಯನ್ನು ಭೇದಿಸಿಕೊಂಡು, ಬಾಯಾರಿಕೆಯನ್ನು ಪರಿಹರಿಸಲು ಪಾತಾಳದಲ್ಲಿರುವ ಭೋಗವತೀ ನದಿಯ ನೀರನ್ನು ಕುಡಿಯುವುದಕ್ಕೆ ಹೋಗುವುವೋ ಎಂಬಂತೆ ಹೋಗಿ, ನೆಲವನ್ನು ಹೊಕ್ಕುವು. ವೃಷಕೇತುವು ಆರು ಬಾಣಗಳನ್ನು ಬಭ್ರುವಾಹನನ ಎದೆಗೆ ಹೊಡೆಯಲು, ಅವನು ಆ ಏಟಿಗೆ ಭ್ರಾಂತನಾಗಿ ಹೇಗೋ ತನ್ನನ್ನು ತಾನೇ ಸಮಾಧಾನಪಡಿಸಿಕೊಂಡು ಕಂಗೆಡದೆ ವೃಷಕೇತುವಿನೊಡನೆ ಯುದ್ಧಕ್ಕೆ ನಿಲ್ಲಲು, ಅವನು ಬಭ್ರುವಾಹನನ ರಥವನ್ನು ಚೂರು ಚೂರು ಮಾಡಿ ಕೆಡಹಿ, ಸಾರಥಿಯನ್ನೂ ಕುದುರೆಗಳನ್ನೂ ಕೊಂದು, ಪ್ರತಾಪದಿಂದ ಶಂಖ ಧ್ವನಿಯನ್ನು ಮಾಡಿ, ಸುವರ್ಣ ಚಿತ್ರಿತಗಳಾದ ಬಾಣಗಳಿಂದ ಅವನನ್ನು ತುಂಬಿಸಿದನು. ಬಳಿಕ ಬಭ್ರುವಾಹನನು ವೃಷಕೇತುವನ್ನು ಬಾಣಗಳಿಂದ ಹೊಡೆದು ಶತ ಸಹಸ್ರ ಬಾಣಗಳಿಂದ ಅವನ ವಿಚಿತ್ರವಾದ ರಥವನ್ನೂ ಸಾರಥಿಯನ್ನೂ ನೊಗವನ್ನೂ ಕತ್ತರಿಸಿದನು.

ಬಭ್ರುವಾಹನನು ಆಗ್ನೇಯಾಸ್ತ್ರವನ್ನು ಪ್ರಯೋಗಿಸಲು, ವೃಷಕೇತುವು ವಾರುಣಾಸ್ತ್ರವನ್ನು ಬಿಟ್ಟನು. ಬಳಿಕ ಮಹಾ ಬಲನೂ ಶ್ರೀಮಂತನೂ ಆದ ಬಭ್ರುವಾಹನನು ವಾಯವ್ಯಾಸ್ತ್ರ, ಪರ್ವತಾಸ್ತ್ರ, ಐಂದ್ರಾಸ್ತ್ರ, ಕ್ರೂರವಾದ ಕೌಬೇರಾಸ್ತ್ರ, ಸೌರಾಸ್ತ್ರ, ಶಾಂಭವಾಸ್ತ್ರ, ಸಕಲಾಸ್ತ್ರಗಳನ್ನೂ ನಾಶಪಡಿಸುವ ಕಾರ್ತಿಕೇಯಾಸ್ತ್ರ, ಯಾಮ್ಯಾಸ್ತ್ರ ಮೊದಲಾದ ಅಸ್ತ್ರಗಳನ್ನೂ ಶಸ್ತ್ರಗಳನ್ನೂ ಯುದ್ಧದಲ್ಲಿ ಪ್ರಯೋಗಿಸಿದನು. ಹೀಗೆ ಶಸ್ತ್ರಾಸ್ತ್ರ ಪ್ರಯೋಗದಿಂದ ಬಹಳವಾಗಿ ಯುದ್ಧವಾಯಿತು. ಉಭಯ ಪಕ್ಷದಲ್ಲಿ ಅನೇಕ ಜನ ವೀರರು, ಪ್ರಳಯ ಕಾಲದಲ್ಲಿ ಯಮನಿಂದ ಹೇಗೋ ಹಾಗೆ, ಸಂಹೃತರಾದರು. ವೃಷಕೇತುವು ಧ್ವಂಸ ಮಾಡಿದ ಗಜ ರಥ ಪದಾತಿಗಳಿಂದ ಬಹಳವಾಗಿ ಭೂತ ತುಷ್ಟಿಯಾಗುವ ರುದ್ರ ಕ್ರೀಡೆಯಾಯಿತು. ಅವನ ಬಾಣಗಳು ಬಭ್ರುವಾಹನನನ್ನು ಆವರಿಸಿಕೊಳ್ಳಲು, ಅವನು ವೈಷ್ಣವಾಸ್ತ್ರವನ್ನು ನೆನೆದು ಅದರಿಂದ ಎಲ್ಲ ಅಸ್ತ್ರಗಳನ್ನೂ ಶಾಂತಿಗೊಳಿಸಿ, ಬಾಡಬಾಸ್ತ್ರವನ್ನು ಸಂಧಾನ

ಮಾಡಿ ಕರ್ಣ ಪುತ್ರನನ್ನು ಕುರಿತು, "ನಾನು ಅನೇಕರನ್ನು ಕೊಂದರೂ ವೃಷಕೇತುವು ನನ್ನನ್ನು ಬಾಣಗಳಿಂದ ಪೀಡಿಸಲಿಲ್ಲ. ಇಂದ್ರನು ವೃತ್ರನನ್ನು ಕೊಂದಂತೆ ಇಲ್ಲಿ ನಾನು ಇವನನ್ನು ಕೊಲ್ಲುವೆನು" ಎಂದು ಹೇಳಿ ಪ್ರಯೋಗಿಸಿದನು. ಆ ಬಾಣವು ವೃಷಕೇತುವಿನ ಎದೆಯಲ್ಲಿ ನಟ್ಟು ಅವನನ್ನು ಆಕಾಶಕ್ಕೆ ಹಾರಿಸಿಕೊಂಡುಹೋಗಿ ದಿಕ್ಕು ದಿಕ್ಕುಗಳಲ್ಲಿ ಎಲ್ಲಾ ನದೀ ಸಮುದ್ರಗಳನ್ನೂ ಸುತ್ತಿಸಿ ನೆಲದ ಕಡೆಗೆ ಬಾರದೆ ಹೋಗಲು, ಅದು ಅದ್ಭುತವಾಗಿ ತೋರಿತು. ಇವನು ಸ್ವಶರೀರದಲ್ಲಿಯೇ ತಮ್ಮ ಪಿತಾಮಹನ ದೇಹವನ್ನು ಭೇದಿಸುವನೋ ಏನೋ! ಎಂದು ತಂದೆ ಮಕ್ಕಳಿಬ್ಬರೂ ಮೂರು ಮುಹೂರ್ತ ಕಾಲ ಯುದ್ಧಭೂಮಿಯಲ್ಲಿ ಆ ಬಾಣವು ಎಲ್ಲೆಲ್ಲಿಗೆ ವೃಷಕೇತು ವನ್ನು ತೆಗೆದುಕೊಂಡು ಹೋಗುವುದೋ ಅಲ್ಲಲ್ಲಿ ನೋಡುತ್ತಿದ್ದರು. ಮೂರು ಮುಹೂರ್ತದ ಮೇಲೆ ವೃಷಕೇತು ಅರ್ಜುನನ ಮುಂದೆ ಆ ಮಣಿಪುರದಲ್ಲಿ ನೆಲಕ್ಕೆ ಬಿದ್ದನು.

ಬಳಿಕ ವೃಷಕೇತು ಕುಪಿತನಾಗಿ ನಸು ನಗುತ್ತ ರಥ ಸಹಿತನಾದ ಆ ಬಭ್ರುವಾಹ ನನ ಮೇಲೆ ಐದು ಬಾಣಗಳನ್ನು ಪ್ರಯೋಗಿಸಲು, ಆ ಬಾಣಗಳು ಬಭ್ರುವಾಹನನನ್ನು ಅವನ ರಥಾಶ್ವ ಸೂತ ಕೇತನಗಳೊಡನೆ ಮನೋಹರವಾದ ಸ್ವರ್ಗಲೋಕಕ್ಕೆ ಹಾರಿಸಿ ಕೊಂಡು ಹೋದುವು. ರಥವು ಭಯಂಕರವಾದ ಸೂರ್ಯಮಂಡಲದೊಳಕ್ಕೆ ನುಗ್ಗುತ್ತಿ ರಲು, ತನ್ನ ದೇಹವು ಬಾಣಗಳಿಂದ ಸೀಳಿಹೋಗಿದ್ದರೂ ಲಕ್ಷ್ಯ ಮಾಡದೆ, ಬಭ್ರುವಾಹ ನನು ರಥವನ್ನು ಬಿಟ್ಟುಬಿಟ್ಟನು. ಅದು ಸೂರ್ಯನಿಂದ ಸುಟ್ಟು ಸಂಪಾತಿಯಂತೆ ಬೀಳುತ್ತಿರಲು, ಅದನ್ನೂ, ಹಾಗೆಯೇ ಬೀಳುತ್ತಿದ್ದ ಬಭ್ರುವಾಹನನನ್ನೂ ನೋಡಿ ವೃಷಕೇತುವು, "ನಮ್ಮ ಕಡೆಯ ಶೂರನಾದ ಹಂಸಧ್ವಜನನ್ನು ನೀನು ಹಿಂದೆ ಜಯಿಸಿದೆಯಾದ ಕಾರಣ ಎಲೈ ಬಭ್ರುವಾಹನನೇ! ಅದಕ್ಕಾಗಿ ನಿನ್ನನ್ನು ದೇವ ಲೋಕಕ್ಕೆ ಕಳುಹಿಸುವೆನು" ಎಂದು ಹೇಳಿ ಪುನಃ ಬಾಣಗಳಿಂದ ಅವನನ್ನು ಆಕಾಶಕ್ಕೆ ಹಾರಿಸಿದನು. ಬಭ್ರುವಾಹನನು ಆ ಬಾಣಗಳನ್ನು ಮೂರು ತುಂಡಾಗಿ ಕತ್ತರಿಸಿ ಕುಪಿತನಾಗಿ ವೃಷಕೇತುವಿನ ಮೇಲೆ ಪರ್ವತದಂತೆ ಬಿದ್ದನು. ವೃಷಕೇತುವು ಕೈಗಳನ್ನು ಮಸೆದು ಕೊರಲನ್ನು ನಡುಗಿಸುತ್ತ ಐದು ಬಾಣಗಳಿಂದ ಹೊಡೆದನು. ಹೀಗೆ ಇವರಿಬ್ಬರೂ ನೆಲದಲ್ಲಿ ನಿಂತು ಕ್ರೂರವಾದ ಬಾಣಗಳಿಂದ ಯುದ್ಧ ಮಾಡುತ್ತಿರಲು ಅರ್ಜುನನು ಆಶ್ಚರ್ಯದಿಂದ ನೋಡುತ್ತಿದ್ದನು.

ಆಗ ವೃಷಕೇತುವು ಪಾರ್ಥನನ್ನು ಕುರಿತು, "ಪ್ರಭುವೇ! ಪೂರ್ವದಲ್ಲಿ ಕರ್ಣನ ರಥವು ನೆಲದಲ್ಲಿ ಹೂತು ಹೋದಾಗ ಆ ಮಹಾ ಯುದ್ಧದಲ್ಲಿ ನಿಲ್ಲೆಂದು ಅವನು ಹೇಳಿದಂತೆ ಇವನು ಹೇಳಲಿಲ್ಲ. ನನ್ನಿಂದ ಅವನ ದೇಹವು ಸೀಳಿ ಹೋಗಿದ್ದರೂ ಯುದ್ಧವನ್ನು ಬಿಡಲಿಲ್ಲ" ಎಂದು ಹೇಳುತ್ತಿರಲು, ಆ ಬಭ್ರುವಾಹನನು ನಾನಾ ವಿಧ ಶಸ್ತ್ರಾಸ್ತ್ರಗಳಿಂದ ಸೀಳಿಹೋದ ದೇಹವುಳ್ಳವನಾದರೂ, ಪಾರ್ಥನೆದುರಿಗೆ ಪುನಃ ವೃಷಕೇತುವಿನ ತಲೆಯ ಮೇಲೆ ಬಿದ್ದನು. ಅವರಿಬ್ಬರೂ ಸ್ವಲ್ಪ ಕಾಲ ರಥದಲ್ಲಿ ನಿಂತು ಯುದ್ಧ ಮಾಡುತ್ತಲೂ, ವಿರಥರಾದಾಗ ಆಕಾಶಕ್ಕೆ ಹಾರುತ್ತಲೂ ಕೆಳಕ್ಕೆಬೀಳುತ್ತಲೂ,

ಪುನಃ ರಥವನ್ನು ಹತ್ತುತ್ತಲೂ, ಒಬ್ಬರನ್ನೊಬ್ಬರು ಕ್ರೂರವಾದ ಬಾಣಗಳಿಂದ ಸ್ವರ್ಗಕ್ಕೆ ಹಾರಿಸುತ್ತಲೂ ಇರುವುದನ್ನು ಜನರೆಲ್ಲರೂ ನೋಡುತ್ತಿದ್ದರು. ಇಬ್ಬರ ದೇಹದ ಮಾಂಸವೂ ಬಾಣಗಳಿಂದ ಸಾವಿರ ಭಾಗವಾಗಿ ಕತ್ತರಿಸಿಹೋಯಿತು. ಆ ಮಾಂಸವನ್ನು ಹದ್ದು ಮತ್ತು ಪಾರಿವಾಳದ ಆಕಾರವುಳ್ಳ ಬಾಣಗಳು ಕಚ್ಚಿ ಆಕಾಶಕ್ಕೆ ಹಾರುತ್ತಿದ್ದುವು. ಅವರಿಬ್ಬರೂ, ಆಕಾಶದಲ್ಲಿದ್ದವನು ನೆಲಕ್ಕೂ ನೆಲದ ಮೇಲಿದ್ದವನು ಆಕಾಶಕ್ಕೂ ಹೋಗಿ ಯುದ್ಧ ಮಾಡುತ್ತಿರಲು ಹಾಗೆಯೇ ಐದು ದಿನಗಳು ಕಳೆದು ಹೋದುವು. ಹೀಗೆ ಯುದ್ಧ ಮಾಡುತ್ತಿದ್ದ ವೃಷಕೇತುವನ್ನು ನೋಡಿ ಬಭ್ರುವಾಹನನು ಐದನೆಯ ದಿವಸ ಅನೇಕ ತೀಕ್ಷ್ಣ ಬಾಣಗಳಿಂದ ಅವನ ಮೈಯನ್ನು ತುಂಬಿಸುತ್ತ, "ಎಲೈ ವೃಷಕೇತುವೇ! ನೀನೇ ಧನ್ಯನು. ಯಾವ ಮಾನಿಷ್ಠನೂ ನನ್ನ ಮೇಲೆ ಹೀಗೆ ಯುದ್ಧ ಮಾಡಲಿಲ್ಲ; ನೀನು ಈಗ ನಾರಾಯಣ ಸ್ಮರಣೆಯನ್ನು ಮಾಡು; ಇನ್ನು ಬಾಣಗಳಿಂದ ನಿನ್ನನ್ನು ಕೆಡಹುವೆನು" ಎಂದು ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ ಹೇಳಿ, ಅವನ ಮೇಲೆ ಅರ್ಧ ಚಂದ್ರ ಬಾಣವನ್ನು ಬಿಡಲು, ಅದು ಬರುತ್ತಿರುವಾಗಲೇ ವೃಷಕೇತುವು ಅದನ್ನು ಮೂರು ತುಂಡಾಗಿ ಕತ್ತರಿಸಿ ಆರ್ಭಟಿಸಿದನು. ಅಷ್ಟರಲ್ಲಿ ಬಭ್ರುವಾಹನನು ಸುವರ್ಣ ಚಿತ್ರಿತವಾದ ಮತ್ತೊಂದು ಬಾಣವನ್ನು ಬಿಡಲು, ಅದು ವೃಷಕೇತುವಿನ ಕಂಠನಾಳವನ್ನು ಭೇದಿಸಿ ಅವನ ತಲೆಯನ್ನು ತೆಗೆದುಕೊಂಡು ಆಕಾಶಕ್ಕೆ ಹೋಯಿತು. ದೇಹವು ನೆಲಕ್ಕೆ ಬಿದ್ದು ಹೋಗಲು, ಕತ್ತರಿಸಿದ ಆ ತಲೆಯು ಆಕಾಶದಿಂದ ಕೆಳಕ್ಕೆ ಬಂದು ಬಭ್ರುವಾಹನನ ಎದೆಯ ಮೇಲೆ ಬಿದ್ದು ಬಳಿಕ ಚಂಡಿನಂತೆ ಪುಟ ನೆಗೆದು ಪಾರ್ಥನ ಪಾದಗಳ ಮೇಲೆ ಬಿದ್ದಿತು.

ಇಂತು ಬಭ್ರುವಾಹನ ವಿಜಯವೆಂಬ ಮೂವತ್ತೇಳನೆಯ ಅಧ್ಯಾಯವು.

---

# ಪತ್ರ ವ್ಯವಹಾರ

## ೧. ವರ್ಧಮಾನ

'ಕರ್ಣಾಟಕ ಕವಿಚರಿತೆ'ಯ ದ್ವಿತೀಯ ಸಂಪುಟದಲ್ಲಿ ಆದರ ಮಾನ್ಯ ಲೇಖಕರು ಈ ಕವಿಯ ಪರಿಚಯವನ್ನು ಹೀಗೆ ಕೊಟ್ಟಿರುವರು :—"ಈತನು ನಗರದ ೪೬ನೆಯ ಶಾಸನವನ್ನು ಬರೆದಂತೆ ಆ ಶಾಸನದ—

ದೇವೇಂದ್ರಕೀರ್ತಿ ಮುನಿರಾಜ ತನೂಭವೇನ
ಶ್ರೀ ವರ್ಧಮಾನ ಸುಖಿನಾ ಗದಿತಾನಿ ಭಾಂತಿ ।
ಪದ್ಯಾನಿ ಸದ್ಗುಣಯುತಾನಿ ಮಹೋಜ್ವಲಾನಿ
ವಿದ್ವತ್ಕವೀಂದ್ರಗಲ ಕರ್ಣ ವಿಭೂಷಣಾನಿ ॥

ಎಂಬ ಶ್ಲೋಕದಿಂದ ತಿಳಿಯುತ್ತದೆ. ಈ ಶಾಸನದಲ್ಲಿ ಕನ್ನಡ, ಸಂಸ್ಕೃತ—ಈ ಎರಡು ಭಾಷೆಗಳಲ್ಲಿಯೂ ಪದ್ಯಗಳಿವೆ. ಅವು ಅಭಿನವ ವಾದಿ ವಿದ್ಯಾನಂದನನ್ನು (ಕ್ರಿ. ೧೫೩೩) ಸ್ತುತಿಸಿ ಅವನ ಪರಂಪರೆಯನ್ನು ಹೇಳುತ್ತವೆ. ಕವಿ ತನ್ನ ಪರಂಪರೆಯನ್ನು ಹೀಗೆ ಹೇಳಿಕೊಂಡಿದ್ದಾನೆ:—"ವಿಜಯನಗರದ ಕೃಷ್ಣದೇವ ರಾಜನ (ಕ್ರಿ. ೧೫೦೯–೧೫೨೯) ಸಭೆಯಲ್ಲಿ ವಾದಿಗಳನ್ನು ಜಯಿಸಿದ (ಅಭಿನವ) ವಾದಿ ವಿದ್ಯಾನಂದ; ಮಗ ವಿಶಾಲಕೀರ್ತಿ; ಮಗ ಭೈರವೇಂದ್ರ ವಂಶದ ಪಾಂಡ್ಯನೃಪನಿಂದ ಪೂಜಿತನಾದ ದೇವೇಂದ್ರಕೀರ್ತಿ; ಮಗ ಕವಿ ವರ್ಧಮಾನ. ಇವನ ಕಾಲವು ಸುಮಾರು ಕ್ರಿ. ೧೬೦೦ ಆಗಬಹುದು. ಶಾಸನದ ಕಾಲವೂ ಅದೇ.'' ಲೇಖಕರು ಇದೇ ಪುಟದಲ್ಲಿ ಕೆಳಗೆ ಅಡಿಟಿಪ್ಪಣದಲ್ಲಿ ಈ ಕವಿಯ ಕಾಲ ಮೆ|| ರೈಸ್ ಅವರು ಸುಮಾರು ಕ್ರಿ. ೧೫೫೦ ಎಂದು ಹೇಳಿದ್ದಾರೆಂದೂ ತಿಳಿಸಿರುತ್ತಾರೆ. ಪೂರ್ವೋಕ್ತ ಗುರು ಪರಂಪರೆಯಲ್ಲಿ ಉಲ್ಲೇಖ ಮಾಡಿರುವ ಉಕ್ತ ವರ್ಧಮಾನ ಕವಿಯು "ದಶಭಕ್ತ್ಯಾದಿ ಶಾಸ್ತ್ರ'' ವೆಂಬ ಒಂದು ಸಂಸ್ಕೃತ ಗ್ರಂಥವನ್ನು ಶಕ ೧೪೬೪ (ಕ್ರಿ. ೧೫೪೨) ರಲ್ಲಿ ಬರೆದು ಮುಗಿಸಿರುವನು. ಅತಃ, ಇದು ಇವನ ಸುನಿಶ್ಚಿತ ಸಮಯವಾಗಿದೆ. ಆದುದರಿಂದ ಈ ಕವಿಯ ಕಾಲದ ಸಂಬಂಧದಲ್ಲಿ ಇನ್ನು ಸಂದೇಹಕ್ಕೆ ಅವಕಾಶವಿಲ್ಲವೆಂದು ನನ್ನ ನಂಬಿಕೆ. ಈ "ದಶಭಕ್ತ್ಯಾದಿ ಶಾಸ್ತ್ರ''ದ ವಿಶೇಷ ಪರಿಚಯವನ್ನು ನಾನು ಒಂದು ಸ್ವತಂತ್ರ ಲೇಖದಲ್ಲಿ ಕೊಡಬೇಕೆಂದು ಸಂಕಲ್ಪಿಸಿರುವೆನಾದುದರಿಂದ ಪ್ರಕೃತ, ಇಲ್ಲಿ ಈ ಲೇಖಕ್ಕೆ ಸಂಬಂಧಪಡುವ ಶ್ಲೋಕಗಳನ್ನು ಮಾತ್ರ ಎತ್ತಿ ಬರೆಯುತ್ತೇನೆ. ಆ ಶ್ಲೋಕಗಳು ಇವು:—

ಬಲಾತ್ಕಾರ ಗಣಾಂಭೋಜ ಭಾಸ್ಕರಸ್ಯ ಮಹಾ ದ್ಯುತೇಃ ।
ಶ್ರೀಮದ್ದೇವೇಂದ್ರಕೀರ್ತ್ಯಾಖ್ಯ ಭಟ್ಟಾರಕ ಶಿರೋಮಣೇಃ ॥

ಶಿಷ್ಯೇಣ ಜ್ಞಾತ ಶಾಸ್ತ್ರಾರ್ಥ ಸ್ವರೂಪೇಣ ಸು ಧೀಮತಾ ।
ಜಿನೇಂದ್ರ ಚರಣ ದ್ವೈತ ಸ್ಮರಣಾಧೀನ ಚೇತಸಾ ॥
ವರ್ಧಮಾನ ಮುನೀಂದ್ರೇಣ ವಿದ್ಯಾನಂದಾರ್ಯ ಬಂಧುನಾ ।
ಕಥಿತಂ ದಶ ಭಕ್ತ್ಯಾದಿ ಶಾಸನಂ ಭವ್ಯ ಸೌಖ್ಯದಂ ॥
ಶಾಕೇ ವೇದ ಖರಾಬ್ಧಿ ಚಂದ್ರ ಕಲಿತೇ ಸಂವತ್ಸರೇ ಶ್ರೀ ಪ್ಲವೇ ।
ಸಿಂಹ ಶ್ರಾವಣಿಕೇ ಪ್ರಭಾಕರ ಶಿವೇ ಕೃಷ್ಣಾಷ್ಟಮಿಾ ವಾಸರೇ ॥
ರೋಹಿಣ್ಯಾಂ ದಶ ಭಕ್ತಿ ಪೂರ್ವಕ ಮಹಾ ಶಾಸ್ತ್ರಂ ಪದಾರ್ಥೋಜ್ಜ್ವಲಂ ।
ವಿದ್ಯಾನಂದ ಮುನಿ ಸ್ತುತಂ ವ್ಯರಚಯತ್ ಸದ್ವರ್ಧಮಾನೋ ಮುನಿಃ ॥

'ಕರ್ಣಾಟಕ ಕವಿಚರಿತೆ'ಯ ಕರ್ತರು ನಗರದ ೪೬ನೆಯ ಶಾಸನದಲ್ಲಿ ಉಲ್ಲೇಖಿಸಿರುವ ವಾದಿ ವಿದ್ಯಾನಂದನ ಪರಿಚಯದಲ್ಲಿ, "'ಕಾವ್ಯಸಾರ'ವೆಂಬ ಗ್ರಂಥದ ಒಂದು ಪ್ರತಿಯ ಕೊನೆಯಲ್ಲಿ, 'ವಿಜಯ ಸಂವತ್ಸರದ ಭಾದ್ರಪದ ಬಹುಳ ೩ರಲ್ಲಿ ಶ್ರೀಮದಭಿನವ ವಾದಿ ವಿದ್ಯಾನಂದ ಸ್ವಾಮಿಗಳು ಭಲ್ಲಾತಕೀ ಪುರವರಾಧೀಶ್ವರ ಭೈರಾಗಿಗೆ (?) ಬರಸಿಕೊಟ್ಟ ಕಾವ್ಯಸಾರಕ್ಕೆ ಮಂಗಳ ಮಹಾಶ್ರೀ' ಎಂದಿರುವುದರಿಂದ, ಈ ಗ್ರಂಥವು ಅಭಿನವ ವಾದಿ ವಿದ್ಯಾನಂದನಿಂದ ಸಂಕಲಿತವಾಗಿರಬಹುದೆಂದು ಊಹಿಸಬಹುದಾಗಿದೆ" ಎಂದು ಉಲ್ಲೇಖಿಸಿ ಮುಂದೆ ಇದೇ ಪರಿಚಯದಲ್ಲಿ, "ಹಿಂದೆ ವಿದ್ಯಾನಂದ ಎಂಬ ಹೆಸರುಳ್ಳ ಕೆಲರು ಜೈನ ಗುರುಗಳು ಪ್ರಸಿದ್ಧರಾಗಿದ್ದರು. ಆದುದರಿಂದ, ಅಭಿನವ ವಾದಿ ವಿದ್ಯಾನಂದ ಎಂದು ಈ ಕವಿ ಹೆಸರಿಟ್ಟುಕೊಂಡಂತೆ ಕಾಣುತ್ತದೆ" ಎಂದೂ ಅಭಿಪ್ರಾಯಪಟ್ಟಿರುವರು. ಪ್ರಾಯಃ ಇದೇ ಆಶಯದ ಮೇಲೆ ಲೇಖಕರು ಮುಂದೆ ವರ್ಧಮಾನ ಕವಿಯ ಪರಿಚಯದಲ್ಲಿಯೂ ವಾದಿ ವಿದ್ಯಾನಂದನೊಡನೆ ಅಭಿನವ ಶಬ್ದವನ್ನು ಜೋಡಿಸಿರಬೇಕು. ಆದರೆ ನಗರದ ೪೬ನೆಯ ಆ ಶಾಸನದಲ್ಲಿ ವಾದಿ ವಿದ್ಯಾನಂದನೊಡನೆ ಅಭಿನವ ಶಬ್ದದ ಪ್ರಯೋಗವು ಇಲ್ಲವೆಂದು ಮಿತ್ರರಾದ ಶ್ರೀಯುತ ಪಂ. ಜುಗಲಕಿಶೋರರ ಹೇಳಿಕೆ.

ಇನ್ನೊಂದು ಮಾತು:—ನಾನು ಮೇಲೆ ಉಲ್ಲೇಖಿಸಿರುವಂತೆ, ಕವಿ ವರ್ಧಮಾನನ ನಿರ್ಣೀತ ಕಾಲ ಕ್ರಿ. ೧೫೪೨. 'ಕರ್ಣಾಟಕ ಕವಿಚರಿತೆ'ಯ ಲೇಖಕರ ಅಭಿಪ್ರಾಯದಂತೆ, ವಾದಿ ವಿದ್ಯಾನಂದನ ಕಾಲ ಕ್ರಿ. ೧೫೩೩. ಹೀಗೆ ವಾದಿ ವಿದ್ಯಾನಂದನ ಕಾಲ, ಹಾಗೂ, ಕವಿ ವರ್ಧಮಾನನ ಕಾಲ—ಇವುಗಳಲ್ಲಿ ಕೇವಲ ೯ ವರ್ಷಗಳ ಅಂತರವು ಕಾಣುವುದು. ವರ್ಧಮಾನನ ಗುರು ದೇವೇಂದ್ರಕೀರ್ತಿ; ದೇವೇಂದ್ರಕೀರ್ತಿಯ ಗುರು ವಿಶಾಲಕೀರ್ತಿ; ವಿಶಾಲಕೀರ್ತಿಯ ಗುರು ವಾದಿ ವಿದ್ಯಾನಂದ. ಹೀಗಿರುತ್ತ, ಈ ನಾಲ್ಕು ಮಂದಿಯೂ ಒಂದೇ ಸಮಯದಲ್ಲಿದ್ದರೆಂದು ಒಪ್ಪಬೇಕಾಗುವುದು. ಆದರೆ ಇದು ಸ್ವಲ್ಪ ಆಕ್ಷೇಪಕ್ಕವಕಾಶ ಕೊಡಬಹುದಾದುದರಿಂದ 'ಕರ್ಣಾಟಕ ಕವಿಚರಿತೆ'ಯ ಸುಯೋಗ್ಯ ಲೇಖಕರು ವಾದಿ ವಿದ್ಯಾನಂದನ ಕಾಲದ ಸಂಬಂಧದಲ್ಲಿ ಪುನಃ ಒಂದಾವೃತ್ತಿ ವಿಚಾರ ಮಾಡಬೇಕೆಂದು ಅವರಲ್ಲಿ ನನ್ನ ಸವಿನಯ ಪ್ರಾರ್ಥನೆ.

ಕೆ. ಭುಜಬಲಿಶಾಸ್ತ್ರೀ

---

## ೨. ತುಂಬುಲೂರಾಚಾರ್ಯ ಮತ್ತು ಶ್ರೀವರ್ಧದೇವ

'ಶ್ರುತಾವತಾರ'ದ—

ಅಥ ತುಂಬುಲೂರ ನಾಮಾಚಾರ್ಯೋಽಭೂತ್ತುಂಬುಲೂರ ಸದ್ಗ್ರಾಮೇ ।
ಷಷ್ಠೇನ ವಿನಾ ಖಂಡೇನಸೋಽಪಿ ಸಿದ್ಧಾಂತಯೋರುಭಯೋಃ　　|| ೧೬೫ ||

ಚತುರಧಿಕಾಶೀತಿ ಸಹಸ್ರ ಗ್ರಂಥ ರಚನಯಾಯುಕ್ತಾಂ ।
ಕರ್ಣಾಟ ಭಾಷಯಾಽಕೃತ ಮಹತೀಂ ಚೂಡಾಮಣಿಂ ವ್ಯಾಖ್ಯಾಂ　　|| ೧೬೬ ||

ಎಂಬ ಶ್ಲೋಕಗಳಲ್ಲಿ ಸಮಂತಭದ್ರರಿಂದ ಮೊದಲು ಪದ್ಮನಂದಿ (ಕುಂದಕುಂದ) ಮುನಿ, ಹಾಗೂ, ಶಾಮಕುಂಡಾಚಾರ್ಯ—ಇವರ ಅನಂತರ, ಸಿದ್ಧಾಂತ ಗ್ರಂಥಗಳ ಟೀಕಾಕಾರನ ರೂಪದಲ್ಲಿ ತುಂಬುಲೂರಾಚಾರ್ಯರೆಂಬ ಹೆಸರಿನಿಂದ ಒಬ್ಬ ವಿದ್ವಾಂಸರು ಉಲ್ಲೇಖಿಸಲ್ಪಟ್ಟಿರುವರು. ಇವರು ತುಂಬುಲೂರ ಗ್ರಾಮದ ನಿವಾಸಿಗಳು. ಇದರಿಂದಲೇ ಇವರಿಗೆ ಈ ಹೆಸರು ಬಂದಿದೆ. ಮೇಲೆ ಕೊಟ್ಟಿರುವ ಎರಡನೆಯ ಶ್ಲೋಕದಿಂದ, ಇವರು ಈ ಟೀಕೆಯನ್ನು ಕರ್ಣಾಟಕ ಭಾಷೆಯಲ್ಲಿ ಬರೆದಿದ್ದರೆಂದೂ ಇದರ ಶ್ಲೋಕ ಸಂಖ್ಯೆ ೮೪ ಸಾವಿರವೆಂದೂ, ಟೀಕೆಯ ಹೆಸರು 'ಚೂಡಾಮಣಿ'ಯೆಂದೂ ವಿದಿತವಾಗುವುದು. ಶ್ರೀಯುತ ರೈಸ್ ಮೊದಲಾದ ವಿದ್ವಾಂಸರು ತಮ್ಮ ತಮ್ಮ ಗ್ರಂಥಗಳಲ್ಲಿ ತುಂಬುಲೂರಾಚಾರ್ಯರ ಮೂಲ ನಾಮವು ಶ್ರೀವರ್ಧದೇವರೆಂದು ಅಭಿಪ್ರಾಯಪಟ್ಟಿರುತ್ತಾರೆ. ಆದರೆ ಹೀಗೆ ಹೇಳುವುದಕ್ಕೆ ಯಾವ ಸ್ಪಷ್ಟ ಆಧಾರವೂ ಕಾಣುವುದಿಲ್ಲ.

'ರಾಜಾವಳೀ ಕಥೆ'ಯಲ್ಲಿ . ಈ ಟೀಕೆಯ ಉಲ್ಲೇಖವು ಚೂಡಾಮಣಿ ವ್ಯಾಖ್ಯಾನವೆಂಬ ಹೆಸರಿನಿಂದ ಪ್ರಾಪ್ತವಾಗುವುದು. ಹಾಗೆಯೇ, ಇದು ತುಂಬುಲೂರಾಚಾರ್ಯರ ಕೃತಿಯೆಂದೂ ಇದರ ಶ್ಲೋಕ ಪ್ರಮಾಣ ೮೪ ಸಾವಿರವೆಂದೂ ತಿಳಿಯುವುವು. 'ಕರ್ಣಾಟಕ ಶಬ್ದಾನುಶಾಸನ'ದಲ್ಲಿ ಅದರ ಕರ್ತನು 'ಚೂಡಾಮಣಿ'ಯನ್ನು ಕರ್ಣಾಟಕ ಭಾಷೆಯ ಒಂದು ದೊಡ್ಡ ಗ್ರಂಥವನ್ನಾಗಿ ಹೇಳಿ, ಅದನ್ನು ತತ್ತ್ವಾರ್ಥ ಮಹಾ ಶಾಸ್ತ್ರದ ವ್ಯಾಖ್ಯಾನವನ್ನಾಗಿ ತಿಳಿಸಿರುತ್ತಾನೆ. ಅದರಲ್ಲಿ ಗ್ರಂಥದ ಪರಿಮಾಣ ೯೬ ಸಾವಿರವೆಂದು ಬರೆದಿದೆ; ಗ್ರಂಥಕರ್ತನ ಹೆಸರು ಕಾಣುವುದಿಲ್ಲ. ಶ್ರವಣಬೆಳ್ಗೊಳದ ೫೪ನೆಯ ಶಿಲಾ ಲೇಖದಲ್ಲಿ ಶ್ರೀವರ್ಧದೇವರನ್ನು 'ಚೂಡಾಮಣಿ'ಯೆಂಬ ಒಂದು ಸೇವ್ಯ ಕಾವ್ಯದ ಕವಿಗಳನ್ನಾಗಿ ಹೇಳಿ, ಇವರು—

ಜಹ್ನೋಃ ಕನ್ಯಾಂ ಜಟಾಗ್ರೇಣ ಬಭಾರ ಪರಮೇಶ್ವರಃ ।
ಶ್ರೀವರ್ಧದೇವ ಸಂಧತ್ಸೆ ಜಿಹ್ವಾಗ್ರೇಣ ಸರಸ್ವತೀಂ ||

ಎಂಬ ಶ್ಲೋಕದ ಮೂಲಕವಾಗಿ ಮಹಾ ಕವಿ ದಂಡಿಯಿಂದ ಹೊಗಳಲ್ಪಟ್ಟಿರುವರೆಂದು ಬರೆದಿದೆ. ಗ್ರಂಥದ ಚೂಡಾಮಣಿಯೆಂಬ ಹೆಸರಿನ ಸಾಮ್ಯವನ್ನು ನೋಡಿಯೇ ತುಂಬುಲೂರಾಚಾರ್ಯ, ಶ್ರೀವರ್ಧದೇವ ಎಂಬ ಈ ಎರಡೂ ಹೆಸರುಗಳು ಒಬ್ಬನಿಗೇ ಅನ್ವಯಿಸುತ್ತವೆ ಎಂಬುದಾಗಿ ಉಕ್ತ ವಿದ್ವಾಂಸರು ಅಭಿಪ್ರಾಯಪಟ್ಟಿರಬಹುದು.

ಆದರೆ, 'ರಾಜಾವಳೀ ಕಥೆ' ಮತ್ತು 'ಕರ್ಣಾಟಕ ಶಬ್ದಾನುಶಾಸನ'—ಇವುಗಳಲ್ಲಿ 'ಚೂಡಾಮಣಿ'ಯನ್ನು ಒಂದು ವ್ಯಾಖ್ಯಾನ ಗ್ರಂಥವನ್ನಾಗಿ ಪ್ರಕಟ ಮಾಡಿರುವಂತೆ ಉಕ್ತ ಶಿಲಾ ಲೇಖದಲ್ಲಿ ಪ್ರಕಟ ಮಾಡಲಿಲ್ಲ. ಶಿಲಾ ಲೇಖದಲ್ಲಿ ಸ್ಪಷ್ಟವಾಗಿ ಅದನ್ನು ಒಂದು ಸೇವ್ಯ ಕಾವ್ಯವನ್ನಾಗಿ ಬರೆದಿದೆ. ಅದರಲ್ಲಿ ಈ ಕಾವ್ಯವನ್ನು ಕನ್ನಡ ಕಾವ್ಯವನ್ನಾಗಿಯೂ ಬರೆಯಲಿಲ್ಲ. ಅದೂ ಅಲ್ಲದೆ, 'ರಾಜಾವಳೀ ಕಥೆ'ಯೇ ಮೊದಲಾದ ಗ್ರಂಥಗಳಲ್ಲಿ ಪೂರ್ವೋಕ್ತ ವ್ಯಾಖ್ಯಾನದೊಡನೆ ಶ್ರೀವರ್ಧದೇವರ ಹೆಸರೂ ಕಾಣುವುದಿಲ್ಲ. ಆದುದರಿಂದ, ಎರಡೂ ಗ್ರಂಥಗಳನ್ನು ಒಂದನ್ನಾಗಿ ಒಪ್ಪಿ ಆ ಆಧಾರದ ಮೇಲೆ ತುಂಬುಲೂರಾಚಾರ್ಯ ಮತ್ತು ಶ್ರೀವರ್ಧದೇವ—ಇವರಿಬ್ಬರನ್ನೂ ಒಬ್ಬ ವ್ಯಕ್ತಿಯನ್ನಾಗಿ ಹೇಳುವುದು ಸರಿಯಲ್ಲ. ಪ್ರಾಯಃ 'ಚೂಡಾಮಣಿ' ಒಂದು ಸ್ವತಂತ್ರ ಉಚ್ಚ ಸಂಸ್ಕೃತ ಕಾವ್ಯವಾಗಿದ್ದರೂ ಇರಬಹುದು. ಅದನ್ನು ಲಕ್ಷ್ಯಮಾಡಿಯೇ ಸ್ವಯಂ ಸಂಸ್ಕೃತ ಭಾಷೆಯ ಪ್ರೌಢ ಕವಿಯಾದ ದಂಡಿಯು ಶ್ರೀ ವರ್ಧದೇವರನ್ನು ಉಕ್ತ ಶ್ಲೋಕದಲ್ಲಿ ಹೊಗಳಿರಬಹುದು. ವಿದ್ವಾಂಸರು ಈ ವಿಷಯದಲ್ಲಿ ವಿಶೇಷ ಅನುಸಂಧಾನವನ್ನು ಮಾಡಬೇಕು.

ಕೆ. ಭುಜಬಲಿಶಾಸ್ತ್ರೀ

---

## ೩. ಮುದ್ರಾರಾಕ್ಷಸದ ಕ್ಷಪಣಕ

ಸಂಸ್ಕೃತ ನಾಟಕ ಗ್ರಂಥಗಳಲ್ಲಿ ಮುದ್ರಾರಾಕ್ಷಸವು ಅನೇಕ ವಿಷಯಗಳಲ್ಲಿ ಒಂದು ವಿಲಕ್ಷಣ ಗ್ರಂಥವಾಗಿದೆ. ಇದು ಕೇವಲ ರಾಜನೀತಿಯನ್ನೇ ಲಕ್ಷ್ಯವಾಗಿಟ್ಟುಕೊಂಡು ಬರೆದ ಗ್ರಂಥ. ಘಟನೆಯು ನವ ನಂದರ ಅಂತಿಮ ಸಮಯದ್ದು. ನಂದರ ಮಂತ್ರಿಯಾದ ರಾಕ್ಷಸನನ್ನು ಯಾವ ವಿಧದಿಂದಲಾದರೂ ಚಂದ್ರಗುಪ್ತ ಚಾಣಕ್ಯರ ಪಕ್ಷಕ್ಕೆ ತರುವುದೇ ಈ ನಾಟಕದ ಮುಖ್ಯೋದ್ದೇಶ. ಚಾಣಕ್ಯನ ಕುಟಿಲ ನೀತಿಯಿಂದಲೇ ನವ ನಂದರು ದೈವಾಧೀನರಾದುದು. ಮಂತ್ರಿಯಾದ ರಾಕ್ಷಸನು ಪ್ರಥಮದಲ್ಲಿ ಜೈನ ಧರ್ಮಾನುಯಾಯಿಯಾಗಿದ್ದನೆಂದು 'ಆಕ್ಸ್‌ಫರ್ಡ್ ಹಿಸ್ಟರಿ ಆಫ್ ಇಂಡಿಯಾ' ಎಂಬ ಪುಸ್ತಕದ ಲೇಖಕರ ಅಭಿಪ್ರಾಯ (ಪುಟ ೫೮-೬೦). ರಾಕ್ಷಸನು ನಂದರ ವಿಶ್ವಾಸ ಪಾತ್ರನಾಗಿದ್ದು ಅವರ ಮರಣೋಪರಾಂತವೂ ಆ ಪ್ರಭುಗಳನ್ನು ನಾಶ ಮಾಡಿದ ಚಂದ್ರಗುಪ್ತ ಚಾಣಕ್ಯರ ಮೇಲೆ ತನ್ನ ಹಗೆಯನ್ನು ತೀರಿಸಿಕೊಳ್ಳುವುದಕ್ಕಾಗಿ ಪ್ರಯತ್ನಪಟ್ಟನು. ಪೂರ್ವೋಕ್ತ ಇತಿಹಾಸದ ಸುಯೋಗ್ಯ ಲೇಖಕರು ನಂದ ವಂಶವೂ ಜೈನ ಧರ್ಮಾನುಯಾಯಿಯಾಗಿದ್ದಿತೆಂದು ಊಹಿಸುತ್ತಾರೆ (ಪುಟ ೫೭). ಈ ಮಾತನ್ನು ಸಮ್ರಾಟ್ ಖಾರವೇಲನ ಶಿಲಾ ಲೇಖವೂ ಪುಷ್ಟಿ ಮಾಡುತ್ತದೆ. ಆದರೆ, ವೈದಿಕ ಮಾನ್ಯತೆ ಮತ್ತು ಒಂದು ಪ್ರಾಚೀನ ಉತ್ಕಲ ಭಾಷೆಯಲ್ಲಿರುವ ಹಸ್ತಲಿಖಿತ ಕಾವ್ಯ—ಇವು ನಂದನನ್ನು ವೈದಿಕ ಧರ್ಮಾನುಯಾಯಿಯನ್ನಾಗಿಯೇ ಸಿದ್ಧ ಮಾಡುತ್ತವೆ. (ಪೂರ್ವ: ಪುಟ ೪೮೩). ಈ ಸಂದನು

ನವ ನಂದ, ಅಥವಾ ಮಹಾಪದ್ಮನಾಗಿರಬೇಕು. ಜೈನ ಗ್ರಂಥಗಳಲ್ಲಿಯೂ ಇವನು ಜೈನ ಧರ್ಮಕ್ಕೆ ವಿರೋಧಿಯಾಗಿದ್ದನೆಂದು ಬರೆದಿದೆ. ಭಗವತೀ ಸೂತ್ರದಲ್ಲಿ ಯಾವ ರಾಜ ಮಹಾಪದ್ಮನಿಂದ ಜೈನರು ವಿಶೇಷವಾಗಿ ಹಿಂಸಿಸಲ್ಪಟ್ಟರೆಂದು ಬರೆದಿರುವುದೋ ಅವನನ್ನು ವಿದ್ವಾಂಸರು ಮಹಾಪದ್ಮ ನಂದನನ್ನಾಗಿಯೇ ಹೇಳುತ್ತಾರೆ. ('ಆಜೀವಿಕ್ಸ್', ಭಾಗ ೧, ಪುಟ ೬೭). ಬ್ರ॥ ನೇಮಿದತ್ತನ ಆರಾಧನಾ ಕಥಾ ಕೋಶದ ಮೂರನೆಯ ಭಾಗದಲ್ಲಿರುವ ಶಕಟಾಲ ಮುನಿಯ ಕಥೆಯಿಂದಲೂ, ನಂದ ರಾಜನು ಪ್ರಥಮದಲ್ಲಿ ಜೈನ ಧರ್ಮದ ಶತ್ರುವಾಗಿದ್ದನೆಂದು ಪ್ರಕಟವಾಗುವುದು. ಆದರೆ, ಹಿಂದೆ ಅವನು ಶ್ರಾವಕ ವ್ರತವನ್ನು ಗ್ರಹಣ ಮಾಡಿದನೆಂದು ಅದೇ ಕಥೆಯಲ್ಲಿ ಬರೆದಿದೆ. ಶಕಟಾಲನು ನಂದರಾಜನ ಮಂತ್ರಿಗಳಲ್ಲಿ ಒಬ್ಬನು. ವರರುಚಿಯ ಬೃಹತ್ಕಥಾ ಗ್ರಂಥದಿಂದಲೂ, ನಂದನಿಗೆ ಶಕಟಾಲನೆಂಬ ಒಬ್ಬ ಮಂತ್ರಿ ಇದ್ದನೆಂದು ತಿಳಿದುಬರುತ್ತದೆ. ಭಾಗವತ, ವಿಷ್ಣು ಪುರಾಣ, ಮತ್ಸ್ಯ ಪುರಾಣ ಮುಂತಾದ ಹಿಂದೂಗಳ ಪುರಾಣ ಗ್ರಂಥಗಳಲ್ಲಿ ನಂದ ವಂಶದ ಕೊನೆಯ ರಾಜನಾದ ಮಹಾಪದ್ಮನಿಗೆ ಶೂದ್ರ ಜಾತನೆಂದೂ, ಅವನ ಹಿಂದಿನ ರಾಜರುಗಳಿಗೆ ಶೂದ್ರರೆಂದೂ ಬರೆದಿದೆ. ಆದರೆ, ಇದು ಸಾಂಪ್ರದಾಯಿಕ ವಿದ್ವೇಷದಿಂದಲೇ ಕಲ್ಪಿಸಿದ ಕಥೆಯೆಂದು ಕೆಲವು ವಿದ್ವಾಂಸರ ಅಭಿಪ್ರಾಯ. ಮುದ್ರಾರಾಕ್ಷಸದಲ್ಲಿಯೂ ಚಂದ್ರಗುಪ್ತನ ಸಂಬಂಧವನ್ನು ನಂದ ವಂಶದೊಡನೆ ಪ್ರಕಟ ಮಾಡಿ ಅವನನ್ನು ವೃಷಲ ರೂಪದಲ್ಲಿ ಸಂಬೋಧಿಸಿರುವುದು ಆಶ್ಚರ್ಯ. ಇರಲಿ; ಇದುವರೆಗೆ ಉಪಲಬ್ಧವಾಗಿರುವ ಪ್ರಬಲ ಪ್ರಮಾಣಗಳಿಂದ ಚಂದ್ರಗುಪ್ತನು ಶೂದ್ರನಾಗಿರದೆ ಒಬ್ಬ ಮಹಾ ಪ್ರತಾಪಿ, ಧರ್ಮನಿಷ್ಠ ಜೈನ ಕ್ಷತ್ರಿಯನಾಗಿದ್ದನೆಂಬುದನ್ನು ಒಂದು ಸ್ವತಂತ್ರ ಲೇಖದಲ್ಲಿ ನಾನು ತಿಳಿಸಬೇಕೆಂದಿರುವೆನು.

ಇನ್ನು, ಮಾನ್ಯ ಪಾಠಕರ ಲಕ್ಷ್ಯವನ್ನು ಪ್ರಕೃತ ವಿಷಯದ ಕಡೆಗೆ ಎಳೆಯುವೆನು: ಭಾರತೀಯ ಪ್ರಾಚೀನ ಸಾಹಿತ್ಯಾವಲೋಕನದಿಂದ, ಆ ಕಾಲದಲ್ಲಿ ಕ್ಷಪಣಕ ಶಬ್ದವು ಜೈನ ಮುನಿಗಳಿಗಾಗಿಯೇ ಪ್ರಯೋಗಿಸಲ್ಪಡುತ್ತಿದ್ದಿತೆಂಬುದು ಸ್ಪಷ್ಟವಾಗಿ ವಿದಿತವಾಗುವುದು. ಡಾಕ್ಟರ್ ಸತೀಶಚಂದ್ರ ವಿದ್ಯಾಭೂಷಣರೂ ತಮ್ಮ ಒಂದು ಲೇಖದಲ್ಲಿ, ಈ ಮಾತನ್ನು ಸಪ್ರಮಾಣ ಸಮರ್ಥನೆ ಮಾಡಿರುತ್ತಾರೆ. ಬೌದ್ಧ ಗ್ರಂಥಗಳಲ್ಲಿ ಜೈನ ಸಾಧುಗಳು ಕ್ಷಪಣಕ ಎಂಬ ಹೆಸರಿನಿಂದ ಉಲ್ಲೇಖಿಸಲ್ಪಟ್ಟಿರುವರೆಂಬುದಕ್ಕೆ ಉಕ್ತ ವಿದ್ವಾಂಸರು 'ಅವದಾನ ಕಲ್ಪಲತಾ' ಎಂಬ ಒಂದು ಬೌದ್ಧ ಗ್ರಂಥದ—

ಭಗವದ್ಭಾಷಿತಂ ತತ್ತು ಸುಭದ್ರೇಣ ನಿವೇದಿತಂ ।
ಶ್ರುತ್ವಾ ಕ್ಷಪಣಕಃ ಕ್ಷಿಪ್ರಮಭೂದ್ವೇಷ ವಿಷಾಕುಲಃ ॥
ತಸ್ಯ ಸರ್ವಜ್ಞತಾಂ ವೇತ್ತಿ ಸುಭದ್ರೋ ಯದಿ ಮದ್ಗಿರಾ ।
ತದೇಷ ಕ್ಷಪಣ ಶ್ರದ್ಧಾಂ ತ್ಯಕ್ಷ್ಯತಿ ಶ್ರಮಣಾದರಾತ್ ॥

ಎಂಬ ಈ ಎರಡು ಶ್ಲೋಕಗಳನ್ನು ಉದ್ಧೃತ ಮಾಡಿರುವರು.

ಸುಮಾರು ೯೦೦ ವರ್ಷಗಳ ಹಿಂದಿನ 'ಯಾದವಪ್ರಕಾಶ' ವಿರಚಿತ 'ವೈಜಯಂತೀ ಕೋಶ' ದಲ್ಲಿಯೂ—

ಕ್ಷಪಣ ಶ್ರಮಣೌ ನಗ್ನೋ ನಗ್ನಾಟಶ್ಚ ದಿಗಂಬರಃ ।
ಅಜೀವೋ ಜೀವಕೋ ಜೈನೋ ನಿರ್ಗ್ರಂಥೋ ಮಲವಾರ್ಯಪಿ ॥

(ಪುಟ ೩೦೨, ಶ್ಲೋಕ ೧೫)

ಎಂಬೀ ಶ್ಲೋಕದಲ್ಲಿ ಕ್ಷಪಣಕ ಶಬ್ದವು ಜೈನ ಮುನಿಗಾಗಿಯೇ ಪ್ರಯೋಗಿಸಲ್ಪಟ್ಟಿರುವುದು ಸ್ಪಷ್ಟವಾಗಿರುವುದು. ಹಾಗೆಯೇ, ಸುಮಾರು ಒಂದು ಸಹಸ್ರ ವರ್ಷಗಳ ಹಿಂದಿನ ಶ್ರೀ ಮಹೇಶ್ವರ ವಿರಚಿತ 'ವಿಶ್ವಪ್ರಕಾಶ'ದಲ್ಲಿಯೂ "ನಿರ್ಗ್ರಂಥಕಃ ಸ್ಯಾತ್ ಕ್ಷಪಣೇ ನಿಷ್ಫಲೇಽ ಪರಿಚ್ಛಿದೇ" (ಪುಟ ೧೮, ಶ್ಲೋಕ ೧೯೫) ಎಂಬೀ ಶ್ಲೋಕಾರ್ಧವು ದೊರೆಯುವುದು. ಪಂಚತಂತ್ರದಲ್ಲಿ ಪ್ರಯೋಗಿಸಿರುವ ಕ್ಷಪಣಕ ಶಬ್ದವು ಜೈನ ಮುನಿಗಾಗಿಯೇ ಪ್ರಯೋಗಿಸಿರಬೇಕೆಂದು ಹಲವು ಮಾನ್ಯ ವಿದ್ವಾಂಸರ ಅಭಿಮತಃ ಹೀಗಿರುತ್ತ, 'ಮುದ್ರಾರಾಕ್ಷಸ'ದ ಅರ್ವಾಚೀನ ಟೀಕಾಕಾರರು ಕ್ಷಪಣಕ ಶಬ್ದದ ವ್ಯುತ್ಪತ್ತ್ಯರ್ಥವನ್ನು—(ಕ್ಷಪಯತಿ ವಿಷಯ ರಾಗಂ)—ತೆಗೆದುಕೊಂಡು ಉಕ್ತ ಕ್ಷಪಣಕ ಶಬ್ದಕ್ಕೆ ಬೌದ್ಧ ಸನ್ಯಾಸಿಯೆಂದು ಅರ್ಥ ಮಾಡಿರುವುದು ತಪ್ಪೆಂದು ನನ್ನ ಅಭಿಪ್ರಾಯ.

ಹೀಗಿದ್ದರೂ, ಕ್ಷಪಣಕ ಶಬ್ದವು ಸಾಮಾನ್ಯವಾಗಿ ಜೈನ ಸಾಧು ಬೋಧಕ ಶಬ್ದವಾಗಿರುವುದರಿಂದ, ಇದು ಶ್ವೇತಾಂಬರ ಜೈನ ಸಾಧುಗಳಿಗಾಗಿ ಏಕೆ ಪ್ರಯೋಗಿಸಿರಬಾರದೆಂಬೀ ಪ್ರಶ್ನೆಯೂ ಕೆಲವರಲ್ಲಿ ಹುಟ್ಟಬಹುದು. ಅದಕ್ಕೆ ಉತ್ತರ: ಇದು (ಈ ಶಬ್ದವು) ಬಹಳ ಪ್ರಾಚೀನ ಕಾಲದಿಂದ ದಿಗಂಬರ ಜೈನ ಸಾಧುಗಳಿಗಾಗಿಯೇ ವ್ಯವಹರಿಸಲ್ಪಟ್ಟಿರುವ ವಿಷಯವು ಪ್ರಾಚೀನ ಹಿಂದೂ, ಹಾಗೂ ಬೌದ್ಧ ಗ್ರಂಥಗಳಿಂದ ಸ್ಪಷ್ಟವಾಗಿ ವಿದಿತವಾಗುವುದು. ಇಷ್ಟೇ ಅಲ್ಲ; ಶ್ವೇತಾಂಬರರು ಸ್ವಯಂ ಈ ಶಬ್ದವನ್ನು ದಿಗಂಬರ ಸಾಧುಗಳಿಗಾಗಿಯೇ ಪ್ರಯೋಗಿಸುತ್ತಿದ್ದರೆಂಬುದು ನಿಮ್ನ ಲಿಖಿತ ಉದಾಹರಣೆಗಳಿಂದ ಸ್ಪಷ್ಟವಾಗಿ ಜ್ಞಾತವಾಗುವುದು.—

೧. ಖೋಮಾಣ ರಾಜ ಕುಲಜೋಽಪಿ ಸಮುದ್ರಸೂರಿರ್ಗಚ್ಛಂ ಶಶಾಸ ಕಿಲ ದಪ್ರವಣ ಪ್ರಮಾಣ (?) ।
ಜಿತ್ವಾತದಾ ಕ್ಷಪಣಕಾನ್ಸ್ವವಶಂ ವಿತೇನೆ ನಾಗೇಂದ್ರದೇ (?) ಭುಜಗನಾಥ ನಮಸ್ಯ ತೀರ್ಥೇ (?) ॥
(ತಪಗಚ್ಛದ ಪಟ್ಟಾವಲಿ ಶ್ವೇತಾಂಬರ ಕಾನ್ಫರೆನ್ಸ್ ಹೆರಲ್ಡ್, ಭಾಗ II, ಅಂ. ೭-೧೦)

ಈ ಶ್ಲೋಕದ ಪರಿಚಯವನ್ನು ಪ್ರಕಟ ಮಾಡುವಾಗ, ಗುಜರಾತಿ ಭಾಷೆಯಲ್ಲಿ, ಪದ್ಯದಲ್ಲಿ ಉಲ್ಲೇಖ ಮಾಡಿರುವ ಕ್ಷಪಣಕ ಶಬ್ದಕ್ಕೆ "ದಿಗಂಬರ ಜತೀ" ಎಂದೇ ಅರ್ಥಮಾಡಿರುತ್ತಾರೆ. "ಕ್ಷಪಣಕಾನ್" ಎಂಬ ಶಬ್ದ ದಿಗಂಬರ ಯತಿಗಳಿಗಾಗಿಯೇ ಪ್ರಯೋಗಿಸಿರುವುದೆಂಬ ಮಾತು ಮೇಲಿನ ಪದ್ಯದ ಅರ್ಥ, ಅಥವಾ, ಭಾವವನ್ನು ವ್ಯಕ್ತ ಮಾಡುವ ಮುನಿಸುಂದರಸೂರಿಯ ಗುರ್ವಾವಲಿಯ ನಿಮ್ನ ಪದ್ಯದಿಂದ ಇನ್ನೂ ಸ್ಪಷ್ಟವಾಗುತ್ತದೆ. ಇದರಲ್ಲಿ "ಕ್ಷಪಣಕಾನ್" ಎಂಬುದರ ಸ್ಥಾನದಲ್ಲಿ ಸ್ಪಷ್ಟವಾಗಿ "ದಿಗ್ವಸನಾನ್" ಶಬ್ದವು ಪ್ರಯೋಗಿಸಿದೆ—

೨. ಖೋಮಾಣ ಭೂಭೃತ್ಕುಲಜಸ್ತತೋऽಭೂತ್
ಸಮುದ್ರಸೂರಿಃ ಸ್ವವಶಂ ಗುರುರ್ಯಃ ।
ಚಕಾರ ನಾಗಹೃದ ಪಾರ್ಶ್ವತೀರ್ಥಂ
ವಿದ್ಯಾಂಬುಧಿರ್ದಿಗ್ವಸನಾನ್ವಿಜಿತ್ಯ ॥　　॥ ೩೯ ॥

೩. ನಗ್ನೋ ವಿವಾಸಸಿ ಮಾಗಧೇ ಚ ಕ್ಷಪಣಕೇ (ಹೇಮಚಂದ್ರ)

ಇದೇ ಪ್ರಕಾರವಾಗಿ 'ಪ್ರವಚನ ಪರೀಕ್ಷಾ' ಮುಂತಾದ ಬೇರೆ ಬೇರೆ ಶ್ವೇತಾಂಬರರ ಗ್ರಂಥಗಳಲ್ಲಿಯೂ ದಿಗಂಬರರಿಗೆ ಕ್ಷಪಣಕ ಶಬ್ದವನ್ನು ಪ್ರಯೋಗಿಸಿರುವುದು ಕಂಡುಬರುತ್ತದೆ. ಇನ್ನು, ದಿಗಂಬರರ ಗ್ರಂಥಗಳ ಒಂದೆರಡು ಉದಾಹರಣೆಗಳನ್ನೂ ತೆಗೆದುಕೊಳ್ಳೋಣ.—

೧. ತರುಣಉ ಬೂಢಉ ರುಯಡಉ ಸೂರಉ ಪಂಡಿಉ ದಿವ್ವು ।
ಖವಣಉ ವಂದಉ ಸೇವಡಉ ಮೂಢಉ ಮಣ್ಣಇ ಸವ್ವು ॥—
(ಯೋಗೀಂದ್ರದೇವ ಕೃತ 'ಪರಮಾತ್ಮ ಪ್ರಕಾಶ')

೨. ನಗ್ನ ಸ್ತ್ರೀಷು ವಿವಸ್ತ್ರೇ ಸ್ಯಾತ್ಪುಂಸಿ ಕ್ಷಪಣ ವಂದಿನೋಃ ।— (ಶ್ರೀಧರಸೇನ)

'ಮುದ್ರಾರಾಕ್ಷಸ' ದಲ್ಲಿ ಪ್ರಯುಕ್ತ ಕ್ಷಪಣಕ ಪಾತ್ರವು ಆ ಕಾಲದಲ್ಲಿಯ ದಿಗಂಬರ ಜೈನ ಧರ್ಮದ ವ್ಯಾಪಕತೆಯನ್ನೂ, ರಾಜ, ಹಾಗೂ, ಪ್ರಜೆಗಳಿಗೆ ದಿಗಂಬರ ಮುನಿಗಳಲ್ಲಿದ್ದ ಗೌರವಾತಿಶಯವನ್ನೂ ದಿಗಂಬರ ಮುನಿಗಳ ಜ್ಯೋತಿಷ ಶಾಸ್ತ್ರ ಸಂಬಂಧಿ ವಿಶಾಲ ಅಧ್ಯಯನವನ್ನೂ ಪ್ರಕಟ ಮಾಡುವುದು. ಉಕ್ತ ಪಾತ್ರದಿಂದ ಸಮ್ರಾಟ್ ಚಂದ್ರಗುಪ್ತನ ಶಾಸನ ಕಾಲದಲ್ಲಿ ದಿಗಂಬರ ಜೈನ ಮುನಿಗಳಿಗೆ ಎಲ್ಲಿಯೂ ಯಾವ ಪ್ರಕಾರವಾದ ತಡೆಯೂ ಇರಲಿಲ್ಲವೆಂಬ ಅಂಶವೂ ವ್ಯಕ್ತವಾಗುವುದು. ಹಾಗಾದರೆ, ಪವಿತ್ರವಾದ ಈ ಕ್ಷಪಣಕನಿಂದ ಪರ್ವತ ರಾಜನ ಕೊಲೆಯಂತಹ ಕ್ರೂರ ಕೃತ್ಯವು ಹೇಗೆ ನಡೆಯಿತೆಂಬ ಸಂದೇಹವು ಪಾಠಕರಿಗೆ ತಲೆದೋರದಿರದು. ಅದಕ್ಕಿಷ್ಟೇ ಉತ್ತರ : ಸ್ವಯಂ ರಾಕ್ಷಸನು ಸ್ವಾರ್ಥ ಸಾಧನೆಗಾಗಿ ತನ್ನ ಸ್ನೇಹಿತನಾದ ಇಂದುಶರ್ಮನಿಂದ ಉಕ್ತ ಈ ಕಾರ್ಯವನ್ನು ಮಾಡಿಸಿರಬಹುದು ; ಅಥವಾ, ಹಿಂದೆ ಮುದ್ರಾರಾಕ್ಷಸದ ಲೇಖಕನೇ ಸಾಂಪ್ರದಾಯಿಕ ದ್ವೇಷದಿಂದ ಕ್ಷಪಣಕನಿಂದ ಅಂತಹ ಕ್ರೂರವಾದ ನರಹತ್ಯ ರೂಪ ನಿಂದ್ಯ ಕಾರ್ಯವನ್ನು ಹೂಡಿಸಿರಬಹುದು. ನಮಗೆ ಇಂತಹ ಉದಾಹರಣೆಗಳು ಕೆಲವು ಪ್ರಾಚೀನ ಹಿಂದೂ ಕೃತಿಗಳಲ್ಲಿಯೂ ನೋಡಸಿಕ್ಕುವುವು.

ಮುದ್ರಾರಾಕ್ಷಸದಲ್ಲಿ ಕ್ಷಪಣಕ ಜೀವಸಿದ್ಧಿಗೆ "ನಿಷ್ಪರಿಗ್ರಹೀ" ಶಬ್ದವು ಪ್ರಯೋಗಿಸಿದೆ. ಇದು ನಿರ್ಗ್ರಂಥ ಶಬ್ದದ ಪರ್ಯಾಯ ವಾಚಿ. ನಿರ್ಗ್ರಂಥ ಶಬ್ದವು ಜೈನ ಮುನಿಗಳಿಗೆ ಪ್ರಯೋಗಿಸಿರುವ ರೂಢ ಶಬ್ದ. ಹಾಗೆಯೇ, ಪ್ರಕರಣ ವಶ ಭಿನ್ನ ಭಿನ್ನ ಸ್ಥಾನಗಳಲ್ಲಿ ಕ್ಷಪಣಕನ ಮುಖದಿಂದ ಹೇಳಿಸಿದ ಹಲವು ವಾಕ್ಯಗಳೂ ಜೈನತ್ವವನ್ನು ಸ್ಪಷ್ಟವಾಗಿ ಪ್ರಕಟ ಮಾಡುವುವು. ಅವು ಇವು :—

೧. ಸಾಸಣ ಮರಿಹಂ ತಾಣಂ ಪಡಿವಜ್ಜಹ ಮೋಹವಾಹವೇಜ್ಜಾಣಂ
ಜೇ ಪಢಮಮೆತ್ತಕಡು ಅಂ ಪಚ್ಛಾಪತ್ಥಂ ಉವದಿಸಂತಿ ।
ಶಾಸನ ಮರ್ಹತಾಂ ಪ್ರತಿಪದ್ಯಧ್ವಂ ಮೋಹ ವ್ಯಾಧಿ ವೈದ್ಯಾನಾಂ
ಯೇಃ ಪ್ರಥಮ ಮಾತ್ರ ಕಟುಕಂ ಪಶ್ಚಾತ್ ಪಥ್ಯಮುಪದಿಶಂತಿ ॥

೨. ಣತ್ಥಿಪಾವಂ ಸಾವಗಾಣಂ—ನಾಸ್ತಿ ಪಾಪಂ ಶ್ರಾವಕಾನಾಂ ॥

೩. ಧಮ್ಮಸಿದ್ಧಿಹೋಹು ಸಾವಗಾಣಂ—ಧರ್ಮಸಿದ್ಧಿರ್ಭವತು ಶ್ರಾವಕಾನಾಂ ॥

೪. ಜೀವ ಸಿದ್ಧಿಯೆಂಬ ಹೆಸರು, ಹಾಗೂ ಕ್ಷಪಣಕನ ಮುಖದಿಂದ ಪ್ರಾಕೃತ ಭಾಷೆಯನ್ನು ಆಡಿಸಿದುದು.

ಅನುಸಂಧಾನ ಪ್ರೇಮಿಗಳು ಈ ಸಂಬಂಧದಲ್ಲಿ ತಮ್ಮ ತಮ್ಮ ಅಭಿಪ್ರಾಯಗಳನ್ನು ಸುಜ್ಞ ಪಾಠಕರ ಮುಂದಿಡಬೇಕೆಂದು ಪ್ರಾರ್ಥಿಸುತ್ತೇನೆ.

ಕೆ. ಭುಜಬಲಿಶಾಸ್ತ್ರೀ

---

# ವಿವಿಧ ವಿಷಯಗಳು

**ಜಂಬೂ ದ್ವೀಪವೆಂದರೆ ಯಾವುದು?** —ಅಶೋಕನ ಕಾಲದಲ್ಲಿ ಜಂಬೂ ದ್ವೀಪವೆಂಬ ಹೆಸರು ಇಂಡಿಯಾ ದೇಶಕ್ಕೆ ಮಾತ್ರವೇ ಅಲ್ಲ, ಸುತ್ತ ಮುತ್ತಲಿರುವ ಅನೇಕ ದೇಶಗಳನ್ನೊಳಕೊಂಡ ವಿಸ್ತಾರವಾದ ಪ್ರದೇಶಕ್ಕೆ ಇದ್ದಿತೆಂದು ತೋರುವುದು. ಅಶೋಕನು ತನ್ನ ಬೌದ್ಧ ಧರ್ಮವನ್ನು ಇಂಡಿಯಾ ದೇಶದಲ್ಲಿ ಮಾತ್ರವೇ ಅಲ್ಲದೆ ಪ್ರಪಂಚದಲ್ಲೆಲ್ಲ ಹರಡಿ, ಸಕಲ ಪ್ರಪಂಚ ಧರ್ಮವನ್ನಾಗಿ ಮಾಡಿ, ಹೊಸ ಯುಗವನ್ನೇ ಕಲ್ಪಿಸಬೇಕೆಂಬ ಕುತೂಹಲವುಳ್ಳವನಾಗಿದ್ದನು. ಈ ಧರ್ಮವು ಕಲ್ಪಾಂತ ಸ್ಥಾಯಿಯಾಗಿರಬೇಕೆಂದೇ ಅವನ ಆಕಾಂಕ್ಷೆ.

ಜಂಬೂ ದ್ವೀಪವೆಂಬ ಮಾತು ಬೌದ್ಧರ ಪಾಲಿ ಸೂತ್ರಗಳಲ್ಲಿಯೂ ಸಂಸ್ಕೃತ ಗ್ರಂಥಗಳಲ್ಲಿಯೂ ದೊರೆಯುತ್ತದೆ. ಇದರ ವಿವರಣೆಯನ್ನು ಮೊದಲು ಮಹಾಭಾರತದಲ್ಲಿಯೂ ತರುವಾಯ ಮತ್ಸ್ಯ ಪುರಾಣದಲ್ಲಿಯೂ (ಕ್ರಿ. ೨೫೦) ಕೊಟ್ಟಿದೆ. ಇವುಗಳಲ್ಲಿ ವಿವರಿಸಿರುವಂತೆ, ಜಂಬೂ ದ್ವೀಪವು ಸರಿ ಸುಮಾರು ಏಷ್ಯಾ ಖಂಡವನ್ನೆಲ್ಲ ಒಳಕೊಂಡಿದ್ದಿತು. ಅದನ್ನು ಇಂಡಿಯಾ ದೇಶವೆಂದು ಮಾತ್ರ ಹೇಳುವುದು ತಪ್ಪು. ಮತ್ಸ್ಯ ಪುರಾಣದಲ್ಲಿ ಈ ವಿಷಯವಾಗಿ ಹೇಳಿರುವುದನ್ನು ನೋಡೋಣ:—(೧) ಇಂಡಿಯಾ ಎಂದು ಈಗ ಹೆಸರಿರುವ ದೇಶವನ್ನು 'ಮಾನವ ದ್ವೀಪ'ವೆಂದು ಹೇಳಿದೆ; ಕೆಲವು ಪುರಾಣಗಳಲ್ಲಿ ಅದನ್ನು 'ಕುಮಾರೀ ದ್ವೀಪ'ವೆಂದೂ ಕರೆಯುತ್ತಾರೆ. ಕುಮಾರೀ ದ್ವೀಪವೆಂಬ ಹೆಸರು 'ಕುಮಾರೀ' ಎಂಬುದರಿಂದ ಬಂದದ್ದು. ಈಗಲೂ 'ಕನ್ಯಾ ಕುಮಾರಿ' ಎಂಬ ಹೆಸರು 'ಕೇಪ್ ಕಾಮೊರಿನ್' ಎಂಬುದರ ಪರ್ಯಾಯ ಪದವಾಗಿದೆ. ಈ ದ್ವೀಪದ ವಿಸ್ತರವು ಕುಮಾರಿಯಿಂದ ಗಂಗಾ ನದಿಯ ಮೂಲದ ವರೆಗೆಂದು ಪುರಾಣದಲ್ಲಿ ಹೇಳಿದೆ.

(೨) 'ಇಂಡಿಯಾ' ಎಂಬುದು 'ಭರತವರ್ಷ'ದ ಒಂದು ಭಾಗವಾಗಿದ್ದಿತೆಂದೂ, ಆ ಭರತವರ್ಷವು ಉತ್ತರಕ್ಕೆ 'ಆಕ್ಸಸ್' ನದಿಯ ನಿಮ್ನ ಪ್ರಾಂತದ ವರೆಗೂ ಹರಡಿದ್ದಿತೆಂದೂ ಹೇಳಿದೆ.

ಭರತವರ್ಷದ ಈ ಮೇರೆಯ ವಿವರವು ಮೌರ್ಯರ ಕಾಲಕ್ಕೆ ಹಿಂದೆಯೇ ಇದ್ದಂತೆ ಚರಿತ್ರೆಯಿಂದ ತಿಳಿದುಬರುತ್ತದೆ.

(೩) ಭರತವರ್ಷವು ಇತರ 'ವರ್ಷ'ಗಳೊಡನೆ ಸೇರಿ 'ಜಂಬೂದ್ವೀಪ' ವಾಗಿದೆಯೆಂದೂ, ಆ 'ವರ್ಷ'ಗಳು, ಈ ಮತ್ಸ್ಯ ಪುರಾಣದಲ್ಲಿ ಹೇಳಿರುವ ಪೂರ್ವ ಪುರಾಣಗಳ ಆಧಾರದ ಮೇರೆಗೆ, ನಾಲ್ಕು ಎಂದೂ, ಮತ್ತೊಂದು ವಿಭಾಗದ ಮೇರೆಗೆ 'ಏಳು' ಎಂದೂ ತಿಳಿಯಬರುತ್ತದೆ. 'ವರ್ಷ' ಎಂದರೆ, ಪರ್ವತ ಶ್ರೇಣಿ

ಯಿಂದ ವಿಭಾಗಿಸಲ್ಪಟ್ಟು ಈ ಶ್ರೇಣಿಯೇ ಮೇರೆಯಾಗಿರುವ ಪ್ರದೇಶ. ಜಂಬೂ ದ್ವೀಪವೆಂಬ ಭೂಖಂಡದಲ್ಲಿ ಅನೇಕ ಪರ್ವತ ಶ್ರೇಣಿಗಳಿವೆ: ಇಂಡಿಯಾ ದೇಶಕ್ಕೆ ಉತ್ತರದಲ್ಲಿರುವುದು 'ನಿಷಧ'. ಈ 'ನಿಷಧ'ವೂ 'ಮೇರು'ವೂ ಹತ್ತಿರ ಹತ್ತಿರ ಇರುವುವು. ಏಕೆಂದರೆ, ನಿಷಧಕ್ಕೆ ಉತ್ತರಕ್ಕೂ, ಮೇರುವಿಗೆ ದಕ್ಷಿಣಕ್ಕೂ 'ಜಂಬೂ' ಎಂಬ ಒಂದು ನದಿಯು ಇರುವುದೆಂದು ಹೇಳಿದೆ.

ಪುರಾಣದ 'ಮೇರು'ವು ಅಲೆಗ್ಸಾಂಡರಿನ ಚರಿತ್ರೆಕಾರರ 'ಮೇರಾಸ್' ಎಂಬುದರಲ್ಲಿ ಸಂಶಯವಿಲ್ಲ; ನದಿಯು 'ಫಾಂಜಿಷೀರ್' ಇರಬಹುದು. ಪುರಾಣಗಳ ಮೇರೆಗೆ ಅದು ಚಿನ್ನ ದೊರೆಯುವ ಪ್ರದೇಶ; ಆ ತೆರದ ಚಿನ್ನಕ್ಕೆ 'ಜಾಂಬೂನದ' ಎಂದು ಹೆಸರು.

ಜಂಬೂ ದ್ವೀಪದ ಮಧ್ಯ ಭಾಗವು 'ಪಾಮಿರ್ಸ್' ದೇಶ—'ಮೇರು ದೇಶ'; ಅದರ ಪರ್ವತ ಶ್ರೇಣಿಯು ಮಹಾಮೇರು. ಪಾಮಿರ್ಸಿನ ದಕ್ಷಿಣಕ್ಕಿರುವ ಪ್ರದೇಶಕ್ಕೆ ಹಿಮತಲ, ಹೈಮವತ, ಹಿಮವರ್ಷ ಎಂಬ ಹೆಸರುಗಳು ಉಂಟು. ಭಾರತೀಯರ 'ಹಿಮವತ್ಪರ್ವತ ಶ್ರೇಣಿ' ಎಂಬುದು ಅಫ್ಘಾನಿಸ್ಥಾನ ದೇಶದ ಈಶಾನ್ಯದಲ್ಲಿರುವ ಪರ್ವತಗಳನ್ನೂ ಒಳಕೊಂಡಿದ್ದಂತೆಯೂ, ಈಗಿನ ಹಿಮಾಲಯ ಪರ್ವತಗಳಿಗಿಂತಲೂ ಬಹಳ ವಿಸ್ತಾರವಾಗಿದ್ದಂತೆಯೂ ತೋರುತ್ತದೆ.

ಯುವಾನ್‌ಛ್ವಾಂಗ್ ಎಂಬ ಚರಿತ್ರಕಾರನು ಪಾಮಿರ್ಸ್ ದೇಶದ ವಿಷಯವಾಗಿಯೂ ಆಕ್ಸಸ್ ಮತ್ತು ಸೀತಾ ನದಿಗಳ ವಿಷಯವಾಗಿಯೂ ಕೊಟ್ಟಿರುವ ವಿವರಣೆಯು ಪುರಾಣದಲ್ಲಿ ಕೊಟ್ಟಿರುವ ವಿವರಣೆಗೆ ಸರಿ ಸುಮಾರು ಪದಶಃ ಹೋಲುವಂತಿದೆ.

ಜಂಬೂ ದ್ವೀಪದ ನಾಲ್ಕು ದೊಡ್ಡ ಭಾಗಗಳು ಯಾವುವೆಂದರೆ—(೧)ಉತ್ತರಕ್ಕೆ ಉತ್ತರ ಕುರು (ಉತ್ತರ ಸಮುದ್ರಕ್ಕೆ ದಕ್ಷಿಣದಲ್ಲಿರುವ ಪ್ರದೇಶ), (೨) ದಕ್ಷಿಣಕ್ಕೆ ಭಾರತ, (೩) ಪೂರ್ವಕ್ಕೆ ಭದ್ರಾಶ್ವ (ಸಮುದ್ರದ ವರೆಗೂ, ಎಂದರೆ, ಚೀಣ), (೪) ಪಶ್ಚಿಮಕ್ಕೆ ಕೇತುಮಾಲ (ಸಮುದ್ರದ ವರೆಗೂ, ಎಂದರೆ, ಏಷ್ಯಾಮೈನರ್). ಈಚಿನ ಭಾರತೀಯ ಜ್ಯೋತಿಷ್ಕನಾದ ಭಾಸ್ಕರಾಚಾರ್ಯನು ಕೇತುಮಾಲಾ ಎಂಬ ಪ್ರದೇಶವನ್ನು ಗುರುತಿಸಿ, ಅದರ ಪಶ್ಚಿಮದ ಕೊನೆಯ ಪಟ್ಟಣವನ್ನು ರೋಮಕವೆಂದು ಕರೆಯುತ್ತಾನೆ. ಇದೇ ಈಗಿನ 'ಕಾನ್‌ಸ್ಟಾಂಟಿನೋಪ್‌ಲ್'. ಪುರಾಣದಲ್ಲಿ ಹೇಳಿರುವ ವಿವರಣೆಯು ಇದಕ್ಕೆ ಸರಿಹೋಗುತ್ತದೆ.

ಜಂಬೂ ದ್ವೀಪದ ಮತ್ತೊಂದು ವಿಭಾಗದ ಮೇರೆಗೆ ಅದು ಏಳು 'ವರ್ಷ'ಗಳಾಗಿ ವಿಭಾಗಿಸಲ್ಪಟ್ಟು, ಹರಿವರ್ಷ, ಇಳಾವೃತ, ಕಿನ್ನರ, ಅಥವಾ ಕಿಂಪುರುಷ ವರ್ಷ, ರಮಣಕ, ಅಥವಾ ರಮ್ಯಕ, ಹಿರಣ್ಯ, ಉತ್ತರ ಕುರು ಮೊದಲಾದ ಭಾಗಗಳನ್ನೊಳಕೊಂಡಿದ್ದು, ಅರೇಬಿಯಾ ದೇಶದ ವಿನಾ ಏಷ್ಯಾಖಂಡವನ್ನೆಲ್ಲ ಆಕ್ರಮಿಸಿಕೊಂಡಿದ್ದಂತೆ ತಿಳಿಯಬರುತ್ತದೆ.

*The Indian Antiquary* **for September 1933.**

**ನಮ್ಮ ಪ್ರೌಢ ವಿದ್ಯಾ ಶಾಲೆಗಳಲ್ಲಿ ವಿದ್ಯಾರ್ಜನೆಯ ಪರಿಣಾಮ.—** 'ಎಡ್ಯುಕೇಷನಲ್ ರಿವ್ಯೂ' ಎಂಬ ನಿಯತ ಕಾಲಿಕ ಪತ್ರಿಕೆಯಲ್ಲಿ, ಹರಿದಾಸ ಟಿ. ಮಜುಮದಾರರು ಇಂಡಿಯಾ ದೇಶದಲ್ಲಿಯ ಪ್ರೌಢ ವಿದ್ಯಾರ್ಥಿಗಳು ಸಂಶೋಧನ ಕಾರ್ಯವನ್ನು ಯಾವ ತೆರನಾಗಿ ನಡೆಯಿಸಬೇಕೆಂಬ ವಿಚಾರವಾಗಿ ಸಲಹೆ ಕೊಡುತ್ತ ಹೀಗೆ ಹೇಳುತ್ತಾರೆ:—"ಇಂಗ್ಲಿಷು ಭಾಷೆಯು ಆದಿಯಿಂದಲೂ ಇದುವರೆಗೆ ಹೇಗೆ ಕ್ರಮೇಣ ವಿಕಸನ ಹೊಂದಿ ಸದ್ಯದ ಸ್ಥಿತಿಗೆ ಬಂದಿದೆಯೆಂಬುದನ್ನು ಬಹಳ ವಿಚಕ್ಷಣತೆ ಯಿಂದ ಚರ್ಚಿಸಬಲ್ಲ ಪಂಡಿತರು ಅನೇಕ ಮಂದಿ ನಮ್ಮ ದೇಶದಲ್ಲಿ ಇರುವರೆನ್ನುವುದ ರಲ್ಲಿ ಸ್ವಲ್ಪವೂ ಸಂಶಯವಿಲ್ಲ. ಇಂತಹ 'ಉದ್ದಾಮ' ಪಂಡಿತರಲ್ಲಿ ಎಷ್ಟು ಮಂದಿ ನಮ್ಮ ಸಂಸ್ಕೃತ ಭಾಷೆಯ ವಿಷಯವಾಗಿ ಇದೇ ರೀತಿಯ ಚರ್ಚೆಯನ್ನು ಸಮರ್ಪಕ ವಾಗಿ ಮಾಡಬಲ್ಲರು? ಸಂಸ್ಕೃತ ಭಾಷೆಯು ಆದಿ ವೈದಿಕ ಭಾಷೆಯಿಂದ ಕಾಳಿದಾಸ ಮತ್ತು ಬಾಣನ ಕಾಲದ ಭಾಷೆಗೆ ಪರಿಣಾಮ ಹೊಂದಿದುದು ಹೇಗೆ? ಪ್ರಾಕೃತವು ಸಂಸ್ಕೃತದಿಂದ ಬಂದಿತೆ? ಅಥವಾ, ಸಂಸ್ಕೃತವು ಪ್ರಾಕೃತದಿಂದ ಬಂದಿತೆ? ಸಂಸ್ಕೃತಕ್ಕೂ, ಅರಬ್ಬೀ ಮತ್ತು ಪಾರಸೀ ಭಾಷೆಗಳಿಗೂ ಸಂಬಂಧವು ಎಷ್ಟು ಮಟ್ಟಿಗೆ ಬೆಳೆದು ಈಗಿನ ಇಂಡೋ-ಆರ್ಯನ್ ಭಾಷೆಗಳು ಆಗಿರುವುವು? ಮಹಾರಾಷ್ಟ್ರ ಸಾಹಿತ್ಯವು ಸಂಸ್ಕೃತದ ಸಹಾಯವನ್ನು ಪಡೆದು ಅಭಿವೃದ್ಧಿ ಹೊಂದಲು ಆರಂಭ ವಾದುದು ಯಾವಾಗ? ಗುಜರಾತಿ, ಮರಾಠಿ, ಬಂಗಾಲಿ ಮತ್ತು ಹಿಂದೀ ಭಾಷೆ ಗಳೂ ಸಾಹಿತ್ಯಗಳೂ ಪರಸ್ಪರ ಸಂಬಂಧದಿಂದಾಗಲಿ, ಪ್ರತ್ಯೇಕವಾಗಿಯಾಗಲಿ ಬೆಳೆದು ಬಂದಿರುವುದು ಹೇಗೆ? ಮಹಮ್ಮದ್ ಘೋರಿಯು ಇಂಡಿಯಾ ದೇಶಕ್ಕೆ ದಂಡೆತ್ತಿ ಬಂದಾಗ ನಮ್ಮ ದೇಶದ ಭಾಷೆಯ ಸ್ಥಿತಿ ಹೇಗಿದ್ದಿತು? ಮೆಗಾಸ್ಥನೀಸನಿಗೆ ಸಂಸ್ಕೃತ ಭಾಷೆ ತಿಳಿದಿದ್ದಿತೆ? ಪಾಶ್ಚಾತ್ಯರು ನಮ್ಮ ದೇಶಕ್ಕೆ ಬರುವುದಕ್ಕೆ ಮೊದಲು, 'ಮೂರ್ಸ್' ಎಂಬ ವಿದೇಶಿಯರು ನಮ್ಮ ವರ್ತಕರೊಡನೆ ವ್ಯಾಪಾರವನ್ನು ಯಾವ ಭಾಷೆಯ ಮೂಲಕ ನಡೆಯಿಸುತ್ತಿದ್ದರು? ಮುಸ್ಲಿಮರ ಕಾಲಕ್ಕೆ ಮೊದಲು ನಮ್ಮ ನಾಟ್ಯ ರಂಗವು ಯಾವ ಸ್ಥಿತಿಯಲ್ಲಿದ್ದಿತು? ಮೊಗಲರ ಕಾಲದಲ್ಲಿ ಹೇಗಿದ್ದಿತು?— ಇಂತಹ ಪ್ರಶ್ನೆಗಳು ಲೆಕ್ಕವಿಲ್ಲದಷ್ಟು ಬುದ್ಧಿಗೆ ಹೊಳೆಯುವುವು. ನಮ್ಮ ದೇಶದ ವಿಚಾರಗಳನ್ನು ನಾವು ತಿಳಿದುಕೊಳ್ಳಬೇಕಾದುದು ನಮ್ಮ ಪ್ರಥಮ ಕರ್ತವ್ಯ. ಇವನ್ನು ಸರಿಯಾಗಿ ತಿಳಿದುಕೊಳ್ಳಬೇಕಾದರೆ ಭಾಷಾ ವಿಚಾರಗಳನ್ನು ತಕ್ಕಂತೆ ಮಾಡಿ ಅನುಭವ ಪಡೆಯಬೇಕು.

ನಮ್ಮ ಪ್ರೌಢ ವಿದ್ಯಾ ಶಾಲೆಗಳಲ್ಲಿ, ನಮ್ಮ ದೇಶಕ್ಕೆ ಸಂಬಂಧಪಟ್ಟ ಇಂತಹ ವಿಷಯಗಳ ಅನ್ವೇಷಣದಲ್ಲಿ ಪ್ರೌಢ ವಿದ್ಯಾರ್ಥಿಗಳು ತೊಡಗಬೇಕೇ ವಿನಾ ಪರದೇಶೀ ಯರ ವಿಚಾರಗಳಲ್ಲಲ್ಲ. ನಮ್ಮ ದೇಶದ ಪ್ರೌಢ ವಿದ್ಯಾ ಸಂಸ್ಥೆಗಳವರು ಯಾರಾದರೂ ಇದುವರೆಗೆ, "ಹಿಂದೂ ದೇಶದ ಚರಿತ್ರೆಯನ್ನು ಬೋಧಿಸುವ ಸದ್ಯದ ರೀತಿ ಮತ್ತು ಅದರ ಪರಿಣಾಮಗಳು" ಎಂಬ ವಿಷಯವನ್ನು ಡಾಕ್ಟರ್ ಪರೀಕ್ಷೆಗೆ ಬರೆಯಬೇಕಾದ ಪ್ರಬಂಧವನ್ನಾಗಿ ನಿಯಾಮಕ ಮಾಡಿರುತ್ತಾರೆಯೇ? ನಮ್ಮ ವಿದ್ಯಾ ಶಾಲೆಗಳಲ್ಲಿ ನಮ್ಮ ಮಕ್ಕಳಿಗೆ ಇಂಗ್ಲೀಷು ಕಲಿಸುವ ಉಪಾಧ್ಯಾಯರು ಈಗ ಹೇಳಿಕೊಡುವ ಚರಿತ್ರಾಂಶ

ಗಳು ನಮ್ಮ ಗೌರವಕ್ಕೆ ಎಷ್ಟು ಕುಂದನ್ನುಂಟುಮಾಡುತ್ತಿರುವುದೆಂಬುದನ್ನು ನಾವು ಗಮನಿಸಬೇಡವೆ?

*The Modern Review* for September 1933.

**ಇಂಡಿಯಾ ದೇಶದಲ್ಲಿ ಆಧುನಿಕ ಸಾಹಿತ್ಯ.**—ಈ ವಿಚಾರವಾಗಿ 'ಟೈಮ್ಸ್ ಆಫ್ ಇಂಡಿಯಾ' ಎಂಬ ಪತ್ರಿಕೆಯು ೧೯೩೩ನೆಯ ಆಗಸ್ಟು ೧೨ನೆಯ ಸಂಚಿಕೆಯಲ್ಲಿ ಒಂದು ಲೇಖನವನ್ನು ಪ್ರಕಟಗೊಳಿಸಿದೆ. ಅದರ ಸಾರಾಂಶವಿದು:—ಇಂಡಿಯಾ ದೇಶದಲ್ಲಿ ಪ್ರಕಟವಾಗುತ್ತಿರುವ ಸಾಹಿತ್ಯ ರಾಶಿಯನ್ನು ಅಂಕೆಯಲ್ಲಿಟ್ಟು, ನಿಜವಾದ ಸಾಹಿತ್ಯಕ್ಕೆ ಪ್ರೋತ್ಸಾಹ ಕೊಡಲು ಏರ್ಪಾಟು ಮಾಡಬೇಕೆಂದು ಉಚಿತವಾದ ಸಲಹೆಯನ್ನು ಕೊಟ್ಟ ದೇಶಾಭಿಮಾನಿಗಳು ಕೆಲವರು, ತಮ್ಮ ಸಲಹೆಯನ್ನು ಸಾರ್ಥಕಗೊಳಿಸಿದಲ್ಲಿ, ದೇಶಕ್ಕೆ ಕೇವಲ ಅಮೂಲ್ಯವಾದ ಸೇವೆಯನ್ನು ಮಾಡಿದಂತಾಗುವುದು. ಈ ದೇಶದಲ್ಲಿ ಲೇಖಕರೂ ಗ್ರಂಥ ಪ್ರಕಾಶಕರೂ ಈ ವಿಷಯವಾಗಿ ಲಕ್ಷ್ಯವೇ ಕೊಡುವಂತಿಲ್ಲ. ಇದು ಬಹಳ ಅನ್ಯಾಯ. ಈಗ ಪ್ರಕಟವಾಗುತ್ತಿರುವ ಹೊಸ ಸಾಹಿತ್ಯವು ಅನೇಕ ವಿಷಯಗಳಲ್ಲಿ ಇನ್ನೂ ಬಾಲ್ಯಾವಸ್ಥೆಯಲ್ಲಿರುವುದೆಂದು ಎಲ್ಲರೂ ಒಪ್ಪುತ್ತಾರೆ. ಆದರೆ ಈಗಿನ ಲೇಖಕರಲ್ಲಿ, ಇಂಡಿಯಾ ದೇಶದಲ್ಲಿ ಮಾತ್ರವೇ ಅಲ್ಲ, ಪ್ರಪಂಚದಲ್ಲೆಲ್ಲ ಪ್ರಸಿದ್ಧಿ ಪಡೆದು ಬಾಳತಕ್ಕವರೂ ಇರುವರೆಂಬುದನ್ನೂ, ಮುಂದೆಯೂ ಹುಟ್ಟುವರೆಂಬುದನ್ನೂ ಎಲ್ಲರೂ ಒಪ್ಪುತ್ತಾರೆ. ಆದರೆ, ನೂರಾರು ಮಂದಿ ಲೇಖಕರು ತಾವು ಹೇಳುವ ವಿಷಯಗಳ ಪರಿಶ್ರಮವಿಲ್ಲದೆಯೂ, ಭಾಷೆಯ ಪೂರ್ಣ ಜ್ಞಾನವಿಲ್ಲದೆಯೂ ತಮ್ಮ ಗ್ರಂಥಗಳನ್ನು ಪ್ರಕಟ ಮಾಡುತ್ತಿರುವುದು ಸಾಹಿತ್ಯ ಭಾಂಡಾಗಾರಕ್ಕಾಗಲಿ ವಿಷಯ ಜ್ಞಾನಕ್ಕಾಗಲಿ ಸಹಾಯವಾಗಲಾರದು. ಇಂತಹ ಪ್ರಕಟನೆಗೆ ಅನೇಕ ಕಾರಣಗಳುಂಟು; ಆದರೆ ಮುಖ್ಯವಾಗಿ, ತಮ್ಮ ಹೆಸರನ್ನೂ ಗ್ರಂಥವನ್ನೂ ಮುದ್ರಣದಲ್ಲಿ ನೋಡಬೇಕೆಂಬ ಕುತೂಹಲವೇ ಮುಖ್ಯವಾದುದೆಂದು ತೋರುವುದು.

ಇದರಿಂದ ತಮಗೂ ತಮ್ಮ ದೇಶಕ್ಕೂ ಎಷ್ಟು ಹಾನಿಯುಂಟಾಗುವ ಸಂಭವವಿದೆಯೆಂದು ಲೇಖಕರು ಪರಿಗಣಿಸದಿರುವುದು ಬಹಳ ಶೋಚನೀಯವಾದ ವಿಷಯ. ಇಂತಹ ಗ್ರಂಥಗಳಿಂದ ಉತ್ತಮ ಗ್ರಂಥಗಳಿಗೂ ಅವಕಾಶ ದೊರೆಯದಂತಾಗುವುದೆಂದು ಬೇರೆ ಹೇಳಬೇಕಾದುದಿಲ್ಲ. ನಮ್ಮ ದೇಶಕ್ಕೆ ಸಂಬಂಧಪಟ್ಟ ವಿಷಯಗಳನೇಕವಿದ್ದರೂ ನಮ್ಮ ಯುವಕ ಪದವೀಧರರು ಅಂಥವಕ್ಕೆ ಗಮನ ಕೊಡದೆ ಪಾಶ್ಚಾತ್ಯ ವಿಷಯಗಳನ್ನೆತ್ತಿಕೊಂಡು, ಚರಿತ್ರೆಯನ್ನೋ ರಾಜ್ಯಾಡಳಿತದ ವಿಚಾರವನ್ನೋ, ಅನುಭವವಿಲ್ಲದಿದ್ದರೂ, ಬರೆವಣಿಗೆಯಲ್ಲಿ ಹೊಸ ರೀತಿಯಾಗಲಿ ಹೊಸ ವಿಷಯಗಳಾಗಲಿ ಕಾಣಬರದಿದ್ದರೂ, ದೊಡ್ಡ ದೊಡ್ಡ ಪುಸ್ತಕಗಳಲ್ಲಿ ತುಂಬುತ್ತಿರುವುದು ವ್ಯಥೆಯನ್ನುಂಟುಮಾಡತಕ್ಕ ವಿಷಯ. ನಮ್ಮ ಪ್ರೌಢ ವಿದ್ಯಾ ಶಾಲೆಗಳಲ್ಲಿಯ ಸಾಮಾನ್ಯ ಅಧ್ಯಾಪಕರೂ, ಅನುಭವವಿಲ್ಲದ ಯುವಕ ಪಂಡಿತರೂ ಅನೇಕ ಮಂದಿ, ಇಂತಹ ಗ್ರಂಥ ರಾಶಿಯನ್ನು ಸೃಷ್ಟಿ ಮಾಡುವುದರಲ್ಲಿ ನಿರತರಾಗಿರುವರು. ತಪ್ಪು ಇವರದು ಮಾತ್ರವೇ ಅಲ್ಲ; ಈ ಗ್ರಂಥಗಳನ್ನು ಪ್ರಕಟ ಮಾಡುವವರದೂ ಇರುವುದು. ಕೆಲವು ಸಂದರ್ಭಗಳಲ್ಲಿ ಇಂತಹ ಪುಸ್ತಕಗಳು ಜನಸಾಮಾನ್ಯರಲ್ಲಿ ಹೆಚ್ಚಾಗಿ ಮಾರಾಟವಾಗುವುದೂ ಉಂಟು.

ಆದರೆ, ಓದುವುದಕ್ಕೆ ವಿನೋದವಾಗಿರುವುದರಿಂದಲೋ, ಮಾನ್ಯವಲ್ಲದ ಇತರ ಕಾರಣಗಳಿಂದಲೋ ಹೀಗಾಗಬಹುದೇ ವಿನಾ, ಸಾಮಾನ್ಯವಾಗಿ ಗ್ರಂಥಗಳ ಉತ್ಕೃಷ್ಟತೆಯಿಂದಲ್ಲ. ಉತ್ತಮ ಗ್ರಂಥಗಳು ಸುಲಭ ಕ್ರಯಕ್ಕೆ ದೊರೆಯದಿರುವುದೇ ಇಂತಹ ವೈಪರೀತ್ಯಕ್ಕೆ ಕಾರಣವೆಂದು ತೋರುವುದು. ನಮ್ಮ ದೇಶದಲ್ಲಿ ಜನಸಾಮಾನ್ಯಕ್ಕೆ ಉಪಯೋಗವಾಗುವಂತಹ ಉತ್ತಮ ಗ್ರಂಥ ಭಾಂಡಾಗಾರ ರಚನೆಯು ಸಾಮಾನ್ಯವಾಗಿ ಇಲ್ಲವೆಂದೇ ಹೇಳಬಹುದು. ಇತರ ವಿಧಗಳಲ್ಲಿ ಹಣ ಚೆಲ್ಲುತ್ತಿರುವ ನಮ್ಮ ಶ್ರೀಮಂತರಾದರೂ ಅತ್ಯವಶ್ಯವಾದ ಈ ಸಾರ್ವಜನಿಕ ಕಾರ್ಯಕ್ಕೆ ಸಹಾಯ ಮಾಡಿ ನಮ್ಮ ಜನಾಂಗವೂ, ಮುಂದುವರಿದಿರುವ ಇತರ ದೇಶಗಳ ಜನಾಂಗಗಳಂತೆ, ವಿದ್ಯಾವಿಷಯದಲ್ಲಿಯೂ ರಾಜ್ಯ ಪರಿಪಾಲನಾ ಕಾರ್ಯದಲ್ಲಿಯೂ ದಕ್ಷರೆಂದೆನಿಸಿಕೊಳ್ಳುವಂತೆ ಮಾಡಬೇಕೆಂಬುದೇ ನಮ್ಮ ಹಾರೈಕೆ.

---

# ಗ್ರಂಥ ವಿಮರ್ಶೆ

## ೧. ಸುರಸ ಕವಿತಾಹಾರ

ಲೇಖಕರು ಮತ್ತು ಪ್ರಕಾಶಕರು.—ಪಂಡಿತ ನಿಡಂಬೂರು
ರಾಘವೇಂದ್ರ ಬಲ್ಲಾಳ, ವಿದ್ವಾನ್, ಉಡುಪಿ.

ಕ್ರೌನ್ ಅಷ್ಟಪತ್ರ ಪುಟಗಳು ೯೧ ; ಬೆಲೆ ೮ ಆಣೆ; ೧೯೩೩.

ಈ ಗ್ರಂಥವು ಸಂಸ್ಕೃತ ಕವಿಗಳ ಸುರಸವೂ, ಚಮತ್ಕಾರ ಪೂರಿತವೂ, ಅಲಂಕಾರ ಗರ್ಭಿತವೂ ಆದ ಕೆಲವು ಶ್ಲೋಕಗಳ ಅನುವಾದ ರೂಪವಾಗಿದೆ. ಇದರಲ್ಲಿ ೯೦ ವಾರ್ಧಿಕ ಷಟ್ಪದಿಗಳಿವೆ. ಅನುವಾದಕ್ಕಾಗಿ ಆರಿಸಿಕೊಂಡಿರುವ ಶ್ಲೋಕಗಳೆಲ್ಲವೂ ಸಂಸ್ಕೃತ ಸಾಹಿತಿಗಳಿಗೆ ಪರಿಚಿತವಾದುವೇ. ಸಂಸ್ಕೃತವರಿತವರು ಸಾಮಾನ್ಯವಾಗಿ ಈ ಬಗೆಯ ಶ್ಲೋಕಗಳನ್ನು ಸಮಯೋಚಿತವಾಗಿ, ಒಡನಾಡಿಗಳಲ್ಲಿಯೂ ಶ್ರೀಮಂತ ರಲ್ಲಿಯೂ ಹೇಳಿ, ಸಂಸ್ಕೃತದ ಮೇಲ್ಮೆಯನ್ನು ಹೊಗಳಿ, ಅವರಿಗೆ ಆನಂದವನ್ನುಂಟು ಮಾಡುವ ಪರಿಪಾಟಿಯು ಅಂದಿನಿಂದ ಇಂದಿನ ವರೆಗೂ ನಡೆದುಬಂದಿದೆ. ಈ ತೆರದ ಸಂಸ್ಕೃತ ಶ್ಲೋಕಗಳನೇಕವನ್ನು ಒಕ್ಕಡೆಗೂಡಿಸಿದ 'ಸುಭಾಷಿತ ರತ್ನ ಭಾಂಡಾ ಗಾರ' ಎಂಬ ಪುಸ್ತಕವೊಂದು ಅಚ್ಚಾಗಿದೆ. ಪ್ರಾಯಃ 'ಸುರಸ ಕವಿತಾಹಾರ'ಕ್ಕೆ ಆರಿಸಿಕೊಂಡಿರುವ ಶ್ಲೋಕಗಳೆಲ್ಲವೂ ಈ ಗ್ರಂಥದಲ್ಲಿಯೇ ದೊರೆಯುತ್ತವೆ. ಸಮ ಯೋಚಿತವಾಗಿ ಈ ಶ್ಲೋಕಗಳನ್ನು ಹೇಳುವುದರಿಂದ, ಕೇಳುವವರಲ್ಲಿ ಸಂಸ್ಕೃತ ಭಾಷೆಯ ಅಭಿರುಚಿ ಮೂಡಿ, ಆ ಭಾಷೆಯ ಸುರಸ ಗ್ರಂಥಗಳನ್ನು ಓದಿ ನಲಿಯ ಬೇಕೆಂಬ ಆಸೆಯುಂಟಾಗುತ್ತದೆ.

ಮ|| ರಾ|| ಶ್ರೀ ಬಲ್ಲಾಳರು ಈ ಗ್ರಂಥವನ್ನು ಬರೆಯಲು ಕಾರಣವನ್ನು ತಿಳಿಸುತ್ತ, "ಕನ್ನಡ ವಾಙ್ಮಯವು......ಇತರ ಸಾಹಿತ್ಯ ಖನಿಗಳಿಂದಲೂ ಹಲವು ರತ್ನಗಳನ್ನಗೆದು ತಂದು ತನಗೊಪ್ಪುವಂತೆ ಕೆತ್ತಿ ಮಿರುಗುಗೊಟ್ಟು ಧರಿಸಿ ಮೆರೆಯ ತೊಡಗಿದೆ. ಆ ಸಾಹಿತ್ಯ ಶರಧಿಗಳ ರತ್ನಾನ್ವೇಷಣ ಭರದಲ್ಲಿ ತನಗೆ ಆದಿಯಿಂದಲೂ ಆಧಾರವಾಗಿದ್ದ ಸಂಸ್ಕೃತ ವಾಙ್ಮಯ ಮಹೋದಧಿಯ ಹಲವೊಂದು ಸೊಬಗಿನ ಮುತ್ತುಗಳು ಅವಜ್ಞೆಯಿಂದಾರಿಸಲ್ಪಡದೆ ಹೋಗಲೂ ಬಹುದೆಂದು....ಉಭಯ ಸಾಹಿತ್ಯ ಶರಧಿಗಳ ತಡಿಯಲ್ಲಿ ಅಲೆಯುತ್ತಿದ್ದ ನನ್ನ ಬಾಳಿನ ಕಾಣಿಕೆಯಾಗಿ ಕನ್ನಡಿಗ ರಿಗೆ" 'ಸುರಸ ಕವಿತಾಹಾರ'ವನ್ನರ್ಪಿಸಿರುವುದಾಗಿ ಹೇಳಿರುವರು. ಸಂಸ್ಕೃತ ಸಾರಸ್ವತದ ತನಿ ರಸವನ್ನು ಕನ್ನಡಿಗರಿಗೆ ಹಂಚಲು ಶ್ರಮಿಸಿರುವ ಇವರ ಪ್ರಯತ್ನವು ಮಾನ್ಯವಾದುದೇ ಸರಿ.

ಆದರೆ, ಕನ್ನಡದಲ್ಲಿ ರನ್ನ, ಪಂಪ, ಲಕ್ಷ್ಮೀಶರೇ ಮೊದಲಾದ ಉದ್ದಾಮ ಕವಿಗಳ ಗ್ರಂಥಗಳಲ್ಲಿ ಮೇಲೆ ಹೇಳಿದ ಸಂಸ್ಕೃತ ಶ್ಲೋಕಗಳ ಅನುವಾದ ರೂಪವಾದ

ಹಲವು ಪದ್ಯಗಳು ಕಾಣುತ್ತವೆ. ದಿಙ್ಮಾತ್ರ ಪ್ರದರ್ಶನಕ್ಕಾಗಿ ಅಂತಹ ಒಂದು ಪದ್ಯವನ್ನು ಮಾತ್ರ ಇಲ್ಲಿ ಕೊಟ್ಟಿದೆ:—

ಗಾಲಿಯೊಂದೇ ರಥಕೆ ಜೋಡಾಗಿ ಪೂಡುವೊಡೆ
ಸಾಲದೇಳೇ ಹಯಂ ನಡೆಸುವೊಡೆ ಸಾರಥಿಗೆ
ಕಾಲಿಲ್ಲ ಲೋಕ ಯಾತ್ರೆಯನೊಲ್ಲೆನೆಂದೊಡಾಗದೆ ತನಗೆ ತಿರುಗಲೇಕೆ ।
ಕಾಲ ಗತಿಯಂ ಮೀರಬಾರದಿಂತೆಂಬುದಂ
ಮೂಲೋಕಕೆಚ್ಚರಿಸುವಂತೆ ಪೂರ್ವಾಚಲದ
ಮೇಲೆ ಮೂಡಿದನೆಂದಿನವೊಲಬ್ಜಬಾಂಧವಂ ನಯನಾಂಧಮಂದಡಗಲು ॥

ಕನ್ನಡ ಜೈಮಿನಿ ಭಾರತ, ಸಂಧಿ ೨೬, ಪದ್ಯ ೨೬.

ಇದಕ್ಕೆ ಮಾತೃಕೆಯಾದ ಸಂಸ್ಕೃತ ಶ್ಲೋಕ—

ರಥಸ್ಯೈಕಂ ಚಕ್ರಂ ಭುಜಗಯಮಿತಾಸ್ಸಪ್ತ ತುರಗಾ
ನಿರಾಲಂಬೋ ಮಾರ್ಗಶ್ಚರಣ ವಿಕಲಸ್ಸಾರಥಿರಪಿ ।
ರವಿರ್ಯಾತ್ಯೇವಾಸ್ತಂತಂ ಪ್ರತಿ ದಿನಮಪಾರಸ್ಯ ನಭಸಃ ।
ಕ್ರಿಯಾ ಸಿದ್ಧಿಸ್ಸತ್ವೇ ಭವತಿ ಮಹತಾಂ ನೋಪಕರಣೇ ॥

ಇಲ್ಲಿ ಲಕ್ಷ್ಮೀಶನು ಸಂಸ್ಕೃತ ಶ್ಲೋಕವನ್ನು ಧ್ವನಿಗೆಡದಂತೆ, ತನ್ನ ಸಮಯಕ್ಕೆ ತಕ್ಕಂತೆ, ಅನುವಾದಿಸಿರುವನು. ಅಂತು, ಇವೆರಡಕ್ಕೂ ವ್ಯತ್ಯಾಸವಷ್ಟೇನೂ ತೋರುವುದಿಲ್ಲ.

ಈ ಗ್ರಂಥಕರ್ತರ ಅನುವಾದ—

ತೇರಿಗೊಂದೇ ಗಾಲಿ ಹಾವುಗಳ ಬಿಗಿದ ಸರಿ
ಬಾರದಿಹ ಏಳ್ಕುದುರೆಗಳು ಮಾರ್ಗವಾಗಸದಿ
ಸಾರಥಿಗೆ ಕಾಲಿಲ್ಲಮಾದೊಡೆಯು ರವಿ ಲೋಕವನು ಬಿಡದೆ ಸುತ್ತುಗೆಯ್ದೂ ।
ಮೀರಿರದೆ ತಕ್ಕ ಕಾಲದಲಿ ದಿನ ದಿನ ಗಿರಿಯ ।
ನೇರಿ ಬರೆ ಯೆಂತಾದೊಡಂ ದೊಡ್ಡಿದರ್ ತಮ್ಮ ।
ಕಾರಿಯವ ಸಾಧಿಪರ್ ತಕ್ಕ ಸಾಧನವಿಲ್ಲದಿರ್ದರೆಯುಮವರೆ ಸಂತರ್ ॥

ಎಂದ ಮೇಲೆ, ಕನ್ನಡ ಕಾವ್ಯಗಳ ಅಂದ ಚೆಂದಗಳಿಗೆ ಮನಸೋತಿರುವ ನಮಗೆ ಕನ್ನಡದ ಉದ್ದಾಮ ಕವಿಗಳ ಬಂಧ ಚಾತುರ್ಯಾದಿಗಳಿಂದ ಸೊಗಸುಗೊಂಡ 'ಸುರಸ ಕವಿತಾಹಾರ'ವು ಬೇಕೆನಿಸುತ್ತದೆ. ಇಂತಹ ಪದ್ಯಗಳ ಸಂಕಲನೆಯೊಂದನ್ನು "ಅಭಿನವ ವಾದಿ ವಿದ್ಯಾನಂದ"ನೆಂಬ ಜೈನ ಪಂಡಿತನು ಸುಮಾರು ಹದಿನೈದನೆಯ ಶತಮಾನದಲ್ಲಿಯೇ ಸಂಕಲಿಸಿರುವನು. ಅಂದಿನಿಂದೀಚೆಗೆ ಉದ್ದಾಮ ಕವಿಗಳನೇಕರು ಆಗಿಹೋಗಿದ್ದಾರೆ. ಅವರ ಕೀರ್ತಿ ಸ್ತಂಭಗಳಂತಿರುವ ಗ್ರಂಥಗಳಲ್ಲಿಯ ಚಮತ್ಕಾರ ಪದ್ಯಗಳ ಸಂಕಲನೆಯು ಇನ್ನೂ ಆಗಿಲ್ಲ; ಆಗುವುದೆಂದು ನಿರೀಕ್ಷಿಸುತ್ತೇವೆ.

ಇನ್ನು, 'ಸುರಸ ಕವಿತಾಹಾರ'ದ ಹಾಸು ಹೊಕ್ಕುಗಳಿಗೆ ಮನಗೊಟ್ಟರೆ ಒಂದೆರಡು ವಿಷಯಗಳನ್ನು ಹೇಳಬೇಕೆನಿಸುತ್ತದೆ: ಕೆಲವೆಡೆಗಳಲ್ಲಿ ಗ್ರಂಥಕರ್ತರು

ಮೂಲ ಶ್ಲೋಕಗಳಲ್ಲಿಯ ಶ್ಲೇಷ ಪದ, ಚಿತ್ರೋಕ್ತಿ, ವ್ಯಂಗ್ಯಾರ್ಥ ನಿರೂಪಕ ಪದಗಳನ್ನು ಕನ್ನಡದಲ್ಲಿ ತರುವ ಭರದಲ್ಲಿ, ಹರಿವ ಷಟ್ಪದಿಯ ಕ್ರಮಕ್ಕೆ ಅಷ್ಟಾಗಿ ಗಮನವಿತ್ತಂತೆ ತೋರುವುದಿಲ್ಲ. (ಪದ್ಯಗಳು ೨, ೫೧, ೪೭ನ್ನು ನೋಡಿರಿ). ಪ್ರಾಸಕ್ಕೂ ಗಮನವಿತ್ತಂತಿಲ್ಲ. ಇನ್ನು ಕೆಲವೆಡೆಗಳಲ್ಲಿ ಮೂಲ ಶ್ಲೋಕಗಳಿಗೂ ಅನುವಾದ ಪದ್ಯಗಳಿಗೂ ಅಲ್ಪ ಸ್ವಲ್ಪ ವ್ಯತ್ಯಾಸಗಳು ಕಂಡುಬರುವುವು. ಆದರೆ ಧ್ವನಿಗೆಡದಿರುವುದರಿಂದ ಅದು ಅಷ್ಟೇನೂ ಅಪರಾಧವಲ್ಲ. ಶೈಲಿಯು ಪೆಡಸಾಗಿದೆ. ಪ್ರತಿ ಪದ್ಯಕ್ಕೂ ಭಾವಾನುವಾದ, ಅಲಂಕಾರಗಳು ಕೊಟ್ಟಿವೆ. ಮುದ್ರಾರಾಕ್ಷಸರ ಸೋಂಕು ಪ್ರಬಲವಾಗಿಲ್ಲವೆಂದು ತೋರುತ್ತದೆ.

ಅಂತು, 'ಸುರಸ ಕವಿತಾಹಾರ'ವು ಎಲ್ಲರೂ ಬಯಸುವ ಗ್ರಂಥ. ಗ್ರಂಥಕರ್ತರು ಕನ್ನಡ ಭಾಷೆಯ ಮಮತೆಯಿಂದ ಸಂಸ್ಕೃತ ಭಾಷೆಯಲ್ಲಿರುವ ಸೊಬಗಿನ ರತ್ನಗಳನ್ನಾಯ್ದು ಅನುವಾದಿಸಿ ಕನ್ನಡಿಗರ ಮುಂದಿಟ್ಟಿರುವುದಕ್ಕಾಗಿ ಎಲ್ಲ ಕನ್ನಡಿಗರೂ ಅವರಿಗೆ ಕೃತಜ್ಞರಾಗಿರಬೇಕು.

ನೋ. ಶಂ. ಸು.

---

## ೨. ಏಷಿಯಾ ಖಂಡದ ಜಾಗೃತಿ

ಲೇಖಕರು.—ಶ್ರೀ. ಮಂ. ಅ. ದೊರಸ್ವಾಮಿ ಐಯ್ಯಂಗಾರ್ಯ, ಎಂ.ಎ., ಬಿ.ಎಲ್., ಮೈಸೂರು.

ಸಂಪಾದಕರು ಮತ್ತು ಪ್ರಕಾಶಕರು.—ಆಲೂರ ವೆಂಕಟರಾಯರು, ಧಾರವಾಡ.

ಕ್ರೌನ್ ಅಷ್ಟಪತ್ರ ಪುಟಗಳು ೬+೧೧೯; ಬೆಲೆ ರೂ. ೧—೨—೦; ೧೯೩೩.

ಕನ್ನಡ ಪತ್ರಿಕೆಗಳನ್ನು ಓದುವವವರಿಗೆ ಶ್ರೀಮಾನ್ ದೊರೆಸ್ವಾಮಿ ಐಯಂಗಾರ್ಯರು ಹೊಸಬರಲ್ಲ. ಈ ಗ್ರಂಥವು ಧಾರವಾಡದ ಆಲೂರು ವೆಂಕಟರಾಯರ ಸಂಪಾದಕತ್ವದಲ್ಲಿ ಹೊರಡುತ್ತಿರುವ 'ನವ ಜೀವನ ಗ್ರಂಥ ಭಾಂಡಾರ'ದ ಐದನೆಯ ಪುಷ್ಪ. ಇಂದಿನ ಶತಮಾನದಲ್ಲಿ ವಿಶ್ವದಲ್ಲಿಯೇ ನವ ಜೀವನವು ಉತ್ಪನ್ನವಾಗಿದೆ. ಅದರಲ್ಲಿಯೂ ಏಷಿಯಾ ಖಂಡದಲ್ಲಿ ಜಾಗೃತಿಯಾಗಿರುವುದು ವಿಶ್ವದ ಏಳಿಗೆಗೆ ಬಹು ಬಲವನ್ನು ಕೊಡುತ್ತದೆ. ಈಗ ಏಷಿಯಾ ಖಂಡವು ಅಧೋಗತಿಯಲ್ಲಿ ಒದ್ದಾಡುತ್ತಿದ್ದರೂ ಹಿಂದೆ ಈ ಖಂಡವು ಸಕಲ ಸಂಸ್ಕೃತಿಗಳ ಆಗಾರವಾಗಿದ್ದಿತೆಂದೇ ಹೇಳಬೇಕು: ಬೇಬಿಲೋನಿಯಾ ದೇಶದ ರತ್ನಗಂಬಳಿಗಳು ಜಗತ್ತನ್ನೇ ಮೋಹಗೊಳಿಸಿದ್ದುವು. ಈಜಿಪ್ತ ದೇಶವು ಪಾಶ್ಚಾತ್ಯ ದೇಶವಾದ ಗ್ರೀಕರಿಗೆ ವಿಶ್ವವಿದ್ಯಾ ನಿಲಯವಾಗಿದ್ದಿತು. ಭಾರತ ವರ್ಷವು ತನ್ನ ವೇದಾಂತ ಚಕ್ರಾಧಿಪತ್ಯವನ್ನು ಸಯಾಂ, ಜೈನ ಮುಂತಾದ ದೇಶಗಳ ವರೆಗೂ ಹಬ್ಬಿಸಿದ್ದಿತು. ಭಾರತವರ್ಷದ ವಾಣಿಜ್ಯ ಪ್ರಾಬಲ್ಯವು ಸಕಲ ದೇಶಗಳನ್ನೂ ಆವರಿಸಿದ್ದಿತು. ಭಾರತವರ್ಷಕ್ಕೆ ತೃಣವನ್ನು ಸುವರ್ಣ ಮಾಡುವ ಅದ್ಭುತ ಶಕ್ತಿಯಿದ್ದಿತೆಂದು ಒಬ್ಬ ವಿದ್ವಾಂಸನು ಹೇಳುತ್ತಾನೆ. ಚೀನರು ನಾವಿಕ ವಿದ್ಯಾ

ಚತುರರಾಗಿದ್ದರು. ಅಮೆರಿಕಾ ಖಂಡವು, ಕೊಲಬಂಸ್ ಎಂಬುವನು ಅದನ್ನು ಕಂಡು ಹಿಡಿಯುವುದಕ್ಕೆ ಮೊದಲೇ, ಚೀನರಿಗೆ ಗೊತ್ತಿದ್ದಿತು. ಸರ್ವ ಮತಗಳ ಜನ್ಮವೂ ಪೌರ್ವಾತ್ಯ ದೇಶಗಳಲ್ಲಿಯೇ ಆಗಿದೆ. ಆದರೆ, ಕೇವಲ ಗತ ವೈಭವದಿಂದ ಭವಿಷ್ಯ ಕೀರ್ತಿಯನ್ನು ಉಳಿಸುವುದು ಅಸಾಧ್ಯ. ಅಲ್ಪ ಸಂತುಷ್ಟಿಯು ಯಾವ ಜನಾಂಗವನ್ನು ಆವರಿಸುತ್ತದೆಯೋ ಆ ಜನಾಂಗವು ವಿನಾಶದ ಹಾದಿಯನ್ನು ಹಿಡಿಯುತ್ತದೆಂಬುದರಲ್ಲಿ ಸಂದೇಹವಿಲ್ಲ. ಅಲ್ಪ ಸಂತುಷ್ಟಿಯು ಜನಾಂಗದ ಪ್ರಗತಿಯಲ್ಲಿ ಸುಷುಪ್ತಾವಸ್ಥೆಯನ್ನು ಹುಟ್ಟಿಸುತ್ತದೆ. ಈ ಮೌಢ್ಯವನ್ನು ನೀಗುವುದಕ್ಕೆ ಸಾಂಸ್ಕೃತಿಕ ಜಾಗೃತಿಯು ಆವಶ್ಯಕ. ವ್ಯಕ್ತಿಗೆ ಹೇಗೆ ಒಂದು ಆತ್ಮವಿದೆಯೋ ಹಾಗೆಯೇ ಜನಾಂಗಕ್ಕೂ ಒಂದು ಆತ್ಮವಿದೆ, ತೇಜೋ ಬಲವಿದೆ. ಈ ತೇಜೋ ಬಲವನ್ನು ಮರೆತರೆ, ಸುಷುಪ್ತಾವಸ್ಥೆಯುಂಟಾಗುತ್ತದೆ. ಭಾವನೆಗಳ ಮತ್ತು ತತ್ತ್ವಗಳ ಪರಸ್ಪರ ವಿರೋಧವು ಜನಾಂಗದ ಮನಸ್ಸಿನಲ್ಲಿ ಹುಟ್ಟಿ ಒಂದು ನವೀನವಾದ ಶಕ್ತಿಯನ್ನು ಕೊಡಬೇಕು. ಭಾವನಾ ಪ್ರಪಂಚದಲ್ಲಿ ಪ್ರಗತಿಯನ್ನು ಹೊಂದಬೇಕಾದರೆ, ವಿರೋಧವೂ ಆಂತರ್ಯವೂ ಆವಶ್ಯಕ. ವಿರೋಧದಿಂದಲೇ ವಾದವು ಹುಟ್ಟುವುದು. ವಾದವು ಸಂಸ್ಕೃತಿಯನ್ನು ವಿವೇಚನೆಯೆಂಬ ಒರೆಗಲ್ಲಿನ ಮೇಲೆ ಉಜ್ಜಿ, ಹೊಸ ಮಾನ ದಂಡಗಳನ್ನು ಕಲ್ಪಿಸಿಕೊಡುತ್ತದೆ. ಇದೇ ಜಾಗೃತಿಯ ಕುರುಹು. ಆದುದರಿಂದ, ಯಾವ ದೇಶವು ವಿಚಾರವನ್ನು ಮೂಲೆಗೊತ್ತಿ ಸತ್ತ ಪುಸ್ತಕಗಳ ಆಜ್ಞೆಯೇ ಸರ್ವಸ್ವವೆಂದು ಸಾರುವುದೊ ಆ ದೇಶಕ್ಕೆ ವಿನಾಶವೆಂಬುದನ್ನು ಮರೆಯಬಾರದು. ವಿಧಿಯು ವಿವೇಕಕ್ಕಿಂತಲೂ ಉತ್ತಮವಾದುದೆಂದು ಅರಿತರೆ ಜಾಗೃತಿಯಿಲ್ಲ; ಸಂಸ್ಕೃತಿಯ ಪ್ರಗತಿಯ ಸಾವು. ಆದುದರಿಂದ, ಇಂದಿನ ಏಷಿಯಾ ಖಂಡದ ಜಾಗೃತಿಯ ಅತಿ ಪ್ರಾಮುಖ್ಯವಾದ ಚಿಹ್ನೆ ಎಂದರೆ, ಹಿಂದಿನ ವಿಧಿಯನ್ನು ವಿವೇಚನೆಯಿಂದ ಪರೀಕ್ಷೆ ಮಾಡುವುದು. ಸುಖ ಲೋಲುಪರಾದ ಏಷಿಯರು ತಮ್ಮ ಚಕ್ರಾಧಿಪತ್ಯಗಳನ್ನು ಕಳೆದುಕೊಂಡುದು ಪರಿಸ್ಥಿತಿಯ ವಾತಾವರಣವನ್ನು ಗಣಿಸದ ವಿಧಿಯ ಹಾವಳಿಯಿಂದ.

ಆದರೆ, ಈಗ ಎರಡು ಶತಮಾನಗಳಿಂದ ಪಾಶ್ಚಾತ್ಯ ಸಂಸ್ಕೃತಿಯು ಏಷಿಯದ ಜೀವನವನ್ನು ಪರಿವರ್ತನ ಮಾಡಿತು. ಯೂರೋಪಿಯನರು ತಮ್ಮ ಕ್ರಾಂತಿಯನ್ನು ಏಷಿಯಾ ಖಂಡದಲ್ಲಿಯೂ ಹರಡಿದರು. ವಿಜ್ಞಾನ ಬಲದಿಂದ ಚಕ್ರಾಧಿಪತ್ಯಗಳು ಕಟ್ಟಲ್ಪಟ್ಟುವು. ಏಕದೇಶವಾಗಿದ್ದ ಜ್ಞಾನವು ಸರ್ವತೋ ಮುಖವಾಗಿ ಪರಿಣಮಿಸಿತು. ಪಾಶ್ಚಾತ್ಯರು ಈಶನ ಸೃಷ್ಟಿಯ ಸಕಲ ವಿಧ ಜ್ಞಾನಗಳಲ್ಲಿಯೂ ಒಂದು ತೆರದ ನೈಜವಾದ ಹಸಿವನ್ನೂ ಉತ್ಸಾಹವನ್ನೂ ಹುಟ್ಟಿಸಿದರು. ಏಷಿಯಾ ಖಂಡವು, ಕೇವಲ ರೂಢಿಯೇ ಈಶನ ಆಜ್ಞೆಯೆಂಬುದನ್ನು ಬಿಟ್ಟು, ವಿವೇಚನಾ ದೇವತೆಯನ್ನು ಆರಾಧಿಸಲು ಪ್ರಾರಂಭ ಮಾಡಿತು. ಪಾಶ್ಚಾತ್ಯರು ಏಷಿಯದ ಸಮಸ್ತ ಭಾಗಗಳನ್ನೂ ತಮ್ಮ ಶೃಂಖಲೆಗಳಿಂದ ಬಂಧಿಸಿದ ಮೇಲೆ ಸ್ವಾತಂತ್ರ್ಯ ಜ್ಞಾನವು ಉದ್ಭವಿಸಿತು. ಇಂದಿನ ಜಾಗೃತಿಗೆ ಪಾಶ್ಚಾತ್ಯರ ದಬ್ಬಾಳಿಕೆಯೇ ಕಾರಣ. ಒಂದು ಶತಮಾನದಿಂದ ಪಾಶ್ಚಾತ್ಯ ಸಂಸ್ಕೃತಿಯ ವರ್ಚಸ್ಸು ನಮ್ಮಲ್ಲಿ ಬಿದ್ದ ಮೇಲೆ, ಅನುಕರಣ ಪಟುಗಳಾದ ನಾವು ಅವರ ದಿವ್ಯ ತತ್ತ್ವಗಳನ್ನು ಕಾರ್ಯರಂಗಕ್ಕಿಳಿಸಬೇಕೆಂದು ಹಾಹಾಕಾರ

ಮಾಡತೊಡಗಿದೆವು. ಅದ್ಭುತ ಹಿಮಾಲಯವು ಏಷಿಯಾ ಖಂಡವನ್ನು ವಿಭಜಿಸ ಮಾಡಿದ್ದರೂ ಏಷಿಯದ ಆತ್ಮವು ಒಂದೇ ಎಂದು ಅರಿತೆವು. ಅನೇಕ ಭಾಷೆಗಳನ್ನು ಮಾತನಾಡಿದರೂ, ಅನೇಕ ಮತಾನುಯಾಯಿಗಳಾದರೂ, ಏಷ್ಯದ ಜನಾಂಗಗಳು ಸ್ಥೂಲ ದೃಷ್ಟಿಗೆ ಪ್ರತ್ಯೇಕವೆಂದು ಕಂಡುಬಂದರೂ ಏಷಿಯದ ಸಂಸ್ಕೃತಿಯೂ ಸಮಸ್ಯೆಯೂ ಒಂದೇ ಎಂಬುದು ಮನವರಿಕೆಯಾಯಿತು.

ಏಷಿಯಾ ಖಂಡದ ಸಮಸ್ಯೆ ಏನೆಂಬುದಕ್ಕೆ ಈ ಗ್ರಂಥ ಲೇಖಕರು, "ಏಷಿಯದ ಕ್ಷೀಣ ದೆಶೆಯೂ ದಾಸ್ಯವೂ ಪರಿಹಾರ್ಯವೇ, ಅಥವಾ ಅಪರಿಹಾರ್ಯವೇ?" ಎಂಬುದೇ ಎಂದು ಅಭಿಪ್ರಾಯಪಡುತ್ತಾರೆ. ಈ ಉತ್ತರವು ಏಕದೇಶ ಸಮಾಧಾನ ವನ್ನು ಹೇಳಿದಂತಾಗುತ್ತದೆಯೇ ಹೊರತು ಸಂಪೂರ್ಣವಾಗಿ ಹೇಳಿದಂತಾಗುವುದಿಲ್ಲ. ರಾಜಕೀಯ ಪ್ರಪಂಚದಲ್ಲಿ ದಾಸ್ಯ ಶೃಂಖಲೆಗಳನ್ನು ಒಗೆಯುವುದೇ ಸಮಸ್ಯೆ. ಜ್ಞಾನ ಪ್ರಪಂಚದಲ್ಲಿ, ಏಷ್ಯವು ಸರ್ವ ಶಾಸ್ತ್ರಗಳಲ್ಲಿಯೂ ಸರ್ವಜ್ಞತೆಯನ್ನು ಪಡೆದಿದೆ ಎಂಬು ದನ್ನು ಅಳಿಸಿ, ಜ್ಞಾನ ಸಂಪಾದನೆಗೆ ಉತ್ಸಾಹವನ್ನೂ ಸ್ಫೂರ್ತಿಯನ್ನೂ ಹುಟ್ಟಿಸು ವುದೇ ಸಮಸ್ಯೆ. ವಾಣಿಜ್ಯ ಪ್ರಪಂಚದಲ್ಲಿ ಸ್ವಾವಲಂಬಿಗಳಾಗಬೇಕೆ ಹೊರತು ಪರ ರಾಷ್ಟ್ರ ದಾಸರಾಗಕೂಡದೆಂಬುದೇ ಸಮಸ್ಯೆ. ಜನಾಂಗಗಳ ಅಂತರ್ಪ್ರಗತಿಗೆ, ವಿಚಾರ ಯುತ ಪರಸ್ಪರ ಸಹಕಾರವು ಉತ್ತಮ ಮಾರ್ಗವೇ ಹೊರತು ವಿಷಮ ಸ್ಪರ್ಧೆಯಲ್ಲ ವೆಂದು ಸಾರುವುದೇ ಏಷಿಯದ ಜನರ ಆದರ್ಶ. ಇಂದಿನ ಜಾಗೃತಿಯ ಮತ್ತೊಂದು ಮುಖ್ಯ ಗುಣವೇನೆಂದರೆ, ರಾಷ್ಟ್ರ ಜ್ಞಾನ. ಮತವೇ ಜನಾಂಗದ ಮೇರೆಯೆಂದು ಅರಿಯುತ್ತಿದ್ದ ತುರ್ಕಿಯು, ರಾಷ್ಟ್ರ ಜ್ಞಾನವೇ ಅಭ್ಯುದಯಕ್ಕೆ ಮೂಲ ಕಾರಣ ವೆಂದು ನಂಬಿದೆ. ಕಿಲಾಫತ್ತನ್ನು ನಿರ್ಮೂಲ ಮಾಡಿದುದರ ಗುಟ್ಟಾದರೂ ಇದೇ. ಪಾಶ್ಚಾತ್ಯ ಸಂಸ್ಕೃತಿಯು ಎಷ್ಟು ಹೀನವಾಗಿದ್ದರೂ ಅದರ ತಿರುಳನ್ನು ತಾವು ಸೇವಿಸದಿದ್ದರೆ ಬಾಳುವುದು ದುರ್ಲಭವೆಂದು ತುರ್ಕಿಯು ಚೆನ್ನಾಗಿ ಬಲ್ಲುದು. ಹಾಗೆ ಮಾಡದೆ ತನ್ನ ಪುರಾತನ ವೈಭವದ ಹೆಮ್ಮೆಗೆ ಮರುಳಾಗಿ ತನ್ನ ಜೀವನವನ್ನು ಪರಿ ವರ್ತನೆ ಮಾಡಲು ಒಪ್ಪದಿದ್ದರೆ, ಇಂದಿಗೂ ಸ್ವತಂತ್ರವಾಗಿರುವುದಕ್ಕೆ ಬದಲು, ತುರ್ಕಿಯು ಯೂರೋಪಿನ ಕ್ಷಾಮ ದೇವತೆಯಾಗಿಯೇ ಇರುತ್ತಿದ್ದಿತು. ಚೀನರೂ ಇದೇ ಹಾದಿಯನ್ನು ಹಿಡಿದಿದ್ದಾರೆ. ಏಷಿಯವು ಜಾಗೃತಿಯನ್ನು ಉಳಿಸಿಕೊಳ್ಳಬೇಕಾ ದರೆ, ಪರ ಸಂಸ್ಕೃತಿಯ ಮಿಳನವಾಗಬೇಕು. ಪೌರ್ವಾತ್ಯ ಮತ್ತು ಪಾಶ್ಚಾತ್ಯ ಸಂಸ್ಕೃತಿಗಳು ಮಿಳನವಾಗಿ ನವೀನವಾದ ಸಂಸ್ಕೃತಿಯನ್ನು ನಿರ್ಮಾಣ ಮಾಡಲು ಸಾಧ್ಯವೇ? ಅಥವಾ, ಪಾಶ್ಚಾತ್ಯ ಸಂಸ್ಕೃತಿಯು ಪೌರ್ವಾತ್ಯರ ಹಿಂದಿನ ವೈಭವದ ಸಂಸ್ಕೃತಿಯನ್ನು ತನ್ನ ವಾಹಿನಿಯಲ್ಲಿ ಹೊಡೆದುಕೊಂಡು ಹೋಗುತ್ತದೆಯೇ? ಎಂಬುದೇ ಏಷಿಯದ ಅದ್ಭುತ ಸಮಸ್ಯೆ. ಇದಕ್ಕೆ ಪರಿಹಾರವನ್ನು ಹೇಳುವ ಸ್ಫೂರ್ತಿಯೇ ಏಷಿಯದ ಜಾಗೃತಿ.

ಗ್ರಂಥಕರ್ತರು ಈ ಸಮಸ್ಯೆಗಳನ್ನು ಬಿಚ್ಚಿ ಹೇಳದಿದ್ದರೂ, ಪ್ರತ್ಯಕ್ಷವಾಗಿ ವಾಸ್ತವಿಕ ಪ್ರಪಂಚದಲ್ಲಿ ನಡೆಯುತ್ತಿರುವ ಅಂಶಗಳನ್ನು ವಿಶದಪಡಿಸಿದ್ದಾರೆ; ಸಮಷ್ಟಿ

ಏಷಿಯದ ಚಳವಳಿ (Pan-Asiatic Movement) ಯನ್ನು ಚಿತ್ರಿಸಿದ್ದಾರೆ. ರವೀಂದ್ರ ಕವಿಯನ್ನು ಪರ್ಶಿಯಾ ಮತ್ತು ಜಪಾನು ದೇಶಗಳು ಆಮಂತ್ರಿಸಿದುದು ಏಷಿಯದ ಸಂಸ್ಕೃತಿಯ ಐಕ್ಯತೆಯನ್ನು ಸೂಚಿಸುತ್ತದೆ.

ಏಷಿಯದ ಜಾಗೃತಿಯಲ್ಲಿ ಒಂದು ಜನಾಂಗವು ಮಾತ್ರ ಅಭ್ಯುದಯವನ್ನು ಪಡೆದಿದ್ದರೂ, ದುರ್ವರ್ತನೆಯ ಹಾದಿಯನ್ನು ಹಿಡಿದರೆಂಬುದನ್ನು ನೋಡಿ ಎಲ್ಲರಿಗೂ ವಿಷಾದವಾಗುತ್ತದೆ. ಆ ಜನಾಂಗವು ಜಪಾನು. ಜಪಾನರು ಏಷಿಯದವರಾಗಿದ್ದರೂ ಕೂಡ ಚೀನಾ ರಾಜ್ಯವನ್ನು ಅಪಹಾರ ಮಾಡುವುದಕ್ಕೆ ಪ್ರಯತ್ನ ಮಾಡುತ್ತಿರುವುದನ್ನು ನೋಡಿ ಯಾರೂ ಆ ದೇಶದ ವರ್ತನೆಯಲ್ಲಿ ಸಹಾನುಭೂತಿಯನ್ನು ತೋರಿಸರು. ಜಪಾನರು ಪಾಶ್ಚಾತ್ಯ ಸಂಸ್ಕೃತಿಯ ದುಷ್ಟ ಚಿಹ್ನೆಗಳನ್ನು ಅನುಕರಿಸುತ್ತಿರುವ ಪಟುಗಳು; ಚೀನರ ಸ್ವಾತಂತ್ರ್ಯ ಸಾಧನೆಗೆ ಅಡ್ಡಬರುತ್ತಿರುವರು. ಜಪಾನರಿಗೆ ರಷ್ಯದ ಮೇಲಿನ ಯುದ್ಧದಲ್ಲಿ ವಿಜಯವಾದ ಬಳಿಕ ತಮ್ಮ ವರ್ತನೆಯನ್ನು ಬದಲಾಯಿಸಿ ಇಂಗ್ಲೆಂಡಿನಂತೆ ತಾವೂ ಚಕ್ರಾಧಿಪತ್ಯವನ್ನು ಕಟ್ಟಬೇಕೆಂದು ದುರಾಶೆಯುಳ್ಳವರಾಗಿರುತ್ತಾರೆ. ಈ ಆದರ್ಶಕ್ಕೆ ಪಾಶ್ಚಾತ್ಯ ದೇಶಗಳ ಬೆಂಬಲ.

ಗ್ರಂಥದಲ್ಲಿ ಮುದ್ರಾರಾಕ್ಷಸನ ಹಾವಳಿ ಬಹಳ. ಲೇಖಕರು ತಮ್ಮ ಪ್ರಸ್ತಾವನೆಯಲ್ಲಿ ಹೇಳುವಂತೆ, ಏಷಿಯಾ ಖಂಡದ ವಿಚಾರದಲ್ಲಿ ಉತ್ತರೋತ್ತರವಾಗಿ ವ್ಯಾಸಂಗ ಮಾಡುವಂತೆ ವಾಚಕರಿಗೆ ಅಭಿರುಚಿ ಹುಟ್ಟಿಸಲು ಈ ಗ್ರಂಥವು ಸಹಕಾರಿಯಾಗಿದೆಯೆಂದು ಧಾರಾಳವಾಗಿ ಹೇಳಬಹುದು. ಗ್ರಂಥದಲ್ಲಿ ಒಂದು ತೆರದ ರೀತಿ ಇದೆ, ಸಮಗ್ರ ಭಾವನೆ ಇದೆ. ಅದಕ್ಕಾಗಿ ನಾವು ಲೇಖಕರನ್ನು ಅಭಿನಂದಿಸುತ್ತೇವೆ.

ಜಿ. ವಿ. ರಾಮಾಚಾರ್ಯ.

---

ಶ್ರೀಃ

# ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ

ಸಂಪುಟ ೧೮] ಶ್ರೀಮುಖ ಸಂವತ್ಸರ ಪುಷ್ಯಮಾಸ [ಸಂಚಿಕೆ ೪



ವಾರ್ಷಿಕ ಚಂದಾ ರೂ. ೪] [ಬಿಡಿ ಸಂಚಿಕೆ ರೂ. ೧-೮-೦

ಜನವರಿ ೧೯೩೪

117-34.—ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಟಿ. ಸುಬ್ಬಣ್ಣ ಅಯ್ಯನವರಿಂದ ಮುದ್ರಿಸಲ್ಪಟ್ಟಿತು.

## ವಿಷಯ ಸೂಚಿಕೆ

ಶ್ರೀಃ

ಕರ್ಣಾಟಕ ಸಾಹಿತ್ಯ

# ಪರಿಷತ್ಪತ್ರಿಕೆ



ಸಂಪುಟ ೧೮] ಶ್ರೀಮುಖ ಸಂ॥ ಪುಷ್ಯಮಾಸ [ಸಂಚಿಕೆ ೪

## ಹತ್ತೊಂಬತ್ತನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನ

ಕರ್ಣಾಟಕ ಸಾಹಿತ್ಯ ಸಮ್ಮೇಳನದ ಹತ್ತೊಂಬತ್ತನೆಯ ಅಧಿವೇಶನವು ಶ್ರೀಮುಖ ಸಂವತ್ಸರದ ಪುಷ್ಯ ಶುದ್ಧ ತ್ರಯೋದಶೀ ಶುಕ್ರವಾರ (೧೯೩೩ನೆಯ ಇಸವಿ ಡಿಸೆಂಬರು ೨೯ನೆಯ ತಾರೀಖು) ಧಾರವಾಡದ ಜಿಲ್ಲಾ ಹುಬ್ಬಳ್ಳಿಯಲ್ಲಿ ಆರಂಭವಾಗಿ ಮೂರು ದಿನಗಳು ಬಹಳ ವಿತರಣೆಯಿಂದ ನಡೆಯಿತು. ಕರ್ಣಾಟಕದ ನಾನಾ ಪ್ರಾಂತಗಳಿಂದ ಅನೇಕ ಮಂದಿ ಪ್ರತಿನಿಧಿಗಳೂ ಪ್ರೇಕ್ಷಕರೂ ಬಂದಿದ್ದರು. ಸ್ವಾಗತ ಮಂಡಲಿಯವರ ಆದರಾತಿಥ್ಯಗಳು ಬಹಳ ತೃಪ್ತಿಕರವಾಗಿದ್ದುವು. ಬಹಳ ವಿಸ್ತಾರ ವಾದ ಗಿರಣಿಯೊಂದನ್ನು ಸಮ್ಮೇಳನ ಮಂದಿರವಾಗಿ ಏರ್ಪಡಿಸಿದ್ದುದರಿಂದ ಇದರಲ್ಲಿ ಸಭಾ ಮಂಟಪ, ಭೋಜನ ಶಾಲೆಗಳು, ಪ್ರತಿನಿಧಿಗಳ ಬಿಡಾರ—ಇವೆಲ್ಲಕ್ಕೂ ಬಹಳ ವಿಶಾಲವಾದ ಸ್ಥಳಗಳಿದ್ದು, ಜನರಿಗೆ ಸ್ಥಳ ಸಂಕೋಚದ ತೊಂದರೆ ಸ್ವಲ್ಪವೂ ತೋರಲಿಲ್ಲ. ಒಂದು ಕೋಣೆಯಲ್ಲಿ, ಪ್ರದರ್ಶನಕ್ಕಾಗಿ ಕನ್ನಡ ಗ್ರಂಥಗಳನ್ನೂ ಪತ್ರಿಕೆಗಳನ್ನೂ ಇಟ್ಟಿದ್ದರು. ಹೊರಗಡೆ ಅಂಗಳದಲ್ಲಿ ಆಧುನಿಕ ಕವಿತೆಗಳು ಮೊದಲಾದ ಹೊಸ ಪುಸ್ತಕಗಳು ಬೆಲೆಗೆ ಇಟ್ಟಿದ್ದುವು. ಹತ್ತಿರದಲ್ಲಿಯೇ ಕುದುರೆಯ ಬಂಡಿಗಳು ಬಾಡಿಗೆಗೆ ದೊರೆಯುತ್ತಿದ್ದುದರಿಂದ ಊರಲ್ಲಿ ಸುತ್ತುವುದಕ್ಕೂ ಬಹಳ ಅನುಕೂಲವಾಗಿದ್ದಿತು. ಈ ಸಮ್ಮೇಳನದ ಏರ್ಪಾಡೆಲ್ಲವೂ ಶ್ರೀ ಮೂರು ಸಾವಿರ ಮಠದ ಶ್ರೀ ಸ್ವಾಮಿಗಳವರ ವಿಚಾರಣೆಯಲ್ಲಿಯೇ ನಡೆದುದರಿಂದ ಯಾವುದಕ್ಕೂ ಕೊರತೆಯಿರಲಿಲ್ಲ.

ಶುಕ್ರವಾರ (೨೯ನೆಯ ತಾರೀಖು) ಪ್ರಾತಃಕಾಲ ೯ ಗಂಟೆಗೆ ಸಮ್ಮೇಳನವು ಆರಂಭವಾಯಿತು. ಈ ಸಮ್ಮೇಳನದ ಅಧ್ಯಕ್ಷ ಪದವಿಯನ್ನಲಂಕರಿಸಬೇಕೆಂದು ಪ್ರಾರ್ಥಿತರಾಗಿ ಬಳ್ಳಾರಿಯಿಂದ ಹುಬ್ಬಳ್ಳಿಗೆ ದಯಮಾಡಿಸಿದ್ದ ಸರ್ವದರ್ಶನ ತೀರ್ಥ, ಆಸ್ಥಾನ ವಿದ್ವಾನ್ ಶ್ರೀಮಾನ್ ವೈ. ನಾಗೇಶ ಶಾಸ್ತ್ರಿಗಳವರನ್ನು ಸ್ವಾಗತ ಮಂಡಲಿಯ ಅಧ್ಯಕ್ಷರಾದ ಶ್ರೀಮಾನ್ ಪಾವಟೆ ಸಿದ್ಧರಾಮಪ್ಪ ಮುಂಡಪ್ಪ,

ಬಿ.ಎ., ಎಲ್‌ಎಲ್.ಬಿ. ಅವರು ಮೊದಲಾದ ಪ್ರಮುಖರು ಗೌರವ ಪುರಸ್ಸರವಾಗಿ ಸಭಾ ಮಂಟಪಕ್ಕೆ ಬಿಜಯ ಮಾಡಿಸಿದರು. ವಿಶಾಲವಾದ ಆ ಸಭಾ ಮಂಟಪವು ಅದುವರೆಗೇ ಜನ ಸಂದಣಿಯಿಂದ ತುಂಬಿದ್ದಿತು. ಆ ಬಳಿಕ, ಮುಂಬಯಿ ಸರ್ಕಾರದ ಶಿಕ್ಷಣ ಮಂತ್ರಿಗಳಾದ ದಿವಾನ್ ಬಹಾದ್ದೂರ್ ಸಿದ್ದಪ್ಪ ತೋಟಪ್ಪ ಕಂಬಳಿ, ಬಿ.ಎ., ಎಲ್‌ಎಲ್.ಬಿ., ಎಂ.ಎಲ್.ಸಿ., ಜೆ.ಪಿ. ಅವರು ಸಭೆಗೆ ದಯಮಾಡಿಸಿದರು. ಅವರೂ ಅಧ್ಯಕ್ಷರೂ ಇತರ ಪ್ರಮುಖರೂ ಗದ್ದಿಗೆಯ ಮೇಲೆ ಉಚಿತಾಸನಗಳಲ್ಲಿ ಕುಳಿತುಕೊಂಡರು. ಆಗ ಬಾಲಿಕೆಯರೂ ಬಾಲಕರೂ ಸ್ವಾಗತ ಪದ್ಯಗಳನ್ನು ಹಾಡಿದರು. ತರುವಾಯ, ಸ್ವಾಗತ ಮಂಡಲಿಯ ಗೌ|| ಕಾರ್ಯದರ್ಶಿಗಳಾದ ವ್ಯಾಕರಣ ತೀರ್ಥ ಚಂದ್ರಶೇಖರ ಶಾಸ್ತ್ರಿಗಳವರು, ಹುಬ್ಬಳ್ಳಿಯ ಶ್ರೀ ಮೂರು ಸಾವಿರ ಮಠದ ಶ್ರೀ ಜಗದ್ಗುರು ಶ್ರೀ ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳ ಶ್ರೀಮುಖವನ್ನೂ, ಚಿತ್ರದುರ್ಗದ ಶ್ರೀ ಜಗದ್ಗುರು ಶ್ರೀ ಜಯದೇವ ಮುರುಘ ರಾಜೇಂದ್ರ ಮಹಾಸ್ವಾಮಿಗಳ ಶ್ರೀಮುಖವನ್ನೂ ಓದಿದರು. ಅನಂತರ, ದಿವಾನ್ ಬಹಾದ್ದೂರ್ ಸಿದ್ದಪ್ಪ ತೋಟಪ್ಪ ಕಂಬಳಿಯವರು, ಈ ಸಮ್ಮೇಳನವನ್ನು ದಯವಿಟ್ಟು ಆರಂಭಿಸಬೇಕೆಂದು ಕೇಳಿಕೊಂಡ ಸ್ವಾಗತ ಮಂಡಲಿಯ ಅಧ್ಯಕ್ಷರಾದ ಸಾವಟಿ ಸಿದ್ಧರಾಮಪ್ಪನವರ ವಿನಂತಿಯನ್ನು ಮನ್ನಿಸಿ, ವಿಷಯ ಪೂರಿತವಾದ ತಮ್ಮ ಭಾಷಣವನ್ನು ಸಾವಧಾನದಿಂದ ಓದಿದರು. ತರುವಾಯ, ಬಾಲಕರು "ಕರ್ಣಾಟಕಾಂಬೆ ನೀ ಧನ್ಯೆ ಧನ್ಯೆ" ಎಂಬ ಗೀತವನ್ನು ಹಾಡಿದನಂತರ, ದಿವಾನ್ ಬಹಾದ್ದೂರರವರು ಸ್ವಾಗತ ಮಂಡಲಿಯ ಅಧ್ಯಕ್ಷರಿಂದ ಹೂ ಮಾಲಿಕೆ ತುರಾಯಿ ಮೊದಲಾದ ಮರ್ಯಾದೆಗಳನ್ನು ಪಡೆದು ಸಭೆಯಿಂದ ತೆರಳಿದರು.

ಅನಂತರ, ಸ್ವಾಗತಾಧ್ಯಕ್ಷರು ತಮ್ಮ ಸ್ವಾಗತ ಭಾಷಣವನ್ನು ಓದಿದರು. ಇದಾದನಂತರ, ಶ್ರೀಮಾನ್ ಚಂದ್ರಶೇಖರ ಶಾಸ್ತ್ರಿಗಳು ಶ್ರೀಮಾನ್ ನಾಗೇಶ ಶಾಸ್ತ್ರಿಗಳ ಗುಣ ಕಥನ ಮಾಡಿ, ಆ ಮಹನೀಯರನ್ನು ಈ ಸಮ್ಮೇಳನದ ಅಧ್ಯಕ್ಷ ಪದವಿಯನ್ನು ವಹಿಸುವಂತೆ ಕೇಳಿಕೊಳ್ಳಬೇಕೆಂದು ಸೂಚನೆ ಕೊಟ್ಟರು. ಈ ಸೂಚನೆಯನ್ನು ಬಳ್ಳಾರಿಯ ಡಿಸ್ಟ್ರಿಕ್ಟ ಬೋರ್ಡು ಪ್ರೆಸಿಡೆಂಟರಾದ ಶ್ರೀಮಾನ್ ಮಹಾಬಲೇಶ್ವರಪ್ಪನವರೂ, ಬೆಂಗಳೂರಿನ ಶ್ರೀಮಾನ್ ಡಿ. ವಿ. ಗುಂಡಪ್ಪನವರೂ, ಬಿಜಾಪುರದ ಶ್ರೀಮಾನ್ ಶ್ರೀನಿವಾಸರಾವ್ ಕೌಜಲಗಿಯವರೂ, ಕಾರವಾರದ ಶ್ರೀಮಾನ್ ಎಂ. ಪಿ. ಶೆಟ್ಟಿಯವರೂ, ಕೊಡಗಿನ ಶ್ರೀಮಾನ್ ಜಿ. ಎನ್. ಕೃಷ್ಣಮೂರ್ತಿಗಳೂ, ಕೊಪ್ಪಳದ ಶ್ರೀಮಾನ್ ಜಯರಾಮಾಚಾರ್ಯರೂ, ಜಮಖಂಡಿಯ ಶ್ರೀಮಾನ್ ನರಗುಂದಕರರೂ ಪ್ರಕೃತ ಭಾಷಣಗಳಿಂದ ಅನುಮೋದಿಸಿದರು. ಶ್ರೀಮಾನ್ ನಾಗೇಶ ಶಾಸ್ತ್ರಿಗಳವರು ಇವರೆಲ್ಲರನ್ನೂ ವಂದಿಸುತ್ತ ಉಚಿತ ಭಾಷಣ ಮಾಡಿ ಅಧ್ಯಕ್ಷ ಸ್ಥಾನವನ್ನು ಸ್ವೀಕರಿಸಿದರು.

ತರುವಾಯ, ಸ್ವಾಗತ ಮಂಡಲಿಯ ಗೌ|| ಕಾರ್ಯದರ್ಶಿಯವರು, ಕರ್ಣಾಟಕದ ನಾನಾ ಪ್ರಾಂತಗಳ ಕನ್ನಡ ಭಾಷಾಭಿಮಾನಿಗಳನೇಕರು ಈ ಸಮ್ಮೇಳನಕ್ಕೆ ಬರಲು

ತಮ್ಮ ಅನಾನುಕೂಲಗಳನ್ನು ಸೂಚಿಸಿ, ಈ ಸಮ್ಮೇಳನಕ್ಕೆ ವಿಜಯವನ್ನು ಬಯಸಿ ಬರೆದಿದ್ದ ಪತ್ರಗಳ ಗೋಷ್ವಾರೆಯನ್ನು ಓದಿ ಹೇಳಿದರು. ಅನಂತರ, ಸಮ್ಮೇಳನದ ಅಧ್ಯಕ್ಷರು ವಿಚಾರ ಪರಿಪುಷ್ಟವಾದ ತಮ್ಮ ಭಾಷಣವನ್ನು ಓದಿದರು.

ಇದು ಮುಗಿದ ಮೇಲೆ, ಪರಿಷತ್ತಿನ ಗೌ॥ ಕಾರ್ಯದರ್ಶಿಗಳಾದ ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್‌ಎಲ್.ಬಿ. ಅವರು ಮುಂದಣ ಕಾರ್ಯ ಕ್ರಮವನ್ನು ತಿಳಿಸುತ್ತ, ಅದೇ ದಿನ ಸಾಯಂಕಾಲ ೩ ಗಂಟೆಗೆ ವಿಷಯ ನಿರ್ಧಾರಕ ಸಮಿತಿಯು ಅದೇ ಸ್ಥಳದಲ್ಲಿ ಸೇರಿ ೫ ಗಂಟೆಯ ವರೆಗೂ ಕಾರ್ಯಕ್ರಮನ್ನು ನಡೆಯಿಸು ವುದೆಂದೂ, ೫॥೦ ಗಂಟೆಯಿಂದ ೭॥೦ ಗಂಟೆಯ ವರೆಗೂ ಅದೇ ಸ್ಥಳದಲ್ಲಿ ಉಪನ್ಯಾಸಗಳು ನಡೆಯುವುವೆಂದೂ, ೮॥೦ ಗಂಟೆಗೆ ವಿಜಯನಗರ ಸ್ಮಾರಕೋತ್ಸವದ ಸಭೆಯು ಗೊತ್ತುವಳಿಗಳನ್ನು ನಿರ್ಧರಿಸುವುದಕ್ಕಾಗಿ ಸೇರುವುದೆಂದೂ ತಿಳಿಸಿ, ಮಾರನೆಯ ದಿನ ಬೆಳಗ್ಗೆ ೮ ಗಂಟೆಯಿಂದ ೧೦ ಗಂಟೆಯ ವರೆಗೆ, ಕರ್ಣಾಟಕ ಸಾಹಿತ್ಯ ಪರಿಷತ್ತಿನ ವಾರ್ಷಿಕಾಧಿವೇಶನವು ಸಮ್ಮೇಳನದ ಅಧ್ಯಕ್ಷರ ಕೋಣೆಯಲ್ಲಿ ನಡೆಯುವುದೆಂದೂ, ೧೦ ಗಂಟೆಯಿಂದ ಸಭಾ ಮಂಟಪದಲ್ಲಿ ವಿಜಯನಗರ ಸ್ಮಾರಕೋತ್ಸವ ಮಂಡಲಿಯ ಅಧಿವೇಶನವು ಶ್ರೀಮಾನ್ ಡಿ. ವಿ. ಗುಂಡಪ್ಪನವರ ಅಧ್ಯಕ್ಷತೆಯಲ್ಲಿ ನಡೆಯುವುದೆಂದೂ, ಇದಕ್ಕೆ ಸರ್ವರಿಗೂ ಆಹ್ವಾನವಿರುವುದೆಂದೂ ಹೇಳಿದರು. ಮೇಲೆ ಗೊತ್ತಾದಂತೆ, ಸಾಯಂಕಾಲ ೩ ಗಂಟೆಗೆ ವಿಷಯ ನಿರ್ಧಾರಕ ಸಮಿತಿಯು ಸಭಾ ಮಂಟಪದಲ್ಲಿ ಸಮ್ಮೇಳನಾಧ್ಯಕ್ಷರ ಅಧ್ಯಕ್ಷತೆಯಲ್ಲಿ ಸೇರಿ, ಮರು ದಿನ ಸಭೆಯಲ್ಲಿ ಚರ್ಚೆಯಾಗಿ ತೀರ್ಮಾನವಾಗುವುದಕ್ಕಾಗಿ, ೨೩ ಗೊತ್ತುವಳಿಗಳನ್ನು ನಿರ್ಣಯ ಮಾಡಿತು.

ಇದಾದ ತರುವಾಯ, ಶ್ರೀಮಾನ್ ನಾ. ಶ್ರೀ. ರಾಜಪುರೋಹಿತರು "ಕುಮಾರ ವ್ಯಾಸ ಮಹಾ ಕವಿಯ ಕಾಲ, ಮತಗಳ ನಿರ್ಣಯ" ಎಂಬ ಉಪನ್ಯಾಸ ವನ್ನು ಓದಿದರು. ಆಮೇಲೆ, ಹಾಸನದ ಶ್ರೀಮಾನ್ ಬಿ. ಶ್ರೀಕಂಠಯ್ಯನವರು "ಕನ್ನಡ ಲಿಪಿಯ ಸಂಸ್ಕರಣ" ವಿಷಯವನ್ನು ವಿವರಿಸಿ ಬರೆದು ತೋರಿಸಿದರು. ಅನಂತರ, ಧಾರವಾಡದ ಶ್ರೀಮಾನ್ ಪ್ರಭಾಕರ ಪೂಜಾರ ಮಹಾದೇವ ಶಾಸ್ತ್ರಿಗಳು "ಪ್ರಾಚೀನ ಮತ್ತು ಆಧುನಿಕ ಕಾವ್ಯ ವಾಙ್ಮಯ" ಎಂಬ ವಿಷಯವಾದ ತಮ್ಮ ಪ್ರಬಂಧವನ್ನು ಓದಿದರು.

ಇಲ್ಲಿಗೆ ಮೊದಲನೆಯ ದಿನದ ಸಮ್ಮೇಳನ ಕಾರ್ಯವು ಮುಗಿಯಿತು. ರಾತ್ರಿ ೯ ಗಂಟೆಯ ಮೇಲೆ ಕೀರ್ತನ ಕೇಸರಿ ಶ್ರೀಮಾನ್ ಜಯರಾಮಾಚಾರ್ಯರು 'ಕಬೀರ' ಕೀರ್ತನವನ್ನು ಮಾಡಿದರು.

---

## ಎರಡನೆಯ ದಿನ

೩೦ನೆಯ ತಾರೀಖು ಶನಿವಾರ ಬೆಳಗ್ಗೆ ೮ ಗಂಟೆಗೆ ಕರ್ಣಾಟಕ ಸಾಹಿತ್ಯ ಪರಿಷತ್ತಿನ ವಾರ್ಷಿಕಾಧಿವೇಶನವು ಸಮ್ಮೇಳನದ ಅಧ್ಯಕ್ಷರ ಬೀಡಾರದಲ್ಲಿ ಶ್ರೀಮಾನ್

ನಾಗೇಶ ಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ನಡೆಯಿತು. (ಇದರ ವಿಷಯವನ್ನು ಮುಂದಣ ಪುಟಗಳಲ್ಲಿ ಕೊಟ್ಟಿದೆ.) ಈ ಕಾರ್ಯವು ಪೂರ್ತಿಯಾಗಿ ನಡೆಯಲು ಅವಕಾಶ ದೊರೆಯದೆ ಹೋದುದರಿಂದ, ಉಳಿದ ಭಾಗವನ್ನು ಮುಂದಿನ ದಿನಕ್ಕೆ ತಳ್ಳಿಡಲಾಯಿತು.

ಇದೇ ಮಧ್ಯಾಹ್ನಾತ್ಪರ ೨ ಗಂಟೆಗೆ ಸಾಹಿತ್ಯ ಸಮ್ಮೇಳನವು ಸಭಾ ಮಂದಿರದಲ್ಲಿ ಮರಳಿ ನೆರೆಯಿತು. ಹಿಂದಿನ ದಿನ ನಿರ್ಣಯವಾಗಿದ್ದ ಗೊತ್ತುವಳಿಗಳನ್ನು ಒಂದೊಂದಾಗಿ ತೆಗೆದುಕೊಂಡು ತೀರ್ಮಾನ ಮಾಡಲಾಯಿತು. (ಹೀಗೆ ಒಪ್ಪಿಗೆಯಾದ ಗೊತ್ತುವಳಿಗಳನ್ನು ಮುಂದೆ ಕೊಟ್ಟಿದೆ.) ಆದಾದಮೇಲೆ, ಪರಿಷತ್ತಿನ ಕಾರ್ಯದರ್ಶಿಯವರು ಪರಿಷತ್ತಿನ ಕಳೆದ ವರ್ಷದ ವರದಿಯನ್ನು ಓದಿದರು.

ಈ ಕಾರ್ಯವು ಮುಗಿದ ಮೇಲೆ ಬೆಂಗಳೂರಿನ ಶ್ರೀಮಾನ್ ಸಂಪತ್ಕುಮಾರಾಚಾರ್ಯರು ಕುಮಾರ ವ್ಯಾಸ ಭಾರತದಿಂದ 'ಕುಂತೀ ಕರ್ಣ ಸಂವಾದ' ಎಂಬ ಭಾಗವನ್ನು ಸರಾಗವಾಗಿ ಓದಿದರು. ಅನಂತರ, ಲಾವಣಿ ಹಾಡುವವರ ಸ್ಪರ್ಧೆಯು ನಡೆಯಿತು. ಈ ಸ್ಪರ್ಧೆಯ ತೀರ್ಮಾನಕ್ಕಾಗಿ ಮುಂದೆ ಹೇಳುವ ಸಭ್ಯರಿಂದ ಕೂಡಿದ ಒಂದು ಸಮಿತಿಯು ನಿಯಾಮಕವಾಯಿತು:—ಶ್ರೀಮಾನ್ ವೈ. ನಾಗೇಶ ಶಾಸ್ತ್ರಿಗಳು, (೨) ಶ್ರೀಮಾನ್ ಬಿ. ಶಿವಮೂರ್ತಿ ಶಾಸ್ತ್ರಿಗಳು, (೩) ಶ್ರೀಮಾನ್ ಜಯರಾಮಾಚಾರ್ಯರು, (೪) ಶ್ರೀಮಾನ್ ಚೆನ್ನಕೇಶವಯ್ಯಂಗಾರ್ಯರು.

ಇಲ್ಲಿಗೆ ಎರಡನೆಯ ದಿನದ ಸಮ್ಮೇಳನ ಕಾರ್ಯವು ಮುಗಿಯಿತು. ರಾತ್ರಿ ೧೦ ಗಂಟೆಗೆ ಬಾಗಲುಕೋಟೆಯ 'ಶ್ರೀ ವಾಸುದೇವ ವಿನೋದಿನೀ ಅಮೆಚ್ಯೂರ್ ನಾಟಕ ಸಭೆ'ಯವರು ಬೆಂಗಳೂರಿನ ಶ್ರೀಮಾನ್ ಅ. ನ. ಕೃಷ್ಣರಾಯರವರ 'ಆಹುತಿ' ಎಂಬ ನಾಟಕವನ್ನೂ, ಶ್ರೀಮಾನ್ ದತ್ತಾತ್ರೇಯ ಬೇಂದ್ರೆಯವರ "ತಿರುಕರ ಪಿಡುಗು" ಎಂಬ ಪ್ರಹಸನವನ್ನೂ ಮಲ್ಲಿಕಾರ್ಜುನ ನಾಟಕ ಶಾಲೆಯಲ್ಲಿ ಅಭಿನಯಿಸಿದರು.

---

## ಮೂರನೆಯ ದಿನ

೩ನೆಯ ತಾರೀಖು ಭಾನುವಾರ ಪ್ರಾತಃಕಾಲ ೮ ಗಂಟೆಗೆ ಸಭಾ ಮಂಟಪದಲ್ಲಿ ಕರ್ಣಾಟಕ ಕವಿ ಸಮ್ಮೇಳನವು ಆರಂಭವಾಯಿತು. ಕವಿ ಸಮ್ಮೇಳನದ ಸ್ವಾಗತ ಮಂಡಳಿಯ ಅಧ್ಯಕ್ಷರಾದ ಶ್ರೀಮಾನ್ ಗಾಂವ್ಕರ್ ಅವರು ಶ್ರೀಮಾನ್ ಕೆ. ವಿ. ಪುಟ್ಟಪ್ಪನವರ ಗುಣ ಕಥನ ಮಾಡಿ, ಅವರು ಈ ಕವಿ ಸಮ್ಮೇಳನದ ಅಧ್ಯಕ್ಷ ಪದವಿಯನ್ನು ವಹಿಸುವಂತೆ ಕೇಳಿಕೊಳ್ಳಬೇಕೆಂದು ಸೂಚನೆ ಮಾಡಿದರು. ಈ ಸೂಚನೆಯನ್ನು, ಬೆಂಗಳೂರಿನ ಶ್ರೀಮಾನ್ ತಾತಾಚಾರ್ಯ ಶರ್ಮರೂ, ಕಾರವಾರದ ಶ್ರೀಮಾನ್ ರಂಗಪ್ಪ ಪೋತ್ದಾರರೂ, ಕೊಡಗಿನ ಶ್ರೀಮತಿ ಪದ್ಮಾವತಿ ಕುಮಾರಿಯವರೂ, ಮದರಾಸಿನ ಶ್ರೀಮಾನ್ ಶಿವಶಂಕರ ಶರಣರೂ ಅನುಮೋದಿಸಿ ಉಚಿತ ಭಾಷಣಗಳನ್ನು ಮಾಡಿದರು. ಶ್ರೀಮಾನ್ ಪುಟ್ಟಪ್ಪನವರು ಇವರೆಲ್ಲರನ್ನೂ ವಂದಿಸಿ,

ವಿಚಾರಯುತವಾದ ತಮ್ಮ ಭಾಷಣವನ್ನು ಓದಿದರು. ಈ ಭಾಷಣವಾದ ಮೇಲೆ ಮುಂದೆ ಹೇಳುವ ಕವಿಗಳು ತಮ್ಮ ತಮ್ಮ ಕವಿತೆಗಳ ಪರಿಚಯವನ್ನು ಸಭಿಕರಿಗೆ ಮಾಡಿಕೊಟ್ಟರು.—

ಮ॥ ರಾ॥ ಶ್ರೀ ಗಳಾದ.—

ಕಾರವಾರರವರು; ಸದಾಶಿವ ಶಾಸ್ತ್ರಿಗಳು, ಹುಕ್ಕೇರಿ; ಗೋಪಾಲ ವೆಂಕಟೇಶ ಮುಗಳಿ, ಹುಬ್ಬಳ್ಳಿ; ಫಾಲಾಕ್ಷ ಶಾಸ್ತ್ರಿಗಳು, ಹುಬ್ಬಳ್ಳಿ; ಕೆ. ಟಿ. ಪುರಾಣೀಕರು, ಧಾರವಾಡ; ನಾರಾಯಣ ಶಾಸ್ತ್ರೀ ಭಾವೂ ಶಾಸ್ತ್ರಿಗಳು, ಕೊಪ್ಪಳ; ಶಿವಶಂಕರ ಶರಣರು, ಮದರಾಸು; ಕೇಶವರಾವ್ ಕುಲಕರಣಿ, ಗದಗ; ವೀರಪ್ಪಾ ಸಂಸಿ; ರಾಘವೇಂದ್ರಾಚಾರ್ಯರು, ಹುಬ್ಬಳ್ಳಿ; ಮಲ್ಲಭದ್ರಯ್ಯನವರು, ದಾವಣಗೆರೆ; ಎ. ಎಸ್. ಇಟ್ಟಿಗೆಯವರು, ಬೆಳಗಾಂವಿ; ಗಾಂವಕರ್, ಹುಬ್ಬಳ್ಳಿ; ಆನಂದಕಪಿ, ನರಗುಂದ; ಈಶ್ವರ ಸಣಕಲ್ಲ, ರಬಕವಿ; ನಗಳೂರಾ, ಧಾರವಾಡ; ಬಿ. ಎಂ. ಮಿಠಾಯಿಗಾರ್, ಹುಬ್ಬಳ್ಳಿ;

ಶ್ರೀಮತಿ ಗಿರಿಜಾ ದೇವಿಯವರು, ಧಾರವಾಡ.

ಶ್ರೀಮತಿ ಪದ್ಮಾವತೀ ಕುಮಾರಿಯವರು ಶ್ರೀಮಾನ್ ಅನಂತಪದ್ಮನಾಭ ರಾಯರ ಕವಿತೆಗಳನ್ನೂ, ಶ್ರೀಮಾನ್ ಸಂಪತ್ಕುಮಾರಾಚಾರ್ಯರು ಹಾಸನದ ಶ್ರೀಮಾನ್ ಪಿ. ಶ್ರೀಕಂಠಯ್ಯನವರ, ಬೆಂಗಳೂರಿನ ಶ್ರೀಮಾನ್ ವಿ. ಸೀತಾರಾಮಯ್ಯನವರ, ಬೆಂಗಳೂರಿನ ಶ್ರೀಮಾನ್ ಡಿ. ವಿ. ಗುಂಡಪ್ಪನವರ ಕವಿತೆಗಳನ್ನೂ ಓದಿದರು.

ಹಿಂದಿನ ದಿನ ಗೊತ್ತಾಗಿದ್ದಂತೆ, ಈ ದಿನ ಮಧ್ಯಾಹ್ನಾನಂತರ ೩-೦ ಗಂಟೆಗೆ ಪರಿಷತ್ತಿನ ವಾರ್ಷಿಕಾಧಿವೇಶನವು ಶ್ರೀಮಾನ್ ನಾಗೇಶ ಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ, ಮತ್ತೆ ನಡೆಯಿತು. (ಈ ಕಾರ್ಯಕಲಾಪಗಳನ್ನು ಮುಂದೆ ಕೊಟ್ಟಿದೆ.)

ವಾರ್ಷಿಕಾಧಿವೇಶನದ ಕಾರ್ಯ ಕಲಾಪಗಳು ಮುಗಿದ ಮೇಲೆ, ಸಾಯಂಕಾಲ ೪ ಗಂಟೆಗೆ, ಸಾಹಿತ್ಯ ಸಮ್ಮೇಳನವು ಶ್ರೀಮಾನ್ ನಾಗೇಶ ಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ಮರಳಿ ನೆರೆಯಿತು. ಶ್ರೀಮತಿ ಕುಮಾರಿ ಪದ್ಮಾವತಿಯವರು "ಬೊಂಬೆಯ ಆಟ" ಎಂಬ ವಿಷಯವಾಗಿಯೂ, ಬೇಲೂರಿನ ಶ್ರೀಮಾನ್ ಕೃಷ್ಣಸ್ವಾಮಿಯವರು "ಲಕ್ಷ್ಮೀಶನ ಶೈಲಿ" ಎಂಬ ವಿಷಯವಾಗಿಯೂ, ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯನವರು "ರಂಗಭೂಮಿ"ಏ ವಿಷಯವಾಗಿಯೂ, ಶ್ರೀಮಾನ್ ಸಾವಟೆ ಸಿದ್ಧರಾಮಪ್ಪನವರು "ಹರಿಹರ ಮತ್ತು ಶಿವಶರಣರು" ಎಂಬ ವಿಷಯವಾಗಿಯೂ ಭಾಷಣ ಮಾಡಿದರು.

ಅನಂತರ, ಹಿಂದಿನ ದಿನ ಲಾವಣಿಗಳನ್ನು ಹಾಡಿದವರಲ್ಲಿ ಉತ್ತಮರೆಂದೆನಿಸಿಕೊಂಡ ಶ್ರೀಮಾನ್ ರಂಗಪ್ಪ ಕಡಿಗೇರಿಯವರಿಗೆ ಮೊದಲನೆಯ ಬಹುಮಾನವನ್ನೂ, ಬೆಂಗಳೂರಿನ ಶ್ರೀಮಾನ್ ನೀಲಕಂಠಪ್ಪನವರಿಗೆ ಎರಡನೆಯ ಬಹುಮಾನವನ್ನೂ, ಮೌಲಾಸೀ ಎಂಬವರಿಗೆ ಮೂರನೆಯ ಬಹುಮಾನವನ್ನೂ ಸುವರ್ಣ ಪದಕಗಳ ರೂಪದಲ್ಲಿ ಸಮ್ಮೇಳನದ ಅಧ್ಯಕ್ಷರು ಹಂಚಿದರು.

ತರುವಾಯ, ಸ್ವಾಗತ ಮಂಡಲಿಯ ಅಧ್ಯಕ್ಷರೂ ಪರಿಷತ್ತಿನ ಗೌ॥ ಕಾರ್ಯದರ್ಶಿಯವರೂ, ಈ ಸಮ್ಮೇಳನ ಕಾರ್ಯದಲ್ಲಿ ತೊಡಗಿ ಸಹಾಯ ಮಾಡಿ ಇದನ್ನು ಜಯಪ್ರದವಾಗುವಂತೆ ಮಾಡಿದ ಅನೇಕ ಮಂದಿಗೆ ಕೃತಜ್ಞತಾ ಪೂರ್ವಕವಾದ ವಂದನೆಗಳನ್ನರ್ಪಿಸಿದ ಮೇಲೆ, ಕರ್ಣಾಟಕದ ನಾನಾ ಪ್ರಾಂತಗಳ ಪ್ರತಿನಿಧಿಗಳು ತಮ್ಮ ಕೃತಜ್ಞತೆಯನ್ನು ಹುಬ್ಬಳ್ಳಿಯ ಸ್ವಾಗತ ಮಂಡಲಿಗೆ ಅರ್ಪಿಸಿದರು. ಈ ಸಮಯದಲ್ಲಿ, ರಾಯಚೂರಿನ ಪ್ರಮುಖ ನಿವಾಸಿಗಳ ಪರವಾಗಿ ಶ್ರೀಮಾನ್ ಜೋಷಿಯವರು ಕರ್ಣಾಟಕ ಸಾಹಿತ್ಯ ಪರಿಷತ್ತಿನ ಮುಂದಣ (೨೦ನೆಯ) ಸಮ್ಮೇಳನವನ್ನು ರಾಯಚೂರಿನಲ್ಲಿ ನಡೆಯಿಸುವಂತೆ ಆಹ್ವಾನವಿತ್ತರು.

ಕೊನೆಗೆ, ಸಮ್ಮೇಳನದ ಅಧ್ಯಕ್ಷರು, ಈ ಸಮ್ಮೇಳನದಲ್ಲಿ ನಡೆದ ಕಾರ್ಯಕಲಾಪಗಳನ್ನೆಲ್ಲ ಸಂಕ್ಷೇಪವಾಗಿ ವಿವರಿಸಿ, ಇಂತಹ ಸಮ್ಮೇಳನಗಳು ಆಗಾಗ್ಗೆ ನಡೆಯುವುದು ದೇಶದ ಏಳಿಗೆಗೂ ಭಾಷೋನ್ನತಿಗೂ ಅತ್ಯಾವಶ್ಯಕವಾದುದೆಂದೂ, ಪ್ರಾಂತಭೇದಗಳನ್ನು ಹೋಗಲಾಡಿಸಿ ಪರಸ್ಪರ ಅಭಿಮಾನ ಸೌಹಾರ್ದಗಳನ್ನೂ ಏಕಭಾವವನ್ನೂ ಉಂಟುಮಾಡಲು ಇದರಿಂದ ಬಹಳ ಮಟ್ಟಿಗೆ ಸಹಾಯವಾಗುವುದೆಂದೂ, ಎಲ್ಲಕ್ಕಿಂತಲೂ ಮುಂದಾಗಿ, ನಮ್ಮಲ್ಲಿರುವ ಭಾಷಾ ಭೇದಗಳನ್ನು ತಿದ್ದಿಕೊಂಡು ನಮ್ಮ ಭಾಷೆಯನ್ನು ಒಂದು ರೂಪಕ್ಕೆ ತರುವುದು ಅತ್ಯಗತ್ಯವೆಂದೂ ಹೇಳಿ, ತಮ್ಮಲ್ಲಿ ಗೌರವಾದರಗಳನ್ನು ತೋರಿಸಿದುದಕ್ಕಾಗಿ ಎಲ್ಲರನ್ನೂ ವಂದಿಸಿದರು.

ಶ್ರೀಮಾನ್ ಸಂಪತ್ಕುಮಾರಾಚಾರ್ಯರವರು ಮಂಗಳವನ್ನು ಹಾಡಿದ ಮೇಲೆ ಹತ್ತೊಂಬತ್ತನೆಯ ಸಾಹಿತ್ಯ ಸಮ್ಮೇಳನದ ಕಾರ್ಯಗಳು ಪರಿಸಮಾಪ್ತಿಯಾದುವು.

ಇದೇ ದಿನ ಸಾಯಂಕಾಲ ಮುಂಬಯಿ ಸರಕಾರದ ಶಿಕ್ಷಣ ಮಂತ್ರಿಗಳಾದ ದಿವಾನ್ ಬಹಾದ್ದೂರ್ ಕಂಬಳಿಯವರು, ಸಮ್ಮೇಳನಕ್ಕೆ ಬಂದಿದ್ದ ಪ್ರತಿನಿಧಿಗಳನ್ನು ತಮ್ಮ ಮನೆಗೆ ಕರೆಯಿಸಿಕೊಂಡು ಸತ್ಕರಿಸಿದರು.

ತರುವಾಯ, ರಾತ್ರಿ ಮಲ್ಲಿಕಾರ್ಜುನ ನಾಟಕ ಶಾಲೆಯಲ್ಲಿ, ಶ್ರೀಮಾನ್ ಟೇಂಗ್ಸೆ ಗೋವಿಂದರಾಯರವರ "ಹೆಣ್ಣಿನ ತೊಡಕು" ಎಂಬ ನಾಟಕವನ್ನೂ, ಶ್ರೀಮಾನ್ ಕೆ. ಗೋಪಾಲಕೃಷ್ಣರಾಯರ "ಅಪರಾಧಿ" ಎಂಬ ನಾಟಕವನ್ನೂ, ಶ್ರೀಮಾನ್ ಅ. ನ. ಕೃಷ್ಣರಾಯರ "ಮದುವೆಯೋ ಮನೆ ಹಾಳೋ?" ಎಂಬ ನಾಟಕದ ಕೆಲವು ದೃಶ್ಯಗಳನ್ನೂ ತರುಣರು ಅಭಿನಯಿಸಿದರು.

---

# ಗೊತ್ತುವಳಿಗಳು

೧. ಸನ್ ೧೯೩೩ನೆಯ ಇಸವಿ ಡಿಸೆಂಬರು ೨೯ನೆಯ ತಾರೀಖಿನಲ್ಲಿ ಹುಬ್ಬಳ್ಳಿಯಲ್ಲಿ ಸೇರಿದ ಹತ್ತೊಂಬತ್ತನೆಯ ಕರ್ಣಾಟಕ ಸಾಹಿತ್ಯ ಪರಿಷತ್ಸಮ್ಮೇಳನವು, ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರ ದಿವ್ಯ ಸನ್ನಿಧಿಯಲ್ಲಿ, ಮಹಾಸ್ವಾಮಿಯವರು ಕನ್ನಡ ಭಾಷೆಯ ಏಳಿಗೆಗಾಗಿಯೂ ಸಾಹಿತ್ಯ ಪರಿಷತ್ತಿನ ಕಟ್ಟಡಕ್ಕಾಗಿಯೂ ಅನುಗ್ರಹಿಸಿರುವ ಉದಾರಾಶಯಕ್ಕಾಗಿ ಪ್ರೀತಿ ಪೂರ್ವಕವಾದ ಭಕ್ತಿ ವಿಶ್ವಾಸಗಳನ್ನು ಒಪ್ಪಿಸಲು ಅಪ್ಪಣೆಯನ್ನು ಬೇಡುತ್ತದೆ.

ಅಧ್ಯಕ್ಷರಿಂದ ಸೂಚನೆ.

೨. ಶ್ರೀಮತ್ಕರ್ಣಾಟಕ ಸಿಂಹಾಸನಾಧೀಶ್ವರರಾದ ಮೈಸೂರು ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜ ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ., ಜಿ.ಬಿ.ಇ. ಮಹಾಸ್ವಾಮಿಯವರೂ ಅವರ ಸರ್ಕಾರದವರೂ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಅಭಿವೃದ್ಧಿಗಾಗಿ ದಯಪಾಲಿಸಿರುವ ಉದಾರ ಸಹಾಯ ಪ್ರೋತ್ಸಾಹಗಳಿಗಾಗಿ ಈ ಸಮ್ಮೇಳನವು ಮಹಾಸ್ವಾಮಿಯವರನ್ನು ಮತ್ತೊಮ್ಮೆ ಕೃತಜ್ಞತೆಯಿಂದ ವಂದಿಸುತ್ತದೆ.

ಈ ಸಂದರ್ಭದಲ್ಲಿ, ಪರಿಷತ್ತಿಗೆ ಮೈಸೂರು ಸರ್ಕಾರದಿಂದ ದೊರೆಯುವ ಸಹಾಯ ದ್ರವ್ಯದ ವಿಚಾರವಾಗಿ ಪರಿಷತ್ತಿಗೂ ಸರ್ಕಾರಕ್ಕೂ ನಡೆದಿರುವ ಕಾಗದ ಪತ್ರಗಳ ವಿವರವನ್ನು ಈ ಸಮ್ಮೇಳನವು ಕೇಳಿ, ಸಂದರ್ಭಗಳು ಹೀಗೆ ಒದಗಿರುವುದಕ್ಕಾಗಿ ತನ್ನ ಚಿಂತೆಯನ್ನೂ ಕಳವಳವನ್ನೂ ಸೂಚಿಸುತ್ತದೆ. ಅಲ್ಲದೆ, ಈ ವಿಚಾರದಲ್ಲಿ ಪರಿಷತ್ತಿನ ಪರವಾಗಿ ಮತ್ತೊಮ್ಮೆ ಶ್ರೀಮನ್ಮಹಾರಾಜರವರ ಮತ್ತು ಅವರ ಸರ್ಕಾರದ ಔದಾರ್ಯವನ್ನು ಪ್ರಾರ್ಥಿಸಿಕೊಳ್ಳಲು ಈ ಸಮ್ಮೇಳನವು ಅಪ್ಪಣೆ ಬೇಡುತ್ತದೆ.

ಪರಿಷತ್ತಿನ ಕಾರ್ಯಗಳು ಈಗ ಇನ್ನೂ ಹೆಚ್ಚು ಹೆಚ್ಚಾಗಿ ನಡೆಯಬೇಕಾಗಿರುವುದರಿಂದಲೂ, ಪರಿಷತ್ತಿನ ಜವಾಬ್ದಾರಿಗಳು ಹೆಚ್ಚುತ್ತಿರುವುದರಿಂದಲೂ, ಈಗ ಹೆಚ್ಚು ಪೋಷಣೆ ದೊರೆಯದಿದ್ದರೆ ಪರಿಷತ್ತಿನ ಉದ್ದೇಶಗಳು ಭಂಗ ಹೊಂದುವ ಸಂಭವ ತೋರುತ್ತಿರುವುದರಿಂದಲೂ, ಶ್ರೀಮನ್ಮಹಾರಾಜರವರ ಸರ್ಕಾರದ ದ್ರವ್ಯ ಸಹಾಯವು ಪರಿಷತ್ತಿಗೆ ಇನ್ನೂ ಹತ್ತು ವರ್ಷಗಳ ವರೆಗಾದರೂ ನಿಯತವಾಗಿ, ವರ್ಷಕ್ಕೆ ಮೂರು ಸಾವಿರ ರೂಪಾಯಿಗಳ ಮೇರೆಗೆ, ದೊರೆಯುವಂತೆ ಶ್ರೀಮನ್ಮಹಾರಾಜರವರು ಅನುಗ್ರಹಿಸಬೇಕೆಂದು ಈ ಸಮ್ಮೇಳನವು ಪ್ರಾರ್ಥಿಸುತ್ತದೆ. ಮತ್ತು ಈ ಪ್ರಾರ್ಥನೆಯನ್ನು ಶ್ರೀಮನ್ಮಹಾರಾಜರವರ ಪರಾಂಬರಿಕೆಯ ಬಗ್ಗೆ ನಿವೇದಿಸುವುದಕ್ಕಾಗಿ, ಪರಿಷತ್ತಿನ ಕಾರ್ಯ ನಿರ್ವಾಹಕ ಮಂಡಲಿಯವರು ಕರ್ಣಾಟಕ ದೇಶದ ಪ್ರಮುಖ ಜನರನ್ನೊಳಕೊಂಡ ಒಂದು ಉಪ ಸಮಿತಿಯನ್ನು ಗೊತ್ತುಮಾಡಿ, ಆ ಉಪ ಸಮಿತಿಯ ಮೂಲಕ ಶ್ರೀಮನ್ಮಹಾರಾಜರವರ ಸನ್ನಿಧಿಯಲ್ಲಿ ಈ ಮೇಲಿನ ಬಿನ್ನಹವನ್ನು ಅರಿಕೆ ಮಾಡಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಅಧ್ಯಕ್ಷರಿಂದ ಸೂಚನೆ.

೩. ಕರ್ಣಾಟಕ ಸಾಹಿತ್ಯ ಪ್ರಚಾರ ಕಾರ್ಯದಲ್ಲಿ ತಮ್ಮ ತನು ಮನ ಧನಗಳನ್ನು ಸವೆಯಿಸಿದ ಮೈಸೂರು ವೃದ್ಧ ಪಿತಾಮಹ ಎಂ. ವೆಂಕಟಕೃಷ್ಣಯ್ಯನವರೂ, ರಬಕವಿಯ ತಮ್ಮಪ್ಪ ಸತ್ಯಪ್ಪ ಚಿಕ್ಕೋಡಿಯವರೂ ನಮ್ಮನ್ನು ಅಗಲಿ ದಿವಂಗತರಾದುದಕ್ಕಾಗಿ ಈ ಸಮ್ಮೇಳನವು ದುಃಖವನ್ನು ಪ್ರದರ್ಶಿಸುತ್ತದೆ.

ಈ ದುಃಖ ಪ್ರದರ್ಶನದ ಗೊತ್ತುವಳಿಯನ್ನು ಅವರವರ ಸಂಬಂಧಿಗಳ ಕಡೆಗೆ ಕಳುಹಿಸಬೇಕೆಂದು ಈ ಸಭೆಯು ನಿರ್ಣಯಿಸುತ್ತದೆ.

ಅಧ್ಯಕ್ಷರಿಂದ ಸೂಚನೆ.

೪. ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಕೆಲವು ಪುಟಗಳನ್ನು ಮೀಸಲಾಗಿಟ್ಟು, ಇದುವರೆಗೆ ಅಚ್ಚಾಗದಿರುವ ಹಳಗನ್ನಡ ಗ್ರಂಥಗಳನ್ನು ಪರಿಶೋಧಿಸಿ, ಟಿಪ್ಪಣಿಯೊಡನೆ ಆ ಭಾಗದಲ್ಲಿ ಮುದ್ರಿಸುತ್ತ ಬರಬೇಕು.

ಸೂಚಕರು :—ಶ್ರೀಮಾನ್ ಎಚ್. ಹನುಮಂತರಾಯರು.
ಅನುಮೋದಕರು :—ಶ್ರೀಮಾನ್ ಪಾವಟೆ ಸಿದ್ಧರಾಮಪ್ಪನವರು,
ಶ್ರೀಮಾನ್ ಸಿದ್ಧೇಶ್ವರಸ್ವಾಮಿ, ಕಾಡುದೇವರ ಮಠ.

೫. ಕನ್ನಡ ಭಾಷೆಯ ಉನ್ನತಿಯು ಇಂದಿನ ವರೆಗೆ ಹೇಗೆ ಹೇಗೆ ಆಗುತ್ತ ಬಂದಿತು? ಕನ್ನಡ ಭಾಷೆಯಲ್ಲಿ ಇಂದಿನ ವರೆಗೆ ಯಾವ ಯಾವ ಗ್ರಂಥಗಳು ಹುಟ್ಟಿದುವು? ಆಯಾ ಕಾಲದಲ್ಲಿ ಕನ್ನಡಿಗರ ಸಾಮಾಜಿಕ ಸ್ಥಿತಿಯು ಹೇಗೆ ಇದ್ದಿತು? ಮತ್ತು, ಈ ಕನ್ನಡ ಗ್ರಂಥಗಳಿಂದ, ಆಯಾ ಕಾಲದ ಸಮಾಜದ ಮೇಲೆ ಏನು ಪರಿಣಾಮವಾಯಿತು?—ಇವೆಲ್ಲ ಸಂಗತಿಗಳ ವಿಷಯವಾಗಿ, ಕನ್ನಡ ಭಾಷೆಯನ್ನು ಭಾರತೀಯ ಇತರ ಭಾಷೆಗಳಿಗೆ ಹೋಲಿಸಿ ನೋಡಿ, ಅರ್ಥಾತ್, ತುಲನಾತ್ಮಕ ದೃಷ್ಟಿಯಿಂದಲೂ ಐತಿಹಾಸಿಕ ದೃಷ್ಟಿಯಿಂದಲೂ ವಿವೇಚಿಸುವಂತಹ ಉತ್ತಮವಾದ ಇತಿಹಾಸವನ್ನು ಕನ್ನಡದಲ್ಲಿ ಬರೆಯಿಸುವ ಕಾರ್ಯವನ್ನು ಕರ್ಣಾಟಕ ಸಾಹಿತ್ಯ ಪರಿಷತ್ತಿನವರು ಕೈಕೊಳ್ಳಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಸೂಚಕರು :—ಶ್ರೀಮಾನ್ ನಾರಾಯಣ ಶ್ರೀನಿವಾಸ ರಾಜಪುರೋಹಿತರು.
ಅನುಮೋದಕರು :—ಶ್ರೀಮಾನ್ ಸಿದ್ಧರಾಮಪ್ಪ ಪಾವಟೆಯವರು.

೬. ಮೈಸೂರು ವಿಶ್ವವಿದ್ಯಾನಿಲಯದವರು ದ್ವೈಭಾಷಿಕ ಕನ್ನಡ ಕೋಶವನ್ನು ಎಂದರೆ, ಇಂಗ್ಲಿಷ್–ಕನ್ನಡ ಕೋಶವನ್ನು ತಯಾರುಮಾಡಿಸುವವರಿದ್ದು, ಅದರ ಜೊತೆಗೆ ಏಕ ಭಾಷಿಕ ಕನ್ನಡ ಕೋಶವನ್ನು ಎಂದರೆ, ಕನ್ನಡ–ಕನ್ನಡ ಕೋಶವನ್ನು, ಅರ್ಥಾತ್ ಕನ್ನಡ ಶಬ್ದಗಳಿಗೆ ಕನ್ನಡದಲ್ಲಿ ಅರ್ಥವನ್ನು ಬರೆದ ಕೋಶವನ್ನು ಏರ್ಪಡಿಸುವುದು ಕನ್ನಡ ವಾಙ್ಮಯದ ಉನ್ನತಿಗೆ ಅತ್ಯವಶ್ಯವಾಗಿರುವುದರಿಂದ, ಮೈಸೂರು ವಿಶ್ವವಿದ್ಯಾನಿಲಯದವರು ಈ ಏಕ ಭಾಷಿಕ ಕನ್ನಡ ಕೋಶವನ್ನು ಬರೆಯಿಸುವ ಕಾರ್ಯವನ್ನು ಸ್ವೀಕರಿಸಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಸೂಚಕರು :—ಶ್ರೀಮಾನ್ ನಾರಾಯಣ ಶ್ರೀನಿವಾಸ ರಾಜಪುರೋಹಿತರು.
ಅನುಮೋದಕರು :—ಶ್ರೀಮಾನ್ ಕೌಜಲಗಿ ಶ್ರೀನಿವಾಸರಾಯರು.

೭. ಸದ್ಯದ ಶಿಕ್ಷಣ ಕ್ರಮದಲ್ಲಿ ರೂಢವಾಗಿರುವ ಕನ್ನಡ ಪಠ್ಯ ಪುಸ್ತಕಗಳು ಅಸಮಾಧಾನಕರವಾಗಿವೆಯೆಂದೂ, ಕನ್ನಡವನ್ನು ಕಲಿಸುವ ಕ್ರಮವು ಕನ್ನಡದ ಏಳ್ಗೆಗಾಗಲಿ ಅಭಿವೃದ್ಧಿಗಾಗಲಿ ಅಷ್ಟೊಂದು ಸಹಾಯಕಾರಿಯಾಗಿಲ್ಲವೆಂದೂ ಕಂಡು ಬರುವುದರಿಂದ, ಪರಿಷತ್ತಿನವರು ಕೆಲ ಮಂದಿ ಅಧಿಕೃತ ವಿದ್ವಾಂಸರ ಸಮಿತಿಯೊಂದನ್ನು ಗೊತ್ತುಮಾಡಬೇಕೆಂದೂ, ಆ ಸಮಿತಿಯವರು ಪ್ರಶ್ನೆ ಮಾಲಿಕೆಯ ಮೂಲಕವಾಗಲಿ, ಪ್ರಶ್ನಾವಳಿಯ ಮೂಲಕವಾಗಲಿ, ಮತ್ತಾವ ರೀತಿಯಿಂದಾಗಲಿ, ಪಠ್ಯ ಪುಸ್ತಕಗಳ ಮತ್ತು ಶಿಕ್ಷಣ ಕ್ರಮದ ಸ್ಥಿತಿಯನ್ನು ಪರ್ಯಾಲೋಚಿಸಿ ಅವಶ್ಯವಿರುವ ತಿದ್ದುಪಾಟು ಗಳನ್ನು ಸೂಚಿಸಬೇಕೆಂದೂ ಈ ಸಮ್ಮೇಳನವು ನಿರ್ಧರಿಸುತ್ತದೆ.

ಸೂಚಕರು :—ಶ್ರೀಮಾನ್ ಆರ್. ವಿ. ಜಹಗೀರುದಾರರು.

ಅನುಮೋದಕರು :—ಶ್ರೀಮಾನ್ ಬಿ. ಎಸ್. ಪಾಟೀಲರು.

೮. ಪರಿಷತ್ತಿನ ಘಟನೆಯಲ್ಲಿ ಕನ್ನಡ ಶಿಕ್ಷಕರ ಮತ್ತು ಪಂಡಿತರ ಸಮಾವೇಶ ವಾಗುವಂತೆ, ಅವರಿಗೆ ವೈಶೇಷಿಕ ಪ್ರಾತಿನಿಧ್ಯವನ್ನು ಕೊಡಲು ಯೋಗ್ಯ ಅನುಕೂಲತೆ ಗಳನ್ನು ಒದಗಿಸಿಕೊಡಬೇಕೆಂದು ಈ ಸಮ್ಮೇಳನವು ನಿರ್ಧರಿಸುತ್ತದೆ.

ಸೂಚಕರು :—ಶ್ರೀಮಾನ್ ವಿ. ಬಿ. ನಾಯಕರು.

ಅನುಮೋದಕರು :—ಶ್ರೀಮಾನ್ ವಿ. ಜಿ. ಕುಲಕರಣಿಯವರು.

೯. ಮೈಸೂರು ವಿಶ್ವವಿದ್ಯಾನಿಲಯದವರು ಕೈಕೊಳ್ಳುವ ಕೋಶವನ್ನು, ಅಥವಾ ಕೋಶಗಳನ್ನು ಸಿದ್ಧಪಡಿಸುವಾಗ, ಅವು ಅಖಿಲ ಕರ್ಣಾಟಕಕ್ಕೆ ಮಾನ್ಯವಾಗು ವಂತೆ ಸಿದ್ಧಪಡಿಸಬೇಕಾದುದು ಅವಶ್ಯವಿರುವುದರಿಂದ, ಯಾವತ್ತು ಭಾಗಗಳ ಕನ್ನಡ ಪಂಡಿತರನ್ನೂ ಸೇರಿಸಿಕೊಂಡು ಆ ಮಹಾ ಕಾರ್ಯವನ್ನು ಕೈಗೂಡಿಸಬೇಕೆಂದು ಈ ಸಮ್ಮೇಳನವು ಬಿನ್ನವಿಸುತ್ತದೆ.

ಸೂಚಕರು :—ಶ್ರೀಮಾನ್ ಆಲೂರು ವೆಂಕಟರಾಯರು.

ಅನುಮೋದಕರು :—ಶ್ರೀಮಾನ್ ನಾರಾಯಣ ಶ್ರೀನಿವಾಸ ರಾಜಪುರೋಹಿತರು.

೧೦. ಬಳ್ಳಾರಿಯಲ್ಲಿ ವಾಸಮಾಡುವವರ ಸಂಖ್ಯೆಯಲ್ಲಿ ಕನ್ನಡಿಗರೇ ಹೆಚ್ಚಿದ್ದರೂ, ಬಳ್ಳಾರಿಯ ಪುರಪಾಲನ ಸಂಘದವರು ಪ್ರತ್ಯೇಕವಾಗಿ ಒಂದಾದರೂ ಕನ್ನಡ ಪ್ರಾಥಮಿಕ ಶಾಲೆಯನ್ನು ಇದುವರೆಗೂ ಸ್ಥಾಪಿಸಿಲ್ಲ. ಇನ್ನು ಮುಂದಾದರೂ ಕನ್ನಡಿಗರ ಸಂಖ್ಯೆಗನುಸರಿಸಿ ಇರಬೇಕಾದ ಕನ್ನಡ ಪ್ರಾಥಮಿಕ ಶಾಲೆಯನ್ನು ಸ್ಥಾಪಿಸಬೇಕೆಂದು ಈ ಸಮ್ಮೇಳನವು ಬಳ್ಳಾರಿಯ ಪುರಪಾಲನ ಸಂಘವನ್ನು ಪ್ರಾರ್ಥಿಸುತ್ತದೆ.

ಅಧ್ಯಕ್ಷರಿಂದ ಸೂಚನೆ.

೧೧. (ಬಳ್ಳಾರಿ ಜಿಲ್ಲೆಯ) ಕೋರ್ಟು ಕಚೇರಿಗಳಲ್ಲಿ ಇರಬೇಕಾದ ಕಾಗದ ಪತ್ರಗಳು ಕನ್ನಡದಲ್ಲಿಯೇ ಜಾರಿಯಲ್ಲಿ ಬರಬೇಕೆಂದು ಮದರಾಸು ಸರ್ಕಾರವನ್ನು ಈ ಸಮ್ಮೇಳನವು ಪ್ರಾರ್ಥಿಸಿಕೊಳ್ಳುತ್ತದೆ.

ಅಧ್ಯಕ್ಷರಿಂದ ಸೂಚನೆ.

೧೨. ನವಾಬ್ ಸರ್ ಸಾಲಾರ್ ಜಂಗ್ ಬಹಾದ್ದೂರರವರು ತಮ್ಮ ಜಹಗೀರಿನಲ್ಲಿ ಕನ್ನಡವನ್ನು ಕಡ್ಡಾಯವಾಗಿ ಅಭ್ಯಾಸ ಮಾಡುವಂತೆ ಹುಕುಂ ಮಾಡಿರುವುದಕ್ಕಾಗಿ ಅವರನ್ನು ಈ ಸಮ್ಮೇಳನವು ಅಭಿನಂದಿಸುತ್ತದೆ.

ಸೂಚಕರು :—ಶ್ರೀಮಾನ್ ಕಪಟ್ರಾಳ್ ಕೃಷ್ಣರಾಯರು.

ಅನುಮೋದಕರು :—ಶ್ರೀಮಾನ್ ನಾರಾಯಣ ಶ್ರೀನಿವಾಸ ರಾಜಪುರೋಹಿತರು.

೧೩. ಆಧುನಿಕ ಕರ್ಣಾಟಕ ಸಾಹಿತ್ಯದ ಚಟುವಟಿಕೆಗಳಿಗೂ ಒಲವುಗಳಿಗೂ ಸಂಬಂಧಿಸಿದ ಪ್ರಚಾರ ಕಾರ್ಯವನ್ನು ಕೈಕೊಳ್ಳಲು ಅನುವಾಗುವಂತೆ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಉತ್ತರ ಕರ್ಣಾಟಕದ ಶಾಖೆಯೊಂದನ್ನು ಏರ್ಪಡಿಸಬೇಕೆಂದು ಈ ಸಮ್ಮೇಳನವು ನಿರ್ಧರಿಸುತ್ತದೆ.

ಸೂಚಕರು :—ಶ್ರೀಮಾನ್ ತ. ಬಾ. ಜೋಶಿಯವರು.

ಅನುಮೋದಕರು :—ಶ್ರೀಮಾನ್ ಎ. ಟಿ. ನಾಸನೂರರು.

೧೪. ಕರ್ಣಾಟಕದಲ್ಲಿ ಅಲ್ಲಲ್ಲಿರುವ ಎಲ್ಲ ಕರ್ಣಾಟಕದ ವಾಙ್ಮಯ ಸಂಘಗಳೂ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಶಾಖೆಗಳಾಗಿರಬೇಕೆಂದೂ, ಆ ಸಂಘಗಳು ಈಗಿರುವ ನಿಯಮಗಳನ್ನನುಸರಿಸಿ, ವರ್ಷ ವರ್ಷವೂ ತಮ್ಮ ವರಮಾನದಲ್ಲಿ ವಂತಿಗೆಯನ್ನು ಸಹ ಕರ್ಣಾಟಕ ಸಾಹಿತ್ಯ ಪರಿಷತ್ತಿನ ನಿಧಿಗೆ ಕೊಡುವುದರ ಮೂಲಕ ಪರಿಷತ್ತಿನ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಬೇಕೆಂದೂ ಈ ಸಮ್ಮೇಳನವು ಪ್ರಾರ್ಥಿಸುತ್ತದೆ.

ಸೂಚಕರು :—ಶ್ರೀಮಾನ್ ಬಿ. ಎನ್. ಕೃಷ್ಣಮೂರ್ತಿಗಳು.

ಅನುಮೋದಕರು :—ಶ್ರೀಮಾನ್ ಮುರುಗೆಯ್ಯನವರು, ಜಂಗಿನ.

೧೫. ಕನ್ನಡ ಭಾಷೆಯು ಹೆಚ್ಚು ಪ್ರಕಾಶಮಾನವಾಗಿ ಹೊಳೆಯಲಿಕ್ಕೆ ಸಂಸ್ಕೃತ ಭಾಷೆಯು ಬಹಳ ಸಹಾಯ ಮಾಡುವುದರಿಂದ ಆ ಸಂಸ್ಕೃತ ಭಾಷೆಯ ಜ್ಞಾನವು ಕನ್ನಡ ಭಾಷೆಯನ್ನು ಕಲಿಸುವ ಪ್ರಾಥಮಿಕ ಶಿಕ್ಷಕರಿಗೆ ದೊರೆಯುವುದು ಅತ್ಯಾವಶ್ಯಕವಾಗಿರುವುದು. ಈ ಸಂಸ್ಕೃತ ಭಾಷೆಯು ಈ ಶಿಕ್ಷಕರಿಗೆ ಮೊದಲು ಕಲಿಸಲ್ಪಡುತ್ತಿದ್ದರೂ ೧೯೧೯ನೆಯ ಇಸವಿಯಿಂದ ಅದು 'ಬಂದ್' ಆಗಿ, ಅದರ ಬದಲು ಕೈಕೆಲಸಗಳನ್ನು ಟ್ರೈನಿಂಗು ಕಾಲೇಜುಗಳಲ್ಲಿ ಕಲಿಸಹತ್ತಿದುದರಿಂದ, ಅಂದಿನಿಂದ ತಯಾರಾದ ಶಿಕ್ಷಕರು ಭಾಷಾ ಶಕ್ತಿಯಲ್ಲಿ ಕಡಿಮೆಯಾಗಿರುವರು. ಆದಕಾರಣ, ಉತ್ತರ ಕರ್ಣಾಟಕದಲ್ಲಿಯ ಆ ಶಿಕ್ಷಕರಿಗೆ ಸಂಸ್ಕೃತವನ್ನು ಪುನಃ ಕಲಿಸುವ

ಯೋಜನೆಯ ಬಗ್ಗೆ ವ್ಯವಸ್ಥೆ ಮಾಡಬೇಕೆಂದು ಈ ಸಮ್ಮೇಳನವು ಡಿಸ್ಟ್ರಿಕ್ಟು ಬೋರ್ಡು ಗಳಿಗೂ ಸರ್ಕಾರಗಳಿಗೂ ಸೂಚಿಸುತ್ತದೆ.

ಸೂಚಕರು :—ಶ್ರೀಮಾನ್ ಚಂದ್ರಶೇಖರ ಶಾಸ್ತ್ರಿಗಳು.

ಅನುಮೋದಕರು :—ಪಿ. ಎನ್. ದೇಶಾಯಿಯವರು.

೧೬. ಉತ್ತರ ಕರ್ಣಾಟಕದ ಎಲ್ಲ ಸಂಸ್ಥಾನಗಳವರೂ ತಮ್ಮ ದೇಶ ಭಾಷೆ ಯಾದ ಕನ್ನಡವನ್ನು ಬಿಟ್ಟು ಬೇರೆ ಭಾಷೆಯಲ್ಲಿ ಶಾಲೆಗಳನ್ನೂ ಸರಕಾರಿ ಕಾಗದ ಪತ್ರಗಳನ್ನೂ ಇಟ್ಟಿರುವುದರಿಂದ ಆ ಸಂಸ್ಥಾನಗಳ ಪ್ರಜೆಗಳಿಗೆ ಬಹಳ ತೊಂದರೆ ಯಾಗಿರುವುದು. ಆದಕಾರಣ ತಮ್ಮ ತಮ್ಮ ಸಂಸ್ಥಾನದಲ್ಲಿ ಕನ್ನಡ ಶಾಲೆಗಳನ್ನು ಬೇಗನೆ ಪ್ರಾರಂಭ ಮಾಡಬೇಕೆಂದೂ, ತಮ್ಮ ಕಚೇರಿಯ ಎಲ್ಲ ಕಾಗದ ಪತ್ರಗಳನ್ನೂ ಕನ್ನಡದಲ್ಲಿಯೇ ಇಡಬೇಕೆಂದೂ, ಎಲ್ಲ ಸಂಸ್ಥಾನಿಕರನ್ನೂ ಪ್ರಾರ್ಥಿಸಿಕೊಳ್ಳಬೇಕೆಂದೂ, ಆವಶ್ಯಕವಿದ್ದಲ್ಲಿ ಶಿಷ್ಟಮಂಡಲವನ್ನು ಕಳುಹಿಸಿ ಕೆಲಸವಾಗುವಂತೆ 'ಜೋರಿ'ನಿಂದ ಪ್ರಯತ್ನ ಮಾಡಬೇಕೆಂದೂ ಈ ಸಮ್ಮೇಳನವು ಸೂಚಿಸುತ್ತದೆ.

ಸೂಚಕರು :—ಶ್ರೀಮಾನ್ ಏ. ಬಿ. ನಾಯಕರು.

ಅನುಮೋದಕರು :—ಶ್ರೀಮಾನ್ ಮುರಿಗೆಯ್ಯನವರು, ಜಂಗಿನ.

೧೭. ಲೇಖಕರ ಸಮ್ಮೇಳನವೊಂದನ್ನು ನಡೆಯಿಸಿ ಗದ್ಯ ಸಾಹಿತ್ಯಕ್ಕೆ ಪ್ರಾಧಾನ್ಯ ಕೊಡಬೇಕೆಂದು ಈ ಸಮ್ಮೇಳನವು ನಿರ್ಣಯಿಸುತ್ತದೆ.

ಸೂಚಕರು :—ಶ್ರೀಮಾನ್ ಆರ್. ಏ. ಜಹಗೀರದಾರರು.

ಅನುಮೋದಕರು :—ಶ್ರೀಮಾನ್ ಅ. ನ. ಕೃಷ್ಣರಾಯರು.

೧೮. ಕರ್ಣಾಟಕ ವಾಙ್ಮಯ ಸೇವೆಯನ್ನು ಮಾಡುವವರಲ್ಲಿ ಕನ್ನಡ ಕೀರ್ತನ ಕಾರರೂ ಮುಖ್ಯರಾಗಿರುವುದರಿಂದ, ಕರ್ಣಾಟಕ ಸಾಹಿತ್ಯ ಪರಿಷತ್ತಿನವರು ಇವರ ಬಗ್ಗೆ ಹೆಚ್ಚು ಶ್ರದ್ಧೆಯನ್ನು ತೋರಿಸಿ, ಇವರಿಂದ ಪ್ರಚಾರ ಕಾರ್ಯವನ್ನು ಮಾಡಿಸಿ ಕೊಂಡು, ಇವರಿಗೆ ತಕ್ಕಷ್ಟು ಪ್ರೋತ್ಸಾಹವನ್ನು ಕೊಡಬೇಕೆಂದು ಈ ಸಮ್ಮೇಳನವು ಶಿಫಾರಸು ಮಾಡುತ್ತದೆ.

ಸೂಚಕರು :—ಶ್ರೀಮಾನ್ ಬಿ. ಶಿವಮೂರ್ತಿ ಶಾಸ್ತ್ರಿಗಳು.

ಅನುಮೋದಕರು :—ಶ್ರೀಮಾನ್ ಜಯರಾಮಾಚಾರ್ಯರು.

೧೯. ಬೇರೆ ಬೇರೆ ಕರ್ಣಾಟಕ ಪ್ರಾಂತಗಳಿಂದ ಸ್ತ್ರೀ ಪ್ರತಿನಿಧಿಗಳನ್ನು ಚುನಾಯಿಸಿ ಕಳುಹಿಸಲು ಅನುಕೂಲಪಡಿಸಿ, ಅವರು ಬಂದಲ್ಲಿ ಅವರಿಗೆ ಸರಿಯಾದ ಸೌಕರ್ಯಗಳನ್ನು ಒದಗಿಸಿಕೊಟ್ಟು ಪ್ರೋತ್ಸಾಹಿಸಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಸೂಚಕರು :—ಶ್ರೀಮತಿ ನಾಗಮ್ಮನವರು.

ಅನುಮೋದಕರು :—ಶ್ರೀಮತಿ ಗಂಗಾಬಾಯಿ ಸಿಂಧೆಯವರು.

೨೦. ಧಾರವಾಡದ ಟ್ರೈನಿಂಗು ಕಾಲೇಜಿನಲ್ಲಿ ಮೂರು ವರ್ಷದ ಅಭ್ಯಾಸ ಕ್ರಮವಿದ್ದದ್ದು ಈಗ ಕೆಲವು ವರ್ಷಗಳಿಂದ ಒಂದು ವರ್ಷದ ಮಟ್ಟಿಗೆ ಉಳಿದಿರುವುದರಿಂದ, ಅದನ್ನು ಮೊದಲಿನಂತೆಯೇ ಮೂರು ವರ್ಷಕ್ಕೆ ಏರಿಸಬೇಕೆಂದು ಈ ಸಮ್ಮೇಳನವು ಮುಂಬಯಿ ಸರಕಾರವನ್ನು ಪ್ರಾರ್ಥಿಸುತ್ತದೆ.

ಸೂಚಕರು:—ಶ್ರೀಮಾನ್ ಡಬ್ಲ್ಯೂ. ಬಿಳಿಯಂಗಡಿ.

ಅನುಮೋದಕರು:—ಶ್ರೀಮಾನ್ ಎಸ್. ಜಿ. ಕಾಡದೇವರ ಮಠ.

೨೧. ಕರ್ಣಾಟಕದೊಳಗಿನ ಎಲ್ಲ ಜಿಲ್ಲೆಗಳ ಮತ್ತು ತಾಲ್ಲೂಕುಗಳ ಕೇಂದ್ರ ಸ್ಥಾನಗಳಲ್ಲಿ ಕರ್ಣಾಟಕ ಸಂಘಗಳನ್ನು ಸಾಹಿತ್ಯ ಸೇವೆಗಾಗಿ ಏರ್ಪಡಿಸಿ, ಅವುಗಳನ್ನು ಕರ್ಣಾಟಕ ಸಾಹಿತ್ಯ ಪರಿಷತ್ತಿನ ಅಂಗಗಳಾಗಿ ಸೇರುವಂತೆ ಅಲ್ಲಲ್ಲಿಯ ಜನರು ಮುಂದಣ ಮೂರು ತಿಂಗಳೊಳಗಾಗಿ ಚಟುವಟಿಕೆಯನ್ನು ನಡೆಯಿಸಬೇಕೆಂದು ಈ ಸಮ್ಮೇಳನವು ಬಿನ್ನವಿಸುತ್ತದೆ.

ಸೂಚಕರು:—ಶ್ರೀಮಾನ್ ರಂಗಪ್ಪ ಪೋತ್ದಾರರು.

ಅನುಮೋದಕರು:—ಶ್ರೀಮಾನ್ ಹನುಮಂತರಾವ್ ಮೂಂಜೀರಕರರು.

೨೨. ಶಾಲೆಗಳಲ್ಲಿ ಕನ್ನಡ ಭಾಷೆಯ ಸಲುವಾಗಿ ಒಂದೇ ಪಠ್ಯ ಪುಸ್ತಕವನ್ನೇ ಬಹು ಕಾಲ ಇಡದೆ ಯೋಗ್ಯ ಗದ್ಯ ಪದ್ಯ ಪುಸ್ತಕಗಳನ್ನು ಆಗಾಗ್ಗೆ ಮಂಜೂರು ಮಾಡಿ, ಅದರಲ್ಲಿ ಕೆಲವು ಭಾಗ ಗದ್ಯ, ಕೆಲವು ಭಾಗ ಪದ್ಯ—ಇವುಗಳನ್ನು ನಿಯತ ಕಾಲಕ್ಕೊಮ್ಮೆ ಬದಲಾಯಿಸಿ ಗ್ರಂಥ ಕರ್ತರಿಗೆ ಉತ್ತೇಜನ ಕೊಡಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಸೂಚಕರು:—ಶ್ರೀಮಾನ್ ಮಾ. ಷ. ಬಸರೀಕಟ್ಟಿ.

ಅನುಮೋದಕರು:—ಶ್ರೀಮಾನ್ ಬಸವಲಿಂಗಯ್ಯನವರು, ಸಾಲಿಮಠ.

೨೩. ಕರ್ಣಾಟಕದಲ್ಲಿರುವ ಕನ್ನಡೇತರ ಪ್ರಾಥಮಿಕ ಶಾಲೆಗಳಲ್ಲಿ ಕನ್ನಡ ಭಾಷೆಯನ್ನೂ ಕೂಡ ಆವಶ್ಯಕ ವಿಷಯವಾಗಿ ಕಲಿಸಬೇಕೆಂದು ಶಿಕ್ಷಣಾಧಿಕಾರಿಗಳಿಗೆ ಈ ಸಮ್ಮೇಳನವು ಬಿನ್ನವಿಸಿಕೊಳ್ಳುತ್ತದೆ.

ಸೂಚಕರು:—ಶ್ರೀಮಾನ್ ಮೊಹರೆ ಹನುಮಂತರಾಯರು.

ಅನುಮೋದಕರು:—ಶ್ರೀಮಾನ್ ನಾರಾಯಣ ಶ್ರೀನಿವಾಸ ರಾಜಪುರೋಹಿತರು.

೨೪. ನಾಲ್ಕೂ ಸರಕಾರಗಳಲ್ಲಿ ಹರಿದು ಹಂಚಿ ಹೋದ ಕರ್ಣಾಟಕದ ಭಾಷೆಯ ಏಕೀಕರಣದ ಸಲುವಾಗಿ ಎಲ್ಲಾ ಸರಕಾರಗಳೊಡನೆ ಪತ್ರ ವ್ಯವಹಾರವನ್ನು ನಡೆಯಿಸುವುದಕ್ಕಾಗಿ ಒಂದು ಕಮಿಟಿಯನ್ನು ಗೊತ್ತುಪಡಿಸಿ, ಹೊಸ ಪಠ್ಯ ಪುಸ್ತಕಗಳನ್ನು ತಯಾರಿಸುವ ಏರ್ಪಾಟು ಗಡೆಯಾಗಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಸೂಚಕರು :—ಶ್ರೀಮಾನ್ ಕಮಲನಾಥ ರಾ. ಅಡಬಡ್ಡಿ.
ಅನುಮೋದಕರು :—ಶ್ರೀಮಾನ್ ಸಿ. ಫ. ಕಟ್ಟೀಮನಿ.

೨೫. ಪುಣೆ, ಮುಂಬಯಿ, ಪಟ್ಟಣಗಳಲ್ಲಿ ಕರ್ಣಾಟಕಸ್ಥರು ಅನೇಕರಿರುವುದರಿಂದ, ಅವರ ಮಕ್ಕಳ ಶಿಕ್ಷಣಕ್ಕಾಗಿ ಆ ಪಟ್ಟಣಗಳಲ್ಲಿ ಒಂದೊಂದು ಕನ್ನಡ ಶಾಲೆಯನ್ನು ತೆರೆಯುವುದಕ್ಕಾಗಿ ಅಲ್ಲಿಯ ಸ್ಥಾನಿಕ ಮಂಡಲಿಗಳಿಗೆ ಈ ಸಮ್ಮೇಳನವು ವಿನಂತಿ ಮಾಡಿಕೊಳ್ಳುತ್ತದೆ.

ಸೂಚಕರು :—ಶ್ರೀಮಾನ್ ಚಮನ ಸಾಹೇಬ ಕಿರೇಸೂರ.
ಅನುಮೋದಕರು :—ಶ್ರೀಮಾನ್ ಫಕ್ಕೀರಪ್ಪನವರು, ಕೊರ್ಲಹಳ್ಳಿ.

---

# ಸ್ವಾಗತ ಪದ್ಯಗಳು

## ೧

ರಾಗ—ಕಾಂಬೋಧಿ, ತಾಳ—ಝಂಪಾ

ಚೆನ್ನ ಕನ್ನಡ ನುಡಿಯ ಪ್ರೇಮಿಗಳೇ । ಸ್ವಾಗತಿಸುವೆವು ಸಲೆ
ಕನ್ನಡದ ಸಾಹಿತ್ಯ ಮಂಡಳ । ವನ್ನು ಬೆಳಗುವ ಜ್ಞಾನ ಜ್ಯೋತಿಯ ॥ ಪಲ್ಲವಿ ॥
ಮಾನ್ಯ ವಿದ್ಯಾ ದೀಪ ದೀಪ್ತಿಗಳೇ । ನಿಮ್ಮಿಂದ ಸಭೆ ಕಳೆ ॥ ಅನುಪಲ್ಲವಿ ॥

ಸಡಗರದಿ ಸಭೆಯನ್ನಲಂಕರಿಸಿ । ನುಡಿತಾಯಿಯನ್ನತಿ ಯೆಡೆವಿಡದೆ ಮನದಿಂದ ಬಹುಮತಿಸಿ ।
ಅಡಿಗಡಿಗೆ ಕನ್ನಡ ಕನ್ನಡೆಂದೆನ್ನುತ್ತ ಕನಕರಿಸಿ । ಬಿಡದೇಳ್ಗೆ ಬಯಸಿ ॥
ನುಡಿಯ ಸಾಹಿತ್ಯವನೆ ಸೇವಿಸೆ । ಗಡನೆ ಹತ್ತೊಂಬತ್ತನೆಯ ಸಭೆ ।
ಗುಡುವ ಸಮಯದಿ ಶ್ರಮವ ನೋಡದೆ । ಕಡು ಮುದದಿ ಬಂದಿರುವ ಬಂಧುಗಳೇ ॥ ೧ ॥

ಕೋವಿದರು ಕವಿತಾ ವಿಶಾರದರು । ನಯ ನೀತಿವಂತರು ಭಾವಿಸಲು ಭಾಷಾಭಿವರ್ಧಕರು ।
ಸೇವಿಸಲು ಕನ್ನಡ ದೇವಿ ನಟಿಸುವ ರಸನೆಯುಳ್ಳವರು । ಸನ್ಮಿಳಿತರಿಹರು ॥
ದೇವ ಸಭೆಯೆನೆ ರಾಜಿಸಲು ಸಭೆ । ತೀವಿದಭಿಮಾನವಿದು ಕನ್ನಡ ।
ಭಾವಿಕರೆ ಸಾಹಿತ್ಯ ಸಸಿ ಬೆಳೆ । ಗಾವುದ್ಯ ಸಮ ಲೋಕದಲ್ಲಿ ಬೆಳೆ ॥ ೨ ॥

ನಿಮ್ಮ ನುಡಿ ಸಾಹಿತ್ಯವೆಂದೆನಿಸಿ । ಸಮ್ಮೇಳನಂ ಗುಡಲೊಮ್ಮನದಿ ಮಾರ್ಪಟ್ಟಿತಬ್ಬರಿಸಿ ।
ಸಮ್ಮೋದದಿಂ ನುಡಿಯಮ್ಮನನು ಸಿಂಗರಿಸಿ । ಬಲಪಡಿಸಿ ಒಲು ಬಳೆಯನ್ನೆಸಿ ॥
ನಮ್ಮ ಕಬ್ಬಂಗಳನು ಮೆರೆಯಿಸಿ । ನಮ್ಮ ಸಭೆಯನೆ ಶೋಭೆಗೊಳಿಸುವ ।
ಹಮ್ಮು ಯಮ್ಮೊಳದಿಲ್ಲವೇ ನೀವಾ । ಸುಮ್ಮನೇ ಇರುವವರೇ ಜ್ಞಾನಿಗಳೇ ॥ ೩ ॥

ಕನ್ನಡದ ಕೇಂದ್ರವಿದು ಹುಬ್ಬಳ್ಳಿ । ಪಟ್ಟಣವು ಬೆಳ್ಳಿ ರನ್ನ ಘನ ಕನಕಾದಿಗಳ ಸುಳ್ಳಿ ।
ಚೆನ್ನಿಗರ ಸಿರಿಯಿಂದಮರಪುರವನೆ ಭೂಮಿ ಸುರ ಬಳ್ಳಿ । ವ್ಯವಹಾರದಲ್ಲಿ ॥
ಉನ್ನತೆಯ ಪಡೆಯುತ್ತ ಭುವನದಿ । ಕನ್ನಡದ ಸಾಹಿತ್ಯ ಸೇವೆಯು ।
ನನ್ನದೆನೆ ತಾ ಮುಂದೆ ಬಂದುದು । ಮನ್ನಣೆಯ ಸ್ವೀಕರಿಪುದರ್ಥಿಯಲಿ ॥ ೪ ॥

ಇಲ್ಲಿಹರು ವ್ಯವಹಾರ ಬಲ್ಲಿದರು । ಸನ್ಮಾನ್ಯ ಸಜ್ಜನರಿಲ್ಲಿಹರು ಸಚ್ಛಾಸ್ತ್ರ ಪಂಡಿತರು ।
ತಲ್ಲೀನನಿರತರದಿಲ್ಲಿಹರು ಸತ್ಯಾರ್ಥ ಶೋಧಕರು । ತತ್ತ್ವಾರ್ಥ ವಿದರು ॥
ಇಲ್ಲವೆಂಬುವದಿಲ್ಲಮೆಲ್ಲಿಯು । ಹಳ್ಳಿಗಳಿಗಿದು ಪ್ರಾಣವೆನೆ ಹು ।
ಬ್ಬಳ್ಳಿ ಶೋಭಿಪುದಿಂತು ವೈಭವ । ದಲ್ಲಿ ಸಮನಿಲ್ಲೆಂದು ಭೂಮಿಯಲಿ ॥ ೫ ॥

**ಗುರು ಬಸವಾರ್ಯ ಹಿರೇಮಠ, ಅಧ್ಯಾಪಕ, ಹುಬ್ಬಳ್ಳಿ.**

೨

ಕನ್ನಡದ ನಾಡಿನೀ ಹೂವನದ ಮಧ್ಯದಲಿ ।
ಕಂಗೊಳಿಪ ಹುಬ್ಬಳ್ಳಿ ಹೂಬಳ್ಳಿ ನೆರಳಿನಲಿ ।
ಈ ವನದ ದೇವಿಯನು ಪೂಜಿಸುವ ಬಾಂಧವರೆ ।
ಬನ್ನಿರೆಲ್ಲರು ನಮ್ಮ ಕನ್ನಡದ ಸೋದರರೆ ॥ ೧ ॥

ಈ ಬಳ್ಳಿ ಕೀರ್ತಿ ಎಲೆ ಹಸಿರು ಇತಿಹಾಸದಲಿ ।
ಈಗಲೀ ಸಾಹಿತ್ಯ ಸಮ್ಮೇಳ ಚೈತ್ರದಲಿ ॥
ಸ್ವಾಗತದ ಬಿಳಿಯರಳ ನಸು ನಗೆಯ ಸೂಸುವುದು ।
ಭಕ್ತರಿಗೆ ಗುಡಿಯಾದುದಕೆ ಹೆಮ್ಮೆ ಪಡುತಿಹುದು ॥ ೨ ॥

ನೋಡಿನಿಂತಿಹಳಿಲ್ಲಿ ನಮ್ಮ ಕನ್ನಡದಮ್ಮ ।
ನೋಡಲೊಡಗೂಡುತಲಿ ನಲಿವ ಮಕ್ಕಳ ನಮ್ಮ ॥
ಪ್ರಾರ್ಥನೆಯ ಮಾತಿನಲಿ ಸವಿ ಗಾನ ಪಡೆಯುವೊಡೆ ।
ಪ್ರೀತಿಯಲಿ ಪೂಜಿಸುವ ಪಸುಳೆಗಳ ಪರಸುವೊಡೆ ॥ ೩ ॥

ನಮ್ಮಮ್ಮನೀ ಚೆಲುವ ಗೆಲುವವರದಾರುಂಟು? ।
ಈ ಸರಳ ಸೌಂದರ್ಯ ಸವಿ ಕಂಠವೆಲ್ಲುಂಟು? ॥
ಪ್ರೇಮ ಚೆಲ್ಲುವ ನಗೆಯು ಜ್ಞಾನ ಹರಡುವ ದೃಷ್ಟಿ ।
ಅಭಯವೀಯುವ ಹಸ್ತ ಕೊಡುವುವುವು ಸಂತುಷ್ಟಿ ॥ ೪ ॥

ಹೇ ತಾಯೆ! ನಿನ್ನುದರ ಸೌಭಾಗ್ಯವಿತ್ತುದಕೆ ।
ಕನ್ನಡದ ಸವಿನುಡಿಯನೆಮಗೆ ಕಲಿಸಿದುದಕೆ ॥
ನಿನ್ನ ಸೇವೆಯ ಕಾರ್ಯ ಸೌಖ್ಯವೆಮಗಿತ್ತುದಕೆ !
ಎರಗುವೆವು ನಿನ್ನ ವಿಕಸಿತ ಪಾದ ಪದ್ಮಕ್ಕೆ ॥ ೫ ॥

ಪಂಪಾದಿ ಕವಿವರರು ಪೂಜಿಸಿದ ಪಾದವಿವು ।
ಎಂದಿಗುಂ ಬಾಡದುವು ಅವರಿಟ್ಟ ಹೂಗಳಿವು ॥
ನಾವಿನ್ನು ಕಾಣಿಕೆಯ ಸಲ್ಲಿಸುವ ಕಾಲವಿದು ।
ಕನ್ನಡಿಗರೊಡಗೂಡಿ ಹಾಡಲಿಹ ಸಮಯವಿದು ॥ ೬ ॥

ವಿಶಿಲ

ದೇವಿ ನಿನ್ನಯ ಕೀರ್ತಿ ಲೋಕದಲಿ ಬೆಳಗುವೊಡೆ ।
ಕನ್ನಡವು ಎಲ್ಲೆಲ್ಲು ಹೊಳಲಕೊಡುವೊಡೆ ಮಾಡೆ ॥
ನಿನ್ನ ಮಕ್ಕಳಿಗೆಲ್ಲ ಶಕ್ತಿಯನು ನೀಡೆಂದು ।
ವಿನಯದಲಿ ಬಾಗುತಲಿ ಬೇಡುವೆವು ನಾವಿಂದು ॥ ೭ ॥

**ಕೊ. ಅಶ್ವತ್ಥನಾರಾಯಣರಾವ್, ಬೆಂಗಳೂರು.**

೩

(" ಈಶನ ಕರುಣೆಯು " ಎಂಬ ಹಾಡಿನಂತೆ ಹೊರಟು ಸ್ವಲ್ಪ ಮುಂದುವರಿವ ಧಾಟಿಯಲ್ಲಿ)

ಬಯಸುವೆವ್ವ ಸ್ವಾಗತವನು ಕನ್ನಡ ನಾಡ ನುಡಿಗೆ ತನುವೆರೆದರಿಗೆ ।
ತಾಯ ದನಿಗೆ ಕಿವಿ ತೆರೆದರಿಗೆ ॥ ಪಲ್ಲವಿ ॥

ದೂರವೊ ಸನಿಹವೊ ನೆನೆಯದೆ ಸಾಗುತ ಸೇರಿಹ ವಿದ್ವನ್ಮಣಿಗಳಿಗೆ ।
ಉದಾರ ಕವಿತ್ವದ ಕಣಿಗಳಿಗೆ ॥
ಸಾರ ವಚನಗಳ ಧಾರೆಯನೆರಚುತ ಹೀರಿದವರ ಎದೆ ತಣಿಪರಿಗೆ ।
ವಾ-ಗ್ವೋರಣೆಗಿಳೆಯನು ಕುಣಿಪರಿಗೆ ॥ ೧ ॥

ಗಾನ ಸುಧಾರಸ ಪಾನ ಕಾಂಕ್ಷೆಯಲಿ ವೀಣೆಯ ಪಿಡಿವ ಪ್ರವೀಣರಿಗೆ ।
ತಾನ ಸಮಾಧಿ ವಿಲೀನರಿಗೆ ।
ಧ್ಯಾನ ಯೋಗ ವಿಜ್ಞಾನದ ಶಿವತ-ತ್ವಾನುಭವದ ಮಠ ಪತಿಗಳಿಗೆ ।
ದೀನರಿಗೆರೆವ ಸುಕೃತಿಗಳಿಗೆ ॥ ೨ ॥

ಕನ್ನಡ ನುಡಿವೆಣ್ಣಿನ ಸಿಂಗಾರಕೆ ಸನ್ನಾಹವನೊದಗಿಸುವರಿಗೆ ।
ಬಣ್ಣದುಡಿಗೆ ಸಜ್ಜಿಸುವರಿಗೆ ॥
ಕನ್ನಡ ಸೀಮೆಯ ಪುಣ್ಯ ನದಿಗಳೊಲ-ವನ್ನು ಬೆಳಗುವ ಮಹಿಳೆಯರಿಗೆ ।
ಬಹು-ಮಾನ್ಯ ನಗರಿಗೀ ಹುಬ್ಬಳ್ಳಿಗೆ ॥ ೩ ॥

ಬಯಸುವೆವ್ವ ಸ್ವಾಗತವನು . . . . . .

ಬಡಗ ಕನ್ನಡದ ನಡು ರಂಗದಿ ಕುಡಿಯೊಡೆದ ಬಿತ್ತರದ ಶಹರವಿದು ।
ಬಡತನದಿರುಳಿಗೆ ಸೊಡರು ಇದು ॥
ದುಡುಕುತ ವ್ಯಾಪಾರವನು ಸಾಗಿಬಹ ಧನಿ" ಕರ ಬೆಪ "ಗಿನ ಬಿಡದಿ ಇದು ।
ಗಡಿ ನಾಡಿನ ನಡು ಪೇಟೆಯಿದು ॥ ೪ ॥

ಹೊಳೆ ತೊರೆಗಳ ಸುಳಿವಿರದಿರೆ ಹೃನದಿ ಹೊಳೆ ಹರಿವುದು ಈ ನಗರಿಯಲಿ ।
ಬೆಳವಲ ನಾಡಿನ ಸೆರಗಿನಲಿ ॥
ಮಳೆವ ಮೋಡಗಳು ಮಳೆಯ ಸುರಿಸದಿರೆ ಕಳಿವಣ್ಣಳ ಸುರಿಮಳೆಯಿಲ್ಲಿ ।
ನಳ ನಳಿಸುವ ಹಸಿ ಹಸುರಿಲ್ಲಿ ॥ ೫ ॥

ಶ್ರೀ

ತಾಯ ಕರೆಗೆ ದಣಿವೆನ್ನದೆ ಹಾದಿಯ-ಸಾಯವನೆಣಿಸದೆ ಬಂದಿಹಿರಿ ।
ಆಯಾಸವ ನೆರೆ ಮರೆತಿಹಿರಿ ॥
ತಾಯಿಗೆ ಸುತರಭಜಾತರುದಯಿಸಿರೆ ಬೀಯವಹುದೆ ಬಾಳುವೆಯ ಸಿರಿ? ।
ಶ್ರೀಯಸು ಕುಣಿಯದೆ ಗರಿಗೆದರಿ? ॥ ೬ ॥

ಹೊನ್ನ ಕನ್ನಡದ ಹೊಗರು ಹೊಮ್ಮಿ ವೊಲು ಉನ್ನತ ವಾಙ್ಮಯ ವುದಯಿಸಲಿ ।
ಮುನ್ನಿನ ಯುಗವು ಪ್ರವರ್ತಿಸಲಿ ॥
ಹೊನ್ನು ಬೆಳೆಯುವ ನೆಲದೊಡೆಯ ಕೃಷ್ಣ ರಾಜೇಂದ್ರನ ದಯೆ ಕನ್ನಡಕಿರಲಿ ।
ಕನ್ನಡಿಗರ ಬಾಳಿಕೆ ಗೆಲಲಿ ॥ ೭ ॥

ಬಯಸುವೆವ್ವೆ ಸ್ವಾಗತವನು . . . . . . .

ವೆಂಕಟೇಶ ಪ್ರಭು.

---

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು

## ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳು

ಸಂಸ್ಥಾನ ಮೂರು ಸಾವಿರ ಮಠ, ಹುಬ್ಬಳ್ಳಿ—ಇವರ ಸನ್ನಿಧಿಯಿಂದ

ಅಖಿಲ ಕರ್ನಾಟಕದ

## ೧೯ ನೆಯ ಸಾಹಿತ್ಯ ಸಮ್ಮೇಳನಕ್ಕೆ

ಕಳುಹಿಸಿದ ಆಶೀರ್ವಾದ ಪತ್ರವು.

ಹುಬ್ಬಳ್ಳಿಯಲ್ಲಿ ಸಾಹಿತ್ಯ ಸಮ್ಮೇಳನವನ್ನು ನೆರಿಸಬೇಕೆಂದು ಬಹು ದಿವಸದಿಂದಲೂ ಆಕಾಂಕ್ಷೆಯಿತ್ತು. ಆ ಸುಯೋಗವು ಈ ವರುಷ ಒದಗಿಬಂದದ್ದಕ್ಕಾಗಿ ಸನ್ನಿಧಿಗೆ ಪರಮ ಸಂತೋಷವಾಗಿದೆ. ನಮ್ಮ ಕನ್ನಡ ನಾಡು ಪ್ರಾಚೀನ ಕಾಲದಿಂದಲೂ ಸಕಲ ಸಾಧನ ಸಂಪತ್ತುಗಳಿಂದ ಸಕಲರಿಗೂ ಆದರ್ಶಪ್ರಾಯವಾಗಿತ್ತು. ಅವುಗಳಲ್ಲೊಂದಾದ ಕನ್ನಡ ವಾಙ್ಮಯವು ಜೈನ, ವೀರಶೈವ, ಬ್ರಾಹ್ಮಣಾದಿ ಕವಿವರರಿಂದ ಪರಿಪೂರ್ಣ ದೆಶೆಗೆ ಮುಟ್ಟಿತ್ತು. ಆದರೆ ಆ ಸ್ಥಿತಿಯು ಬಹು ಕಾಲ ನಿಲ್ಲಲಿಲ್ಲ. ಬ್ರಿಟಿಶರ ಆಳಿಕೆಯಲ್ಲಿ ಇತ್ತೀಚೆಗೆ ದೇಶೀಯ ಭಾಷೆಗಳಿಗೆ ಪ್ರಾಥಮಿಕ, ಮಾಧ್ಯಮಿಕ, ಹಾಗು ವಿಶ್ವವಿದ್ಯಾಲಯಗಳ ಪಾಠ ಕ್ರಮದಲ್ಲಿ ಪ್ರೋತ್ಸಾಹವೂ ಪ್ರಾಶಸ್ತ್ಯವೂ ಪ್ರಾಪ್ತವಾಗಿರುವುದರಿಂದ, ಜನರ ಪ್ರವೃತ್ತಿಯು ಮಾತೃ ಭಾಷೆಗಳ ಕಡೆಗೆ ತಿರುಗಿದೆ. ಇಂಥ ಸಾಹಿತ್ಯ ಸಮ್ಮೇಳನಗಳೆಲ್ಲ ಬಹುಶಃ ಆದರ ಬಾಹ್ಯ ನಿದರ್ಶನಗಳಾಗಿವೆಯೆಂದು ಹೇಳಬಹುದು. ಆದುದರಿಂದ, ಇಲ್ಲಿ ನೆರೆದಿರುವ ಅಖಿಲ ಕರ್ನಾಟಕದ ಕನ್ನಡ ಅಭಿಮಾನಿಗಳು ತಮ್ಮ ತಾಯ್ನುಡಿಯಲ್ಲಿ ಪ್ರೇಮಾದರಗಳನ್ನಿಟ್ಟು, ಆದರ ಉತ್ತರೋತ್ತರ ಅಭಿವೃದ್ಧಿಗಾಗಿ ಪ್ರಯತ್ನಶೀಲರಾಗಬೇಕೆಂದೂ, ಈ ಹತ್ತೊಂಬತ್ತನೆಯ ಸಾಹಿತ್ಯ ಸಮ್ಮೇಳನದ ಕಾರ್ಯ ಕಲಾಪಗಳು ನಿರ್ವಿಘ್ನವಾಗಿ ಕೊನೆಗಂಡು ಕಾರ್ಯ ರೂಪದಲ್ಲಿ ಪರಿಣಮಿಸಲೆಂದೂ ಅಪೇಕ್ಷಿಸುವೆವು.

ಹುಬ್ಬಳ್ಳಿ,
ತಾ॥ ೨೯—೧೨—೧೯೩೩. } ಇತ್ಯಾಶಿಷಃ.

॥ ಓಂ ॥

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು

**ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿನಾಂ**

ಶ್ರೀಮಚ್ಛಿನ್ಮೂಲಾದ್ರಿ ಬೃಹನ್ಮಠ ಮಹಾ ಸಂಸ್ಥಾನ, ಚಿತ್ರಕಲ್‌ದುರ್ಗ

ಶ್ರೀಮಹಾ॥ ॥ ಸನ್ನಿಧಿಯಿಂದ

ಮಹಾ॥ ॥ ಸನ್ನಿಧಿಯ ಕೃಪಾ ಪಾತ್ರರಾದ ಹುಬ್ಬಳ್ಳಿಯ ಹತ್ತೊಂಬತ್ತನೆಯ ಕರ್ನಾಟಕ ಸಾಹಿತ್ಯ ಸಮ್ಮೇಲನದ ಸ್ವಾಗತ ಸಂಘಾಧ್ಯಕ್ಷರಿಗೆ. ತ್ರಿ ಸಂಧ್ಯಾ ಸಮಯೆ ಕೃತಾನೇಕಾಶಿಷಸ್ತದುಪರಿ. ನೀವು ತಾರೀಖು ೨೨-೧೨-೧೯೩೩ ರಲ್ಲಿ ಬಿನ್ನೈಸಿಕೊಂಡ ಪತ್ರಿಕೆಯು ತಲ್ಪಿ ಶ್ರೀಮಹಾ॥ ॥ ಸನ್ನಿಧಿಯ ದಿವ್ಯ ಚಿತ್ತಕ್ಕೆ ವೇದ್ಯವಾಗುವಂತೆ ಶೃತಗೊಳಿಸಲಾಯ್ತು.

ಸಾಹಿತ್ಯವು ಜನ ಜೀವನದ ಶರೀರವು; ಭಾಷೆಯು ಅದರ ಮುಖವು. ಉತ್ಕೃಷ್ಟವೂ ನಾಗರಿಕವೂ ಆದ ಜನ ಜೀವನವು ಸಾಹಿತ್ಯದ ಉನ್ನತಾವಸ್ಥೆಯ ಮೇಲೆಯೇ ಅವಲಂಬಿಸಿರುತ್ತದೆ. ಯಾವ ದೇಶದ ಸಾಹಿತ್ಯವು ಉಚ್ಚ ಸ್ಥಿತಿಯಲ್ಲಿದ್ದು, ಜೀವನದ ಸರ್ವ ಬಾಬುಗಳನ್ನು ಆವರಿಸಿಕೊಂಡಿರುವುದೋ ಆ ದೇಶದ ಜನರು ಅನ್ಯ ಸುಧಾರಕ ಸಮಾಜಗಳಲ್ಲೆಲ್ಲ ಗಣ್ಯರಾಗಿ ಯೋಗ್ಯತಾವಂತರಾಗಿ ಬಾಳುವುದರಲ್ಲಿ ಸಂದೇಹವಿಲ್ಲ. ಹಿಂದಿ, ಮಹಾರಾಷ್ಟ್ರ, ಬಂಗಾಲಿ, ಆಂಧ್ರ ಮೊದಲಾದ ಪ್ರಾಂತಗಳ ಸಾಹಿತ್ಯವು ಉನ್ನತ ಸ್ಥಿತಿಯಲ್ಲಿರುವುದೇ ಅಲ್ಲಿನ ನಾಗರಿಕರ ಅಭಿವೃದ್ಧಿಗೆ ಕಾರಣ ವಾಗಿರುತ್ತದೆ.

ಪಂಪ, ಹೊನ್ನ, ರನ್ನ, ಶ್ರೀಮದ್ಬಸವಾಲ್ಲಮಾದಿ ಪ್ರಮಥರು, ರಾಘವಾಂಕ, ರುದ್ರಭಟ್ಟ, ಹರಿಹರ, ಷಡಕ್ಷರಿ, ಲಕ್ಷ್ಮೀಶ ಮುಂತಾದವರ ಕಾಲದಲ್ಲಿ ಉನ್ನತ ಸ್ಥಿತಿಯಲ್ಲಿದ್ದ ಕನ್ನಡ ಸಾಹಿತ್ಯವು ಕಾಲ ವೈಪರೀತ್ಯದಿಂದ ಹೀನಾವಸ್ಥೆಗೆ ಬಂದು ಕರ್ನಾಟಕವು ಕೇವಲ ಹಿಂದುಳಿಯಲು ಕಾರಣವಾದುದು ಅತಿ ಶೋಚನೀಯ ಸಂಗತಿ ಯಾಗಿರುತ್ತದೆ. ಈ ಸ್ಥಿತಿಗೆ ಕರ್ನಾಟಕವು ಭಿನ್ನ ಭಿನ್ನವಾಗಿ ಒಡೆದುಹೋದುದೂ ಮುಖ್ಯ ಕಾರಣವಾಗಿರುವುದು ನಿಜ. ಈ ಪ್ರಾಂತಕ್ಕೊದಗಿರುವ ಇಂಥ ದುಸ್ಸ್ಥಿತಿಯು ನೀಗಿ ದೇಶದ ಇನ್ನುಳಿದ ಪ್ರಾಂತಗಳಂತೆ ಇದು ಅಭಿವೃದ್ಧಿಹೊಂದುವಂತಾಗಲು ಸಾಹಿತ್ಯ ಪರಿಷತ್ತಿನಂತಹ ಸಂಸ್ಥೆಗಳು ಅತ್ಯಾವಶ್ಯಕವಾಗಿವೆ.

ಕರ್ನಾಟಕ ಮಹೀ ಮಂಡಲಕ್ಕೆ ಕೇಂದ್ರ ಸ್ಥಾನವಾಗಿರತಕ್ಕ ಹುಬ್ಬಳ್ಳಿಯಲ್ಲಿ ಈ ಸಾರೆ ಕರ್ನಾಟಕ ಸಾಹಿತ್ಯ ಸಮ್ಮೇಲನದ ೧೯ನೆಯ ಅಧಿವೇಶನವು ಜರುಗಲಿರು ವುದು ವಿಶೇಷ ಆನಂದಕರವಾದ ಸಂಗತಿಯಾಗಿರುತ್ತದೆ. ಈ ಸಮ್ಮೇಲನದ ಪ್ರಸ್ತಾವ ವನ್ನು ಕನ್ನಡ ನಾಡಿನ ಅಭಿಮಾನಶಾಲಿಗಳೂ, ಮುಂಬೈ ಸರ್ಕಾರದ ವಿದ್ಯಾಮಂತ್ರಿ ಗಳೂ ಆದ ನಾಮದಾರ್ ದಿವಾನ್ ಬಹದ್ದೂರ ಶ್ರೀಮಂತ ಸಿದ್ದಪ್ಪ ತೋಟಪ್ಪ

ಕಂಬಳಿ, ಬಿ.ಎ., ಎಲ್‌ಎಲ್.ಬಿ. ಇವರು ಮಾಡುವುದು ಈ ಸಮ್ಮೇಲನಕ್ಕೆ ವಿಶೇಷ ಪ್ರಾಶಸ್ತ್ಯವನ್ನುಂಟುಮಾಡತಕ್ಕುದಾಗಿರುತ್ತದೆ.

ಈ ಸಮ್ಮೇಲನದ ಅಧ್ಯಕ್ಷ ಸ್ಥಾನವನ್ನು ಉಭಯ ಭಾಷಾ ವಿಶಾರದರೂ, ಸರ್ವ ದರ್ಶನತೀರ್ಥ ಇತ್ಯಾದಿ ಬಿರುದಾಂಕಿತರೂ ಮತ್ತು ಮೈಸೂರು ಶ್ರೀಮನ್ಮಹಾ ರಾಜರವರ ಆಸ್ಥಾನ ವಿದ್ವಾಂಸರೂ ಆದ ವೇ. ವೈ. ನಾಗೇಶ ಶಾಸ್ತ್ರಿಗಳು ವಹಿಸಿರುವುದು ಅತಿ ಶೋಭಾಯಮಾನವಾಗಿರುತ್ತದೆ. ಮತ್ತು, ಇದೇ ಸಂದರ್ಭದಲ್ಲಿ ನಡೆಯುವ ಕರ್ನಾಟಕ ಕವಿ ಸಮ್ಮೇಲನಕ್ಕೆ ಕನ್ನಡ ಸಾಹಿತ್ಯೋದ್ಧಾರದಲ್ಲಿ ನಿರತರೂ, ಕವಿ ಕುಲ ಭೂಷಣರೂ ಆದ ಕೆ. ವಿ. ಪುಟ್ಟಪ್ಪ, ಎಂ.ಎ. ಇವರು ಅಧ್ಯಕ್ಷ ಸ್ಥಾನವನ್ನು ವಹಿಸಿರುವುದು ಶ್ಲಾಘನೀಯವಾಗಿರುತ್ತದೆ.

ಈ ಸಮ್ಮೇಲನದ ಕಾರ್ಯ ಕಲಾಪಗಳು ಸಕ್ರಮವಾಗಿಯೂ ನಿರ್ವಿಘ್ನ ವಾಗಿಯೂ ನಡೆದು ಈ ಮಹಾ ಕಾರ್ಯ ಭಾಗಿಗಳಾದ ಸರ್ವರಿಗೂ ಸುಖ ಸಂಪದ ಗಳುಂಟಾಗಿ ಕನ್ನಡ ಸಾಹಿತ್ಯವು ಇತೋಪ್ಯತಿಶಯ ಅಭಿವೃದ್ಧಿಯನ್ನೈದಲೆಂದು ಶುಭ ವಾದಗಳನ್ನು ದಯಪಾಲಿಸೋಣವಾಗಿರುತ್ತದೆ.

ಶ್ರೀಮಹಾ || || ಸನ್ನಿಧಾನದಿಂದ ಈ ಸಮ್ಮೇಲನಕ್ಕೆ ಆಸ್ಥಾನ ವಿದ್ವಾನ್ ಸಾಹಿತ್ಯಾಚಾರ್ಯ ಪಂ. ಗುರುಸಿದ್ಧಶಾಸ್ತ್ರಿಗಳು ಪುರಾಣಿಕಮಠ— ಇವರನ್ನು ಕಳುಹಿಸೋಣವಾಗಿರುತ್ತದೆ.

ತಾ|| ೨೮–೧೨–೧೯೩೩. }
ಮುಕ್ಕಾಂ, ದಾವಣಗೆರೆ. }

---

# ದಿವಾನ್ ಬಹಾದ್ದೂರ್ ಸಿದ್ದಪ್ಪ ತೋಟಪ್ಪ ಕಂಬಳಿಯವರ ಪ್ರಸ್ತಾವ ಭಾಷಣ

ಕನ್ನಡ ವಾಗ್ದೇವಿಯ ಸೇವಾ ನಿರತರಾದ ನನ್ನ ಸಹೋದರ ಸಹೋದರಿಯರೇ,

ಈ ಇಲಾಖೆಯ ಮುಖ್ಯ ದೇಶೀಯ ಭಾಷೆಗಳ ಏಳಿಗೆಗೆ ಪ್ರೋತ್ಸಾಹ ಕೊಡುವದು ನನ್ನ ಕರ್ತವ್ಯವಿದ್ದು ನಿಮ್ಮ ಆಮಂತ್ರಣವನ್ನು ಸ್ವೀಕರಿಸಿ, ಈ ದಿನ ೧೯ನೆಯ ಸಾಹಿತ್ಯ ಸಮ್ಮೇಳನವನ್ನು ತೆರೆಯುವ ಶುಭ ಕಾರ್ಯವನ್ನು ನೆರವೇರಿಸಲು, ಈ ಇಲಾಖೆಯ ವಿದ್ಯಾ ಖಾತೆಯ ಮಂತ್ರಿಯ ದೃಷ್ಟಿಯಿಂದ, ನಾನು ಮುಂಬಯಿ ಪಟ್ಟಣದಿಂದ ಹಿರಿದಾದ ಹಿಗ್ಗಿನಿಂದ ಬಂದಿರುತ್ತೇನೆ. ಕರ್ನಾಟಕದ ಮುದ್ದು ಮಮತೆಯ ತಾಯ್ನುಡಿಯಾದ ಕನ್ನಡವು ಮುಂದುವರಿಯಲೆಂದು ಹಗಲಿರುಳು ಚಿಂತಿಸಿ ಯತ್ನಿಸುತ್ತಿರುವ ತಮ್ಮೊಡನೆ ಕೆಲವು ಕಾಲವಾದರೂ ಇರುವ ಸಂಯೋಗವು ಇದರಿಂದ ನನಗೆ ಪ್ರಾಪ್ತವಾಗಿರುವದರಿಂದ ಈ ಭಾಗ್ಯವನ್ನು ಒದಗಿಸಿಕೊಟ್ಟ ತಮ್ಮೆಲ್ಲರಿಗೆ ನಾನು ಉಪಕೃತನಾಗಿರುತ್ತೇನೆ.

ಹುಬ್ಬಳ್ಳಿಯು ಉತ್ತರ ಕರ್ನಾಟಕದಲ್ಲಿ ಎಲ್ಲಕ್ಕೂ ದೊಡ್ಡ ಪಟ್ಟಣವಾಗಿದೆ; ಆದರೆ ಬೆಂಗಳೂರು, ಧಾರವಾಡಗಳಂತೆ ಸಾಹಿತ್ಯ ಸೇವಕರಿಂದ ತುಂಬಿ ಮೆರೆಯುವ ಪುರವಲ್ಲ. ಇಲ್ಲಿ ವ್ಯಾಪಾರಸ್ಥರು, ಕೈಗಾರಿಕೆಯವರು, ಹಾಗು ಕೂಲಿಕಾರರು ಹೆಚ್ಚಾಗಿ ವಾಸಿಸುವರು. ತಮ್ಮಂಥ ಸಾಹಿತ್ಯ ಪ್ರೇಮಿಗಳನ್ನು ಇಲ್ಲಿಗೆ ಬರಮಾಡಿಕೊಂಡು ತಮ್ಮ ಮುಖಾಂತರ ಈ ಪಟ್ಟಣಿಗರಿಗೆ ಸಾಹಿತ್ಯದ ಮೇಲ್ಮೆಯನ್ನು ಅರುಹಿ ನಮ್ಮೆಲ್ಲರ ತಾಯ್ನುಡಿಯ ಬಗ್ಗೆ ಅವರಲ್ಲಿ ಎಚ್ಚರವನ್ನುಂಟುಮಾಡಿ ಭಾಷಾ ಸೇವೆಯನ್ನು ಮಾಡುವ ಪ್ರಸಂಗವನ್ನು ಒದಗಿಸಿಕೊಟ್ಟದ್ದಕ್ಕಾಗಿ ನಾನು ಈ ಸಮ್ಮೇಳನದ ಸ್ವಾಗತ ಮಂಡಲದವರನ್ನು ಅಭಿನಂದಿಸುವೆನು.

ಜ್ಞಾನ ಪ್ರಸಾರದ ಕಾರ್ಯಕ್ಕಿಂತಲೂ ಮಹತ್ತರವಾದ ಪವಿತ್ರ ಕಾರ್ಯವು ಇನ್ನೊಂದಿಲ್ಲವೆಂದು ನನ್ನ ಮನವರಿಕೆ. ಈ ಕಾರ್ಯವು ಸಾಹಿತ್ಯದಿಂದಲೇ ಆಗಬೇಕಾದುದರಿಂದ ಸಾಹಿತ್ಯ ಸೇವೆಯೆಂದರೆ ಜನ ಸೇವೆಯೆಂಬುದಾಗಿ ನನ್ನ ನಂಬಿಕೆ. ಈ ಪುಣ್ಯ ಕ್ಷೇತ್ರದಲ್ಲಿ ಜಾತಿ ಧರ್ಮಗಳ ತಿಕ್ಕಾಟಕ್ಕೆ, ಇಲ್ಲವೆ ರಾಜಕೀಯ ಪಂಗಡಗಳ ತೀಕ್ಷ್ಣ ಮತ ಭೇದಕ್ಕೆ ಆಸ್ಪದವು ಇರುವದಿಲ್ಲ. ಈ ಶಾರದೋಪಾಸನೆಯ ಮಂಗಳ ಕಾರ್ಯದಲ್ಲಿ ಎಲ್ಲ ಪಂಗಡದವರೂ ಎಲ್ಲ ಜಾತಿಯವರೂ ಒಮ್ಮನಸ್ಸಿನಿಂದ ಇಷ್ಟು ದಿವಸಗಳ ವರೆಗೆ ಸೇವೆಮಾಡಿದುದೇ ಇದಕ್ಕೆ ಬಲವಾದ ಸಾಕ್ಷಿ.

ಜೈನರು, ವೀರಶೈವರು, ಬ್ರಾಹ್ಮಣರು, ಕ್ರಿಸ್ತಿಯನ್ನರು—ಇವರೇ ಮೊದಲಾದವರು ತಮ್ಮ ತಮ್ಮ ಶಕ್ತ್ಯನುಸಾರವಾಗಿ ಕನ್ನಡ ವಾಗ್ದೇವಿಯ ಆರಾಧನೆಯನ್ನು ಮಾಡಿರುವ ಸಂಗತಿ ಎಲ್ಲರಿಗೂ ವಿದಿತವಾಗಿದೆ. ಸಾಹಿತ್ಯ ಸೇವೆಯಿಂದಲೇ ಜನ ಸೇವೆಯು ಪರಿಣಮಿಸುವದರಿಂದ ಕನ್ನಡಿಗರೆಲ್ಲರೂ ಈ ಪುಣ್ಯ ಕ್ಷೇತ್ರದಲ್ಲಿ ಹೆಚ್ಚು ಹುರುಪಿನಿಂದ ಕೆಲಸ ಮಾಡುವರೆಂದು ನನ್ನ ಕೋರಿಕೆ.

ಸಾಹಿತ್ಯದ ಅಗ್ಗಳಿಕೆಯನ್ನು ನಿಮ್ಮ ಮುಂದೆ ನಾನು ಬಣ್ಣಿಸಬೇಕಾಗಿಲ್ಲ. ಕನ್ನಡ ವಾಙ್ಮಯವು ಕನ್ನಡಿಗರ ಜೀವನದ ಕನ್ನಡಿ; ಅವರ ಆಶೆ ಆಕಾಂಕ್ಷೆಗಳೂ, ಆಚಾರ ವಿಚಾರಗಳೂ, ಕುಂದು ಕೊರತೆಗಳೂ, ನೆನಸು ಮನಸುಗಳೂ ಒಡಮೂಡುವ ಸ್ಥಳ. ಸಾಹಿತ್ಯವು ಜನತೆಯ ಕೈಗೆ ಕೋಲು; ಕಣ್ಣಿಗೆ ಬೆಳಕು. ಕನ್ನಡ ನಾಡಿನ ಸಮಗ್ರ ಜನತೆಗೆ, ಇಷ್ಟೇಕೆ! ಕನ್ನಡವನ್ನು ಆಡುವ ಪ್ರತಿಯೊಬ್ಬ ವ್ಯಕ್ತಿಗೆ—ಅವನು ಎಲ್ಲಿಯೇ ಬಾಳುವೆ ಮಾಡುತ್ತಿರಲಿ—ಒಂದು ಅತಿ ಮಹತ್ತ್ವದ ವಿಷಯವೆಂದರೆ, ಅದು ಕನ್ನಡ ಸಾಹಿತ್ಯವೇ ಸರಿ. ಹೀಗೆಯೇ, ಜನಾಂಗದ ಜೀವನದ ಝುರಿಯೆನಿಸಿದ ಸಾಹಿತ್ಯದ ಸರ್ವತೋಮುಖವಾದ ಅಭಿವೃದ್ಧಿಯನ್ನೂ, ತನ್ಮೂಲಕವಾದ ನಾಡಿನ ಏಳಿಗೆಯನ್ನೂ ಗುರಿಯಾಗಿಟ್ಟುಕೊಂಡಿರುವ ಸಾಹಿತ್ಯ ಸಮ್ಮೇಳನವು ಒಳ್ಳೆ ಮಹತ್ತ್ವದ್ದಾಗಿರುವುದೆಂದು ಇಲ್ಲಿ ನಾನು ಒತ್ತಿ ಹೇಳಬೇಕಾಗಿಲ್ಲ. ಅನುರಕ್ತ ಭಕ್ತಿಗಳಿಂದ ಕನ್ನಡ ವಾಗ್ದೇವಿಯ ಸೇವೆ ಮಾಡುವ ನಿಮಗೆ ಮಂಗಳಕರವಾದ ವರವು ನಿಶ್ಚಯವಾಗಿ ದೊರೆಯುವದೆಂದು ನನ್ನ ಕೋರಿಕೆ.

ಕನ್ನಡ ಸಾಹಿತ್ಯದ ಉಗಮವೂ ಅದರ ಮೊದಲಿನ ಚಿಕ್ಕ ಪ್ರವಾಹವೂ ಭೂತ ಕಾಲದಲ್ಲಿ ಮುಳುಗಿಹೋಗಿವೆ. ಒಂಬತ್ತನೆಯ ಶತಮಾನದ ಆರಂಭದಿಂದ ಕನ್ನಡ ಸಾಹಿತ್ಯ ಗಂಗೆಯು ಎಲ್ಲ ಶಾಖೋಪಶಾಖೆಗಳಿಂದಲೂ ಉಜ್ಜ್ವಲವಾದ ರೂಪವನ್ನು ತಾಳಿ ಮಹಾ ನದಿಯೋಪಾದಿಯಲ್ಲಿ ಕಾಣಿಸಿಕೊಳ್ಳುತ್ತಾಳೆ. ಕನ್ನಡ ಸಾಹಿತ್ಯ ಗಂಗೆಯ ಈ ಆಹ್ಲಾದ ದಾಯಕ ಸ್ವರೂಪವನ್ನು ನೋಡಿ ಯಾವ ಕನ್ನಡಿಗನ ಹೃದಯವು ಆನಂದದಿಂದಲೂ ಹೆಮ್ಮೆಯಿಂದಲೂ ಉಕ್ಕಿಬರಲಿಕ್ಕಿಲ್ಲ? ಅಂದಿನಿಂದ ಹದಿನೇಳನೆಯ ಶತಮಾನದ ವರೆಗೆ ಕನ್ನಡ ಸಾಹಿತ್ಯ ಗಂಗೆಯು ದಿನ ದಿನಕ್ಕೂ ಬೆಳೆಯುತ್ತ, ಅನೇಕ ಹಳ್ಳಕೊಳ್ಳಗಳಿಂದ, ಚಿಕ್ಕ ಪುಟ್ಟ ನದಿಗಳಿಂದ ಪೋಷಣೆಯನ್ನು ಹೊಂದುತ್ತ, ಕರ್ನಾಟಕ ಜನತೆಯನ್ನು ಸಂತೈಸುತ್ತ ಬಂದಿರುವಳು. ಕನ್ನಡ ಸಾಹಿತ್ಯದ ಇತಿಹಾಸದಂತೆಯೇ ಕರ್ನಾಟಕದ ಶಿಲ್ಪ ಕಲೆಯೂ ರಾಜಕೀಯ ಇತಿಹಾಸವೂ ಉಜ್ಜ್ವಲ, ಹಾಗು ಅಭಿಮಾನಾಸ್ಪದವಾಗಿರುವವು. ಕರ್ನಾಟಕ ರಾಜ ಮನೆತನದವರು ಕರ್ನಾಟಕದ ರಾಜ್ಯವನ್ನು, ಹಾಗು ಕರ್ನಾಟಕದ ಸಾಮ್ರಾಜ್ಯವನ್ನು ಹಿಂದಕ್ಕೆ ಸುಮಾರು ಒಂದು ಸಾವಿರ ವರುಷಗಳ ವರೆಗೆ ಆಳಿರುವರು.. ಅವರಂತೆಯೇ, ಭರತ ಖಂಡದಲ್ಲಿ ಪ್ರಚಾರಗೊಂಡಿರುವ ಅನೇಕ ಧಾರ್ಮಿಕ ಮತಗಳ ಸಂಸ್ಥಾಪಕರು ಇದೇ ಕರ್ನಾಟಕದ ಪುಣ್ಯ ಭೂಮಿಯಲ್ಲಿ ಜನ್ಮವೆತ್ತಿ ಕರ್ನಾಟಕದ ಕೀರ್ತಿ ದುಂದುಭಿಯನ್ನು ಹಿಂದುಸ್ಥಾನದ ಎಲ್ಲ ದಿಕ್ಕುಗಳಲ್ಲಿ ಮೊಳಗಿಸಿರುವರು. ಕರ್ನಾಟಕದ ಮತ್ತು ಕನ್ನಡ ನುಡಿಯ ಉಜ್ಜ್ವಲವಾದ ಭೂತಕಾಲದ ವಿಷಯವಾಗಿ ಮತಭೇದವಿರುವದು ಶಕ್ಯವಾಗಿ ತೋರುವುದಿಲ್ಲ. ಆದ್ದರಿಂದ ಕನ್ನಡ ಸಾಹಿತ್ಯ ಸೇವೆಯಲ್ಲಿ ಬದ್ಧ ಕಂಕಣರಾದ ಮತ್ತು ಅವಿರತವಾಗಿ ಶ್ರಮ ಪಡುತ್ತಿರುವ ತಮಗೆ ಕರ್ನಾಟಕದ ಆನಂದೋದ್ರೇಕದಿಂದ ಹುರಿದುಂಬಿಸುವ ಭೂತ ಕಾಲವು ತಾವು ಕೈಕೊಂಡ ಕಾರ್ಯದಲ್ಲಿ ಯಾವಾಗಲೂ ಮಾರ್ಗ ದರ್ಶಕವೂ ಪ್ರೇರಕವೂ ಆಗಿರುವದು.

ಮಧ್ಯ ಯುಗದಲ್ಲಿ ಸಾಹಿತ್ಯದ ಪ್ರಸಾರವು ಧರ್ಮ ಪ್ರಸಾರದ ಕಾರ್ಯದಲ್ಲಿ ಮುಖ್ಯವಾಗಿ ಆಗುತ್ತಿತ್ತು. ಆದರೆ, ಈಗ್ಗೆ ಬದಲಿಸಿದ ಪರಿಸ್ಥಿತಿಯಲ್ಲಿ, ಇಂಥ ಸಣ್ಣ ಕಾರ್ಯದಿಂದ ಯಾರಿಗೂ ಸಮಾಧಾನವಾಗುವದಿಲ್ಲ. ಈಗಿನ ಜನರು ಪ್ರತಿ ಯೊಂದು ವಿಚಾರವನ್ನೂ ಮತವನ್ನೂ ಶೋಧವನ್ನೂ ಶಾಸ್ತ್ರ ಶುದ್ಧ ದೃಷ್ಟಿಯಿಂದ ಬುದ್ಧಿಯ ಒರೆಗಲ್ಲಿಗೆ ಹಚ್ಚಿ, ಸರಿದೋರಿದ್ದನ್ನು ಮಾತ್ರ ಸ್ವೀಕರಿಸುವರು. ಹಿಂದಿನವರು ಹೇಳಿದ್ದನ್ನು ವಿಸ್ತೃತವಾಗಿ ಬೇರೆ ಬೇರೆ ರೀತಿಯಿಂದ ಹೇಳುವ ದಿವಸಗಳು ಹೋದವು. ಮತ್ತು, ಪೂರ್ವ ಕಾಲದಂತೆ ಜನರ ವಿಚಾರಗಳು ಬರೇ ಧಾರ್ಮಿಕ ವಿಚಾರಗಳನ್ನಷ್ಟೇ ಒಳಗೊಂಡಿಲ್ಲ; ಈಗಿನ ಜನರ ವಿಚಾರಗಳು ಮನುಷ್ಯನ ಎಲ್ಲ ಕಾರ್ಯ ಕ್ಷೇತ್ರವನ್ನೂ ಒಳಗೊಂಡಿವೆ. ಸಾಮಾಜಿಕ, ರಾಜಕೀಯ, ನೈತಿಕ, ಬೌದ್ಧಿಕ, ಆಧ್ಯಾತ್ಮಿಕ, ಔದ್ಯೋಗಿಕ ಮೊದಲಾದ ಎಲ್ಲ ವಿಷಯಗಳ ಬಗ್ಗೆ ಈಗಿನ ಜನರು ಸ್ವತಂತ್ರ ರೀತಿಯಿಂದ ವಿಚಾರ ಮಾಡಹತ್ತಿದ್ದಾರೆ. ಇವೆಲ್ಲ ವಿಷಯಗಳ ಮೇಲೆ ಗ್ರಂಥಗಳು ಬೇಕು. ಇಂಥ ಗ್ರಂಥಗಳು ಜನರ ಆಶ್ರಯದಿಂದಲೇ, ಜನರ ಕಲ್ಯಾಣಕ್ಕಾಗಿ ನಿರ್ಮಾಣವಾಗಬೇಕಾಗಿದೆ.

ದೇಶದ ಅಭ್ಯುದಯಕ್ಕೆ ಅವಶ್ಯವಾದ ಅನೇಕ ಸಾಧನಗಳಲ್ಲಿ ಸಾಹಿತ್ಯವು ಮುಖ್ಯವಾಗಿರುವದು. ಯಾವಾಗ ನವ ದೃಷ್ಟಿಯ ಸಾಹಿತ್ಯವು ಜನಸಾಮಾನ್ಯದಲ್ಲಿ ಹೆಚ್ಚಾಗಿ ಪ್ರಚುರವಾಗುವದೋ ಆಗ ದೇಶದಲ್ಲಿ ನವ ಜೀವನದ ಸಂಚಾರವಾಗುವದು. ಉತ್ಕರ್ಷದ ಶಿಖರಕ್ಕೆ ಹೋದ ದೇಶಗಳ ಸಾಹಿತ್ಯವನ್ನು ಪರೀಕ್ಷಿಸಿದರೆ ಇದರ ಬಗ್ಗೆ ಎಲ್ಲರಿಗೂ ಮನವರಿಕೆಯಾಗುವದು. ಒಳ್ಳೇ ಸಾಹಿತ್ಯವನ್ನು ಪಡೆದ ಜನಾಂಗದಲ್ಲಿ ಕರ್ತವ್ಯ ಜ್ಞಾನ, ಕರ್ತವ್ಯ ಕ್ಷಮತೆ, ಎಲ್ಲ ವಿಷಯಗಳ ಸಾಂಗೋಪಾಂಗ ಜ್ಞಾನ, ಸಾಮಾಜಿಕ ಪುನರ್ಘಟನೆಯ ಕಾರ್ಯದಲ್ಲಿ ಐಕಮತ್ಯ—ಇವು ದೃಷ್ಟಿಗೆ ಬೀಳುತ್ತವೆ. ಈಗ್ಗೆ ಸಾಹಿತ್ಯದ ಬಗ್ಗೆ ಜನರ ಕಲ್ಪನೆಯೇ ಬೇರೆ ಬೇರೆಯಾಗಿದೆ. ಮನುಷ್ಯನಲ್ಲಿ ಸುಪ್ತಾವಸ್ಥೆಯಲ್ಲಿದ್ದ ಉತ್ತಮ ಗುಣಗಳ ವಿಕಾಸಕ್ಕೆ ಅನುಕೂಲತೆಯನ್ನು ಒದಗಿಸಿ ಕೊಡುವದೇ ಸಾಹಿತ್ಯದ ಕಾರ್ಯ ಕ್ಷೇತ್ರದಲ್ಲಿ ಮುಖ್ಯವಾಗಿದೆಯೆಂದು ಧಾರಾಳವಾಗಿ ಹೇಳಬಹುದು.

ಕರ್ಣಾಟಕದ ಪ್ರಾಚೀನ ಸಾಹಿತ್ಯವು ಬಹಳ ವ್ಯಾಪಕವಿರುವದೆಂದು ನಮ್ಮೆಲ್ಲರಿಗೂ ಅಭಿಮಾನಾಸ್ಪದವಾದ ಸಂಗತಿ. ನಮ್ಮಲ್ಲಿ ಹಲವರು ಒಳ್ಳೇ ಉದ್ದಾಮ ಕವಿಗಳಾಗಿಹೋದರು. ಅವರ ಕಾವ್ಯಗಳಲ್ಲಿ ಕಾಣಬರುವ ಭಾಷೆಯ ಲಾಲಿತ್ಯ, ವಿಷಯಕ್ಕೆ ಅನುಗುಣವಾದ ಶೈಲಿ, ಭಾವ ರಸಗಳ ವೇಗ—ಇವು ಆ ಕವಿಗಳ ಬಗ್ಗೆ ನಮ್ಮ ಆದರವನ್ನು ಹೆಚ್ಚಿಸುತ್ತಿವೆ. ಆದರೆ, ಈಗ್ಗೆ ಆ ಕಾವ್ಯಗಳು ಈಗಿನ ವಾಚಕರ ಬೌದ್ಧಿಕವಾದ ಹಸಿವೆಯನ್ನು ಹಿಂಗಿಸಲಾರವು. ಆಧುನಿಕ ಆಂಗ್ಲ ಸಾಹಿತ್ಯಕ್ಕೆ ಮನ ಸೋತ ಈಗಿನ ವಾಚಕರಿಗೆ ಪಂಪನ ಕಾವ್ಯಗಳು ಕೂಡ ಸಮಾಧಾನವನ್ನು ಕೊಡಲಾರವು. ಇದರಿಂದ ನಮಗೆ ಕೆಡಕೆನಿಸುವ ಕಾರಣವಿಲ್ಲ: ಬದಲಾವಣೆ ಯಾಗುವದು ಪ್ರಗತಿಯ ಲಕ್ಷಣ. ಇದಕ್ಕೂ ಮೊದಲು ಕನ್ನಡ ಸಾಹಿತ್ಯದಲ್ಲಿ ಬದಲಾವಣೆಗಳಾಗಿಲ್ಲವಂತಲ್ಲ; ಪುರಾತನರ ಪ್ರೌಢ ಸಾಹಿತ್ಯವು ಮಧ್ಯಮ ಕಾಲದ

ಸುಲಭ ಸಾಹಿತ್ಯಕ್ಕೆ ತನ್ನ ಸ್ಥಳವನ್ನು ಕೊಡಬೇಕಾಯಿತು ; ಹಳಗನ್ನಡವು ಹೊಸಗನ್ನಡವಾಗಿ ರೂಪುಗೊಂಡಿತು. ಇದಲ್ಲದೆ, ಕಾವ್ಯದ ಸ್ವರೂಪದಲ್ಲಿ, ವಸ್ತುವಿನಲ್ಲಿ, ಹೇಳುವ ಕ್ರಮದಲ್ಲಿ, ಶೈಲಿಯು ಅನೇಕ ಸ್ಥಿತ್ಯಂತರಗಳಾಗಿರುವದು ನಿದರ್ಶನಕ್ಕೆ ಬರುತ್ತದೆ. ಪಂಪ ರನ್ನ ಮೊದಲಾದ ಕವಿಗಳ ಕಾವ್ಯಗಳು ಉದ್ಗ್ರಂಥಗಳಾಗಿ ದೂರದಲ್ಲಿಯೇ ನಿಂತುಬಿಟ್ಟವು. ಸರ್ವಜ್ಞ ಪದಗಳು, ಶಿವ ಶರಣರ ಮುದ್ದಾದ ವಚನಗಳು, ಹಾಗು ಹರಿದಾಸರ ಇಂಪಾದ ಹಾಡುಗಳು ಜನರಲ್ಲಿ ಪ್ರಚುರಗೊಂಡು ಮೇಲ್ಮೆಯನ್ನು ಹೊಂದಿರುವವು. ದಿನಾಲು ಬದಲಾವಣೆಯನ್ನು ಹೊಂದುತ್ತಿರುವ ಜನ ಜೀವನಕ್ಕೆ ಸಾಹಿತ್ಯವು ಕನ್ನಡಿಯಾಗಬೇಕಾದರೆ ಅದರಲ್ಲಿ ಬದಲಾವಣೆಯಾಗುವದು ಇಷ್ಟವೂ ಅವಶ್ಯವೂ ಆಗಿರುವದು. ಆದರೆ, ಈ ಹೊಸ ಸಾಹಿತ್ಯವು ಹಳೆಯ ಸಾಹಿತ್ಯದ ಎಲ್ಲ ಸಾರವನ್ನು ಹೀರಿಕೊಂಡೇ ಭೂತ ಕಾಲದ ತಳಹದಿಯ ಮೇಲೆ ನಿಲ್ಲಬೇಕು.

ಪಾಶ್ಚಾತ್ಯ ಮತ್ತು ಪೌರ್ವಾತ್ಯ ಸಂಸ್ಕೃತಿ ಸಂಸರ್ಗದಿಂದ ಹೊಸ ಪರಿಸ್ಥಿತಿ ಯುಂಟಾಗಿದೆ; ಅರ್ಥಾತ್, ಹೊಸ ಯುಗವೇ ಆರಂಭವಾಗಿದೆ. ಈ ನೂತನ ಸಮಾಜದ ರುಚಿ ಆಕಾಂಕ್ಷೆಗಳೂ ಜೀವನ ವ್ಯಾಪಾರಗಳೂ ಭಿನ್ನವಾಗಿವೆ. ಇವಕ್ಕೆ ಅನುಕೂಲಿಸಿರುವಂಥ ಹೊಸ ಸಾಹಿತ್ಯವು ನಿರ್ಮಾಣವಾಗಬೇಕಾಗಿದೆ. ಕಳೆದ ೧೫–೨೦ ವರುಷಗಳಿಂದ ಕನ್ನಡ ಸಾಹಿತ್ಯದಲ್ಲಿ ಈ ನವ ಜೀವನದ ಸಂಚಾರವು ದೃಷ್ಟಿಗೆ ಬೀಳಹತ್ತಿದೆ. ಪಾಶ್ಚಾತ್ಯ ಸಾಹಿತ್ಯದ ಸಂಸರ್ಗದಿಂದ ಹೊಸ ತೆರದ ಕವಿಗಳು, ನಾಟಕಗಳು, ಕಾದಂಬರಿಗಳು, ಪ್ರಬಂಧಗಳು, ಸಣ್ಣ ಕವಿತೆಗಳು, ಜೀವನ ಚರಿತ್ರೆ, ವಿಮರ್ಶೆಗಳು ಹೊರಬೀಳಹತ್ತಿವೆ. ಇವು ಬಹು ಮಟ್ಟಿಗೆ ಆಂಗ್ಲ ಸಾಹಿತ್ಯವನ್ನು ಅನುಸರಿಸಿ ಇರುತ್ತವೆಂದು ಬೇರೆ ಹೇಳಬೇಕಾಗಿಲ್ಲ. ಮೈಸೂರು, ಬೆಂಗಳೂರು, ಧಾರವಾಡ ಮತ್ತು ಮಂಗಳೂರು—ಈ ಪಟ್ಟಣಗಳಲ್ಲಿ ಹೊರಟಿರುವ ಸಂಘಗಳ, ಹಾಗು ಗುಂಪುಗಳ ಪರವಾಗಿ ಪ್ರಕಾಶಿತವಾದ ಹೊಸ ಹೊಸ ಗ್ರಂಥಗಳನ್ನು ನಿರೀಕ್ಷಿಸಿದರೆ, ಕನ್ನಡ ಸಾಹಿತ್ಯದಲ್ಲುಂಟಾದ ಕ್ರಾಂತಿಯು ಎಲ್ಲರಿಗೂ ಮನದಟ್ಟಾಗಿ ಹೊಳೆಯುವದು. ಇದರಿಂದ, ಕನ್ನಡಿಗರು ಜಾಗ್ರುತಾವಸ್ಥೆಯಲ್ಲಿದ್ದು ಬದಲಾವಣೆಯನ್ನು ಹೊಂದುತ್ತಿದ್ದ ಪರಿಸ್ಥಿತಿಯ ಪ್ರಕಾರ ಅವರೂ ಬದಲಾಗುತ್ತಿದ್ದಾರೆಂಬುದು ಸ್ಪಷ್ಟವಾಗುವದು.

ಕರ್ಣಾಟಕವು ಭಿನ್ನ ವಿಚ್ಛಿನ್ನವಾಗಿ ಬೇರೆ ಬೇರೆ ಸರಕಾರಗಳ ಆಧಿಪತ್ಯಕ್ಕೆ ಒಳಪಟ್ಟಿರುವದರಿಂದಲೂ ಪ್ರತಿಯೊಂದು ಭಾಗದವರ ಸಾಮಾಜಿಕ ಮತ್ತು ರಾಜಕೀಯ ಆಕಾಂಕ್ಷೆಗಳು ಬೇರೆ ಬೇರೆಯಾಗಿರುವುದರಿಂದಲೂ ಒಂದು ಕಡೆಯವರ ಆಚಾರ ಉಚ್ಚಾರ ವಿಚಾರಗಳು ಎರಡನೆಯ ಕಡೆಯವರಿಗೆ ಸಂಪೂರ್ಣ ಸರಿಬೀಳುವುದಿಲ್ಲ. ಇದಲ್ಲದೆ, ನೆರೆಯ ಬೇರೆ ಬೇರೆ ಭಾಷೆಗಳ ಪ್ರಭಾವವು ಆಯಾ ಭಾಗಗಳಲ್ಲಿ ಹೆಚ್ಚು ದೃಷ್ಟಿಗೆ ಬೀಳುವುದರಿಂದ ಒಂದು ಭಾಗದವರು ಬರೆದ ಕನ್ನಡವು ಎರಡನೆಯ ಭಾಗದವರಿಗೆ ರುಚಿಸುವುದಿಲ್ಲ. ಆದಕಾರಣ, ಕನ್ನಡದಲ್ಲಿ ಹೊರಡುವ ನಿಯತ ಕಾಲಿಕಗಳಿಗಾಗಲಿ ಪುಸ್ತಕಗಳಿಗಾಗಲಿ ಓದುಗರ ಆಶ್ರಯವು ಕಡಿಮೆಯಾಗಿದೆ. ಹೀಗಾಗಿ ಕನ್ನಡ ಸಾಹಿತಿಗಳಿಗೆ ಸಾಕಷ್ಟು ಪ್ರೋತ್ಸಾಹವು ಸಿಕ್ಕುವುದಿಲ್ಲ. ಆದುದರಿಂದ ಮಂಗಳೂರು, ಧಾರವಾಡ ಮತ್ತು ಮೈಸೂರ ಭಾಗಗಳಲ್ಲಿಯ ಗ್ರಂಥಸ್ಥ ಭಾಷೆಗೆ

ಏಕರೂಪತೆಯನ್ನು ಕೊಡುವದೇ ಸಾಹಿತಿಗಳ ಕರ್ತವ್ಯವಾಗಿದೆ. ಈ ಮಹತ್ತ್ವದ ಕಾರ್ಯವನ್ನು ನೆರವೇರಿಸುವದಕ್ಕೆ ಯಾವ ಸುಸಂಘಟಿತ ಕಾರ್ಯಕ್ರಮವನ್ನು ಕನ್ನಡಿಗರು ಇನ್ನೂವರೆಗೆ ಕೈಕೊಂಡಿಲ್ಲ. ಈ ವಿಷಯದ ಬಗ್ಗೆ ನೀವು ನಿಮ್ಮ ಲಕ್ಷ್ಯವನ್ನು ಗಮನಿಸುವಿರೆಂದು ನನ್ನ ನಂಬಿಕೆ. ಮತ್ತೊಂದು ಸಂಗತಿಯೇನೆಂದರೆ, ಸ್ಫೂರ್ತಿದಾಯಕವಾದ, ವಿಚಾರೋದ್ಬೋಧಕವಾದ ಸಮಾಜಕ್ಕೆ ಯೋಗ್ಯ ಮಾರ್ಗವನ್ನು ತೋರಿಸುವಂಥ ಸಮಾಜವನ್ನು ಉನ್ನತಿಗೆ ಒಯ್ಯುವಂಥ ಹೊಸ ತೆರದ ಹೊಸ ಹುರುಪಿನ ಗ್ರಂಥಗಳ ನಿರ್ಮಾಣವಾಗಲಿಕ್ಕೆ ಸಾಹಿತ್ಯ ಸೇವೆಯಿಂದಲೇ ಉಪಜೀವಿಸುವಂಥ ಸಾಹಿತಿಗಳ ಒಂದು ವರ್ಗವು ಉತ್ಪನ್ನವಾಗಬೇಕು. ಈ ಧ್ಯೇಯವನ್ನು ಮುಂದಿಟ್ಟುಕೊಂಡು ನಿಜವಾಗಿ ವಾಚನೀಯವಾದ ಪುಸ್ತಕಗಳ ಲೇಖನ ಮತ್ತು ಪ್ರಕಾಶನದ ಕೆಲಸವನ್ನು ಕನ್ನಡಿಗರು ಕೈಕೊಳ್ಳಬೇಕು. ಈ ಕಾರ್ಯವು ದೊಡ್ಡದಿದೆ. ಸಾಹಿತ್ಯದೇವಿಗೆ ಎಷ್ಟು ಉಪಾಸಕರಾದರೂ ಸಾಲದು.

ಕನ್ನಡ ಸಾಹಿತ್ಯದ ಅಭಿಮಾನಿಗಳೇ! ನಾನು ಈ ದಿನ ನಿಮಗೆ, ಅಗತ್ಯವಾಗಿ ಮಾಡಬಹುದಾದ ಕೆಲವು ಕಾರ್ಯಗಳನ್ನು ಸೂಚಿಸಿರುವೆನು. ತಾವೆಲ್ಲರೂ ಕೂಡಿ ವಿಚಾರಮಾಡಿ ನಾನು ಸೂಚಿಸಿದ ಕಾರ್ಯಗಳು ಈಡೇರಲು ಮಾರ್ಗಗಳನ್ನು ಈ ಸಭೆಯಲ್ಲಿ ಕಂಡುಹಿಡಿದು ಕಾರ್ಯಪ್ರವೃತ್ತರಾಗುವಿರೆಂದು ಹಾರೈಸುವೆನು.

ಕನ್ನಡ ಸಾಹಿತ್ಯ ಸೇವಕರೇ! ಈ ಸಾಹಿತ್ಯ ಸಮ್ಮೇಳನದ ಕಾರ್ಯವು ಆರಂಭವಾಯಿತೆಂದು ಸಾರಲು ತುಂಬ ಆನಂದವೆನಿಸುತ್ತದೆ.

---

## ಸ್ವಾಗತ ಮಂಡಲದ ಅಧ್ಯಕ್ಷರ ಭಾಷಣ

ವೃ|| ಪಂಪನೆ ಪೆಂಪು ಪೊನ್ನ ಮಿರುಪೊಂಬರಿಜಾ ಗಜಗಂ ಗಜಾಯನಂ ।
ಹಂಪೆ ಹರೀಶ್ವರಂ ನುಡಿಯ ಜೇನು ಷಡಕ್ಷರನಕ್ಷರಾತ್ಮನಾ ॥
ಲಂಪಿನ ಜೈಮಿನಂ ಕರವಿಪಂಚಿಕೆಯಾ ನೃಪತುಂಗನಚ್ಚನೇ ।
ತ್ರಂ ಪಿರಿದಾಗೆ ನಾಡೆಸವ ಕನ್ನಡ ಸರಸತಿ ಪಾಲಿಕೊಚ್ಚತಂ ॥

ಕಂ|| ಚೆನ್ನಾಯ್ತು ನಿಮ್ಮ ಬರವಿದು ।
ನನ್ನಿಯಿನೆಮಗೊಗೆದುದಿಂದು ಪಿರಿದುಚ್ಚವ ದಲ್ ॥
ಕನ್ನೆಯ್ದಿಪ್ಪಲ ಬಳಗೇಂ ತನಿ ।
ಜೊನ್ನದೆ ಪೇಳೊಂದದಿಹುದೆ ನಮ್ಮ ದದೊದವಂ ॥

ಮನ್ನಣೆವೆತ್ತವರೆ! ನಮ್ಮ ಕರೆಹವನ್ನು ಬಗೆದು ಹಲವು ಕಜ್ಜಗಳನ್ನು ಬದಿಗೈದಿಸಿ ದೂರದಾರಿಯ ದಣುವಿಗಲಸದೆ ತಾವು ಬಂದುದರ ಸಂತಸದ ಉಕ್ಕಂದವನ್ನು ನಮ್ಮ ಕೃತಜ್ಞ ಭಾವವು ಸರಿಗಟ್ಟುತ್ತಲಿದೆ. ಐತಿಹಾಸಿಕ ಕಾರಣಗಳಿಂದಲೂ, ಪರಭಾಷೆಗಳ ದಾಳಿಗಳ ಉಬ್ಬರಗಳಿಂದಲೂ, ಇವೆಲ್ಲಕ್ಕೂ ಮಿಗಿಲು ನನ್ನದೆಂಬ ನಲುವಿನೆರಕವು ಬರಿತುದರಿಂದಲೂ, ಬಾಡಿದ ಕನ್ನಡ ನುಡಿಯ ಕಳೆದುಂಬಲು ಕರ್ಣಾಟಕ ಸಾಹಿತ್ಯ ಪರಿಷತ್ತು ಹದಿನೆಂಟು ವರ್ಷಗಳಿಂದ ಎಡೆವಿಡದೆ ಎಸಗುತ್ತಿಹ ಹವಣಿಕೆಗಳು ತೆರೆಯಲಿರುವ ಸುದಿನಗಳ ಸೂಚನಗಳೇ ಅಹವು.

ಈ ಪರಿಷತ್ಸಮ್ಮೇಲನವನ್ನು ಹುಬ್ಬಳ್ಳಿಯಲ್ಲಿ ನೆರೆಯಿಸಬೇಕೆಂಬ ಏಗಿಲಾದ ನಮ್ಮ ಹಂಬಲವು, 'ಹೊತ್ತಿಗಲ್ಲದೆ ಆವುದು ಹತ್ತಿಬಾರದು'ಎಂಬ ಸೃಷ್ಟಿ ನಿಯತಿಯಿಂದ, ಇನಿಸು ದಿನ ಈಡೇರಲಿಲ್ಲ. ಒಮ್ಮೆ ನೀರಿನ ಕೊರತೆಯು ಅಡ್ಡಗಿಸಿದರೆ, ಮತ್ತೊಮ್ಮೆ ಹಣಿಕುವ ಪಿಡುಗು ಅಣಕಿಸಿತು. ಈ ಸಲ ಪರಶಿವನ ಕೃಪೆಯಿಂದ ಆವ ಎಡರುಗಳೂ ನಮ್ಮನ್ನು ಎದುರಿಸಲಿಲ್ಲ; ಸಮ್ಮೇಲನವನ್ನು ಬರಿಸುವ ಭಾಗ್ಯವು ಒದಗಿತು. ಕನ್ನಡ ನುಡಿಯ ಪಿರಿದೊಂದೆರಕವು ಉದ್ಯಮ ವ್ಯವಹಾರಗಳ ಇಳಿಕೆಯನ್ನು ಹಿಂದಿಕ್ಕಿ ಮುಂದಾಗಲು ಈ ನಾಗರಿಕರು ಬಿಡುಗೈಯಿಂದ ಧನವನೆರೆದರು. ನಮ್ಮ ನಾಗರಾಧಿಕಾರವು (Municipality) ಇನ್ನೂರು ರೂಪಾಯಿಗಳನ್ನು ಸಲಿಸಿ ಹೊಸ ಪಂಕ್ತಿಯನ್ನು ಹಾಕಿತು. ಇದೆಲ್ಲಕ್ಕೂ ಮೊದಲು ಶ್ರೀ ಜಗದ್ಗುರು ಗುರುಸಿದ್ಧ ಮಹಾಸ್ವಾಮಿಗಳವರು ಈ ಸಮ್ಮೇಲನವನ್ನು ಹುಬ್ಬಳ್ಳಿಯಲ್ಲಿ ನೆರೆಯಿಸಲು ನಮ್ಮನ್ನು ಅಣಿಮಾಡಿದರು; ಈಗ ಸಭೆ ನಡೆದಿರುವ ಮಂದಿರವನ್ನು ಅನುಕೂಲ ಮಾಡಿ ಕೊಟ್ಟರು; ಮತ್ತು, ನಮ್ಮ ಪ್ರಯತ್ನವನ್ನು ಏರಿ ಹೆಚ್ಚಿಗೆ ಧನ ಸಹಾಯವು ಬೇಕಾದಲ್ಲಿ ಅದನ್ನೆರೆದು ಸಹಾಯ ಮಾಡುವೆವೆಂದು ಅಭಯವನ್ನಿತ್ತರು. ಅವರ ಪ್ರೋತ್ಸಾಹವೇ ಈ ಸಮ್ಮೇಲನದ ಬೀಜ ಭೂತವಾಗಿದೆ. ಸರಸ್ವತೀ ಸೇವಾ ಲಾಲಸೆಯಿಂದ ಹುರುಪುಗೊಂಡು ನಮ್ಮ ಹಸುಳರು ಒಸವೆಸಿಗರಾಗಿ (Volunteers) ಅಲ್ಪ ಕಾಲದಲ್ಲಿ ಅಣಿಯಾದರು.

**ಹುಬ್ಬಳ್ಳಿಯ ಪರಿಚಯ.**—ಸಭ್ಯರೆ! ತಾವು ದಯಮಾಡಿಸಿದ ಹುಬ್ಬಳ್ಳಿಯು ಪುರಾತನವಾದುದು. ಕ್ರಿಸ್ತಾಬ್ದ ೧೦೦೦ರಲ್ಲಿ ಇದು ಕದಂಬ ರಾಜ್ಯಕ್ಕೆ ಸೇರಿದ್ದಿತು. ಆ ವಂಶದ ಮುಮ್ಮಡಿ ಜಯಕೇಶಿಯು ಗೋವೆಯಲ್ಲಿ ಅರಸುಗೆಯ್ಯುತ್ತಿದ್ದನು. ಕೊಂಕಣದ ಒಂಬಯ್ನೂರು ಮತ್ತು ಹಲಸಿಗೆಯ ಪನ್ನಿಚ್ಛಾಸಿರ ಮಂಡಲಗಳು ಅವನ ಒಡೆತನದಲ್ಲಿದ್ದುವು; ಹುಬ್ಬಳ್ಳಿಯು ಹಲಸಿಗೆಯ ನಾಡಿನಲ್ಲಿದ್ದಿತು. ಚಾಳುಕ್ಯ ವಂಶ ಮುಖ ತಿಲಕನೂ ಸತ್ಯಾಶ್ರಯ ಕುಳಾಳಂಕಾರನೂ ಚಾಳುಕ್ಯ ಕಂಠೀರವನೂ ಎಂಬೀ ಬಿರುದುಗಳಿಗಿಂಬಾದ ತ್ರಿಭುವನಮಲ್ಲದೇವನು ಜಯಕೇಶಿಗಧಿರಾಜನಾಗಿದ್ದನು. ಧಾರವಾಡದ ಬಳಿಯ ನವಲೂರು ಆಗ ಚೌಗಾಂವಿಯ ನವಲೂರು. ಆ ಊರ ಕುರುಂಬ ಸೆಣಿಗ ದೈವದವರು ಸೆಣಿಗೇಶ್ವರನೆಂಬ ಶಿವಲಿಂಗಕ್ಕೆರೆದ ದಾನ ಶಿಲಾ ಶಾಸನದಲ್ಲಿ ಬರೆದುದನ್ನು ತೆಗೆದು ನಾನಿಲ್ಲಿ ಹೇಳಿರುವೆನು. ಕವಿಯ ಕೆಲವು ಪಂಕ್ತಿಗಳನ್ನಿಲ್ಲಿಡುವುದು ಲೇಸು :—

ವೃ॥ ಸಸಿವರನೊಂದು ತೋಂಟದೊಳು ಪೂಗಿ ಫಲಂಗಳ ಭಾರದಿಂದಲೊಂ
ದೆಸೆಗೊರಗಿರ್ದುದೊಂದೆಡೆಯೊಳಂದೆಡೆಯೊಳ್ಪುರುಗಿರ್ದ ಗೊಂಪಲಿಂ।
ಸಸಿನಮೆನಿಪ್ಪುದೊಂದೆಡೆಯೊಳೊಂದೆಡೆಯೊಳ್ಕೊನೆ ಕೆಂಪನಾಗಿ ನಾಲ್
ದೆಸೆಗೆಸೆದಿಪ್ಪುದೊಂದೆಡೆಯೊಳೊಂದೆಡೆ ಹಾಲ್ಗೊನೆಯಿಂದಲೊಪ್ಪುಗುಂ ॥

ಕಂ॥ ಎರೆ ಹಾಳು ಹರಳು ತೋಂಟದ
ಬರಿಯೊಳು ಕಾಲುವೆಯನುಂಬ ಗದ್ದೆಗಳಿಂದಂ।
ಪಿರಿದೆಲೆಯ ಪೂರ್ವ ಬಳ್ಳಿಯ
ಧರೆಯೆಲ್ಲಂ ಬೆಳಸು ಕಳಸವಿಟ್ಟಂತಿರ್ಕುಂ ॥

ಆ ಚಾಳುಕ್ಯರೂ ಆ ಕದಂಬರೂ ಆ ಗೋವೆಯೂ ಆ ಹಲಸಿಗೆಯೂ ಹೊತ್ತಿನ ಒತ್ತು ಚಿತ್ರದಲ್ಲಿ ಕತ್ತರಿಸಿದರು. ಹದಿನೇಳನೆಯ ಶತಕದಲ್ಲಿ ಹುಬ್ಬಳ್ಳಿಯು ವಿಜಾಪುರದ ಆದಿಲಶಾಹಿಗೊಳಗಾಗಿದ್ದಿತು. ಶಿವಾಜಿಯದನ್ನು ಸುಲಿದು ಮಹಾ ರಾಷ್ಟ್ರ ರಾಜ್ಯ ಸ್ಥಾಪನಾ ಪಥ ಪಾಥೇಯವನ್ನು ಒದಗಿಸಿಕೊಂಡನು. ಹತ್ತೊಂಬತ್ತ ನೆಯ ಶತಕದ ಮೊದಲಿಂದ ಸಾಂಗಲಿಯ ಪಟವರ್ಧನರ ಬಳಿ ಜರಿದು ಬ್ರಿಟಿಶರಾಳಿಕೆ ಯಲ್ಲಿ ಸಿಂದು ಧಾರವಾಡ ಜಿಲ್ಲೆಯದೊಂದು ತಾಲೂಕಿನ ತಾಣವಾಗಿದೆ; ವ್ಯಾಪಾರೋ ದ್ಯಮಗಳಿಂದಲೂ ನೇಗೆಯ ಕಂಚುಗಾರಿಕೆಯ ಹೋರೆಗಳಿಂದಲೂ ಉಗಿಬಂಡಿಯವರ ಗೆಯ್ಮೆ ಸಾಲೆ (Workshop) ಗಳಿಂದಲೂ, ಸೂಲುವ, ನೇಯುವ ಯಂತ್ರ ಚಕ್ರ (ಗಿರಣಿ) ಗಳಿಂದಲೂ ಹತ್ತಿಯನ್ನರೆಯುವ, ಅರಳಿಯನ್ನೊತ್ತಿಕಟ್ಟುವ ಯಂತ್ರಾಲಯ ಗಳಿಂದಲೂ ಹತ್ತಿಯರಳೆಯ ವ್ಯಾಪಾರದಿಂದಲೂ ಕನ್ನಡ ನಾಡಿನ ಹಿರಿಯ ಊರಾಗಿದೆ.

ಹುಬ್ಬಳ್ಳಿಯ ಸುತ್ತುವಳಿಯ ನಾಡು ಕರ್ಣಾಟಕದ ಪುರಾವೃತ್ತದಲ್ಲಿ ಹೆಸರು ಗೊಂಡುದು. ಪಂಪ ಕವಿಯ ಸಾಜದ ತಿರುಳುಗನ್ನಡದ ಪುಲಿಗೆರೆಯು ಲಕ್ಷ್ಮೇಶ್ವರ ವಾಗಿ ಸಸಿಹದಲ್ಲಿದೆ. ಕುಮಾರ ವ್ಯಾಸನ ಗದುಗು ಇಂದಿಗೂ ಗದುಗೆಸಿಸಿ ವ್ಯಾಪಾರದ ಗದ್ದುಗೆಯಾಗಿದೆ. ಪುರಾತನ ಶಿವಾಲಯಗಳಿಂದೊಪ್ಪುವ ಹೊಯ್ಸಳ ರಾಜ್ಯದ ಲೊಕ್ಕ ಗುಂಡಿಯು ಲಕ್ಕುಂಡಿಯೆಂದು ಗದುಗಿನ ಬಳಿಯಾಗಿದೆ. ಶ್ರೀ ಚೆನ್ನಬಸವಾದಿ ಶಿವ ಶರಣರು ಹುಬ್ಬಳ್ಳಿಯ ಸುತ್ತುವಳಿಯಿಂದಲೇ ಉಳಿವೆಯ ಮಾಮನೆಗೆ ದಯಮಾಡಿದರು.

**ಭಾಷಾ ಸಂಸ್ಕೃತಿ ಸಮವಾಯ.**—ಸಭ್ಯರೆ! ಮುಂದಿನ ಕಾರ್ಯವನ್ನು ನೆನೆವ: ಭಾಷೆಯು ಸಂಸ್ಕೃತಿಗೆ ಕಾರಣವಾಗಿದೆ, ಕಾರ್ಯವಾಗಿದೆ. ಮನುಷ್ಯನು ಸಮವಾಯ ಜೀವಿಯು. ಅವನ ಬಾಳು ನೆರವಿಯ ಬಾಳು; ಎಕ್ಕಟಿಯಿರನು. ತನ್ನ ಬಗೆಯನ್ನು ಹೆರವರಿಗೆ ತಿಳಿಸದೆ ತಾನವರ ಭಾವವನ್ನು ತಿಳಿಯದೆ ಮಾನವ ಸಮಾಜವಾಗದು. ಇದಕ್ಕೆ ಭಾಷೆಯಲ್ಲದೆ ಬೇರೆ ಸಾಧನವಿಲ್ಲ. ಮನುಷ್ಯನು ಸಂತತಿ ಜೀವಿಯು. ಮಿಕ್ಕ ಪ್ರಾಣಿಗಳು ತಮ್ಮ ಮತ್ತು ತಮ್ಮ ಮರಿಗಳ ಬಾಳೊಂದನ್ನೇ ಲೆಕ್ಕಿಸುವುವು. ಮನುಷ್ಯನು ತನ್ನ ಹಿಂದು ಮುಂದಿನ ಹಿರಿಯರನ್ನೂ ಪೀಳಿಗೆಗಳನ್ನೂ ಲಕ್ಷಿಸುವನು. ಹಿಂದಿನ ಸಂತತಿಯ ಅನುಭವವು ಇಂದಿನ ಜನತೆಯ ದಾರಿ ದೀವಟಿಗೆ. ಇಂದಿನವರ ಕೃತಾಕೃತಗಳು ಮುಂದಿನವರ ಬಾಳುವೆಯ ಬೀಜ ಬುತ್ತಿ. ಮಾನವನ ಜ್ಞಾನ ಕೋಶವೆಂದರೆ ಭಾಷೆ. ಇದಿನಿತಲ್ಲ; ತನ್ನ ಭಾವದ ಹಂಬಲವನ್ನು ತನಗೆ ಬಿಚ್ಚಿಡುವುದು ಭಾಷೆ. ಭಾಷೆಯಿಲ್ಲದೆ ಮನಸವಿಲ್ಲ, ಮನನವಿಲ್ಲದೆ ಕೃತಿಯಿಲ್ಲ, ಕೃತಿ ಯಿಲ್ಲದೆ ಸಂಸ್ಕೃತಿಯಿಲ್ಲ. ಭಾಷೆಯಿಂದಲೇ ಸಂಸ್ಕೃತಿ ವಿಚಾರಗಳು ತಲೆದೋರು ವುದರಿಂದ ಭಾಷೆಯು ಸಂಸ್ಕೃತಿಯ ಕಾರಣವು. ಸಂಸ್ಕೃತಿಯಿಂದ ಭಾಷೆಯು ಸಮೃದ್ಧವಾಗುವುದರಿಂದ ಮತ್ತು ಸುಣ್ಪುಪಡೆವುದರಿಂದ ಭಾಷೆಯು ಸಂಸ್ಕೃತಿಯ ಕಾರ್ಯವು. ಬಹಳವೇನು! ಜಗತ್ತು ಶಬ್ದಬ್ರಹ್ಮದ ವಿವರ್ತವೆಂದು ತತ್ತ್ವಚಿಂತಕರು ಹೇಳುವರು.

ಅನಾಧಿ ನಿಧನಂ ಬ್ರಹ್ಮ ಶಬ್ದ ತತ್ತ್ವಂ ಯದಕ್ಷರಂ ।
ವಿವರ್ತತೇಽರ್ಥ ಭಾವೇನ ಪ್ರಕ್ರಿಯಾ ಜಗತೋಯತಃ ॥

(ವಾಕ್ಯಪದೀಯ) ವೈಯಾಕರಣರ ಮತವನ್ನೇ ಕಾಳಿದಾಸನು—

ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ ।
ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ ॥

ಎಂದು ಕವಿಸಮ್ಮತವಾಗಿ ಹೇಳಿರುವನು. ಇವೆಲ್ಲವನ್ನೂ ಮಿಗುವ

ಬ್ರಹ್ಮೇದಂ ಶಬ್ದ ನಿರ್ಮಾಣಂ ಶಬ್ದ ಶಕ್ತಿ ನಿಬಂಧನಂ ।
ವಿವೃತಂ ಶಬ್ದ ಮಾತ್ರಾಭ್ಯಸ್ತಾಸ್ವೇವ ಪ್ರವಿಲೀಯತೆ ॥

ಎಂದು ವೇದವೂ

ವರ್ಣಾತ್ಮಕಮಿದಂ ಲಿಂಗಂ ವರ್ಣಾತ್ಸರ್ವ ಸಮುದ್ಭವಃ ।

ಎಂದು ಶಿವಾಗಮವೂ ಹೇಳುವುವು. ಆ ಪ್ರಮಾಣಗಳ ಪ್ರತಿಧ್ವನಿಯೇ ವೈಯಾಕರಣ ಸಿದ್ಧಾಂತವಹುದು.

**ಕನ್ನಡ ನುಡಿಯ ಮಹತ್ತ್ವ ಗಾಂಭೀರ್ಯಗಳು.**—ತಾವು ಈ ವೈಭವವು ಸಂಸ್ಕೃತಕ್ಕೆ ಸಲುವುದೆನಬಹುದು. ಆದರೆ, ಈ ಮೈಮೆಯು ಎಲ್ಲ ಮಾತುಗಳಿಗೂ ಸಲುವಳಿಯಹುದು. ಕೇಶಿರಾಜನು—

ಕಂ॥ ಶ್ರೀವಾಗ್ದೇವಿಗೆ ಶಬ್ದದಿ
ನಾವಾವಿಂದ್ರಿಯದ ವಿಷಯಮಂ ಶ್ರೋತ್ರದೊಳು ।
ದ್ಭಾವಿಪ ನಿರ್ಮಳ ಮೂರ್ತಿಗಿ
ಳಾವಂದ್ಯೆಗೆ ಶಾಸ್ತ್ರ ಮುಖದೊಳವನತನಪ್ಪೆಂ ॥

ಎಂದು ಕನ್ನಡಕ್ಕೀ ಮೈಮೆಯುಂ ಎರವಲ್ಲವೆಂದು ತಿಳಿಸಿರುವನು.

ಈ ಬಗೆಯಿಂದ, ಸಂಸ್ಕೃತಿಯೂ ಭಾಷೆಯೂ ದೇಹಾತ್ಮರುಗಳಂತೆ ಪರಸ್ಪರ ಸಮರಸ ಭಾವದಿಂದ ತೆರವು ಬಿಡುವುಗಳಿಲ್ಲದೆ ಒಂದೆಯಾಗಿಹವು. ಏನೊಂದರಿಂದ ಸಂಸ್ಕೃತಿಗೆ ತಿಕ್ಕಾದರೆ ಭಾಷೆಗೆ ತಿಕ್ಕಾಗದಿರುವುದಿಲ್ಲ. ಕ್ರಿಸ್ತ ಶಕದ ಇನ್ನೂರನೆಯ ವರ್ಷದಿಂದ ನಮ್ಮ ಕನ್ನಡ ನುಡಿಯ ಮತ್ತು ಕನ್ನಡದ ಸಂಸ್ಕೃತಿಯ ಇತಿಹಾಸವು ದೊರಕುವುದೆಂದು ಶ್ರೀಯುತ ನರಸಿಂಹಾಚಾರ್ಯರವರ ಕರ್ಣಾಟಕ ಕವಿಚರಿತ್ರ ದಿಂದ ತಿಳಿವುದು. ನಮ್ಮ ಕನ್ನಡವು ತನ್ನ ಇಂಪನ್ನೂ ಸಂಸ್ಕೃತದ ನುಣ್ಪನ್ನೂ ತಳೆದಿದೆ. ಅಚ್ಚಗನ್ನಡವು ನಮ್ಮ ಅಚ್ಚ ಭಾವಗಳ ಬಳಕೆಗಾದರೆ, ಸಂಸ್ಕೃತವು ಬುದ್ಧಿವಿಕಾಸಕ್ಕಾಗಿದೆ. ಜೀವೇಶರ ಜತೆಯನ್ನು ಕನ್ನಡದಲ್ಲಿ ಬಗೆದೋರಿ ಹೇಳಬಲ್ಲೆವಾದರೆ, ಜೀವೇಶ ಮೀಮಾಂಸವನ್ನು ಸಂಸ್ಕೃತ ಪದಗಳಿಂದಲೇ ಮಾಡಲರಿವೆವು; ಸಂಸ್ಕೃತವನ್ನು ತದ್ಭವೀಕರಿಸಿ ಕನ್ನಡಿಸಬಲ್ಲೆವು; ಒಮ್ಮೊಮ್ಮೆ ಕನ್ನಡವನ್ನುಜ್ಜಿ ಸಂಸ್ಕೃತಂ ಗೆಯ್ವೆವು. ಕರ್ಣಾಟಕ ಸಂಸ್ಕೃತ ಶಬ್ದ ಭಾಂಡಾರವು ನಮ್ಮ ಪದ ಸಾಂಪದಿಕವು.

**ಅಂದಿನ ಕಾಲವು.**—ಸಂದ ಕಾಲದಲ್ಲಿ ನಮ್ಮ ಕರುನಾಡು ತನ್ನ ಶಾಂತ ಗಂಭೀರ ನದಿಗಳಿಂದಲೂ ಗಾಢಾರಣ್ಯ ನಂದನಗಳಿಂದಲೂ ತನ್ನ ಮಕ್ಕಳ ಉದಾರಾ ಚರಿತಗಳಿಂದಲೂ ಕವಿಗಳ ಪ್ರತಿಭಾ ಪ್ರಸರಕ್ಕೆ ಹೇತುವಾಗಿದ್ದಿತು. ನಮ್ಮ ಕೃಷಿಯೂ ಪಶು ಸಂಪತ್ತೂ ಹೆಚ್ಚಳವಾಗಿದ್ದುವು. ನಮ್ಮ ಅರಸರೂ ವೀರರೂ ಬಾಹು ಬಲಿ

ಗಳಾಗಿದ್ದರು. ನಮ್ಮ ನೈತಿಕಾಧ್ಯಾತ್ಮಿಕ ಧ್ಯೇಯಗಳೂ ಆಕಾಂಕ್ಷೆಗಳೂ ದಿವ್ಯವಾಗಿದ್ದುವು, ಉಚ್ಚತಮವಾಗಿದ್ದುವು. ಮಹಾತ್ಮರೂ ಮಹಾನುಭಾವರೂ ನಮಗೆ ಆದರ್ಶರಾಗಿದ್ದರು.

**ಜೈನ ವಾಙ್ಮಯ.**—ಜೈನ ಕವಿಗಳು ನಮ್ಮ ಅರಸರ ಐಸಿರಿಯನ್ನೂ ವೀರರ ತೋಳಿಕ್ಕಿತುಳವನ್ನೂ ನಾಡಿನ ಸೊಬಗನ್ನೂ ಬಣ್ಣಿಸುವುದರೊಡನೆ ಜಿನ ಧರ್ಮದ ಪುರಾಣಗಳನ್ನು ಬರೆದು ಕನ್ನಡಿಗರ ಸಾತ್ವಿಕವನ್ನು ಜೋಕೆಗೆಯ್ದರು.

**ವೀರಶೈವ ವಾಙ್ಮಯ.**—ವೀರಶೈವ ಕವಿಗಳು ಶ್ರೀ ಬಸವಾದಿ ಪ್ರಮಥರ ನಿಚ್ಚಳ ಬಾಳ ಬೆಚ್ಚಳಿಕೆಗಳಿಂದ ಈಶ ಭಕ್ತಿಯನ್ನು ನೆಲೆಗೊಳಿಸಿ ಮಾನವರ ಅಗಾಧ ಹೃದಯದಲ್ಲಿ ಮಾದೇವನನ್ನು ಸಿಲುಕಿಸಿದರು. ಪುರಾಣಗಳ ಬಣ್ಣನೆಗಿಂಬಾದ ಶರಣರು ಆವಾವ ಹೋರೆಯಿಂದ ಮೇಣ್ ಆವಾವ ಹುಟ್ಟಿನಿಂದ, ಮೇಣ್ ಸಾಮಾಜಿಕ ಕೀಳು ಮೇಲುಗಳಿಂದ ಮಾನವನ ಒರೆಗಾಣಬಾರದು. ಈಶ ಭಕ್ತಿಯ ಅಚ್ಚೊ ಸದಾಚಾರದ ಕೆಚ್ಚೊ ಅವನವನ ಒಪ್ಪು ತಪ್ಪುಗಳ ಗುರುತು. ಮಾನವೋತ್ತಮನಲ್ಲಿ ಈಶನು ಅಚ್ಚೊತ್ತಿ ಒಚ್ಚತವಾಗಿಹನು. ಅದನ್ನು ಗುರುತಿಸಿ ಸಾಮಾಜಿಕ ಘಟನೆಯಾಗುವುದುಚಿತವು. ಅದುವೆ ಮಾನವ ಕುಟುಂಬದ ಸಾಮುವಾಯಿಕೋನ್ನತಿಯು; ಅದುವೆ ಇಹಪರ ಸಾಧನವು—ಎಂಬ ಒಪ್ಪಿನ ತತ್ತ್ವಗಳನ್ನು ಅಚ್ಚ ಶೀಲದಿಂದ ಬೀರಿದರು.

ಶರಣರಿಂದಲೂ ವೀರಶೈವ ಕವಿಗಳಿಂದಲೂ ನಮಗೊಂದು ಪೊಚ್ಚ ಪೊಸದಾದ ಹಾದಿಯು ಕಣ್ದೆರವಿಯಾಯ್ತು. ಈ ಕಣ್ದೆರವಿಯು ನವೀನ ವಾಙ್ಮಯದಲ್ಲಿ ಪರಿಣಮಿಸಿತು. ಶಿವ ಶರಣರ ವಚನಗಳು ಬುದ್ಧನ ಸರಲ ಬೋಧವನ್ನೂ ಆಗಮೋಪನಿಷತ್ತುಗಳ ಗಭೀರೋದಾತ್ತ ತತ್ತ್ವಗಳನ್ನೂ ಹೆಣೆಹಾಕಿದುವು; ಪ್ರಾಚೀನದಲ್ಲಿಯೂ ಕಾಣದ ಸ್ತ್ರೀ ಪುರುಷರ ಆಧ್ಯಾತ್ಮಿಕ ವಿಕಾಸವು ಕಂಗೊಳಿಸಿತು; ನವೀನ ಗುಣಾಕಲಿತ ಸಮಾಜವಾಯ್ತು; ಚಿರಜೀವಿಯಾಗಲಿಲ್ಲವಾದರೂ ಸದ್ಯದ ವೀರಶೈವ ಸಮಾಜದಲ್ಲಿ ಕೆಲಮಟ್ಟಿಗುಳಿದಿದೆ.

**ಬ್ರಾಹ್ಮಣ ವಾಙ್ಮಯ.**—ಬ್ರಾಹ್ಮಣ ವಾಙ್ಮಯವು ಭಾರತ ರಾಮಾಯಣಾದಿ ವೀರರ, ಸೀತಾದಿ ಪತಿವ್ರತಾ ರತ್ನಗಳ ಉಚ್ಚವಾದ ಬಾಳನ್ನು ಮುಂದಿಟ್ಟು ಪೂರ್ವ ಪರಂಪರೆಯ ಸಾರವದ್ವಸ್ತುಗಳನ್ನು ತೋರಿಸಿತು; ಸ್ಮಾರ್ತ ಮಾರ್ಗದ ಸಾಮಾನ್ಯ ಜನಕ್ಕೆ ಸುಲಭವಾದ ಧರ್ಮ ಬೋಧೆಯನ್ನು ನೀಡಿತು. ಈ ವಾಙ್ಮಯದಲ್ಲಿ ವೈಷ್ಣವ ವಾಙ್ಮಯವು ಹೆಸರಿಟ್ಟು ಹೇಳಲು ತಕ್ಕುದಾಗಿದೆ. ಪುರಂದರದಾಸ, ಕನಕದಾಸ ಮೊದಲಾದ ದಾಸರ ಪದ್ಯಗಳು ದೇವ ಭಕ್ತಿಯನ್ನು ಲಲಿತವಾಗಿ ಬಣ್ಣಿಸಿ, ಸರಳ ಜೀವನವನ್ನೂ ಸಾಧು ಚರಿತ್ರವನ್ನೂ ಭಕ್ತಿಯ ಗಾಂಭೀರ್ಯವನ್ನೂ ಬೋಧಿಸುತ್ತವೆ.

**ಕರ್ಣಾಟ ಭಾಷೆಯ ಬಂಧುರ ಮನೋಹರತ್ವಗಳು.**—ಜೈನರ ವ್ಯಾಕರಣ ಗ್ರಂಥಗಳು ಕನ್ನಡ ನುಡಿಯ ಬಂಧುರತೆಯನ್ನು ಕಾಯ್ದುವು. ಅಲಂಕಾರ ಶಾಸ್ತ್ರಗಳು ಕನ್ನಡದ ಕಾವ್ಯಗಳಿಗೆ ಆದರ್ಶಗಳಾದುವು. ಹೊಸ ತತ್ತ್ವಗಳ ಹರಪಿನಲ್ಲಿ ಹರಿಹರ ರಾಘವಾಂಕಾದಿಗಳು ಕಂಡ ಷಟ್ಪದಿಗಳು ಕನ್ನಡಕ್ಕೆ ಹೊಸ ಸೊಂಪುಗೂಡಿಸಿ

ವೀರಶೈವದ ಆಚೆಯ್ಯುತ್ತಿದುವು. ಉಳಿದ ಎಲ್ಲ ವಿಷಯಗಳಲ್ಲಿ ಕನ್ನಡದ ವಾಙ್ಮಯವು ಮುಂದುವರಿದಿತು. ಸಂಸ್ಕೃತಿಯ ದೃಶ್ಯ ಪ್ರತಿಮೆಗಳಂತೆ ದೇವಾಲಯ ಶಿಲ್ಪವು ಕಂಗೊಳಿಸಿತು.

**ಕರ್ಣಾಟ ಸರಸ್ವತಿಯ ವಿಪತ್ತು.**—ಈ ಸ್ಥಿತಿಯು ಸಾಗಲು ದೈವ ಘಟನೆಯಿಂದಾದ ಪರ ಸಂಸ್ಕೃತಿಗಳ ದಾಳಿಯು ಪಾರಲಾಗದ ಗಂಡಾಂತರವಾಯ್ತು. ಕುತ್ತು ಕವಿದುಬಂದಿತು. ಉತ್ತರ ಭಾರತವನ್ನು ತುತ್ತುಗೊಂಡ ಪರ ದೇಶದವರ ಪರ ಸಂಸ್ಕೃತಿಯು ದಕ್ಷಿಣ ಭಾರತವನ್ನು ತನ್ನ ದವಡೆಯಲ್ಲಿಕ್ಕಿತು. ದ್ವಾರಸಮುದ್ರವೂ, ಹಳೇಬೀಡು ಹಾಳಾದ ಬಳಿಕ ವಿಜಯನಗರವೂ ಕನ್ನಡಿಗರ ಕೆಚ್ಚಾಳುತನದ ಬಲುಮೆಯಿಂದ ಕರಾಲ ಕಾಲನಿಗಿದಿರಾಗಿ ನಿಂದುದಾದರೂ, ತಾಳಿಕೋಟೆಯ ಕಾಳಗದಲ್ಲಿ ತಳದೂಳಿಯಾಯ್ತು. ಅಂದಿನಿಂದ, ಅದೇಕೆ! ಅದಕ್ಕೂ ಮೊದಲಿಂದ, ಪರ ಸಂಸ್ಕೃತಿಯು ನಮ್ಮ ಕನ್ನಡಿಗರ ಬಾಳುವೆಯ ನುಣ್ಪು ಗುಣ್ಪುಗಳನ್ನು ತಡವಿತ್ತು. ಆಗ ನಮ್ಮ ಮನೆವಾಳ್ತೆಯು ನಿಡಿದೊಡೆದು ಬೇರೆ ನಿಂದುದರಿಂದ ಪರಕೀಯ ಸಂಸ್ಕೃತಿಯ ಆಘಾತವು ನಮ್ಮ ರಾಜ್ಯ ನಿರ್ವಾಹ ಪದ್ಧತಿಯಲ್ಲಿ ವಿಶೇಷವಾಗಿ ಆಯ್ತು. ನಮ್ಮ ಶಿಲ್ಪ ಕಲೆಯು ಹಿಂದು ಸರಿಯಿತು; ಪರಕೀಯ ಶಿಲ್ಪವು ಏರಿತು. ಧಾರ್ಮಿಕ ವಿಚಾರದಲ್ಲಿಯೂ ಒಂದು ಬಗೆಯ ಅದಲು ಕದಲುಗಳಾದುವು. ಗೃಹ್ಯ ಜೀವನದಲ್ಲಿಯೂ ಹಲವು ಪರಕೀಯ ರೂಢಿಗಳು ನೆಲೆಯಾದುವು.

ವಿಜಯನಗರದ ಸಾಮ್ರಾಜ್ಯವಳಿದ ಬಳಿಕ, ಕಾಯ್ವರಿಲ್ಲದೆ ಕಂಗೆಟ್ಟ ಭಾರತ ಸಂಸ್ಕೃತಿಯನ್ನು ಶಿವಾಜಿಯು ಜೋಕೆಗೆಯ್ದನು. ಮುಸಲ್ಮಾನರ ಆಳಿಕೆಯಿಂದ ಬಿಡುಗಡೆಯೊಂದಿದ ಭಾರತ ದೇಶಗಳು ಮಹಾರಾಷ್ಟ್ರರನ್ನು ಒಂದು ತೆರನಾದ ಗೌರವದಿಂದ ಕಾಣ್ಬುದು ಸಾಜವಾಗಿದ್ದಿತು. ಕನ್ನಡ ನಾಡು ಮಹಾರಾಷ್ಟ್ರರ ಕೈಗೆ ಬಂದು ಅವರಾಡಳಿತಕ್ಕೆ ಸೇರಿದ ಬಳಿಕ, ಮಹಾರಾಷ್ಟ್ರರ ನಡೆ ನುಡಿಗಳು ನಮ್ಮ ನಡೆ ನುಡಿಗಳನ್ನು ಮಾರ್ಪುಗೊಳಿಸಹತ್ತಿದುವು. ಮಹಾರಾಷ್ಟ್ರರು ಭಾರತ ಭೂಮಿಜರಾದುದರಿಂದ ಅವರ ಬಳಕೆಗಳು ನಮ್ಮ ಮನೆಗಳಲ್ಲಿಯೂ ಹೇರಳವಾಗಿ ಬಂದುವು. ನಮ್ಮ ಕನ್ನಡವು ಮೂಲೆಗೆ ಸರಿದು, ಮರಾಟರ ಮರಾಟಿಯು ನಮ್ಮ ತಾಯಿಮಾತಿಗಿಂತ ಇನಿದಾಯ್ತು. ರಾಜ್ಯ ನಿರ್ವಾಹದಲ್ಲಿಯೂ ಗೃಹ್ಯಗಳಲ್ಲಿಯೂ ವ್ಯಾಪಾರೋದ್ಯಮಗಳಲ್ಲಿಯೂ ಮರಾಟಿಯು ಬಂದಿತು.

**ಆಶಾಂಕುರ.**—ಆ ಬಳಿಕ ಬ್ರಿಟಿಷರಾಡಳಿತವು ಪ್ರವರ್ತನಗೊಂಡಿತು. ಇವರಾಳಿಕೆಯಲ್ಲಿ ದೇಶ ಭಾಷೆಗಳಿಗೆ ಶಿಕ್ಷಣದಲ್ಲಿ ಸ್ಥಾನವು ದೊರೆದಿತು. ಈ ನಾಡುಗಳಲ್ಲಿ ಕೈ. ವಾ. ಚನಬಸಪ್ಪ ಧಾರವಾಡನವರ ಪ್ರಯತ್ನ ವಿಶೇಷದಿಂದ ಕನ್ನಡ ಸಾಲೆಗಳು ತೆರೆದುವು. ಇತ್ತೀಚೆ ವಿಶ್ವವಿದ್ಯಾಲಯದ ಉಚ್ಚ ವಿದ್ಯಾ ಪಾಠದಲ್ಲಿ ಕನ್ನಡಕ್ಕೆ ನೆಲೆದೊರೆತು ನಮ್ಮ ತರುಣರು ಕನ್ನಡದ ಅಭ್ಯಾಸವನ್ನೆಸಗುತ್ತಿಹರು.

ಸಮಗ್ರ ಕರ್ಣಾಟಕದಲ್ಲಿ ನವೀನ ವಾಙ್ಮಯವು ಉದಯಿಸುತ್ತಲಿದೆ. ಈ ವಾಙ್ಮಯದ ಗುಣಾವಗುಣಗಳನ್ನು ಚರ್ಚಿಸುವುದು ಸ್ವಾಗತಿಕ ಭಾಷಣದಲ್ಲಿ ಸಾವ

ಕಾಶವಾಗಿರದು. ಕನ್ನಡಿಗರು ತಮ್ಮ ತಾಯ ಮಾತಿನ ಸವಿಯನ್ನೂ ಚೆಲುವನ್ನೂ ಬಗೆಗಂಡು ಆಕೆಯ ಸೇವೆಯತ್ತ ಅವರ ಮನವು ಓಡುತ್ತಿರುವುದರ ನಿದರ್ಶನವಾಗಿ ಈ ವಾಙ್ಮಯ ಪ್ರಾದುರ್ಭಾವವು ಅಭಿನಂದನೀಯವಾಗಿದೆ.

**ಸರಸತಿಗೆ ಮೈಸೂರ ತಾಯ್ಮಾಣ.**—ಪೂರ್ವದ ಚಾಳುಕ್ಯರೂ ರಾಷ್ಟ್ರಕೂಟರೂ ಕದಂಬರೂ ಹೊಯ್ಸಳರೂ ಪಿರಿದೊಂದಕ್ಕರದಿಂದ ನಡಿಸಿದ ಕನ್ನಡ ಸರಸತಿಯು ವಿಜಯನಗರದ ಸಾಮ್ರಾಜ್ಯದಲ್ಲಿ ಹೊಸ ತೌರುಗಂಡು ಆದರಳಿವಿನಿಂದ ಬಳಲುತ್ತಿರಲು, ಕರ್ಣಾಟಕದ ದಕ್ಷಿಣ ರಾಜ ವಂಶಗಳು ಆಕೆಯ ಪಾಲನವನ್ನು ಕೈಕೊಂಡುವು. ಕೆಳದಿಯ ಸಂಸ್ಥಾನವೂ ಮೈಸೂರು ಸಂಸ್ಥಾನವೂ ಕನ್ನಡದ ಕವಿಗಳಿಗೂ ಕಲಾಭಿಜ್ಞರಿಗೂ ಕನ್ನಡದ ಸಂಸ್ಕೃತಿಗೂ ಪಾಲನ ಶಾಲೆಗಳಾದುವು. ದೈವ ವಿಲಾಸದಿಂದ ಕೆಳದಿಯು ಅಳಿದ ಬಳಿಕ ಮೈಸೂರ ರಾಜ ವಂಶವು ಕರ್ಣಾಟಕ ಸರಸ್ವತಿಯ ಒಂದೇ ಒಂದು ಆಲಂಬನವಾಯಿತು. ಹದಿನೇಳನೆಯ ಶತಕದಿಂದಿತ್ತಿನ ವಾಙ್ಮಯವು ಮೈಸೂರ ಅರಸರು ಬೆಳೆಯಿಸಿದ ಉದ್ಯಾನವಹುದು. ಈ ಸಾಹಿತ್ಯ ಪರಿಷತ್ತು ಘನತೆ ಪಡೆದ ಮೈಸೂರ ಯುವರಾಜರವರ ಕೃಪಾ ಕಟಾಕ್ಷ ವರ್ಷ ಪೋಷಿತ ಸಸ್ಯವಾಗಿದೆ.

ಆದರೇನು? ಕನ್ನಡದ ಹೆಜ್ಜೆಯು ಮುಂದುವರಿದಿಲ್ಲ. ಅರಬ ಸಂಸ್ಕೃತಿಯು ಮುಟ್ಟಲಸದಳವಾದ ನಮ್ಮ ಪುರಾತನ ಪದ್ಧತಿಗಳ ಮತ್ತು ನಳಿಕೆಗಳ ಬುಡದಳವನ್ನು ಆಂಗ್ಲ ಸಂಸ್ಕೃತಿಯು ಕಲಕುತ್ತಲಿದೆ. ಪ್ರಾಚೀನ ಧರ್ಮ ಕಲ್ಪನೆಗಳು ನಮ್ಮ ಹೃದಯದಿಂದ ದೂರಾಗುತ್ತಲಿವೆ. ನಮ್ಮ ವಿಚಾರ ಪರಂಪರೆಗಳು ಹೊಸ ವಿಚಾರಗಳಿಗೆ ನೆಲೆಗೊಡುತ್ತಲಿವೆ. ನಮ್ಮ ಕುಟುಂಬದ ಬಾಳುವೆಯು ಮೊದಲಿನ ಬಳಿಗೆಡುತ್ತಲಿದೆ. ನಮ್ಮ ಹಳ್ಳಿಗರು "ಹೊತ್ತು" ಮರೆಯುತ್ತ "Time" ನೆನೆಯುತ್ತಿರುವರು. "ಊಟವನ್ನು" "Meals" ಎಂದೆಂಬೆವು. ಈ ನುಡಿಗಳು ನಮ್ಮ ನಡೆಗಳು ಹೊಂದುತ್ತಿರುವ ಕ್ರಾಂತಿ ವೇಗದ ದರ್ಶಕಗಳಾಗಿವೆ.

**ಶಾಂತಿಮಯ ಭಾರತ ಸಂಸ್ಕೃತಿ.**—ಇದರಿಂದಾವ ಹಾನಿ? ಕೇವಲ ತನ್ನದೆಂಬ ವಿರಕದಿಂದ ನವುಳು ಭಾವಿಯ ನೀರುಗುಡಿವನು ಹೆಡ್ಡನೆನಬಹುದು. ಹಾಗಲ್ಲ; ಫಲ ವೃಕ್ಷಗಳೆಂತೊ, ಸಸ್ಯ ತತಿಯೆಂತೊ, ಅಂತೇ ಸಂಸ್ಕೃತಿಗಳು ಕ್ಷೇತ್ರ ವಿಶೇಷವನ್ನು ಬಯಸುವುವು. ಸಹಜ ಸಂಸ್ಕೃತಿಯು ಒಂದೊಂದು ನಾಡಿನ ಪ್ರಾಕೃತಿಕ ಸನ್ನಿವೇಶಗಳನ್ನೂ ಪೂರ್ವೇತಿಹಾಸವನ್ನೂ ಅವಲಂಬಿಸುವುದು. ಒಂದೊಂದು ಜನತಾ ವಿಶೇಷವು ತನ್ನ ಸಂಸ್ಕೃತಿಯಿಂದಲೇ ಬದುಕಿಹುದು. ಕಾರಣಾಂತರಗಳಿಂದ ಸಂಸ್ಕೃತಿಯಳಿದು ಜನವುಳಿದರೆ, ಆ ಜನವು ಜೀವಿಸಿದಂತಲ್ಲ. ಇದೆಲ್ಲಕ್ಕೂ ಹಿರಿದು ನಮ್ಮ ಸಂಸ್ಕೃತಿಯು ಜಗತ್ತಿನ ಬೇರೆ ಸಂಸ್ಕೃತಿಗಳಿಗಿಂತ ಆಧ್ಯಾತ್ಮಿಕವಾಗಿಹುದರಿಂದ ಮಾನವ ಕುಲದ ಶಾಂತಿ ಸಮಾಧಾನಗಳಿಗೆ ಒಂದೇ ಒಂದು ಸಾಧನವಹುದು. ಬಹಿರ್ಮುಖ ಸಂಸ್ಕೃತಿಗಳಿಂದ ಶಾಂತಿ ಸಮಾಧಾನವೂ ಜೀವನಕ್ಕೆ ಹಿತವಾದ ವ್ಯವಹಾರ ವಿನಿಮಯವೂ ಉಂಟಾಗದೆಂಬುದಕ್ಕೆ ಸದ್ಯದ ಜಗತ್ತಿನ ಕದಡಿದ ಸ್ಥಿತಿಯು ದೃಶ್ಯವಾಗಿದೆ. ನಮ್ಮ ಸಂಸ್ಕೃತಿಯು ಅಣಬೆಯಂತೆ ಆಗಲೇ ತೋರಲಿಲ್ಲ. ವೇದಾಗಮ ಕಾಲಗಳಿಂದ ಋಷಿ

ಗಳೂ ರಾಜರ್ಷಿಗಳೂ ಸಾಧು ಸತ್ಪುರುಷರೂ ವೀರರೂ ಪತಿವ್ರತಾ ಮಣಿಗಳೂ ವೀರ ಮಾತೆಯರೂ ಸ್ವಕರ್ತವ್ಯ ದಕ್ಷತೆಯಿಂದಿದನ್ನು ಬಲಿಸಿದರು.

ಪೂರ್ವ ಕಾಲದಲ್ಲಿಯ ರಾಮಾಯಣ ಭಾರತಾದಿ ಯುದ್ಧಗಳಿಂದಲೂ ಇತ್ತಿನ ಹೊತ್ತಿನಲ್ಲಿ ಧರ್ಮ ಧರ್ಮಗಳ ಹೋರಾಟದಿಂದಲೂ ನಾವು ಮಣ್ಣುಪಾಲಾದುದರಿಂದ ಭಾರತ ಸಂಸ್ಕೃತಿಯದೇನು ಪಿರಿದುತನ? ಎನ್ನಬಹುದು. ಆವ ಸಂಸ್ಕೃತಿಯಾದರು ಸಂಸ್ಕೃತಿ ಘಾತಕ ಸಂದರ್ಭಗಳೊದಗಿದಾಗ, ಅಥವಾ ಕೆಳಗಿನವರನ್ನು ಮೇಲಿನವರು ಹಿಂಡುತ್ತಿರುವಾಗ, ಆ ಸಂಸ್ಕೃತಿಯು ತಕ್ಕ ಮಾರ್ಪಾಟುಗಳನ್ನು ಹೊಂದುವಾಗ, ದೇಹ ದೋಷಗಳು ಜ್ವರವೆಸಿಸುವಂತೆ ಹೋರಾಟಗಳಾಗುವುವು. ಆ ಹೋರಾಟಗಳು ಸಂಸ್ಕೃತಿಯ ಜೀವ ಚೈತನ್ಯ ದರ್ಶಕಗಳಾಗಿವೆ. ಅದು ದೋಷಗಳನ್ನು ನೀಗಿ ನವೀನ ಚೈತನ್ಯವನ್ನು ಪಡೆವ ಬೇನೆಗಳಾಗಿವೆ. ಇದರ ಊಹಾಪೋಹದಿಂದ ಸಿಧ್ಧಾಂತ ಸ್ಥಾಪನೆಗಿದು ಇಂಬಲ್ಲ.

**ಸ್ವಕರ್ತವ್ಯ.**—ಆದುದರಿಂದ, ಕರ್ನಾಟಕ ಸಾಹಿತ್ಯವನ್ನು ಉದ್ಧರಿಸುವ ಗೌರವ ಕಾರ್ಯವನ್ನು ಕೈಕೊಂಡ ಈ ಪರಿಷತ್ತಿನ ಉದ್ಯಮ ಕ್ಷೇತ್ರವು ವಿಶಾಲವಾದುದು. ಅದು ಬರಿಯ ಶಬ್ದಾಡಂಬರದಿಂದಾಗುವುದಲ್ಲ. ನಮ್ಮ ಸಂಸ್ಕೃತಿಯ ತಳ ರಹಸ್ಯ ಗಳನ್ನು ಕಂಡು ಅವುಗಳನ್ನು ವಿಕಾಸಗೊಳಿಸುವ ಉಪಾಯಗಳನ್ನು ಕೈಕೊಳ್ಳಬೇಕು. ಪರ ಸಂಸ್ಕೃತಿಗಳಿಂದ ಪೋಷಣಾಂಶವನ್ನೂ, ಪರ ಭಾಷೆಗಳಿಂದ ತಕ್ಕ ಶಬ್ದಗಳನ್ನೂ ತೆಗೆದುಕೊಳ್ಳುವುದು ಜೀವದ್ಭಾಷಾ ಸಂಸ್ಕೃತಿಯ ಲಕ್ಷಣವಾಗಿದೆ. ಆದರೆ ಅನಾವಶ್ಯಕ ವಾದಲ್ಲಿ, ನಮ್ಮ ಸಂಸ್ಕೃತಿಯನ್ನು ಅಂದಗೆಡಿಸುವಲ್ಲಿ, ಪರ ಸಂಸ್ಕೃತಿ ಭಾಷೆಗಳ ನ್ನೆತ್ತುವುದು ಸ್ವಘಾತಕವು. ಇದನ್ನು ನೆನಪಿಡಿದು ಕೆಲವು ಸೂಚನೆಗಳನ್ನು ತಮ್ಮೆದುರಿಗಿಟ್ಟರೆ ಧಾರ್ಷ್ಟ್ಯವೆನಲಾರಿರೆಂದು ನಂಬುತ್ತೇನೆ. ನಮ್ಮ ನುಡಿಯೂ, ಆದರೊಡನೆ ನಮ್ಮ ಸಂಸ್ಕೃತಿಯೂ ಮುಂದುವರಿಯಲು ನಾವು ಹಲವು ಹಂಚಿಕೆ ಗಳನ್ನು ಹಮ್ಮಬೇಕಾಗಿಹುದು. ಇವುಗಳನ್ನು ನೆನಪಿಗೊದಗಿದಂತೆ ನಿವೇದಿಸುವೆನು.

**ಸೂಚನೆಗಳು.**—೧. ಹಸುಳರ ಶಿಕ್ಷಣ ಪ್ರಸಾರ. ಇಂದಿನ ಹಸುಳರು ಮುಂದಿನ ಹಿರಿಯರು. ನಮ್ಮ ನಾಡಿನ ಪುರೋವೃದ್ಧಿಯನ್ನನುಲಕ್ಷಿಸಿ ಹಸುಳರ ಶಿಕ್ಷಣವನ್ನು ಪ್ರಸರಿಸಬೇಕು. ಶಿಕ್ಷಣವಿಲ್ಲದೆ ಬಳೆದ ಶಿಶುಗಳು ಯಾವುದೊಂದು ದೇಶದ ಪುರೋಗತಿಗೆ ಅಡ್ಡಲಾಗುವರು. ಕರ್ನಾಟಕದಲ್ಲಿ ತಕ್ಕಷ್ಟು ಬಾಲ ಶಾಲೆ ಗಳಿಲ್ಲ; ಶಾಲೆಗಳ ಅಭ್ಯಾಸ ಕ್ರಮವು ತೃಪ್ತಿಕರವಾಗಿಲ್ಲ; ಕರ್ನಾಟಕದ ಸಂಪ್ರೀತಿ ಯನ್ನು, ಅಭಿಮಾನವನ್ನು ಬಳೆಯಿಸುವಂತಹದಿಲ್ಲ. ಶಿಕ್ಷಣವು ಸಾರ್ವತ್ರಿಕವಾಗು ವಂತೆಯೂ ಸಮಂಜಸವಾಗುವಂತೆಯೂ ಮಾಡಬೇಕು. ಕರ್ನಾಟಕ ವೀರರ ಮತ್ತು ಕರ್ನಾಟಕ ಮಹಿಳೆಯರ, ಹಾಗೂ ಮಹಾನುಭಾವರ ಚರಿತ್ರೆಗಳನ್ನು ಪಠ್ಯ ಪುಸ್ತಕ ಗಳಲ್ಲಿ ಹೆಚ್ಚು ಸೇರಿಸಬೇಕು. ಆ ಚರಿತ್ರೆಗಳನ್ನು ಗೊಂಬೆದೀಪ (Magic Lantern) ಗಳಿಂದ ವಿದ್ಯಾರ್ಥಿಗಳ ಕಣ್ಣಮುಂದಿಡಬೇಕು. ಕರ್ನಾಟಕದ ಪ್ರಸಿದ್ಧ ಸ್ಥಳಗಳಿಗೆ ಯಾತ್ರೆ ಮಾಡಿಸಬೇಕು.

೨. ಮಧ್ಯಮ ಶಿಕ್ಷಣವನ್ನು ದೇಶ ಭಾಷೆಯಲ್ಲಿ ದಾನ ಮಾಡಿದಲ್ಲದೆ ನಿಜವಾದ ಜ್ಞಾನವು ಉಂಟಾಗುವುದಿಲ್ಲ. ಈಗ ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಯಲ್ಲಿ ಕೆಲವು ವಿಷಯಗಳು ಕನ್ನಡದಲ್ಲಿ ಬರುತ್ತವೆಯಾದರೂ ಸಮಗ್ರ ಶಿಕ್ಷಣವು ಕನ್ನಡದಲ್ಲಿ ಆಗುವುದಿಲ್ಲ. ಮುಖ್ಯ ಶಿಕ್ಷಣವನ್ನು ಕನ್ನಡದಲ್ಲಿ ಇಟ್ಟು, ಉಪ ಭಾಷೆಯಾಗಿ ಇಂಗ್ಲೀಷ ಬರುವುದು ಸುಸಂಗತವು.

೩. ಪ್ರೌಢ ವಿದ್ಯೆಯು ಕನ್ನಡದಲ್ಲಿ ಕಲಿಸತಕ್ಕುದು. ಉಚ್ಚ ವಿಷಯಗಳನ್ನು ತಮ್ಮ ಭಾಷೆಯಲ್ಲಿ ಕಲಿತರೆ ಆ ವಿಷಯಗಳ ಜ್ಞಾನವನ್ನು ಜನ ಸಾಮಾನ್ಯಕ್ಕೆ ಹೇಳ ಬಹುದು ; ಪರ ಭಾಷೆಯಲ್ಲಿ ಕಲಿವುದರಿಂದ ವಿಷಯ ಜ್ಞಾನವು ಸಾಕಷ್ಟು ಆಗಲಾರದು. ಆದರೂ, ಅದರಿಂದ ಜನ ಸಾಮಾನ್ಯ ಜ್ಞಾನ ಪ್ರಸಾರಕ್ಕೆ ಸಹಾಯವಾಗಲಾರದು.

೪. ಸಾಲೆಗಳಲ್ಲಿ ಓದದ ತಮ್ಮ ತಮ್ಮ ಹೊಟ್ಟೆ ಹೊರೆಯುವವರ ಬುದ್ಧಿ ವಿಕಾಸಕ್ಕಾಗಿ ಅಲ್ಲಲ್ಲಿ ಗಮಕಿಗಳ ವ್ಯಾಖ್ಯಾನಗಳನ್ನು ಒದಗಿಸಬೇಕು. ಚಲಿತ ಪುಸ್ತಕಾಲಯಗಳನ್ನು ಏರ್ಪಡಿಸಬೇಕು.

೫. ಕನ್ನಡ ಶಬ್ದಗಳದೊಂದು ಕೋಶವನ್ನು ನಿರ್ಮಿಸಬೇಕು. ಇದಕ್ಕಾಗಿ ಕರ್ಣಾಟಕದ ಆಯಾ ಭಾಗಗಳಲ್ಲಿ ಸಂಚರಿಸಿ ಬೇರೆ ಬೇರೆ ಉದ್ಯೋಗದವರು ಬಳಸುವ ಮಾತುಗಳನ್ನು ಸಂಗ್ರಹಿಸಬೇಕು. ಆಯಾ ಉದ್ಯೋಗದವರ ಮಾತುಗಳಲ್ಲಿ ಅವುಗಳಿಗೆ ಸಹಜವಾದ ಪಾರಿಭಾಷಿಕ ವಚನಗಳು ಸುಲಭವಾಗಿ ದೊರೆಯುಬಹುದು. ಅಲ್ಲಲ್ಲಿಯ ನಾಣ್ಣುಡಿಗಳನ್ನೂ ಗಾದೆಗಳನ್ನೂ ಸಂಗ್ರಹಿಸಬೇಕು. ನಮ್ಮ ಹೆಣ್ಣು ಮಕ್ಕಳು ಮನೆವಾಳ್ತೆಯಲ್ಲಿ ಹಾಡುವ ಹಾಡುಗಳನ್ನು ಸಂಗ್ರಹಿಸಬೇಕು. ಇದರಿಂದ ಇಂಪಾದ ಕನ್ನಡ ಮಾತುಗಳ ಸಂಗ್ರಹವಾಗುವುದು. ಮನೆ ಮನೆಯಲ್ಲಿ ಹಾಡುವ ಭಕ್ತಿ ಪದಗಳನ್ನು ಕೂಡಿಸಬೇಕು. ಕಲಿಯದವರೆಂದು ನಾವು ಭಾವಿಸುವ ಹೆಣ್ಣು ಮಕ್ಕಳಲ್ಲಿಯೂ ಹಳ್ಳಿಗಾಡಿನವರಲ್ಲಿಯೂ ಅಚ್ಚಗನ್ನಡ ಶಬ್ದಗಳು ಹೆಚ್ಚು ದೊರೆಯು ವುವು. ಇದನ್ನೆಲ್ಲ ಅನುಲಕ್ಷಿಸಿ ಕೋಶವನ್ನು ರಚಿಸುವುದೊಂದು ವಿದ್ವತ್ಸಮಿತಿಯಾಗ ಬೇಕು.

೬. ಪಾರಿಭಾಷಿಕ ಶಬ್ದಗಳನ್ನು ಆಯಾ ವಿಜ್ಞಾನಮಯ ಗ್ರಂಥಗಳ ರಚನೆಗಾಗಿ ಕಲ್ಪಿಸಬೇಕು. ಇದಕ್ಕಾಗಿ ಭಾಷೆಯ ಜ್ಞಾನವೂ ಆಯಾ ವಿಷಯಗಳ ಸಂಪೂರ್ಣ ಜ್ಞಾನವೂ ಉಳ್ಳ ವಿಖ್ಯಾತರಾದ ವಿದ್ವಾಂಸರ ಸಮಿತಿಯೊಂದನ್ನು ನಿರ್ಮಿಸಬೇಕು.

೭. ನಮ್ಮ ಉಚ್ಚ ಶಿಕ್ಷಣದ ಕ್ರಮದಲ್ಲಿ ಕರ್ಣಾಟಕ ಭಾಷೆಯ ಒಡಹುಟ್ಟು ಗಳಾದ ತಮಿಳಾಂಧ್ರ ಭಾಷೆಗಳ ಅಭ್ಯಾಸವು ಐಚ್ಛಿಕವಾಗಿ ಇರಬೇಕು. ಈ ಭಾಷೆಗಳ ತುಲನಾ ನಿರೀಕ್ಷಣದಿಂದ ನಾವು ಹೊಸ ಶಬ್ದಗಳನ್ನು ಸಂಪಾದಿಸಲು ಶಕ್ಯವಾಗುವುದು; ಸಂಸ್ಕೃತಾಭ್ಯಾಸವಂತೂ ಅಪರಿಹಾರ್ಯವು.

೮. ಹೊಸ ಶಬ್ದಗಳ ರಚನೆಯಲ್ಲಿ ಸಂಸ್ಕೃತ ದ್ರಾವಿಡ ಭಾಷೆಗಳ ವ್ಯಾಕರಣ ಜ್ಞಾನದಿಂದ ಶಬ್ದ ಸಾಧನೆಯ ತದ್ಧಿತ, ಕೃದಂತ ಮೊದಲಾದ ಪ್ರಕರಣಗಳಿಂದ ನೆರವು ತೆಗೆದುಕೊಳ್ಳಬೇಕು. ತದ್ಭವ ಪ್ರಕರಣಗಳನ್ನು ಅರಿತಿರಬೇಕು. ಆದರಿಂದ, ಅವಶ್ಯ ವಾದಲ್ಲಿ ಪರಭಾಷೆಯ ಶಬ್ದಗಳನ್ನು ಕನ್ನಡಿಸಬರುವುದು.

೯. ಸಾಹಿತ್ಯ ಪರಿಷತ್ತಿನ ಶಾಖೆಗಳು ಕನ್ನಡ ನಾಡಿನಲ್ಲೆಲ್ಲ ಹಬ್ಬಬೇಕು. ಈ ಶಾಖೆಗಳು ಪರಸ್ಪರ ಸಹಕಾರದಿಂದ ವರ್ತಿಸುತ್ತ ಮೇಲೆ ಹೇಳಿದ ಕಾರ್ಯಗಳನ್ನು ಸಾಗಿಸಬೇಕು.

೧೦. ಜನಸಾಹಿತ್ಯವನ್ನು ಉತ್ತೇಜನಗೊಳಿಸಬೇಕು. ನಮ್ಮ ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳಲ್ಲಿ ಎಲ್ಲ ಕಾರ್ಯವೂ ಕನ್ನಡದಲ್ಲಿ ಜರಗಬೇಕು.

೧೧. ಕರ್ಣಾಟಕದ ಇತಿಹಾಸ ಜ್ಞಾನವನ್ನು ಪ್ರಸಾರಗೆಯ್ಯಬೇಕು. ಧಾರವಾಡದ ಇತಿಹಾಸ ಮಂಡಲವು ಈ ವಿಷಯದಲ್ಲಿ ಶ್ಲಾಘನೀಯವಾಗಿದೆ. ಎಲ್ಲ ಕನ್ನಡಿಗರೂ ಆ ಸಂಸ್ಥೆಯನ್ನು ಬಲಿಸುವುದಕ್ಕೆ ಯೋಗ್ಯ ಸಹಾಯವನ್ನು ಮಾಡಬೇಕು. ಅಂತಹ ಇತರ ಸಂಸ್ಥೆಗಳೂ ಅಲ್ಲಲ್ಲಿ ಹುಟ್ಟಲು ಪ್ರಯತ್ನ ಪಡಬೇಕು.

೧೨. ನಮ್ಮ ಗ್ರಂಥ ಭಾಂಡಾರವು ಅಪಾರವದೆ. ಶಿವಶರಣರ ವಚನಗಳೂ ವೈಷ್ಣವ ದಾಸ ಪದಗಳೂ ಪ್ರಕಾಶಗಾಣದೆ ಉಳಿದಿರುವುವು. ಈಗ ಪ್ರಕಟವಾದ ಗ್ರಂಥಗಳು ಆ ಭಾಂಡಾರದ ಒಂದು ಅಲ್ಪಾಂಶವಾಗಿವೆ. ಇವುಗಳನ್ನು ಪ್ರಸಾರಗೊಳಿಸುವವರಿಗೆ ಸಾಕಷ್ಟು ಉತ್ತೇಜನವಿಲ್ಲ. ನಮ್ಮ ಪದವೀಧರರು ಕೆಲಸಕ್ಕೆ ಬಾರದ ವ್ಯಸನಗಳಲ್ಲಿ ವ್ಯಯ ಮಾಡುವ ಹಣದ ಏನಿಕೆ ಪಾಲನ್ನು ಗ್ರಂಥ ಪ್ರಕಾಶಕರ ಸಹಾಯಕ್ಕೆ ವಿನಿಯೋಗಿಸಿದರೆ ದೊಡ್ಡ ಕಾರ್ಯವಾಗಬಹುದು. ಕರ್ಣಾಟಕ ಸಂಸ್ಕೃತಿಯು ಈಗಿನ ಪರ ಸಂಸ್ಕೃತಿಯ ಹೊಡೆತಕ್ಕೆ ಸಿಲುಕಿ ನಾವು ನಮ್ಮ ಹಿರಿಯರ ನಿಚ್ಚಳದ ಬಾಳುವೆಗೆ ಎರವಾಗಬಾರದಾದರೆ ಇದು ಅತ್ಯಾವಶ್ಯಕವು.

೧೩. ನಾವು ದಿನ ಚರ್ಯದಲ್ಲಿ ಕನ್ನಡ ನಾಡಿನ ಒಡವೆಗಳನ್ನು ಬಳಸಬೇಕು. ನಾಡಿನ ಅಭಿಮಾನಕ್ಕೆ ಇದೊಂದು ಮಹಾ ಸಾಧನವು. ಅಭಿಮಾನವಿಲ್ಲದೆ ನಾಡಿನ ಕಾರ್ಯವನ್ನು ಮಾಡಲಾರೆವು. ಉದ್ಯೋಗ ವ್ಯವಹಾರಗಳ ಬಳೆಗೆಯಿಂದ ನಮ್ಮ ಆರ್ಥಿಕ ಸ್ಥಿತಿಯು ಚೆನ್ನಾಗಿ ನಮ್ಮ ಪ್ರಾಗತಿಕ ಕಾರ್ಯಗಳಿಗೆ ನೆರವಾಗುವುದು.

೧೪. ಕರ್ಣಾಟಕವು ಸಾಂಗ ಸಮಗ್ರ(ಐಕ್ಯ)ವಾಗಲು ಯತ್ನಿಸಬೇಕು. ನಮ್ಮ ನಾಡು ಅಲ್ಲಲ್ಲಿ ಹರಿದು ಮುರಿದು ಹೋದುದರಿಂದ ಎಲ್ಲ ಬಗೆಗಳಿಂದ ಬಹಳ ಹಾನಿಯಾಗಿದೆ. ಭಿನ್ನ ಭಿನ್ನ ರಾಜ್ಯಾಂತರ್ಗತವಾದ ಕನ್ನಡ ನಾಡುಗಳನ್ನು ಒಂದುಗೂಡಿಸುವುದು ಅಶಕ್ಯವಾಗಿದೆಯಾದರೂ, ಒಂದೊಂದು ರಾಜ್ಯದಲ್ಲಿಯ ಕನ್ನಡ ನಾಡನ್ನು ಸಮಗ್ರೀಕರಿಸಲಿಕ್ಕೆ ಯಾವ ತೊಂದರೆಯೂ ಇರಲಾರದು. ರಾಜ್ಯ ಸೂತ್ರದಲ್ಲಿ ಕನ್ನಡ ನಾಡು ಸಮಗ್ರವಾಗಲು ಯಾವ ತೊಂದರೆಗಳು ಇರಬಹುದಾದರೂ, ಸಾಂಸ್ಕೃತಿಕ ಸಮಗ್ರತೆಗೆ ಇರಲಾರವು. ಮೈಸೂರ ವಿಶ್ವ ವಿದ್ಯಾ ಪೀಠವನ್ನು ನಮ್ಮ ಕರ್ಣಾಟಕದ ವಿಶ್ವ ವಿದ್ಯಾ ಪೀಠವಾಗುವಂತೆ ಯೋಜಿಸುವುದು ಸುಲಭವೆಂದು ಭಾವಿಸುತ್ತೇನೆ.

೧೫. ದಕ್ಷಿಣ ಮಹಾರಾಷ್ಟ್ರವೆನ್ನುವ ಉತ್ತರ ಕರ್ಣಾಟಕದ ಸಂಸ್ಥಾನಗಳಲ್ಲಿ ನ್ಯಾಯಾಧಿಕರಣಗಳ ಮತ್ತು ರಾಜ್ಯ ನಿಯಂತ್ರಣದ (Courts & Administration) ಭಾಷೆಯು ಕನ್ನಡವಾಗಬೇಕು.

೧೬. ಕಡೆಯದಾದರೂ ಕಡಿಮೆಯದಲ್ಲದ ಒಂದು ಮಾತು: ನಾವು ದಿನೇ ದಿನೇ ಕ್ಷೀಣಾಂಗರಾಗುತ್ತಿರುವೆವು. ಶರೀರ ಕ್ಷಯ ಹೇತುಗಳಾದ ವ್ಯಸನಗಳು ಇಂಬು ಗೊಳ್ಳದಂತೆ, ನೀತಿಯು ಬಳೆಯುವಂತೆ, ನಮ್ಮ ಬಾಲಾದಿ ಪ್ರೌಢಾಂತ ವಿದ್ಯಾ ಮಂದಿರಗಳಲ್ಲಿ ಶಾರೀರಿಕ ನೈತಿಕ ಶಿಕ್ಷಣಗಳನ್ನು ಹೊಂದಿಸಬೇಕು.

**ಅಧ್ಯಕ್ಷ ಗುಣ ವರ್ಣನೆ.**—ಇಂತಿವು ಮೊದಲಾದ ವಿಷಯಗಳನ್ನು ತಾವು ಚರ್ಚಿಸಿ ಮುಂದಿನ ಕಾರ್ಯದ ನಿರ್ಧಾರಣೆಯನ್ನು ಮಾಡಬೇಕಾಗಿದೆ. ಶಾಂತರೂ ಅನುಭವಶೀಲರೂ ಲೋಕಾನುಭವಿಗಳೂ ಪೂರ್ವಾಪರ ಸಂಸ್ಕೃತಿಗಳನ್ನು ತಿಳಿದವರೂ ತಮ್ಮ ಈ ಸಮ್ಮೇಲನಕ್ಕೆ ಅಧ್ಯಕ್ಷರು ದೊರೆತಿಹರು. ಶ್ರೀಯುತ ವಿದ್ವಾನ್ ವೇ. ವೈ. ನಾಗೇಶ ಶಾಸ್ತ್ರಿಗಳು ಸರ್ವದರ್ಶನ ತೀರ್ಥ ಕವಿಗಳಾಗಿರುವರು. ಕವಿಯೆಂದರೆ ಕ್ರಾಂತ ದರ್ಶಿ. ಕವಿಯ ಕಣ್ಣಿಗೆ ಬೀಳದ ಒಡವೆಯಿಲ್ಲ. 'ರವಿ ಕಾಣದುದನ್ನು ಕವಿ ಕಾಣ್ಬ' ನೆಂದು ಲೋಕೋಕ್ತಿಯುಂಟು. ಶ್ರೀಯುತ ನಾಗೇಶ ಶಾಸ್ತ್ರಿಗಳು ಅಧ್ಯಕ್ಷರಾಗಬೇಕೆಂದು ನಾವು ಬಿನ್ನವಿಸಿದಾಗ ಅತ್ಯಲ್ಪ ವೇಳೆಯು ಉಳಿದಿದ್ದಿತು. ಕಾರ್ಯ ಗೌರವ ಮಾನದಿಂದ ತಮ್ಮ ಮೇಲಿರುವ ಭಾರವನ್ನು ತಿಳಿದು ಅದನ್ನು ನಿರ್ವಹಿಸಲು ಉದಾರತೆಯಿಂದ ಒಪ್ಪಿಕೊಂಡರು. ಇದು ಇವರ ದೇಶ ಸೇವಾ ತತ್ಪರತೆಯ ದರ್ಶಕವಾಗಿದೆ. ಅವರನ್ನು ಅಧ್ಯಕ್ಷರನ್ನಾಗಿ ಆರಿಸಿ ಮುಂದಿನ ಕಾರ್ಯಕ್ಕೆ ಅನುವಾಗಿರೆಂದು ಬಿನ್ನಯಿಸುವೆನು.

ಅಥಿತಿಗಳೆ! ಸ್ವಾಗತಿಕ ಮಂಡಲವು ತಮ್ಮ ಆದರೋಪಚಾರವನ್ನು ಎಸಗುವಲ್ಲಿ ತಪ್ಪುಗಳಾಗಬಹುದು. ತಮ್ಮ ಹದುಳನ್ನು ಒದಗಿಸುವ ಬಗೆಯಲ್ಲಿ ಕೊರತೆಗಳಿರ ಬಹುದು. ನಮ್ಮ ಒಸೆವೆಶಿಗರು (Volunteers) ಬಾಲರಿರುವುದರಿಂದ ಸಾಕಷ್ಟು ತೃಪ್ತಿಕರವಾಗಿ ತಮ್ಮ ಸೇವೆಯಾಗಲಿಕ್ಕಿಲ್ಲ. ಈ ನ್ಯೂನತೆಗಳು ಪ್ರೇಮ ಭಾವ ನ್ಯೂನತೆಯಿಂದಲ್ಲ; ಅನನುಭವ ಮೂಲವೆಂದು ನಾನು ನಿವೇದಿಸಬೇಕಾಗಿಲ್ಲ.

## ಪರಿಸಮಾಪ್ತಿ

ಮೋದಂತೇ ತಾಃ ಕಮಲ ವನಿಕಾ ಭಾನು ಬಿಂಬೋದ್ಗಮೇನ
ಜ್ಯೋತ್ಸ್ನಾ ಕೃತ್ಸ್ನಾ ಭವತಿ ಕುಮುದಾನಾಮ್ ವಿಕಾಸೈಕ ಹೇತುಃ ।
ಚೇತೋಹ್ಲಾದ ಪ್ರಮುದಸಿ ಭವತ್ಸಂಗಮೇನಾಸ್ಮದೀಯಂ
ಧೀರಾ ದೂರಾಧ್ವಗಮಿ ಸಹನಾಃ ಸ್ವಾಗತಂ ವ್ಯಾಹರಾಮಃ ॥

ಅಮೃತ ಜಲ ನಾನಾಂಭೋಜಾಂಕಾಪಗಾ ಪರಿಶೋಭಿತಾ
ವಿಪುಲ ಫಲಧೈರ್ವರ್ಷೋದ್ಯೈರಾವಿರಾಜ ಸು ವಸುಂಧರಾ ।
ಸಕಲ ಸುಕಲಾಭಿಜ್ಞೈಃ ಪ್ರಜ್ಞೈಃ ಪರಿಷ್ಕೃತ ಪಾರ್ಷದಾ
ಭವತು ಸುಘನಾರಂಭಾ ಕರ್ಣಾಟಕಾವನಿ ಮಂಡಲೀ ॥

ಎಂದು ಮತ್ತೊಮ್ಮೆ ಸ್ವಾಗತವನ್ನು ಬಯಸಿ ನಮ್ಮ ದೇಶದ ಏಳ್ಗೆಗಾಗಿ ಪರಶಿವ ನನುಗ್ರಹವನ್ನು ಸಂಪ್ರಾರ್ಥಿಸಿ ವಿರಮಿಸುವೆನು.

---

## ಸಮ್ಮೇಳನದ ಅಧ್ಯಕ್ಷರ ಭಾಷಣ

ಕರ್ಣಾಟಕ ವಾಗ್ದೇವಿಯ ಪ್ರೀತಿ ಪಾತ್ರರಾದ ನನ್ನ ಪ್ರಿಯ ಸೋದರಿ ಸೋದರರೇ!

ಈ ದಿನದ ಸಮ್ಮೇಳನದ ಅಧ್ಯಕ್ಷ ಸ್ಥಾನಕ್ಕೆ ನನ್ನನ್ನು ಕರೆದು ಸಾಹಿತ್ಯ ಪರಿಷತ್ತಿನವರು ನನ್ನ ಜಡ ಜೀವನದಲ್ಲಿ ಒಂದು ಉತ್ಸಾಹವನ್ನು ತುಂಬಿರುವರು. ಆದರೆ ಈ ಅಧ್ಯಕ್ಷ ಸ್ಥಾನವು ಕರ್ಣಾಟಕ ರಾಜಾನ್ವಯ ಭೂಷಣರೂ ಕವಿರಾಜ ಭೂಷಣರೂ ಆದ ಲಿಂಗರಾಜ ಅರಸರಿಂದ ಭೂಷಿತವಾಗಿದ್ದರೆ, ನನ್ನೀ ಉತ್ಸಾಹವು ದ್ವಿಗುಣಿತವಾಗುತ್ತಿದ್ದಿತು; ಇಷ್ಟೇ ಅಲ್ಲ, ಪರಿಷತ್ತಿಗೊಂದು ನೂತನ ಚೇತನ ವುಂಟಾಗುತ್ತಿದ್ದಿತು. ಕವಿರಾಜ ಭೂಷಣರ ಅಸ್ವಸ್ಥತೆಯ ಮೂಲಕ ಈ ಸ್ಥಾನವನ್ನು ನಾನು ಸ್ವೀಕರಿಸಬೇಕಾಯಿತು. ಈ ಸ್ಥಾನವನ್ನಲಂಕರಿಸುವ ಬುದ್ಧಿ ವೃದ್ಧರೂ ವಯೋ ವೃದ್ಧರೂ ಆದ ಮಹನೀಯರು ನಮ್ಮ ನಾಡಿನಲ್ಲಿ ಅನೇಕರಿರುವರು. ಅವರನ್ನುಳಿದು ನನ್ನನ್ನು ಕರೆಯಲು ಪರಿಷತ್ತಿನವರಿಗೊಂದು ಕುತೂಹಲವಿದೆ: ಕರ್ಣಾಟಕದ ಇತರ ಪ್ರಾಂತದವರಿಗಿಂತಲೂ ಬಳ್ಳಾರಿ ಮಂಡಲದ ಕನ್ನಡಿಗರು ಹೆಚ್ಚು ಹಿಂದುಳಿದಿರುವರು. ಅವರೂ ನಮ್ಮಂತೆಯೇ ಕರ್ಣಾಟಕ ವಾಗ್ದೇವಿಯ ಸೇವೆಯಲ್ಲಿ ಮುಂದುವರಿಯಲೆಂಬುದೇ ಆ ಕುತೂಹಲವು. ಈ ಕುತೂಹಲವನ್ನು ಸಫಲಗೊಳಿಸುವ ಯೋಗ್ಯತೆಯು ನನ್ನಲ್ಲಿಲ್ಲವೆಂಬುದನ್ನು ನಾನು ಬಲ್ಲೆನು. ಆದರೂ ಈ ಸ್ಥಾನವನ್ನು ಸ್ವೀಕರಿಸಲು ಒಪ್ಪಿಕೊಳ್ಳುವ ಸಮಯದಲ್ಲಿ ನಾನು ತಿಳಿದು ಕೊಂಡುದಿಷ್ಟೇ: ಪರಿಷತ್ತಿನ ಅಧ್ಯಕ್ಷ ಸ್ಥಾನವೆಂದರೆ ಕರ್ಣಾಟಕ ವಾಗ್ದೇವಿಯ ಸಿಂಹ ಪೀಠವು. ಯಾವಾಗಲೂ ಈ ಪೀಠವನ್ನಲಂಕರಿಸತಕ್ಕವಳು ವಾಗ್ದೇವಿಯೇ. ನಾನು ದೇವಿಯ ದೂತನಾಗಿ ಆ ಮಾತೆಯು ನುಡಿಸಿದ ಒಂದೆರಡು ಮಾತುಗಳನ್ನು ಹೇಳಿಬಿಟ್ಟರಾಯಿತೆಂದು. ಈ ಮಾತು ಔಪಚಾರಿಕವಲ್ಲ, ಅನ್ವರ್ಥಕವು.

ಮಹೋದಯರೆ! ವಾಗ್ದೇವಿಯು ನನ್ನ ಬಗೆಗಿತ್ತ ವಿಷಯವನ್ನು ಈಗ ತಮ್ಮ ಮುಂದೆ ವಿವರಿಸಲು ಪ್ರಯತ್ನಿಸುವೆನು. ಇಂದಿನ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಸಮ್ಮೇಳನದಲ್ಲಿ, ಕರ್ಣಾಟ ಮತ್ತು ಕರ್ಣಾಟಕ ಸಾಹಿತ್ಯದ ವೈಶಿಷ್ಟ್ಯ, ಈ ಕರ್ಣಾಟಕ ಸಾಹಿತ್ಯ ಪರಿಷತ್ತಿನಿಂದುಂಟಾಗುವ ಪ್ರಯೋಜನ—ಈ ರೀತಿಯಾಗಿ ವಿಷಯ ವಿಭಜನ ವನ್ನು ಮಾಡಿಕೊಂಡು ಮಾತನಾಡುವೆನು. ನಿಮ್ಮ ಮಹತ್ತರವಾದ ವೇಳೆಯನ್ನು ನನ್ನ ನೀರಸವಾದ ಭಾಷಣಕ್ಕಾಗಿ ಕಳೆಯತಕ್ಕ ಸಹನ ಗುಣವು ನಿಮ್ಮಲ್ಲಿರುವುದೆಂದು ನಂಬಿ ನನ್ನ ಭಾಷಣವನ್ನಾರಂಭಿಸುವೆನು.

**ಕರ್ಣಾಟಕದ ವೈಶಿಷ್ಟ್ಯ.**—ಕರ್ಣಾಟಕದ ವೈಶಿಷ್ಟ್ಯವನ್ನು ನಾವು ಚೆನ್ನಾಗಿ ತಿಳಿದುಕೊಳ್ಳಬೇಕಾದರೆ, ಮೊದಲು ಕನ್ನಡಿಗರ ಪ್ರಾಚೀನತೆ ಮೊದಲಾದುದರ ತಿಳಿವಾಗಬೇಕು. ಕನ್ನಡವು ದ್ರಾವಿಡ ಭಾಷಾ ವರ್ಗಕ್ಕೆ ಸೇರಿದುದೆಂಬುದು ಕನ್ನಡ ಭಾಷಾ ಚರಿತ್ರದಿಂದ ತಮ್ಮಲ್ಲೆರಿಗೂ ತಿಳಿದಿರುವುದಷ್ಟೆ! ದ್ರಾವಿಡರ ವಿಷಯಕ್ಕೆ ನಮ್ಮಲ್ಲಿ ಅನೇಕ ಕಲ್ಪನೆಗಳು ರೂಢವಾಗಿರುವುವು. "ದ್ರಾವಿಡರೆಂದರೆ ದಕ್ಷಿಣದ

ಮೂಲ ನಿವಾಸಿಗಳು; ನಾಗರಿಕತೆಯ ಕಲ್ಪನೆಯಿಲ್ಲದ ಕಾಡು ಜನರು; ಭೂತ ಸರ್ಪಾದಿಗಳನ್ನು ಪೂಜಿಸುವವರು; ಇವರ ವಿಚಾರಗಳು ಕಾಡು, ಆಚಾರಗಳು ಕ್ರೂರ'' ಇತ್ಯಾದಿ ಕಲ್ಪನೆಗಳನ್ನು ವಿದೇಶೀಯ ಚರಿತ್ರಕಾರರು ನಮಗೆ ಕಲಿಸಿರುವರು. ಆದರೆ, ಪ್ರಾಚೀನ ದ್ರಾವಿಡ ವಾಙ್ಮಯವನ್ನು ಪರಿಶೀಲಿಸಿದರೆ ದ್ರಾವಿಡರ ಸಂಸ್ಕೃತಿಯ ವಿಷಯವಾಗಿ ಅನೇಕ ನಿಜವಾದ ಸಂಗತಿಗಳು ತಿಳಿದುಬರುವುವು.

ವೇದ ಕಾಲದ ಆರ್ಯರು ಈ ದ್ರಾವಿಡರನ್ನು ಮೂಲೆಗೊತ್ತಿ, ಅವರ ಸಂಸ್ಕೃತಿಯನ್ನು ನಿರ್ಮೂಲ ಮಾಡಿ, ತಮ್ಮ ಸಂಸ್ಕೃತಿಯನ್ನು ಮುಂದುವರಿಸಿದರೆಂದು ದೇಶೀಯ ವಿದೇಶೀಯ ಪಂಡಿತರ ಊಹೆಯಾಗಿದೆ. ಆದರೆ, ದ್ರಾವಿಡರ ಸಂಸ್ಕೃತಿಯ ಕುರುಹುಗಳನ್ನು ವಿಂಗಡಿಸಿ ಗುರುತಿಸಲು ಅನೇಕರು ಸಾಹಸಪಡುತ್ತಿರುವರು. ದ್ರಾವಿಡರ ಮತ್ತು ಆರ್ಯರ ಸಂಸ್ಕೃತಿಗಳ ಸತ್ಯಪ್ರಾಯವಾದ ಚಿತ್ರವನ್ನು ತೆಗೆಯುವ ಈ ಕಾರ್ಯವು ಅಷ್ಟು ಸುಗಮವಲ್ಲ. ಆದರೂ, ದ್ರಾವಿಡ ವಾಙ್ಮಯಾಭ್ಯಾಸಿಗಳಲ್ಲಿ ಅನೇಕರು ಹೀಗೆ ಹೇಳುವರು:—

ವೇದ ಕಾಲದ ಆರ್ಯರು ದಕ್ಷಿಣಕ್ಕೆ ಬರುವ ಪೂರ್ವದಲ್ಲಿ ದ್ರಾವಿಡರೊಳಗೆ ಶೈವ, ವೈಷ್ಣವಗಳೆಂಬೆರಡು ಮುಖ್ಯ ಪಂಗಡಗಳಿದ್ದವು. ಇವೆರಡು ಪಂಗಡಗಳೂ ಕೂಡಿ ನಡೆಯುತ್ತಿರಲಿಲ್ಲ; ಆಚಾರ ಸಂಪ್ರದಾಯಗಳಲ್ಲಿ ಮಾತ್ರ ಹೋಲಿಕೆಯಿದ್ದಿತು. ಎರಡೂ ಪಂಗಡಗಳೂ ಸಂಪೂರ್ಣವಾಗಿ ಸಗುಣ ಮೂರ್ತಿಯನ್ನು ಪೂಜಿಸತಕ್ಕವುಗಳಾಗಿದ್ದವು. ಅವರಿಗೊಂದು ವಿಶಿಷ್ಟವಾದ ಧಾರ್ಮಿಕ ವಾಙ್ಮಯವಿದ್ದಿತು. ಅವರ ಆರಾಧ್ಯ ದೇವತೆಗಳಾದ ಶಿವ ವಿಷ್ಣುಗಳ ವಿಷಯವಾಗಿ ಅನೇಕ ಕಥೆಗಳು ಅವರಲ್ಲಿ ನೆಲೆಗೊಂಡಿದ್ದವು. ಅವರ ಅನೇಕ ರಾಜರು ಪ್ರಬಲ ಸೇನಾಯುತರಾಗಿ ಪ್ರಚಂಡ ಸಾಮ್ರಾಜ್ಯವನ್ನು ನಡೆಸುತ್ತಿದ್ದರು. ಉತ್ತರದಿಂದ ಬರುವ ಆರ್ಯರ ಅನೇಕ ದಾಳಿಗಳನ್ನು ಅವರು ತಡೆದು ಹಿಂದಕ್ಕಟ್ಟಿದರು. ಅಶೋಕನ ಪ್ರಬಲ ಸೇನೆಗೂ ಕೂಡ ತೆಲುಗು, ಕನ್ನಡ ನಾಡುಗಳ ಪ್ರಾಂತವನ್ನು ದಾಟಿ ಮುಂದುವರಿಯಲಾಗಲಿಲ್ಲ. ತಮಿಳ ಚೇರರ ಪ್ರಾಂತಗಳಂತೂ ಅಜೇಯಗಳಾಗಿದ್ದವು. ಬೌದ್ಧ ದೀಕ್ಷೆಯನ್ನು ವಹಿಸಿದ ಮೇಲೆ ಅಶೋಕನು ರಾಜ್ಯ ವಿಸ್ತಾರದ ಹಂಗುದೊರೆದನು. ಆದರೆ, ಇದೇ ಸಮಯಕ್ಕೆ ಬೌದ್ಧ, ಜೈನ ಭಿಕ್ಷುಗಳು ವಿಂಧ್ಯೆಯನ್ನಿಳಿದು ದಕ್ಷಿಣದಲ್ಲಿ ತಮ್ಮ ಧರ್ಮ ಪ್ರಸಾರವನ್ನು ಬಲವಾಗಿ ನಡೆಸಿದರು. ಇದಕ್ಕೆ ಮೊದಲೇ ಅಧ್ಯಾಪಕ ವೃತ್ತಿಗಾಗಿ ಆರ್ಯರನೇಕರು ದಕ್ಷಿಣಕ್ಕಿಳಿದು ಬಂದಿದ್ದರು. ಅವರು ತಮ್ಮ ಪ್ರತಿ ಪಕ್ಷಿಗಳಾದ ಜೈನ ಬೌದ್ಧರನ್ನು ಎದುರಿಸಲು ದ್ರಾವಿಡರಲ್ಲಿಯ ಶೈವ ವೈಷ್ಣವ ಪಂಥಗಳಲ್ಲಿ ಸೇರಿಕೊಂಡು ತನ್ಮಯರಾದರು.

ದ್ರಾವಿಡರ ಸಂಸ್ಕಾರದಿಂದ ವೈದಿಕ ತತ್ತ್ವಗಳಲ್ಲಿಯೂ ಕೆಲವು ಮಾರ್ಪಾಡುಗಳಾದದ್ದು ಕಂಡುಬರುತ್ತದೆ. ವೈದಿಕ ಋಷಿಗಳಿಗೂ ಅವರ ದೇವತೆಗಳಿಗೂ ಇರುವ ಸಂಬಂಧದಲ್ಲಿ ಕೆಲಮಟ್ಟಿಗೆ ವಾಣಿಜ್ಯ ವೃತ್ತಿಯ ಛಾಯೆಯು ತೋರುವುದು. "ನಾನು ನಿನಗೆ ಇಂತಹ ಇಂತಿಷ್ಟು ಆಹುತಿಗಳನ್ನರ್ಪಿಸುವೆನು. ನೀನು ನನಗೆ ಇಂತಿಷ್ಟು

ಸುಖ ಸೌಕರ್ಯವನ್ನು ಕೊಡು" ಎಂದು ಅವರು ಕೇಳುವುದುಂಟು. ದ್ರಾವಿಡರ ದೇವ ಭಕ್ತ ಸಂಬಂಧವು ಸೇವ್ಯ ಸೇವಕ ಭಾವವಾಗಿರುವುದು. ತಾನು ದಾಸನು, ತನ್ನ ದೇವನು ತನಗೆ ಸಂಪೂರ್ಣವಾಗಿ ಸ್ವಾಮಿಯು ಎಂಬುದು ಅವರ ಭಾವನೆ. ಕರ್ಮ ಫಲ ತ್ಯಾಗಿಗಳಾಗಿ ಭಕ್ತಿಯಿಂದ ಪರಮಾತ್ಮನನ್ನು ಪೂಜಿಸುವ ಕಲ್ಪನೆಯನ್ನು ದ್ರಾವಿಡರಿಂದ ಆರ್ಯರು ಕಲಿತುಕೊಂಡರು. ಭಕ್ತಿ ತತ್ತ್ವವಂತೂ ಕೇವಲ ದ್ರಾವಿಡರದು. ಈ ಭಕ್ತಿ ಲತೆಯು ದ್ರಾವಿಡರ ಪ್ರಾಚೀನ ಧಾರ್ಮಿಕ ವಾಙ್ಮಯದಲ್ಲಿ ಅಂಕುರಿಸಿ, ಸಂಸ್ಕೃತದ ಆಗಮೋಪನಿಷತ್ತುಗಳಲ್ಲಿ ಪಲ್ಲವಿಸಿ, ಬಸವಾದಿ ಪ್ರಮಥರ ವಚನ ವಾಙ್ಮಯದಲ್ಲಿಯೂ ವೈಷ್ಣವ ದಾಸರ ಕೀರ್ತನೆಗಳಲ್ಲಿಯೂ ಹೂಬಿಟ್ಟು ತನ್ನ ಸುಗಂಧವನ್ನು ದಶ ದಿಕ್ಕುಗಳಲ್ಲಿಯೂ ತುಂಬಿಬಿಟ್ಟಿತು. ಆದುದರಿಂದಲೇ ಕರ್ನಾಟಕವು ಭಕ್ತಿಯ ಜನ್ಮ ಭೂಮಿಯೆಂದು ಕೀರ್ತಿಗೊಂಡುದು. ತೀರ್ಥ ಕ್ಷೇತ್ರ ಯಾತ್ರೆಗಳೂ, ದೇವಾಲಯಾದಿ ನಿರ್ಮಾಣವೂ, ಅನೇಕ ಹಬ್ಬಗಳೂ, ದೇವತೋತ್ಸವಾದಿಗಳೂ ದ್ರಾವಿಡರವಾಗಿರುವವು. ಇಷ್ಟೇ ಅಲ್ಲ; ಸಮಾಜದ ಹಿತಾಹಿತಗಳನ್ನ ನುಲಕ್ಷಿಸಿ ವಿಧಿ ನಿಷೇಧಗಳನ್ನು ಕಂಡುಹಿಡಿದು ಸಮಾಜದ ಶ್ರೇಷ್ಠರು ಹಾಕಿಕೊಟ್ಟ ಕರ್ಮಗಳನ್ನು ಮಾಡಬೇಕೆಂಬುದು ಶೈವ ವೈಷ್ಣವ ಪಂಥಗಳ ಅನೇಕ ಗ್ರಂಥಗಳಲ್ಲಿ ಕಂಡು ಬರುವುದು. ಧರ್ಮದಲ್ಲಿ ಸೇರಿದ ಈ ಸಮಾಜ ಹಿತದ ಕಲ್ಪನೆಯು ಮುಂದೆ ಸಮಾಜದ ಸು ಸಂಘಟನೆಗೂ ಸು ಸ್ಥಿತಿಗೂ ಸಹಕಾರಿಯಾಯಿತು. ಬರಬರುತ್ತ ಆರ್ಯ ದ್ರಾವಿಡರ ಸಂಸ್ಕೃತಿಗಳ ಸಮ್ಮೇಳನವಾಗಿ ಈಗಿನ ಹಿಂದೂ ಸಂಸ್ಕೃತಿಯುಂಟಾಗಿರುವುದು.

ದ್ರಾವಿಡ ವಾಙ್ಮಯಾಭ್ಯಾಸಿಗಳ ಈ ವಿಷಯದ ನಿರ್ಣಯವು ಪ್ರಕೃತವಲ್ಲ. ದ್ರಾವಿಡರ ಪ್ರಾಚೀನ ಸಂಸ್ಕೃತಿಯ ಪೂರ್ಣ ಪರಿಚಯಕ್ಕೆ ಸಾಕಾದಷ್ಟು ಚರಿತ್ರ ಸಾಮಗ್ರಿಯು ನಮ್ಮಲ್ಲಿ ಇನ್ನೂ ಸಿದ್ಧವಾಗಿಲ್ಲ. ನಮಗೆ ಬೇಕಾದುದು, ಆರ್ಯರು ದಕ್ಷಿಣಕ್ಕಿಳಿದು ಬರುವುದಕ್ಕೆ ಮುಂಚೆ ದ್ರಾವಿಡರ ಸಂಸ್ಕೃತಿಯೊಂದಿದ್ದಿತು. ಆ ಸಂಸ್ಕೃತಿಗೆ ತಕ್ಕ ವಾಙ್ಮಯವೂ ಇದ್ದಿತು. ಆ ವಾಙ್ಮಯದಲ್ಲಿ ಧಾರ್ಮಿಕಾದಿ ಗ್ರಂಥಗಳೂ ಬರೆಯಲ್ಪಟ್ಟಿದ್ದವು. ಎಂದರೆ, ಸಂಸ್ಕೃತದ ಸಹಾಯವನ್ನು ಪಡೆಯದೆ ದ್ರಾವಿಡ ವಾಙ್ಮಯವು ತನ್ನ ವೈಶಿಷ್ಟ್ಯವನ್ನು ಪಡೆದಿದ್ದಿತೆಂಬುದಿಷ್ಟೇ.

ದ್ರಾವಿಡ ಭಾಷಾ ವರ್ಗಕ್ಕೆ ಸೇರಿದ ಕನ್ನಡದ ಸಂಸ್ಕೃತಿಗೆ ದ್ರಾವಿಡ ಸಂಸ್ಕೃತಿಯೇ ಮೂಲವಲ್ಲದೆ ಆರ್ಯರ ಸಂಸ್ಕೃತವು ಮೂಲವಲ್ಲ. ನಮ್ಮ ಭಾಷೆಗೆ ಹೆಸರು ಕನ್ನಡವೆಂಬುದೇ ಮೊದಲಿದ್ದು, ಸಂಸ್ಕೃತದ ಸಹವಾಸದಿಂದ ಕರ್ನಾಟ, ಅಥವಾ ಕರ್ನಾಟಕ ಎಂಬ ಹೆಸರು ಅನಂತರ ಬಂದುದೆಂದು ವಾಙ್ಮಯ ಶೋಧನೆಯಿಂದ ಗೊತ್ತಾಗುತ್ತದೆ. ಕನ್ನಡವನ್ನು ಮಾತನಾಡುವುದರಿಂದ ನಮಗೆ ಕನ್ನಡಿಗರೆಂತಲೂ, ನಮ್ಮ ನಾಡಿಗೆ ಕನ್ನಡ ನಾಡೆಂತಲೂ ಹೆಸರು ಬಂದಿರಬೇಕು. ಎರಡನೆಯ ಶತಮಾನದಲ್ಲಿ ಬರೆದುದಾದ "ಶಿಲಪ್ಪದಿಗಾರಂ" ಎಂಬ ತಮಿಳು ಕೃತಿಯಲ್ಲಿ ನಮ್ಮನ್ನು 'ಕನ್ನಡರ್' ಎಂದು ಉಲ್ಲೇಖಿಸಲಾಗಿದೆಯೆಂದು ಕನ್ನಡ ಕವಿಚರಿತೆಕಾರ

ರಾದ ಆರ್. ನರಸಿಂಹಾಚಾರ್ಯರು ಹೇಳಿರುವರು. 'ಕನ್ನಡಿಗ' ಎಂಬುದು ಮುಂದೆ ಜಾತಿ ವಾಚಕವಾಗಿಯೂ ಕುಲ ವಾಚಕವಾಗಿಯೂ ವ್ಯವಹಾರದಲ್ಲಿ ಬಂದಂತೆ ಕಾಣುವುದು. ಶ್ರೀ ಚೆನ್ನಬಸವೇಶ್ವರರು ತಮ್ಮ "ಕರಣ ಹಸುಗೆ" ಯಲ್ಲಿ ಕನ್ನಡ, ಕಮ್ಮೆ, ವಾಣಿಜ್ಯ, ತಿಗುಳ ಎಂದು ತೆಂಕಣ ನಾಡಿನಲ್ಲಿ ನಾಲ್ಕು ಕುಲಗಳಿರುವುವೆಂದೂ, ಶ್ರೀ ನಿಜಗುಣ ಶಿವಯೋಗಿಗಳು ತಮ್ಮ ವಿವೇಕಚಿಂತಾಮಣಿಯಲ್ಲಿ ತಮ್ಮ ನಾಡಿನ ಜಾತಿಗಳನ್ನು ಹೇಳುವಾಗ, "ಕನ್ನಡ, ಕಮ್ಮೆ, ತೆಲುಗು, ತಿಗುಳ" ಎಂದೂ ಹೇಳಿರುವರು. ಹದಿಮೂರನೆಯ ಶತಮಾನದ ಚೌಂಡರಸ ಕವಿಯು ತಾನು ಕನ್ನಡಿಗ ಕುಲದವನೆಂದು ಹೇಳಿಕೊಂಡಿರುವನು. ವಿಜಯನಗರದ ಅಮಾತ್ಯವರನಾದ ಲಕ್ಷ್ಮೀಧರನು ಕನ್ನಡಿಗ ಕುಲದವನೆಂಬ ಉಲ್ಲೇಖವಿದೆ. ಶಾಸನಗಳಲ್ಲಿ ಅನೇಕ ಬ್ರಾಹ್ಮಣರ ಮನೆಯ ಹೆಸರುಗಳು 'ಕನ್ನಡ' ಎಂದಿರುವುದೆಂದು ಶಾಸನ ಶೋಧಕರು ಹೇಳುತ್ತಾರೆ. ಇಷ್ಟೇ ಅಲ್ಲ; ಸರ್ವ ವಿದ್ಯಾ ಪಾರಂಗತರಾದ ವಿದ್ಯಾರಣ್ಯರ ಕುಲವು ಕನ್ನಡ ಕುಲವೆಂದು ಪ್ರತೀತಿಯನ್ನು ಪಡೆದಿದೆ. ಈ ಮಾತುಗಳಿಂದ, ಕನ್ನಡಿಗರು ಪೂರ್ವ ಕಾಲದಿಂದಲೂ ತಮ್ಮ ಜನಾಂಗವನ್ನು ಕಟ್ಟಿಕೊಂಡು ತಮ್ಮದೇ ಒಂದು ವೈಶಿಷ್ಟ್ಯವನ್ನು ಕಾಪಾಡಿಕೊಂಡಿದ್ದರೆಂಬುದು ವಿದಿತವಾಗುತ್ತದೆ. ಒಳ ಭೇದಗಳೆಷ್ಟೋ ಇದ್ದರೂ, ತಾವೆಲ್ಲರೂ ಕನ್ನಡ ಕುಲದವರು, ಒಂದೇ ನೆತ್ತರಿನವರು ಎಂದು ಹೇಳಿಕೊಳ್ಳುತ್ತ ಒಕ್ಕಟ್ಟಾಗಿದ್ದು, ತಮ್ಮ ವೈಶಿಷ್ಟ್ಯದ ಹೆಮ್ಮೆಯಿಂದ ಹಿಗ್ಗುತ್ತಿರಬೇಕೆಂದು ಊಹಿಸಲವಕಾಶವಿದೆ. ಪೂರ್ವಿಕರ ಆ ತೆರದ ಹೆಮ್ಮೆಯು ಈಗ ನಮಗೆ ಬೇಕಾಗಿರುವುದಲ್ಲವೆ?

ಕನ್ನಡದ ಚರಿತ್ರವನ್ನು ನೋಡಿದರೆ ಕನ್ನಡ ನಾಡಿನ ವೈಶಿಷ್ಟ್ಯದ ಚಿತ್ರವು ಕಣ್ಣಿಗೆ ಕಟ್ಟಿದಂತಾಗುವದು: ಕನ್ನಡದ ವರ್ತಕರು ಕಡಲ ಬೇಹಾರವನ್ನು ಮಾಡಿ ನಾಡಿನ ಸಿರಿಯನ್ನು ಬಳೆಯಿಸಿದ್ದರು. ಕ್ಷತ್ರಿಯರು ರಾಜ್ಯ ಸಾಮ್ರಾಜ್ಯಗಳನ್ನು ಕಟ್ಟಿ ಕನ್ನಡ ನಾಡಿನ ಹೆಸರನ್ನು ಮೆರೆಯಿಸಿದರು. ಕನ್ನಡ ವೀರರ ಸೇವೆಯು ತೆಂಕಣದಲ್ಲಿ ಸಿಂಹಳ ದ್ವೀಪದ ವರೆಗೂ, ಬಡಗಣಕ್ಕೆ ನರ್ಮದೆಯ ವರೆಗೂ ಸಾಗಿಹೋಗಿದ್ದಿತು. ಕನ್ನಡದ ಬ್ರಹ್ಮ ಕ್ಷತ್ರಿಯರದೊಂದು ಕುಲವು ಬಂಗಾಳದಲ್ಲಿ ಆಳುತ್ತಿದ್ದಿತೆಂದು ಚರಿತ್ರೆಯು ಹೇಳುವುದಿಲ್ಲವೆ? ಉತ್ತರದಲ್ಲಿ ಬೌದ್ಧ ಧರ್ಮದ ಪ್ರಚಾರವು ಅತಿಶಯವಿದ್ದಾಗ ತಮ್ಮ ಧರ್ಮ ಸಂರಕ್ಷಣೆಯನ್ನು ಮಾಡಿಕೊಳ್ಳಲು ಹೆಣಗಾಡಿದ ಕನ್ನಡ ದೊರೆಗಳು ಚರಿತ್ರೆಯಲ್ಲಿ ದೊರೆಯುವುದಿಲ್ಲವೆ? ಧರ್ಮ ನೀತಿಗಳ ಕಾವೇರಿಗೆ ಬ್ರಹ್ಮಗಿರಿಯಾದ ಕನ್ನಡಿಗರು ಇತಿಹಾಸದಲ್ಲಿ ದೊರೆಯುವರು. "ಸರ್ವ ಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ" ಎಂಬ ಗೀತೋಕ್ತಿಯ ಭಕ್ತಿ ಮಾರ್ಗವನ್ನು ಪೋಷಿಸಿ ಅದರ ಫಲವನ್ನುಂಡವರು ಕನ್ನಡಿಗರು. ವೇದೋಪನಿಷತ್ತುಗಳ ತಿರುಳನ್ನು ತಿಳಿಗನ್ನಡದಲ್ಲಿ ತಿಳುಹಿಸಲು ತಿರುಗಾಡಿದವರು ನಮ್ಮ ಹಿರಿಯರು. ಕನ್ನಡಿಗರ ವೈಶಿಷ್ಟ್ಯದ ಹೆಗ್ಗುರುತಾದ ಶಿಲ್ಪ ನೈಪುಣ್ಯದಿಂದ ಬಂಡೆಗಳಿಗೆ ಚೇತನವನ್ನಿತ್ತವರು ನಮ್ಮವರೇ. ಇವರು ಸಂಗೀತ ಶಾಸ್ತ್ರದಲ್ಲಿ ತಮ್ಮದೊಂದು ವೈಶಿಷ್ಟ್ಯವನ್ನು ಜಗತ್ತಿಗೆ ತೋರಿಸಿ ತಣಿಸಿಲ್ಲವೆ? ಕನ್ನಡಿಗರು ಗ್ರೀಕರಂತೆ ದೇಶ, ಭಾಷೆ, ವೀರ್ಯ, ಧೈರ್ಯ, ಶಿಲ್ಪ,

ಸಂಗೀತ, ಸಾಹಿತ್ಯ ಮೊದಲಾದ ಪ್ರತಿಯೊಂದರಲ್ಲಿಯೂ ತಮ್ಮ ವೈಶಿಷ್ಟ್ಯವನ್ನು ಕಾಪಾಡಿಕೊಂಡು ಮೆರೆದಿರುವರು. ಸಾಹಿತ್ಯವಂತೂ ಕನ್ನಡಿಗರ ಪಂಚ ಪ್ರಾಣ. ಅವರ ಜೀವನದ ಸಾರ ವಸ್ತುವೇ ಸಾಹಿತ್ಯವು.

ಈ ರೀತಿಯಾಗಿ ನಮ್ಮ ನಾಡು ಬಹು ಪುರಾತನ ಕಾಲದಿಂದಲೂ ತನ್ನ ರಾಜಕೀಯ, ಧಾರ್ಮಿಕ, ಸಾಮಾಜಿಕ, ಭಾಷಾ ವಿಷಯಕಾದಿಗಳ ಸಂಸ್ಕೃತಿಯನ್ನು ಸ್ವತಂತ್ರ ರೀತಿಯಿಂದ ಕಾಪಾಡಿಕೊಂಡು, ತನ್ಮೂಲಕವಾಗಿ ತನ್ನದೊಂದು ವೈಶಿಷ್ಟ್ಯವನ್ನೇ ಜಗತ್ತಿಗೆ ತೋರಿಸಿರುವುದು. ಈಗ ಆಂಗ್ಲೇಯರ ಸಹವಾಸದಿಂದ ವೈಜ್ಞಾನಿಕಾದಿ ವಿಷಯಗಳನ್ನು ತನ್ನ ಜ್ಞಾನ ಭಾಂಡಾರದಲ್ಲಿ ತುಂಬಿಕೊಳ್ಳುವಂತೆ, ಪೂರ್ವದಲ್ಲಿ ಆರ್ಯರೊಡನೆ ಬೆರೆತು ಧಾರ್ಮಿಕಾದಿ ತತ್ತ್ವಗಳನ್ನು ತುಂಬಿಕೊಂಡಿದ್ದರೂ, ಆರ್ಯರಿಗಿಂತಲೂ ಪೂರ್ವದಲ್ಲಿಯೇ ತಾನು ಪಡೆದ ವೈಶಿಷ್ಟ್ಯವನ್ನು ಇದುವರೆಗೂ ಉಳಿಸಿಕೊಂಡಿರುವುದೆಂಬುದನ್ನು ನಾವು ಜ್ಞಾಪಕದಲ್ಲಿಟ್ಟುಕೊಳ್ಳತಕ್ಕದ್ದು. ಆ ವೈಶಿಷ್ಟ್ಯವನ್ನು ಇನ್ನು ಮುಂದೆ ಬಳೆಯಿಸಿಕೊಳ್ಳುವುದೇ ಕನ್ನಡಿಗರಾದ ನಮ್ಮ ಮುಖ್ಯ ಕರ್ತವ್ಯವಿರುವುದು.

ಇನ್ನು, ಕರ್ಣಾಟಕ ಸಾಹಿತ್ಯ ಮತ್ತು ಅದರ ವೈಶಿಷ್ಟ್ಯದ ವಿಚಾರದ ಕಡೆಗೆ ಚಿತ್ತವನ್ನು ತಿರುಗಿಸೋಣ. ಕಾವ್ಯ ನಾಮಕ ಗ್ರಂಥ ರಾಶಿಗೆ ಸಾಮಾನ್ಯವಾಗಿ ಸಾಹಿತ್ಯವೆಂಬ ರೂಢಿಯಿರುವುದು. ನಮ್ಮ ಪ್ರಾಚೀನ ಲಾಕ್ಷಣಿಕರು ಗ್ರಂಥ ರಾಶಿಯನ್ನು ಸಾಮಾನ್ಯವಾಗಿ 'ಕಾವ್ಯ', 'ಶಾಸ್ತ್ರ' ಎಂದು ಎರಡು ಭಾಗ ಮಾಡಿದಂತೆ ಕಾಣುತ್ತದೆ. ರಸಾತ್ಮಕವಾಗಿದ್ದು ಜನಸಾಮಾನ್ಯಕ್ಕೂ ಚಿತ್ತಾನಂದವನ್ನುಂಟು ಮಾಡುವುದು ಕಾವ್ಯ. ಕಾವ್ಯ ಸಮುದಾಯವೇ ಸಾಹಿತ್ಯ. ವೇದಾಗಮಾದಿ ಗ್ರಂಥಗಳು ಎರಡನೆಯ ಪಂಗಡಕ್ಕೆ ಸೇರಿದವು. ಇವು ರಸಾತ್ಮಕವಲ್ಲ; ಜನಸಾಮಾನ್ಯಕ್ಕೂ ಹೃದಯಂಗಮವಾಗುವುದಿಲ್ಲ. ಇವುಗಳಿಂದ ಉಂಟಾಗುವ ಆನಂದವು ಹೃದಯಕ್ಕಲ್ಲ, ಬುದ್ಧಿಗೆ. ಇನ್ನು, ಸಾಹಿತ್ಯ ಗ್ರಂಥದ, ಕಾವ್ಯದ, ಮುಖ್ಯೋದ್ದೇಶವು ಆಹ್ಲಾದ; ಶಾಸ್ತ್ರ ಗ್ರಂಥಗಳ ಮುಖ್ಯೋದ್ದೇಶವು ತತ್ತ್ವ ವಿಚಾರ, ತತ್ತ್ವ ವಿಮರ್ಶೆ ಮೊದಲಾದುದು. ಆದರೆ, ಸಾಹಿತ್ಯದಲ್ಲಿ ಶಾಸ್ತ್ರಾಂಶವೂ, ಶಾಸ್ತ್ರದಲ್ಲಿ ಸಾಹಿತ್ಯಾಂಶವೂ ಕೆಲವು ಗ್ರಂಥಗಳಲ್ಲಿ ಕಂಡುಬರುತ್ತಿರುವುದು.

ಪ್ರಾಚೀನರು ಉಪದೇಶ ದೃಷ್ಟಿಯಿಂದ ಗ್ರಂಥ ರಾಶಿಯನ್ನು ಪ್ರಭು ಸಮ್ಮಿತ, ಮಿತ್ರ ಸಮ್ಮಿತ, ಕಾಂತಾ ಸಮ್ಮಿತ ಎಂದು ಮತ್ತೊಂದು ರೀತಿಯಾಗಿ ಮೂರು ಭಾಗವಾಗಿಯೂ ವಿಂಗಡಿಸಿರುವುದುಂಟು. "ಹೀಗೆ ಮಾಡಬೇಕು, ಹೀಗೆ ಮಾಡಕೂಡದು" ಎಂದು ಕರ್ತವ್ಯಾಕರ್ತವ್ಯಗಳನ್ನು ವಿಧಿನಿಷೇಧ ಮುಖದಿಂದ ವಿವರಿಸುವ ವೇದ ಶಾಸ್ತ್ರಾದಿಗಳು **ಪ್ರಭು ಸಮ್ಮಿತ.** ಇವು ನಮಗೆ ಇಷ್ಟವಿರಲಿ, ಇಲ್ಲದಿರಲಿ, ರಾಜಾಜ್ಞೆಯಂತೆ ಇವುಗಳನ್ನು ಅನುಸರಿಸತಕ್ಕದ್ದು. ಇವು ಶಬ್ದ ಪ್ರಧಾನವಾಗಿರುವವು. ನಮ್ಮ ಕರ್ತವ್ಯಾಕರ್ತವ್ಯಗಳನ್ನು ಸೂಚಿಸುವ ಕಥೆಗಳನ್ನು ರಸ ಪ್ರಧಾನವಿಲ್ಲದಂತೆ ವಿವರಿಸಿ, ನಮಗೆ ನೀತಿಯನ್ನು ಕಲಿಸುವ ಪುರಾಣಾದಿಗಳು **ಮಿತ್ರ ಸಮ್ಮಿತ.** ಇವು

ಅರ್ಥ ಪ್ರಧಾನವಾಗಿರುವವು. ಚಿತ್ತಕ್ಕೆ ಮೋದವಾಗುವ ವಿಷಯಗಳನ್ನು ಹೃದಯಂಗಮವಾದ ರೀತಿಯಲ್ಲಿ ವಿವರಿಸಿ, ನಮ್ಮ ಹೃದಯವನ್ನಾಕರ್ಷಿಸಿ, ಕರ್ತವ್ಯಾಕರ್ತವ್ಯಾಂಶಗಳು ತಾವಾಗಿಯೇ ನಮ್ಮ ಮನಸ್ಸಿಗೆ ಅಂಟುವಂತೆ ಮಾಡುವ ಕಾವ್ಯ ನಾಟಕಾದಿಗಳು **ಕಾಂತಾ ಸಮ್ಮಿತ.** ಇವು ಶಬ್ದಾರ್ಥ ಪ್ರಧಾನವಾಗಿರುವವು.

ಸಾಹಿತ್ಯಜ್ಞರಾದ ಆಧುನಿಕರಲ್ಲಿ ಕೆಲವರು, ಭಾಷೆಯೇ ಸಾಹಿತ್ಯವೆಂತಲೂ, ಕೆಲವರು ಎಲ್ಲಾ ವಿಧದ ಗ್ರಂಥಗಳೂ ಸಾಹಿತ್ಯ ಪದ ವಾಚ್ಯಗಳೇ; ಕಾವ್ಯ ನಾಟಕಗಳು ಸಾಹಿತ್ಯದಲ್ಲಿ ಪ್ರಧಾನವಾದುವುಗಳೆಂದು ಹೇಳಬಹುದೆಂತಲೂ ತರ್ಕಿಸುವರು. ಸಾಹಿತ್ಯ, ವಾಙ್ಮಯ, ಸಾರಸ್ವತ ಎಂಬ ಪದಗಳು ಸಮಾನಾರ್ಥಕಗಳು ಎಂದು ನಾವು ಒಪ್ಪಿಕೊಂಡರೆ ಆಧುನಿಕರ ತರ್ಕದಲ್ಲಿ ಕೆಲವು ಮಟ್ಟಿಗೆ ಸತ್ಯಾಂಶವಿರುವುದೆಂದು ಹೇಳಲವಕಾಶವಿರುವುದು. ಇನ್ನು, ನೀರಸವಾದ ಗ್ರಂಥಗಳೂ ಸಾಹಿತ್ಯದಲ್ಲಿ ಸೇರುವುವೆ? ಎಂಬ ಪ್ರಶ್ನೆಯೊಂದುಂಟಾಗುವುದು. ಈ ಪ್ರಶ್ನೆಗೆ ಆಧುನಿಕರಲ್ಲಿ ಕೆಲವರು—ನೀರಸವಾಗಿ ಯಾವ ಗ್ರಂಥಗಳನ್ನೂ ಬರೆಯಕೂಡದು; ತತ್ತ್ವಾರ್ಥವನ್ನು ವಿವರಿಸುವ ಶಾಸ್ತ್ರಗ್ರಂಥಗಳನ್ನೂ ರಸಾತ್ಮಕಗಳನ್ನಾಗಿ ರಚಿಸಬಹುದು. "ಸತ್ಯಮಪಿ ಪ್ರಿಯಂ ವದೇತ್" ಎಂಬ ನೀತಿಗನುಸರಿಸಿ ಸತ್ಯಾರ್ಥ ವಿವರಣೆಯನ್ನು ಕೂಡ ಪ್ರಿಯವಾಗಿ, ಹೃದಯಂಗಮವಾಗಿ ಬರೆಯುವುದೇ ಗ್ರಂಥಕರ್ತನ ಕರ್ತವ್ಯವೆಂದು ಮೊದಲಾಗಿ ಉತ್ತರವನ್ನೀಯುವರು.

ಈಗ ಪ್ರಾಚೀನ ಸಾಂಪ್ರದಾಯದವರಿಗೂ ಆಧುನಿಕರಿಗೂ ಒಪ್ಪಿಗೆಯಾಗುವಂತೆ ಸಾಹಿತ್ಯವೆಂಬ ಮಾತಿನ ವಿವರಣೆಯನ್ನು ಮಾಡಿಕೊಳ್ಳಬೇಕಾಗಿದೆ. ಈ ವಿವರಣೆಯು ಸರ್ವರೂ ಒಪ್ಪಿಕೊಳ್ಳುವಂತೆ ಮಾಡುವುದು ಕಷ್ಟತರವೆಂಬುದು ನಿಮಗೆ ವಿದಿತವೇ ಇದೆ. ಆದರೆ, ಸದ್ಯದ ಸಾಹಿತ್ಯ ಕ್ರಾಂತಿಯಲ್ಲಿ ಸಾಹಿತ್ಯವೆಂಬ ಮಾತಿನರ್ಥವನ್ನು ಹೀಗೆ ತಿಳಿದುಕೊಳ್ಳಲಿಕ್ಕೆ ಬರಬಹುದೇ ಎಂದು ನಾನು ತಿಳಿಸುತ್ತಿರುವೆನು:—

**ಸಾಹಿತ್ಯವೆಂದರೆ ಸವಿ ನುಡಿ.**—ಯಾವ ನುಡಿಯು, ಅದು ಗ್ರಾಂಥಿಕವಿರಲಿ, ವಾಚಿಕವಿರಲಿ, ಅದನ್ನು ಓದಿದೊಡನೆ, ಅಥವಾ ಕೇಳಿದೊಡನೆ ಕಿವಿಗೂ ಮನಸ್ಸಿಗೂ ಏಕ ಕಾಲದಲ್ಲಿಯೇ ಸವಿಯುಂಟಾಗುವುದೋ ಅದೇ ಸವಿ ನುಡಿ. ಈ ಸವಿ ನುಡಿಯು ಕಿವಿಯನ್ನು ತಟ್ಟಿ, ಬಗೆಯನ್ನು ಮುಟ್ಟಿ, ಜೀವಾತ್ಮನ ಆನಂದಾಂಶದ ಆವರಣವನ್ನು ಭೇದಿಸಿ, ಜೀವನನ್ನು ಇತರ ವಿಷಯಗಳಿಂದ ದೂರಿರಿಸಿಬಿಡುವುದಾಗಿರುವುದು. ಆಗ ಜೀವಾತ್ಮನು ಧ್ಯಾನ ಸಮಯದಲ್ಲಿ ಭಗವಂತನ ಸಾಕ್ಷಾತ್ಕಾರವನ್ನು ಹೊಂದಿದ ಭಕ್ತನಂತಾಗುವನು. ಅವನ ಮೈ ಉಬ್ಬುವುದು, ರೋಮೋದ್ಗಮವಾಗುವುದು; ಹೃದಯದಲ್ಲಿ ತುಂಬಿದ ಆನಂದ ರಸವು ಕಣ್ಣುಗಳಿಂದ ಹೊರ ಸೂಸುವುದು. ನುಡಿಯಲ್ಲಿರುವ ಸವಿಯಿಂದುಂಟಾಗುವ ಪರಿಣಾಮವಿದು. ಈ ಸವಿ ನುಡಿಯು ಬರೆಯಲ್ಪಟ್ಟುದಾದರೆ ಗ್ರಂಥವೆನಿಸುವುದು. ಗ್ರಂಥವು ಯಾವ ವಿಷಯವನ್ನಾದರೂ ವಿವರಿಸತಕ್ಕುದಾಗಿರಲಿ, ಆ ವಿಷಯ ವಿವರಣೆಯು ಮಾತ್ರ ಸವಿ ನುಡಿಯಿಂದಾಗಿರಬೇಕು. ಆ ನುಡಿಯು ವಾಚಿಕವಾಗಿದ್ದರೆ ಭಾಷಣ, ಅಥವಾ ಉಪನ್ಯಾಸವೆನಿಸುವುದು.

ಬರೆಯಲ್ಪಡದ ಭಾಷಣಾದಿ ವಾಙ್ಮಯವನ್ನು ವಾಚಿಕ ಸಾಹಿತ್ಯವೆಂದು ಕರೆಯಬಹುದಲ್ಲವೆ? ಈಗ ನಾವು ಜನಪದ ಸಾಹಿತ್ಯದಲ್ಲಿ ಸಂಗ್ರಹಿಸಬೇಕೆಂದಿರುವ ಲಾವಣಿ ಮೊದಲಾದ ಹಾಡುಗಳಲ್ಲಿಯೂ ಈ ಸವಿ ನುಡಿಯನ್ನು ಕಾಣಬಹುದು. ಅನೇಕ ಲಾವಣಿಗಳು ಬರೆಯಲ್ಪಡದಿದ್ದು, ಓದು ಬರೆಹಗಳು ಬರದಿದ್ದವರಲ್ಲಿಯೂ ಒಬ್ಬರಿಂದೊಬ್ಬರು ಕಲಿಯಲ್ಪಟ್ಟವಾಗಿ ರೂಢಿಯಲ್ಲಿರುವುವು. ಅವೆಲ್ಲವನ್ನೂ ವಾಚಿಕ ಸಾಹಿತ್ಯಕ್ಕೆ ಸೇರಿದವೆಂದು ಹೇಳಬಹುದು. ಓದು ಬರೆಹಗಳನ್ನು ಕಲಿತವರಲ್ಲಿಯೇ ಸವಿ ನುಡಿಯ ಬೆಡಗಿರುವುದೆಂದು ಹೇಳುವಂತಿಲ್ಲ; ಓದದವರಲ್ಲಿಯೂ ಅದಿರುವುದೆಂಬುದು ನಮ್ಮೆಲ್ಲರ ಅನುಭವವಾಗಿದೆ. ಸವಿ ನುಡಿಯೆಂಬುದು ಕೆಲವರಲ್ಲಿ ಹುಟ್ಟುಗುಣವಾಗಿರುವುದು. ಓದು ಮೊದಲಾದುವುಗಳು ಆ ಸವಿ ನುಡಿಯ ಪುಷ್ಟಿಗೆ ಸಹಾಯಕಗಳಾಗಿರುವುವು. ನುಡಿಯಲ್ಲಿರುವ ಸವಿಯೆಂಬುದೇನು? ಸವಿಯೆಂಬುದನ್ನು ಮಾಧುರ್ಯವೆಂದರ್ಥಮಾಡಿ ಮಾಧುರ್ಯವೆಂಬುದು ಕಾವ್ಯದಲ್ಲಿರಬೇಕಾದೊಂದು ಗುಣವೆಂದು ತಿಳಿದುಕೊಂಡರೆ ಸದ್ಯದಲ್ಲಿ ಸಾಕಾಗದು. ಸವಿಯೆಂಬ ಮಾತನ್ನು ನಾವು ಶಬ್ದಾರ್ಥಗಳಲ್ಲುಪಯೋಗಿಸುವಂತೆ, 'ಇದು ಸವಿಯಿಲ್ಲ'ವೆಂದು ತಿನ್ನುವ ಪದಾರ್ಥದಲ್ಲಿಯೂ, 'ಇದು ಸವಿಗೇಡಿ' ಯೆಂದು ಅಂಗವಿಲ್ಲದ ವಸ್ತುವಿನಲ್ಲಿಯೂ ಪ್ರಯೋಗಿಸುತ್ತಿರುವೆವು. ಇದರಿಂದ ಸವಿಯೆಂಬ ಮಾತಿನ ಅರ್ಥವ್ಯಾಪ್ತಿಯು ವಿಸ್ತಾರವುಳ್ಳದೆಂಬುದು ವಿದಿತವಾಗುವುದು. ಇಲ್ಲಿ ಸವಿಗೆ 'ಸೊಗಸು' ಅಥವಾ 'ರಮಣೀಯತೆ' ಎಂದು ಮೊದಲಾಗಿ ಹೇಳಿಕೊಳ್ಳಬಹುದು.

ಜಗತ್ತಿನಲ್ಲಿ ದುಃಖವಿರುವಂತೆ ಸುಖವೂ ಇರುವುದಷ್ಟೆ! ಸುಖ ದುಃಖಗಳು ನಾನಾ ವಿಧ. ಮನುಷ್ಯನ ಪ್ರವೃತ್ತಿಗೆ ಸುಖವೇ ಮೂಲ ಕಾರಣ. ಸುಂದರವಾದ ರೂಪ, ಇಂಪಾದ ಗಾನ, ರುಚಿಯಾದ ಆಹಾರ, ಮೃದುವಾದ ಸ್ಪರ್ಶ, ಒಳ್ಳೆಯ ವಾಸನೆ—ಇವುಗಳಿಂದ ಒಂದೊಂದು ವಿಧವಾದ ಸುಖವುಂಟಾಗುತ್ತದೆ. ಇವೆಲ್ಲ ಬಾಹ್ಯೇಂದ್ರಿಯ ಮೂಲಕವಾಗಿ ಮನಸ್ಸಿಗುಂಟಾಗತಕ್ಕವು. ಇತರರು ತೋರಿಸುವ ಪ್ರೀತಿ ಗೌರವಗಳು, ಕಾರ್ಯದಲ್ಲುಂಟಾಗುವ ಲಾಭಗಳು—ಇವೇ ಮೊದಲಾದವುಗಳಿಂದಲೂ ಸುಖವುಂಟಾಗುತ್ತದೆ. ಅದನ್ನು ಆಂತರಿಕ ಸುಖವೆಂದು ಹೇಳಬಹುದು. ದೇಹೇಂದ್ರಿಯಾದಿಗಳಿಗೆ ಸಿಲುಕದ ಪಾರಮಾರ್ಥಿಕ ಸುಖವೊಂದಿರುವುದೆಂತಲೂ ಶಾಸ್ತ್ರಗಳಿಂದ ತಿಳಿದುಬರುವುದು. ಅಂತು, ಸುಖಗಳಲ್ಲಿ ವೈವಿಧ್ಯವೂ ತಾರತಮ್ಯವೂ ಇರುವುದೆಂದು ಹೇಳಬೇಕಾಗುತ್ತದೆ. ಈ ಸುಖಗಳು ಮನುಷ್ಯನ ವಯಸ್ಸು, ಸ್ವಭಾವ, ಸಂಸ್ಕಾರಾದಿಗಳಿಗನುಸರಿಸಿ ಹೆಚ್ಚು ಕಡಿಮೆಯಾಗುವುದುಂಟು. ಒಟ್ಟಿನ ಮೇಲೆ, ಬಾಹ್ಯ ಅಥವಾ ಆಂತರಿಕ ಸುಖಕ್ಕೆ ಸಾಧನವಾದ ವಸ್ತುಗಳಲ್ಲಿ ಸುಖಪ್ರದವಾದ ಅಂಶವು ಒಂದು ಇದೆ. ಅದನ್ನೇ ರಮಣೀಯತೆಯೆಂದು ಕರೆಯಬಹುದು. ಈ ರಮಣೀಯತೆಯು ಜಗತ್ತಿನಲ್ಲಿ ಗಿಡಬಳ್ಳಿ, ಫಲಪುಷ್ಪ, ಮೃಗಪಕ್ಷಿ, ತಂಗಾಳಿ ಬೆಳ್ದಿಂಗಳು, ಸಂಗೀತ, ಜಲಕ್ರೀಡೆ, ಬಾಲಲೀಲೆ, ಜೀವನ ಸಮಸ್ಯೆ ಮೊದಲಾದವುಗಳಲ್ಲಿ ಸ್ವತಸ್ಸಿದ್ಧವಾಗಿದ್ದು ನಮಗೆ ಆನಂದವನ್ನುಂಟುಮಾಡುತ್ತಿರುವುದು. ಸ್ವತಸ್ಸಿದ್ಧವಾದ ಈ ರಮಣೀಯತೆಯನ್ನನುಭವಿಸಿ, ಈ ರಮಣೀಯತೆಗೆ ನೆಲೆಯಾದ ಪ್ರಪಂಚವನ್ನೋ

ತತ್ಸದೃಶವಾದ ಕಲ್ಪಿತ ಪ್ರಪಂಚವನ್ನೋ ಕಲಾ ನಿಪುಣರು ತಮ್ಮ ಕುಶಲ ಕರ್ಮದಲ್ಲಿ ಚಿತ್ರಿಸಿ ರಮಣೀಯತೆಯನ್ನುಂಟುಮಾಡುವರು. ಶಿಲ್ಪ ಕಲಾ ವಿದನು ಕಲ್ಲು ಕಟ್ಟಿಗೆ ಲೋಹಾದಿಗಳಲ್ಲಿ ತನ್ನ ಕಡೆದು ಕೆತ್ತುವ ಜಾಣ್ಮೆಯಿಂದ ರಮಣೀಯತೆಯನ್ನುಂಟು ಮಾಡುವಂತೆ, ಚಿತ್ರ ಕಲಾಭಿಜ್ಞನು ಕುಡ್ಯಾದಿಗಳಲ್ಲಿ ಬಣ್ಣದಿಂದ ಬರೆಯುವ ಜಾಣ್ಮೆ ಯಿಂದ ರಮಣೀಯತೆಯನ್ನು ತೋರಿಸುವನು. ಮಾತಿನ ಜಾಣನು ಕ್ರಮವಾಗಿ ಯಾವು ದಾದರೊಂದು ವಿಷಯವನ್ನು ವಿವರಿಸುವ ಗ್ರಂಥದಲ್ಲಿ, ಅಥವಾ ಭಾಷಣದಲ್ಲಿ ಉಪಯೋಗಿಸುವ ಮಾತಿನಲ್ಲಿ ರಮಣೀಯತೆಯನ್ನು ತುಂಬುವನು. ಆ ರಮಣೀ ಯತೆಯೇ ಸವಿಯು. ಆ ಸವಿ ನುಡಿಯೇ ಸಾಹಿತ್ಯವು. ಸವಿ ನುಡಿಯ ಜಾಣನೇ ಕವಿಯಾಗುವನು. ಸಾಹಿತ್ಯಾದಿ ಕಲಾ ನಿಪುಣರ ಕುಶಲ ಕರ್ಮಗಳಲ್ಲಿ ಎರಡು ಬಗೆ ಯಿಂದಾನಂದವುಂಟಾಗುವುದು. ನಾವು ಅನುಭವಿಸಿದ ಪ್ರಾಪಂಚಿಕ ಸುಖ ವಿಷಯ ಗಳೇ ಅವರ ಕುಶಲ ಕರ್ಮದ ಕಲ್ಪಿತ ಪ್ರಪಂಚದಲ್ಲಿಯೂ ಇರುವುದರಿಂದ ನಮ್ಮಲ್ಲಿರುವ ತದ್ವಿಷಯಕ ಸಂಸ್ಕಾರಗಳು ಉದ್ರೇಕವಾಗಿ ಆನಂದವುಂಟಾಗುವುದೊಂದು ವಿಧ; ಅವರ ಕಲಾ ನೈಪುಣ್ಯವು ನಮ್ಮಲ್ಲಿ ಆಶ್ಚರ್ಯವನ್ನುಂಟುಮಾಡುವುದರಿಂದಾಗುವ ಆನಂದವು ಮತ್ತೊಂದು ವಿಧ.

ಹೀಗೆ ಸಾಹಿತ್ಯಕ್ಕೆ ಸವಿ ನುಡಿಯೆಂದರ್ಥ ಮಾಡಿಕೊಂಡುಬಿಟ್ಟ ಮಾತ್ರಕ್ಕೆ ಸಾಹಿತ್ಯ ವಿಚಾರವು ಮುಗಿಯತಕ್ಕುದಲ್ಲ. ಸಾಹಿತ್ಯ ವಿಷಯವಾಗಿ ನಾವು ತಿಳಿದು ಕೊಳ್ಳುವ ಮುಖ್ಯ ವಿಷಯಗಳು ಎಷ್ಟೋ ಇರುವುವು. ಸಾಹಿತ್ಯದಲ್ಲಿ ಪ್ರಾಮುಖ್ಯತೆ ಯನ್ನು ಹೊಂದಿರುವ ಕಾವ್ಯ ಮತ್ತು ಕಾವ್ಯ ಕರ್ತೃವಾದ ಕವಿಯ ವಿಷಯವಾಗಿ ಸ್ವಲ್ಪ ವಿಚಾರಿಸೋಣ:

**ಕಾವ್ಯ.**—ಕನ್ನಡ ಸಾಹಿತ್ಯ ಭಕ್ತರಲ್ಲಿ ಪ್ರಾಚೀನ ಸಂಪ್ರದಾಯದವರು ಸಂಸ್ಕೃತ ದಲ್ಲುಕ್ತವಾದ ಕಾವ್ಯ ಲಕ್ಷಣಗಳನ್ನೇ ಇಷ್ಟಪಡುವರು. ಸಂಸ್ಕೃತದಲ್ಲಿ ಲಾಕ್ಷಣಿ ಕರು, "ವಿಶಿಷ್ಟಗಳಾದ (ಬಂದು ವಿಧಗಳಾದ) ಶಬ್ದಾರ್ಥಗಳು ಕಾವ್ಯವು" ಎಂಬ ಕಾವ್ಯ ಲಕ್ಷಣವನ್ನು ಎಲ್ಲರೂ ಒಪ್ಪುವರು. ಆದರೆ, ಆ ವೈಶಿಷ್ಟ್ಯವು ಎಂತಹದೆಂಬ ಪ್ರಶ್ನೆಗುತ್ತರವನ್ನು ಕೊಡುವುದರಲ್ಲಿ ಅವರಲ್ಲಿ ಮೂರು ರೀತಿಗಳುಂಟಾಗಿರುವವು: ಆ ವೈಶಿಷ್ಟ್ಯವನ್ನು ಕೆಲವರು ಧರ್ಮ ರೂಪವೆಂದೂ, ಕೆಲವರು ವ್ಯಾಪಾರ ರೂಪ ವೆಂದೂ, ಬೇರೆ ಕೆಲವರು ಅದನ್ನು ವ್ಯಂಗ್ಯ ರೂಪವೆಂದೂ ಹೇಳುವರು. ವೈಶಿಷ್ಟ್ಯವನ್ನು ಧರ್ಮ ರೂಪವೆಂದು ಹೇಳುವವರಲ್ಲಿಯೂ, ಅಲಂಕಾರಗಳೇ ಮುಖ್ಯವೆಂದು ಕೆಲವರೂ, ಗುಣಗಳೇ ಮುಖ್ಯವೆಂದು ಕೆಲವರೂ ವಾದಿಸಿರುವರು. ವೈಶಿಷ್ಟ್ಯವು ವ್ಯಾಪಾರ ರೂಪವೆಂದು ಹೇಳುವವರಲ್ಲಿಯೂ ಕೆಲವರು, ಉಕ್ತಿ ವೈಚಿತ್ರ್ಯವೇ (ಮಾತಿನ ಸೊಂಪೇ) ಪ್ರಧಾನವೆಂದೂ, ಕೆಲವರು ಭೋಗ ಕೃತ್ಯವೇ (ರಸ ವಿಷಯಕವಾದ ವ್ಯಂಜನಾ ವ್ಯಾಪಾರವೇ) ಪ್ರಧಾನವೆಂದೂ ಪ್ರತಿಪಾದಿಸಿರುವರು. ಹೀಗೆ ಮೇಲೆ ಹೇಳಿದ ನಾಲ್ಕು ವರ್ಗದವರೊಡನೆ ವ್ಯಂಗ್ಯ (ಧ್ವನಿ) ವಾದಿಗಳನ್ನು ಕೂಡಿಸಿ ಲಾಕ್ಷಣಿಕರಲ್ಲಿ ಐದು ವರ್ಗಗಳನ್ನು ಮಾಡಬಹುದು. ಈ ವರ್ಗಗಳಲ್ಲಿ ಮೊದಲನೆಯ ವರ್ಗದವರು

ಭಾಮಹೋದ್ಭಟಾದಿಗಳು ; ಎರಡನೆಯ ವರ್ಗದವರು ವಾಮನಾದಿಗಳು ; ಮೂರನೆಯ ವರ್ಗದವರು ಭಟ್ಟನಾಯಕಾದಿಗಳು ; ಐದನೆಯ ವರ್ಗದವರು ಆನಂದ ವರ್ಧನಾದಿಗಳು. ಮೇಲಿನ ಐದು ವರ್ಗಗಳಲ್ಲಿ ೧ನೆಯ ೩ನೆಯ ವರ್ಗಗಳಿಗೆ ಅಲಂಕಾರ ಸಂಪ್ರದಾಯವೆಂದೂ, ೪ನೆಯದಕ್ಕೆ ರಸ ಸಂಪ್ರದಾಯವೆಂದೂ, ೨ನೆಯದಕ್ಕೆ ರೀತಿ ಸಂಪ್ರದಾಯವೆಂದೂ, ೫ನೆಯದಕ್ಕೆ ಧ್ವನಿ ಸಂಪ್ರದಾಯವೆಂದೂ ನಾಲ್ಕೇ ಭಾಗಗಳನ್ನಾದರೂ ಮಾಡಬಹುದು. ಇವರಲ್ಲಿ ಪ್ರಾಚೀನರೂ ನವೀನರೂ ಎಂದು ಮತ್ತೆರಡು ವಿಧ.

**ಪ್ರಾಚೀನರು.**—ಇವರು ಕಾವ್ಯಕ್ಕೆ ಅಲಂಕಾರಗಳೇ ಪ್ರಧಾನವೆಂದು ಹೇಳುವರು. ಬಹು ಪ್ರಾಚೀನಾಲಂಕಾರಿಕರೇ ಈ ಸಂಪ್ರದಾಯದವರು. ರಸವೂ ಧ್ವನಿಯೂ ಅಲಂಕಾರಾಂತರ್ಗತಗಳೇ ಎಂದು ಇವರ ತಾತ್ಪರ್ಯ. ದಂಡಿಯು ತನ್ನ "ಕಾವ್ಯಾದರ್ಶ"ದಲ್ಲಿ ರಸಗಳನ್ನು ಅಲಂಕಾರದಲ್ಲಿ ಸೇರಿಸಿರುವನು. ಭಾಮಹನು ಗುಣಗಳಿಗೂ ಅಲಂಕಾರಗಳಿಗೂ ಭೇದವನ್ನು ತೋರಿಸಿದಂತೆ ಕಾಣುವುದಿಲ್ಲ. ಏಕೆಂದರೆ, ಭಾವಿಕವೆಂಬ ಅಲಂಕಾರವನ್ನು ಆತನು ಗುಣವೆಂಬುದಾಗಿ ಹೇಳಿರುವನು. ಭಾಮಹಾಲಂಕಾರಕ್ಕೆ ವಿವರಣವನ್ನು ಬರೆದ ಉದ್ಭಟನು, "ಮನುಷ್ಯನ ಶೌರ್ಯಾದಿ ಗುಣಗಳಿಗೂ ಕೇಯೂರಾದಿ ಭೂಷಣಗಳಿಗೂ ಭೇದವಿರುವಂತೆ, ಕಾವ್ಯದಲ್ಲಿ ಓಜಸ್ಸು ಮೊದಲಾದ ಗುಣಗಳಿಗೂ ಉಪಮಾನಾದ್ಯಲಂಕಾರಗಳಿಗೂ ಭೇದವಿರುವುದೆಂದು ಪರ ಪಕ್ಷದವರು ಹೇಳುವುದು ವಿಹಿತವಲ್ಲ. ಏಕೆಂದರೆ, ಮನುಷ್ಯನ ಶರೀರದಲ್ಲಿ ಶೌರ್ಯಾದಿ ಗುಣಗಳು ಸಮವಾಯ ಸಂಬಂಧದಿಂದಲೂ, ಕೇಯೂರಾದಿಗಳು ಸಂಯೋಗ ಸಂಬಂಧದಿಂದಲೂ ಇರುವುದರಿಂದ ಅವುಗಳಿಗೆ ಭೇದವನ್ನು ಹೇಳಬಹುದು. ಆದರೆ, ಕಾವ್ಯದಲ್ಲಿ ಸಮವಾಯ ಸಂಬಂಧವೊಂದರಲ್ಲಿಯೇ ವಾಸ ಮಾಡುವ ಗುಣಾಲಂಕಾರಗಳಿಗೆ ಭೇದವನ್ನು ಹೇಳುವುದು ಅಂಧ ಪರಂಪರೆಯಲ್ಲದೆ ಬೇರೆಯಲ್ಲ"ವೆಂದು ಹೇಳಿರುವನು. ಹೀಗೆ ಇವರ ಮತದಲ್ಲಿ ಓಜಸ್ಸು ಮೊದಲಾದ ಕಾವ್ಯ ಗುಣಗಳೂ ಶೃಂಗಾರಾದಿ ರಸಗಳೂ ಅಲಂಕಾರ ಭೇದಗಳೇ. ಇದಲ್ಲದೆ, ಧ್ವನಿಯೂ ಅಲಂಕಾರಾಂತರ್ಗತವೇ. ಇವರ ಮತದಲ್ಲಿ, ಪ್ರತೀಯಮಾನಾರ್ಥವು (ವ್ಯಂಗ್ಯಾರ್ಥವು) ವಾಚ್ಯಾರ್ಥಕ್ಕೆ ಉಪಸ್ಕಾರಕ (ಚಮತ್ಕಾರ ಜನಕ) ವಾಗುವುದರಿಂದ ಅದೂ ಅಲಂಕಾರ ಪಕ್ಷದಲ್ಲಿಯೇ ಸೇರತಕ್ಕದ್ದು. ಒಂಬತ್ತನೆಯ ಶತಮಾನದ ಮಧ್ಯದಲ್ಲಿದ್ದ ರುದ್ರಟನು ವಸ್ತು ರೂಪ, ಅಲಂಕಾರ ರೂಪ, ರಸ ರೂಪವೆಂಬ ಮೂರು ವಿಧವಾದ ಪ್ರತೀಯಮಾನಾರ್ಥಗಳೂ ಕೂಡ ಅಲಂಕಾರಗಳೇ ಎಂದು ವರ್ಣಿಸಿರುವನು. ಇದಲ್ಲದೆ, ಈ ಮತದವರು ಧ್ವನಿ ಎಂಬ ಹೆಸರಿನಿಂದೊಂದು ಅಲಂಕಾರವನ್ನೇ ಕಲ್ಪಿಸಿರುವರು. ಈ ಮತದವರು ಪ್ರಾಚೀನಾಲಂಕಾರಿಕ ವರ್ಗದವರು.

**ಆಧುನಿಕರು.**—ಮೇಲಣ ಅಲಂಕಾರ ಸಂಪ್ರದಾಯದವರ ಮತವನ್ನು ಧ್ವನಿ ಸಂಪ್ರದಾಯದವರಾದ ಆಧುನಿಕಾಲಂಕಾರಿಕರು ಅಂಗೀಕರಿಸಿಲ್ಲ. ಇವರು ಎಲ್ಲಾ ಅಲಂಕಾರಿಕರ ಮತವನ್ನು ಸಮನ್ವಯ ಮಾಡಿಕೊಂಡು ಕಾವ್ಯ ವಿಷಯವನ್ನು

ಕುರಿತು ಈ ವಿಧವಾಗಿ ಹೇಳಿರುವರು:—ಧ್ವನಿಯು ಉತ್ತಮ ಕಾವ್ಯಕ್ಕೆ ಪ್ರಾಣದಂತಿರುವುದು. ಧ್ವನಿಯಿಲ್ಲದ ಕಾವ್ಯವು ಉತ್ತಮ ಕಾವ್ಯವಲ್ಲ. ಕಾವ್ಯಕ್ಕೆ ರಸವೇ ಆತ್ಮ; ಶಬ್ದಾರ್ಥಗಳು ಶರೀರ; ಮಾಧುರ್ಯಾದಿ ಗುಣಗಳು ಶೌರ್ಯಾದಿ ಗುಣಗಳಂತಿರುವವು; ಅಲಂಕಾರಗಳು ಹಾರಾದಿಗಳಂತಿರುವವು. ರಸವು ಅಂಗಿ, ಶಬ್ದಾರ್ಥಗಳು ಅಂಗಗಳು. ಮಾಧುರ್ಯಾದಿ ಗುಣಗಳು ಯಾವಾಗಲೂ ರಸವನ್ನು ಬಿಟ್ಟಿರತಕ್ಕುವುಗಳಲ್ಲ; ಎಂದರೆ, ರಸವಿರುವ ಸ್ಥಳದಲ್ಲಿ ಅವಿರುವುವು; ಅವಿರುವ ಸ್ಥಳದಲ್ಲಿ ರಸವು ಹುಟ್ಟುವುದು. ಅಲಂಕಾರಗಳು ಹೀಗಲ್ಲ. ಅವು ಅಂಗದ್ವಾರದಿಂದ ಮಾತ್ರ ಒಂದು ಸಲ ರಸವನ್ನು ಅಭಿವೃದ್ಧಿಗೊಳಿಸಬಹುದು, ಒಂದು ಸಲ ಬಿಡಬಹುದು. ಅಲಂಕಾರಗಳು ರಸೋತ್ಕರ್ಷಕಗಳಾಗದಾಗ ಕೇವಲ ಉಕ್ತಿವೈಚಿತ್ರ್ಯ ಪರ್ಯವಸಾಯಿಗಳಾಗಿರುವುವು. ಇದು "ಕಾವ್ಯಪ್ರಕಾಶ" ಕರ್ತನಾದ ಮಮ್ಮಟನ (೧೨ನೆಯ ಶತಾಬ್ದ) ಮತ. ಇದನ್ನೇ ಏಕಾವಲೀ ಕಾರ (೧೩ನೆಯ ಶತಾಬ್ದ), ಪ್ರತಾಪರುದ್ರೀಯ ಕಾರ (೧೪ನೆಯ ಶತಾಬ್ದ), ಅಪ್ಪಯ್ಯ ದೀಕ್ಷಿತರು (೧೬ನೆಯ ಶತಾಬ್ದ), ರಸಗಂಗಾಧರ ಕರ್ತನಾದ ಪಂಡಿತರಾಜ ಜಗನ್ನಾಥ (೧೬ನೆಯ ಶತಾಬ್ದ) ಮೊದಲಾದವರು ಒಪ್ಪಿಕೊಂಡಿರುವರು. ಇದೇ ಆಧುನಿಕಾಲಂಕಾರಿಕರ ಮತ. ಇವರ ಮತಾನುಸಾರವಾಗಿ ಗುಣಾಲಂಕಾರಗಳಿಗೆ ಈ ವಿಧವಾಗಿ ಭೇದವಿರುವುದು: ಗುಣಗಳು ರಸ ಧರ್ಮಗಳು; ಅಲಂಕಾರಗಳು ರಸ ಧರ್ಮಗಳಲ್ಲ. ಗುಣಗಳು ರಸವಿಲ್ಲದ ಸ್ಥಳದಲ್ಲಿರುವುದಿಲ್ಲ; ಅಲಂಕಾರಗಳು ರಸವಿಲ್ಲದೆ ರಸವನ್ನು ಪುಟ್ಟಿಸದೆ ಇರಬಹುದು. ಗುಣಗಳು ತಪ್ಪದೆ ರಸವನ್ನು ಪುಟ್ಟಿಸುವವು; ಅಲಂಕಾರಗಳು ಅವಶ್ಯವಾಗಿ ರಸವನ್ನು ಪುಟ್ಟಿಸುತ್ತವೆಂಬುದಿಲ್ಲ. ಗುಣಗಳು ರಸಕ್ಕೆ ಸಾಕ್ಷಾದುಪಕಾರಕಗಳು; ಅಲಂಕಾರಗಳು ಶಬ್ದಾರ್ಥ ದ್ವಾರ ರಸಕ್ಕುಪಕಾರಕಗಳು.

ಹೀಗೆ ಪ್ರಾಚೀನಾಲಂಕಾರಿಕರಿಂದ ಅಲಂಕಾರಗಳಿಗೆ ಕೊಟ್ಟ ಗೌರವವೆಲ್ಲವೂ ಆಧುನಿಕರಿಂದ ತಗ್ಗಿಸಲ್ಪಟ್ಟಿದೆ. ಆಧುನಿಕರ ಮತದಲ್ಲಿ, ಅಲಂಕಾರವಿದ್ದರೂ ಇಲ್ಲದಿದ್ದರೂ ರಸವು ಪುಟ್ಟಬಹುದು. ಮೊದಲೇ ರಸವಿದ್ದ ಪಕ್ಷದಲ್ಲಿ ಅಲಂಕಾರಗಳು. ಅದನ್ನೇ ಅಭಿವೃದ್ಧಿಪಡಿಸಬಹುದು. ಸೌಂದರ್ಯವತಿಯಲ್ಲದ ಸ್ತ್ರೀಯಳಿಗೆ ಆಭರಣಗಳನ್ನು ಧರಿಸಿದರೂ ಪ್ರಯೋಜನವಿಲ್ಲ. ಸೌಂದರ್ಯವತಿಗೆ ಸಾಧಾರಣವಾಗಿ ಆಭರಣಗಳೇ ಬೇಕಾಗುವುದಿಲ್ಲ. ಅವಳು ಒಂದು ಪಕ್ಷದಲ್ಲಿ ಆಭರಣಗಳನ್ನು ಧರಿಸಿಕೊಂಡರೆ ಸ್ವಾಭಾವಿಕ ಸೌಂದರ್ಯವು ಹೆಚ್ಚು ಶೋಭಿಸಬಹುದು.

**ಧ್ವನಿ ಮತ್ತು ಅಲಂಕಾರ.**—ರಸವನ್ನು ಕಾವ್ಯಕ್ಕೆ ಆತ್ಮವೆಂದು ಹೇಳದೆ ಪ್ರಾಣವೆಂದು ಹೇಳಿದ ಪಕ್ಷದಲ್ಲಿ ಧ್ವನಿಯೇ ಕಾವ್ಯಾತ್ಮವೆಂದು ಹೇಳಬೇಕು. ಧ್ವನಿಪ್ರಧಾನವೇ ಉತ್ತಮ ಕಾವ್ಯವು; ಎಂದರೆ, ಎಲ್ಲಿ ವಾಚ್ಯಾರ್ಥಕ್ಕಿಂತ ವ್ಯಂಗ್ಯಾರ್ಥವು ಹೆಚ್ಚು ರಮಣೀಯವಾಗಿರುವುದೋ ಅದು ಉತ್ತಮ ಕಾವ್ಯ. ಎಲ್ಲಿ ವಾಚ್ಯಾರ್ಥಕ್ಕಿಂತ ವ್ಯಂಗ್ಯಾರ್ಥವು ಹೆಚ್ಚು ರಮಣೀಯವಾಗಿರದೋ ಅದು ಮಧ್ಯಮ ಕಾವ್ಯ. ಇದನ್ನೇ ಗುಣೀಭೂತ ವ್ಯಂಗ್ಯವೆನ್ನುವರು. ಯಾವುದರಲ್ಲಿ ವ್ಯಂಗ್ಯಾರ್ಥವಿರುವು

ದಿಲ್ಲವೋ, ಇದ್ದರೂ ಅದು ಸ್ಪಷ್ಟವಾಗದೋ ಅದು ಅಧಮ ಕಾವ್ಯ. ಶಬ್ದಾರ್ಥ ಚಿತ್ರಗಳು ಇಂತಹವು. ಅಲಂಕಾರಗಳಲ್ಲಿ ಸೇರಿದ ಚಿತ್ರಕಾವ್ಯವು ಇವರ ಮತದಲ್ಲಿ ಅಧಮ. ಏಕೆಂದರೆ ಅಲ್ಲಿ ಧ್ವನಿಯಿರುವುದಿಲ್ಲ. ಇದಲ್ಲದೆ, ಕೆಲವಲಂಕಾರಗಳಲ್ಲಿ ಧ್ವನಿಯು ಕಾಣುತ್ತಿರುವುದು. ಕೆಲವು ಧ್ವನಿ ಭೇದಗಳಲ್ಲಿ ಅಲಂಕಾರಗಳು ಕಾಣುತ್ತಿರುವುವು. ಆದುದರಿಂದ, ಎರಡೂ ಪಕ್ಷದವರಿಗೆ ವಾದ ವಿವಾದವು ಜರುಗಿ ನಿಶ್ಚಯವಾದುದೇನೆಂದರೆ—ವಾಚ್ಯಾರ್ಥವನ್ನು ಕೆಲವು ಮಟ್ಟಿಗೆ ಪರಿತ್ಯಜಿಸುವುದೇ ಧ್ವನಿ ಎಂಬುದರ ವಿಶೇಷವು; ಆ ಧ್ವನಿಯು ವಸ್ತು ಧ್ವನಿ, ರಸ ಧ್ವನಿ, ಅಲಂಕಾರ ಧ್ವನಿ ಎಂದು ಮೂರು ವಿಧವು. ಈ ಮೂರು ವಿಧವಾದ ಧ್ವನಿಗೂ ವಾಚ್ಯದಿಂದ ಕೆಲಸವಿಲ್ಲ. ಏಕೆಂದರೆ, ವಾಚ್ಯದಿಂದ ಅಲಂಕಾರವು ಸಿದ್ಧಿಸಿದರೆ ಅದು ಅಲಂಕಾರ ಕೋಟಿಯಲ್ಲಿ ಸೇರುವುದಲ್ಲದೆ ಅಲಂಕಾರ ಧ್ವನಿಯೆಂಬ ಹೆಸರನ್ನು ಪಡೆಯಲಾರದು. ವ್ಯಂಗ್ಯಾರ್ಥದಿಂದ ಅಲಂಕಾರವು ಸಿದ್ಧಿಸಿದರೆ ಅದು ಅಲಂಕಾರ ಧ್ವನಿಯೆಂದು ಹೇಳಿಸಿಕೊಳ್ಳುವುದಲ್ಲದೆ ಅಲಂಕಾರವೆಂದೆನಿಸಿಕೊಳ್ಳಲಾರದು. ಉಪಮಾದ್ಯಲಂಕಾರಗಳೆಲ್ಲವೂ ವಾಚ್ಯಾರ್ಥದಿಂದಲೂ ವ್ಯಂಗ್ಯಾರ್ಥದಿಂದಲೂ ಸಿದ್ಧಿಸಬಹುದು. ಆದರೆ, ಧ್ವನಿ ವಾದಿಗಳು ವಾಚ್ಯಾರ್ಥದಿಂದುಂಟಾದ ಉಪಮಾದಿಗಳನ್ನು ಅಲಂಕಾರವೆಂದು ಕರೆಯುವರು; ವ್ಯಂಗ್ಯಾರ್ಥದಿಂದುಂಟಾದವುಗಳನ್ನು ಧ್ವನಿಯೆಂದು ಕರೆಯುವರು. ಇಲ್ಲಿ ಧ್ವನಿಯೆಂಬುದನ್ನು ಒಂದು ಉದಾಹರಣದಿಂದ ತಿಳಿಸಬಹುದು: "ಊರಿನಲ್ಲಿದ್ದ ಜನಗಳು ಬಂದಿದ್ದರು" ಎಂದು ಹೇಳಿದರೆ ಇದು ವಾಚ್ಯಾರ್ಥವೆನಿಸುವುದು; "ಊರಿಗೆ ಊರೇ ಬಂದಿದ್ದಿತು" ಎಂದು ಹೇಳುವುದರಲ್ಲಿ ವ್ಯಂಗ್ಯಾರ್ಥವಿರುವುದು. ಇಲ್ಲಿ "ಊರಿಗೆ ಊರೇ" ಎಂಬುದರಿಂದ, ಊರಲ್ಲಿ ಕಿಕ್ಕಿರಿದ ಜನಸಂದಣಿ, ಜನದ ಆಧಿಕ್ಯತೆ, ಊರಿನ ಇತರ ಭಾಗಗಳೆಲ್ಲ ಬರಿದಾಗಿರುವಿಕೆ—ಇವೇ ಮುಂತಾದರ್ಥಗಳು ಕೇಳುವವನ ವಯಸ್ಸು ಅನುಭವ ಬುದ್ಧಿಗಳ ಮೇಲೆ ಹೆಚ್ಚು ಕಡಿಮೆಯಾಗಿ ಮನಸ್ಸಿಗೆ ಗೋಚರವಾಗುವುವಲ್ಲವೆ? ಇವು ಮುಖ್ಯಾರ್ಥವೂ ಆಗುವುದಿಲ್ಲ, ಲಕ್ಷ್ಯಾರ್ಥವೂ ಆಗುವುದಿಲ್ಲ, ವ್ಯಂಗ್ಯಾರ್ಥವೆನಿಸುತ್ತವೆ. ಈ ವ್ಯಂಗ್ಯವೇ ಧ್ವನಿ. ಧ್ವನಿಗೆ ಧ್ವನನ, ದ್ಯೋತನ ಎಂಬ ಪರ್ಯಾಯಗಳೂ ಉಂಟು. ಸಾಹಿತ್ಯಜ್ಞರು ಅರ್ಥವನ್ನು ಮುಖ್ಯವಾಗಿ ವಾಚ್ಯ, ಲಕ್ಷ್ಯ, ವ್ಯಂಗ್ಯ ಎಂದು ಮೂರು ಬಗೆಯಾಗಿ ವಿಭಾಗಿಸಿರುವರೆಂಬುದು ತಮಗೆ ವಿದಿತವೇ ಇರುವುದಷ್ಟೆ!

**ಇತರ ವಾದಗಳು.**—ಪ್ರಾಚೀನರೂ ಆಧುನಿಕರೂ, ಮೊದಲು ಹೇಳಿದಂತೆ, "ವಿಶಿಷ್ಟವಾದ ಶಬ್ದಾರ್ಥಗಳೇ ಕಾವ್ಯ" ಎಂಬುದನ್ನು ಒಪ್ಪಿದ್ದರೂ, ಕೆಲವರು ಶಬ್ದ ಮುಖ್ಯ ಎಂದೂ, ಕೆಲವರು ಅರ್ಥ ಮುಖ್ಯ ಎಂದೂ, ಇತರರು ಎರಡೂ ಮುಖ್ಯ ಎಂದೂ ವಾದಿಸುವರು. ಗುಣಾಲಂಕಾರಗಳು ಇರಬೇಕೆಂದು ಅನೇಕರ ಅಭಿಪ್ರಾಯ. ಕೆಲವರು 'ಅಲಂಕಾರಗಳು ಬಹಳ ಮಟ್ಟಿಗೆ ಇರಬೇಕು; ಕೆಲವೆಡೆಯಲ್ಲಿ ಇರದಿದ್ದರೂ ಆಗಬಹುದು' ಎನ್ನುವರು. ಅರ್ಥವು ರಮಣೀಯವಾಗಿರಬೇಕೆಂದು ಕೆಲವರೂ, ಅದು ಇಷ್ಟವಾಗಿರಬೇಕೆಂದು ಕೆಲವರೂ, ರಸಾತ್ಮಕವಾಗಿರಬೇಕೆಂದು ಕೆಲವರೂ ಹೇಳಿದ್ದಾರೆ. ಕಾವ್ಯಕ್ಕೆ ಗುಣಗಳು ಪ್ರಾಣವೆಂದು ಒಬ್ಬರೂ, ಆದಕ್ಕೆ ರೀತಿಯು

ಆತ್ಮವೆಂದು ಮತ್ತೊಬ್ಬರೂ, ವಕ್ರೋಕ್ತಿಯೇ ಸರ್ವಸ್ವವೆಂದು ಮತ್ತೊಬ್ಬರೂ, ಧ್ವನಿಯುಂ ಆತ್ಮವೆಂದು ಮತ್ತೊಬ್ಬರೂ, ರಸವು ಆತ್ಮವೆಂದು ಇನ್ನೊಬ್ಬರೂ ಅಭಿಪ್ರಾಯಪಡುವರು. ಈ ರೀತಿಯಾಗಿ ಇನ್ನು ಎಷ್ಟೋ ವಿಧವಾಗಿ ಕಾವ್ಯ ಲಕ್ಷಣವನ್ನು ಪ್ರತಿಪಾದಿಸುವ ಸಂದರ್ಭದಲ್ಲಿ ಸಂಸ್ಕೃತ ಲಾಕ್ಷಣಿಕರ ವಾದ ಪ್ರಪಂಚವು ವಿಸ್ತಾರವನ್ನು ಹೊಂದಿರುವುದು. ಈ ಭಾಷಣದಲ್ಲಿ ಇಷ್ಟುಮಟ್ಟಿಗಾದರೂ ಇವರ ವಾದವನ್ನು ವಿವರಿಸಿದ ಕಾರಣವು ಮುಂದೆ ಸ್ಪಷ್ಟವಾಗುವುದು.

**ಕನ್ನಡದ ಲಾಕ್ಷಣಿಕರು.**—ಇವರಲ್ಲಿ ನೃಪತುಂಗನೇ (೯ನೆಯ ಶತಾಬ್ದ) ಪ್ರಾಚೀನನು. ಈತನ "ಕವಿರಾಜಮಾರ್ಗ"ವು ಬಹು ಮಟ್ಟಿಗೆ ದಂಡಿಯ "ಕಾವ್ಯಾದರ್ಶ"ದ ಅನುವಾದವಾಗಿದೆ. ನಾಗವರ್ಮನ (೧೨ನೆಯ ಶತಾಬ್ದ) "ಕಾವ್ಯಾವಲೋಕನ"ಕ್ಕೆ ವಾಮನ, ರುದ್ರಟ, ಭಾಮಹ, ದಂಡಿ, ಭರತ, ರಾಜಶೇಖರ—ಇವರ ಗ್ರಂಥಗಳು ಆಧಾರವಿದ್ದಂತೆ ಕಂಡುಬರುವುದು. ಇನ್ನು ಉದಯಾದಿತ್ಯನ (೧೨ನೆಯ ಶತಾಬ್ದ) "ಉದಯಾದಿತ್ಯಾಲಂಕಾರ"ವೆಂಬ ಗ್ರಂಥಕ್ಕೆ "ಕಾವ್ಯಾದರ್ಶವೇ" ಮುಖ್ಯಾಧಾರ. ಸುಮಾರು ೧೨ನೆಯ ಶತಾಬ್ದದಲ್ಲಿ ಕವಿಕಾಮನು ತನ್ನ "ಶೃಂಗಾರ ರತ್ನಾಕರ"ದಲ್ಲಿ ರಸ ಭಾವಾದಿ ವಿಚಾರವನ್ನೂ ನಾಯಕ ನಾಯಿಕಾದಿ ಲಕ್ಷಣವನ್ನೂ ವಿಸ್ತಾರವಾಗಿ ಪ್ರತಿಪಾದಿಸಿರುವನು. ಮಾಧವನು (ಸು. ೧೫೦೦) "ಮಾಧವಾಲಂಕಾರ"ವೆಂಬ ಹೆಸರಿನಿಂದ ದಂಡಿಯ "ಕಾವ್ಯಾದರ್ಶ"ವನ್ನು ಭಾಷಾಂತರ ಮಾಡಿದನು. ಸುಮಾರು ೧೫೫೦ರಲ್ಲಿ ಸಾಳ್ವನು "ರಸರತ್ನಾಕರವನ್ನು" ಬರೆದಿರುವನು. ಸುಮಾರು ೧೬೦೦ರಲ್ಲಿ ತಿಮ್ಮನು "ನವ ರಸಾಲಂಕಾರ"ವನ್ನು ಬರೆದನು. ತಿರುಮಲಾರ್ಯನು (೧೭ನೆಯ ಶತಾಬ್ದ) "ಅಪ್ರತಿಮವೀರಚರಿತ"ವನ್ನು "ಚಂದ್ರಾಲೋಕ," "ವಾಮನವೃತ್ತಿ," "ಕಾವ್ಯಪ್ರಕಾಶ" ಮೊದಲಾದವುಗಳ ಆಧಾರದಿಂದ ರಚಿಸಿರುವನು. ಲಿಂಗರಾಜನು (೧೯ನೆಯ ಶತಾಬ್ದ) "ನರಪತಿವಿಜಯ"ವನ್ನು "ಚಂದ್ರಾಲೋಕ"ವನ್ನನುಸರಿಸಿ ಬರೆದಿರುವನು.

ಇವರೆಲ್ಲರೂ ಸಂಸ್ಕೃತ ಗ್ರಂಥಗಳನ್ನನುಸರಿಸಿ ಸಾಹಿತ್ಯ ವಿಚಾರವನ್ನು ಬರೆದಿರುವರು. ಸಂಸ್ಕೃತ ಲಾಕ್ಷಣಿಕರಿಗೆ ಬದಲಾಗಿ ಇವರು ತಮ್ಮ ಗ್ರಂಥಗಳಲ್ಲಿ ಕಾವ್ಯ ಸ್ವರೂಪಾದಿ ವಿಚಾರದಲ್ಲಿ ಯಾವ ನೂತನ ಮಾರ್ಗವನ್ನೂ ಅನುಸರಿಸಿದಂತೆ ಕಂಡುಬರುವುದಿಲ್ಲ. ಸಂಸ್ಕೃತಾಲಂಕಾರಿಕರಲ್ಲಿಯೂ ಹೊಸ ವಿಚಾರಗಳೂ ಖಂಡನ ಮಂಡನಗಳೂ ಬಹು ಕಾಲಕ್ಕೆ ಹಿಂದೆಯೇ ನಿಂತುಹೋಗಿವೆ. ಈಚೆಗೆ ಅವುಗಳ ಅನುಕರಣಗಳೂ ವ್ಯಾಖ್ಯಾನಗಳೂ ಸಂಗ್ರಹಗಳೂ ಮಾತ್ರ ಕಂಡುಬರುತ್ತಿವೆ.

**ಕನ್ನಡಿಗರಲ್ಲಿ ಆಧುನಿಕ ಸಾಹಿತ್ಯ ಭಕ್ತರು.**—ಇವರಲ್ಲಿ ಕೆಲವರು ಸಂಸ್ಕೃತದವರ ಕಾವ್ಯ ಲಕ್ಷಣಗಳನ್ನೇ ಹೇಳುವವರಿರುವರು. ಮತ್ತೆ ಕೆಲವರು, ಕಾವ್ಯವೆಂದರೆ 'ಜನ ಜೀವನದ ವಿಮರ್ಶೆ, ಅದು ಹೃದಯದಲ್ಲಿ ಜನಿಸುವ ಭಾವಗಳಿಗೆ ರೂಪುಗೊಡುವ ಉತ್ತಮ ಸಾಹಿತ್ಯ, ಜನಜೀವನ ವಾಣಿ'—ಇತ್ಯಾದಿಯಾಗಿ ಕಾವ್ಯ ಸ್ವರೂಪವನ್ನು ಪ್ರತಿಪಾದಿಸುವರು. ಇದಲ್ಲದೆ, ಆಂಗ್ಲೇಯ ಸಾಹಿತ್ಯದಲ್ಲಿರುವ

'ಭಾವ ಕಲ್ಪನೆಗಳ ಭಾಷೆಯೇ ಪದ್ಯ ಕಾವ್ಯವು, ಸತ್ಯಾನಂದಗಳು ಛಂದೋ ಬದ್ಧ ಭಾಷೆಯಲ್ಲಿ ವ್ಯಕ್ತವಾದರೆ ಅದು ಪದ್ಯ ಕಾವ್ಯವೆನಿಸುವುದು, ಸ್ವಯಂ ಸ್ಫುರಿತವಾದ ಭಾವಾವೇಶವು ಶಬ್ದಾರ್ಥಗಳಲ್ಲಿ ಮೂರ್ತಿಮತ್ತಾಗಿ ನಿಲ್ಲುವದೇ ಪದ್ಯ ಕಾವ್ಯ'— ಇತ್ಯಾದಿ ಕಾವ್ಯ ಲಕ್ಷಣಗಳನ್ನೂ ಕೆಲವರು ಅಂಗೀಕರಿಸುವರು. ಅನೇಕರು ಸಂಸ್ಕೃತದ, ಕನ್ನಡದ, ಆಂಗ್ಲ ಭಾಷೆಯ ಈ ಕಾವ್ಯ ಲಕ್ಷಣಗಳನ್ನೂ ಇನ್ನಿತರ ಭಾಷೆಯಲ್ಲಿರುವ ಕಾವ್ಯ ಸ್ವರೂಪಗಳನ್ನೂ ವಿಮರ್ಶಿಸಿ, ಅವೆಲ್ಲವುಗಳನ್ನೂ ಸಮನ್ವಯ ಮಾಡಿ ತೋರಿಸುತ್ತಿರುವರು. ಇದೆಲ್ಲವೂ ನಮ್ಮ ಕನ್ನಡ ಸಾಹಿತ್ಯಾಭಿವೃದ್ಧಿಯ ಶುಭೋದಯವಲ್ಲವೇ?

ಮಹೋದಯರೆ! ಕಾವ್ಯ ವಿಷಯವಾಗಿ ಪ್ರಾಚೀನರ ಮತ್ತು ಆಧುನಿಕರ ವಿಚಾರದ ಅಲ್ಪ ವಿವರಣೆಯೇನೋ ಆದುದು. ಈಗ ನಾವು ಯಾವುದು ಕಾವ್ಯ ಲಕ್ಷಣವೆಂದು ನಿರ್ಧರಿಸಿದಂತಾಯಿತು? ಇನ್ನೂ ಯಾವುದನ್ನೂ ನಿರ್ಧರಿಸಲಿಲ್ಲ; ಆ ಭಾರವು ನಮ್ಮ ಕಡೆಗೆ ಹಾಗೆಯೇ ಉಳಿದಿದೆ. ಈಗಿನ ದೇಶ ಕಾಲ ಪರಿಸ್ಥಿತಿಗನುಸರಿಸಿ, ವಿಮರ್ಶಾತ್ಮಕ ದೃಷ್ಟಿಯಿಂದ ಸಮನ್ವಯ ಪದ್ಧತಿಯನ್ನೇ ಅನುಸರಿಸಿ ಕಾವ್ಯದ ಸ್ವರೂಪವನ್ನು ತಿಳಿದುಕೊಳ್ಳುವುದು ವಿಹಿತವೆಂದು ನನಗೆ ತೋರುವುದು. ಸಂಸ್ಕೃತ ಲಾಕ್ಷಣಿಕರೆಲ್ಲರೂ ಒಪ್ಪುವ, "ವಿಶಿಷ್ಟ ಶಬ್ದಾರ್ಥಗಳು ಕಾವ್ಯ" ಎಂಬುದೂ, ಅವರಲ್ಲಿ ಪ್ರತ್ಯೇಕವಾಗಿ ಹೇಳುವ ಮಮ್ಮಟನ "ದೋಷವಿಲ್ಲದೆಯೂ ಗುಣಾಲಂಕಾರಗಳಿಂದ ಕೂಡಿಯೂ ಇರುವ, ಪ್ರಾಯಿಕವಾಗಿ ಅಲಂಕಾರಗಳನ್ನೊಳಕೊಂಡ ಶಬ್ದಾರ್ಥಗಳೇ ಕಾವ್ಯ" ಎಂಬುದೂ, ವಿಶ್ವನಾಥನ, "ರಸಾತ್ಮಕ ವಾಕ್ಯವೇ ಕಾವ್ಯ" ಎಂಬುದೂ, ಜಗನ್ನಾಥನ "ರಮಣೀಯಾರ್ಥವನ್ನು ಪ್ರತಿಪಾದಿಸುವುದೇ ಕಾವ್ಯ" ಎಂಬುದೂ—ಇವೇ ಮೊದಲಾದ ವಾಕ್ಯಗಳು ಕಾವ್ಯ ರಚನಾ ಕ್ರಮವನ್ನೇ ಮುಖ್ಯೋದ್ದೇಶವಾಗಿಟ್ಟುಕೊಂಡು ಕಾವ್ಯ ಲಕ್ಷಣವನ್ನು ತಿಳಿಸುತ್ತಿರುವುವು. ಇವುಗಳಿಗೆ ಕಾವ್ಯ ಶರೀರವಾದ ಶಬ್ದಾರ್ಥಗಳ ಕಡೆಗೇ ಹೆಚ್ಚು ಲಕ್ಷ್ಯವಿರುವುದು. ಇನ್ನು, ಈಗಿನ ಸಾಹಿತ್ಯ ಭಕ್ತರ ಜನ ಜೀವನ ವಿಮರ್ಶ ಮೊದಲಾದ ವಾಕ್ಯಗಳು, ಕಾವ್ಯವು ವಿವರಿಸುವ ವಿಷಯವನ್ನೇ ಮುಖ್ಯವಾಗಿಟ್ಟುಕೊಂಡು ಕಾವ್ಯ ಲಕ್ಷಣವನ್ನು ಸೂಚಿಸುತ್ತಿರುವುವು. ಜೀವನ ವಿಮರ್ಶೆ, ಜೀವನ ಸಂಸ್ಕೃತಿ, ಜೀವನ ಸುಖೋಲ್ಲಾಸ ಮಾರ್ಗ ಮುಂತಾದುವು ಕಾವ್ಯದ ಶಬ್ದದಲ್ಲಿ ಚಿತ್ರಿತವಾಗಿರಬೇಕೆಂಬುದು ಇವುಗಳ ಧ್ಯೇಯ. ಈ ಎಲ್ಲಾ ವಾಕ್ಯಗಳ ಸಾರ ಗ್ರಾಹಿಯಾದ ಒಂದು ವಾಕ್ಯದಲ್ಲಿ ನಾವು ಕಾವ್ಯ ಸ್ವರೂಪವನ್ನು ಕಂಡುಕೊಳ್ಳಬೇಕಾದರೆ ಆ ವಾಕ್ಯವು ಹೀಗಿದ್ದರೆ ಸರಿಯಾಗುವುದೇ? ಎಂಬುದನ್ನೇ ನಿಮಗೆ ಹೇಳುವೆನು: "ಜೀವನ ವಿಕಾಸ ಮಾರ್ಗದ ಕೈಪಿಡಿಯಂತಿರುವ ಸವಿ ನುಡಿಯೇ ಕಾವ್ಯವು".

ಅಪ್ರಾಸಂಗಿಕವಾದರೂ ಒಂದೆರಡು ಮಾತುಗಳನ್ನು ಇಲ್ಲಿ ಹೆಚ್ಚಿಗೆ ಹೇಳಲು ತಮ್ಮ ಕ್ಷಮೆಯನ್ನು ಬೇಡುವೆನು: ಮಾನವ ಜೀವನವೇ ಧರ್ಮ ರೂಪವಾಗಿರುವುದೆಂಬುದೇ ಹಿಂದೂಗಳ ಅಭಿಪ್ರಾಯ. ಮನುಷ್ಯ ಜನ್ಮವೆಂದು ಬಂದಿತೋ ಅಂದೇ

ಧರ್ಮವು ಮನುಷ್ಯನಿಗೆ ಗಂಟುಬೀಳುವುದೆಂದು ಹಿಂದೂಗಳ ನೈತಿಕ ಸಿದ್ಧಾಂತವಿರುವುದು. ಈ ಮಾತು ವಿಚಾರಾರ್ಹವಾದುದು. ಮನುಷ್ಯನ ಧ್ಯೇಯವೇನಿರುವುದೆಂಬುದನ್ನು ವಿಚಾರ ಮಾಡಿದರೆ, ಪ್ರತಿಯೊಬ್ಬನ ಧ್ಯೇಯವೂ ಸ್ವಾತಂತ್ರ್ಯವೇ ಎಂಬುದು ಒಡೆದು ತೋರುವುದು. ಈ ಸ್ವಾತಂತ್ರ್ಯವನ್ನೇ ಭೌತಿಕ ಶಾಸ್ತ್ರಜ್ಞರು ಜೀವ ವಿಕಾಸವೆಂದೂ, ಅಧ್ಯಾತ್ಮಿಕ ತತ್ತ್ವಜ್ಞರು ಮುಕ್ತಿಯೆಂದೂ ಕರೆಯುವರು. ಇರುವೆ ಮೊದಲ್ಗೊಂಡು ಮನುಷ್ಯನ ವರೆಗೂ, ಇಷ್ಟೇ ಅಲ್ಲ, ನಮ್ಮ ಸುತ್ತ ಮುತ್ತಲೂ ಕಣ್ಣಿಗೆ ಬೀಳುವ ಚೇತನಾಚೇತನಾತ್ಮಕವಾದ ಪ್ರತಿಯೊಂದು ವಸ್ತುವೂ ಸ್ವಾತಂತ್ರ್ಯಕ್ಕಾಗಿಯೇ ಹೆಣಗಾಡುತ್ತಿರುವುದು. ಈ ಸ್ವಾತಂತ್ರ್ಯ ಸಂಗ್ರಾಮದ ಪರಿಣಾಮವೇ ಜಗತ್ತೆಂದು ಹೇಳಿದರೆ ತಪ್ಪಾಗದು. ಅಣುವು, ಉಳಿದ ಅಣುಗಳಿಂದ ದೂರಾಗಲಿಕ್ಕೂ, ಪೃಥ್ವಿಯು ಸೂರ್ಯನಿಂದ ಸಿಡಿದು ಪಾರಾಗಲಿಕ್ಕೂ, ಚಂದ್ರನು ಭೂಮಿಯಿಂದ ಬಿಡುಗಡೆಹೊಂದಲಿಕ್ಕೂ ಹೆಣಗಾಡುವುದು ಕಂಡುಬರುವುದು. ಭಗವದ್ಭಕ್ತರು ಭಗವದುಪಾಸನೆಯನ್ನು ಮಾಡುವುದಾದರೂ ಈ ಸ್ವಾತಂತ್ರ್ಯಕ್ಕಲ್ಲವೇ? ಜಗತ್ತಿನಲ್ಲಿ ಪ್ರತಿಯೊಂದು ಪದಾರ್ಥವೂ ತಿಳಿದೋ, ತಿಳಿಯದೆಯೋ ಸ್ವಾತಂತ್ರ್ಯ ರೂಪ ಧ್ಯೇಯದ ಕಡೆಗೇ ಓಡುತ್ತಿರುವುದು. ಹೀಗೆ ಸ್ವಾತಂತ್ರ್ಯಕ್ಕಾಗಿ ಬಡಿದಾಡುವುದೇ ಸೃಷ್ಟಿಯ ನಿಯಮವಾಗಿರುವುದು. ಈ ನಿಯಮವನ್ನು ವಸ್ತುವಿನ ನೈಸರ್ಗಿಕ ಧರ್ಮವೆಂದು ಹೇಳುವರು. ಮನುಷ್ಯನಾದರೂ ತನ್ನ ನೈಸರ್ಗಿಕ ಧರ್ಮಕ್ಕನುಸರಿಸಿ ಸ್ವಾತಂತ್ರ್ಯಕ್ಕಾಗಿ ಹೋರಾಡುವನು. ನಾಗರಿಕ ಸಂಸ್ಕೃತಿಯ ಗಂಧವಿಲ್ಲದ ಒಬ್ಬ ಕಾಡು ಮನುಷ್ಯನಾದರೂ ಒಂದಾನೊಂದು ಕಾಲದಲ್ಲಿ ಸ್ವತಂತ್ರನಾಗಿ ಸಂಪೂರ್ಣಾತ್ಮನಾಗುವನು. ಈ ರೀತಿಯಾದ ನೈಸರ್ಗಿಕ ಧರ್ಮ ಮಾರ್ಗಕ್ಕೆ ಜ್ಞಾನಿಗಳು ಪಿಪೀಲಿಕಾ ಮಾರ್ಗವೆಂದು ಹೇಳುವರು. ಈ ಮಾರ್ಗದಲ್ಲಿ ಕಾಲಾವಧಿಯು ಹೆಚ್ಚು. ಅಲ್ಪ ಕಾಲಾವಧಿಯಲ್ಲಿಯೇ ಪೂರ್ಣಾತ್ಮನಾಗುವ ಮಾರ್ಗವೊಂದಿರುವುದು. ಅದನ್ನು ವಿಹಂಗಮ ಮಾರ್ಗವೆಂದು ಹೇಳುವರು. ಇತರ ಪ್ರಾಣಿಗಳು ಪಿಪೀಲಿಕಾ ಮಾರ್ಗದಿಂದ ವಿಕಾಸವನ್ನು ಹೊಂದುತ್ತಿದ್ದರೆ, ಸಾಂಘಿಕ ಜೀವಿಯಾದ ಮನುಷ್ಯನು ವಿಹಂಗಮ ಮಾರ್ಗದಿಂದ ವಿಕಾಸವನ್ನು ಹೊಂದಲು ಯತ್ನಿಸುವನು. ಇತರ ಪ್ರಾಣಿಗಳಲ್ಲಿರದೆ ಮನುಷ್ಯನಲ್ಲಿ ಮಾತ್ರವಿರುವ ಅಂತಃ ಪ್ರಜ್ಞೆಯೇ ಈ ವಿಹಂಗಮ ಮಾರ್ಗವನ್ನು ಕಂಡುಹಿಡಿದಿರುವುದು. ಈ ವಿಹಂಗಮ ಮಾರ್ಗದ ಧರ್ಮವೇ ಮನುಷ್ಯ ಧರ್ಮ. "ಧರ್ಮೋ ಹಿ ತೇಷಾಮಧಿಕೋ ವಿಶೇಷಃ" ಎಂಬ ನೀತಿ ವಾಕ್ಯವು, ಪಶು ಪಕ್ಷಿಗಳಿಗಿಂತಲೂ ಮನುಷ್ಯನಿಗೆ ಧರ್ಮವೊಂದು ಹೆಚ್ಚಿಗಿರುವುದೆಂದು ಹೇಳಿರುವುದಾದರೂ ಈ ಮನುಷ್ಯ ಧರ್ಮವನ್ನೇ. ಈಗ ಸಂಘ ಜೀವಿಯಾಗಿ ಜನ್ಮವೆತ್ತುವ ಪ್ರತಿಯೊಬ್ಬ ಮನುಷ್ಯನೂ ಈ ಮನುಷ್ಯ ಧರ್ಮದಿಂದ ಬದ್ಧನಾಗಲಿಕ್ಕೆಬೇಕು. ಮಾನವ ಜಾತಿಯ ಬಾಲ್ಯಾವಸ್ಥೆಯು ಕಳೆದು ಸಂಘ ಜೀವನವು ಎಂದು ಪ್ರಾರಂಭವಾಯಿತೋ ಅಂದೇ ಈ ಮನುಷ್ಯ ಧರ್ಮದ ಉದಯವಾಗಿರುವುದು. ಸ್ವಾತಂತ್ರ್ಯದ, ಅಥವಾ ಜೀವ ವಿಕಾಸದ ತಿರುಳಾದ ಈ ಮನುಷ್ಯ ಧರ್ಮವನ್ನು ರಾಜನಂತೆ ವೇದಾದಿಗಳು ಅಧಿಕಾರ ವಾಣಿಯಿಂದ ಬೋಧಿಸುವುವು. ಇದನ್ನೇ, ಮಿತ್ರನಂತೆ ಪುರಾಣಾದಿ

ಗಳು ಕಥಾ ರೂಪದಿಂದ ವಿವರಿಸುವುವು. ಈ ಜೀವನ ವಿಕಾಸ ರೂಪ ಧರ್ಮವನ್ನೇ ಪ್ರಿಯಳಂತೆ ಸವಿ ನುಡಿಯಿಂದ ಹೇಳುತ್ತಿರುವುದು ಕಾವ್ಯವು.

ಚತುರ್ವರ್ಗ ಫಲ ಪ್ರಾಪ್ತಿಃ ಸುಖಾದಲ್ಪಧಿಯಾಮಪಿ । ಕಾವ್ಯಾದೇವ

ಎಂಬ ವಿಶ್ವನಾಥೋಕ್ತಿಯು ಇಂತಹ ಕಾವ್ಯದಿಂದಲೇ ಸಫಲ.

ಈಗಿನ ಪರಿಸ್ಥಿತಿಯಲ್ಲಿ ವೇದಾದಿಗಳ ಅಧಿಕಾರ ವಾಣಿಯೂ ಪುರಾಣ ಕಥೆಗಳೂ ಸವಿ ನುಡಿಯ ಕಾವ್ಯವಾಗಿ ಪರಿಣಮಿಸಬೇಕಾಗಿದೆ. ಏಕೆಂದರೆ, ನಮ್ಮ ಜೀವ ವಿಕಾಸ ರೂಪ ಧರ್ಮದ ಮುಖ್ಯ ಭಾಗಗಳು ಈಗ ಕಾವ್ಯಮಯವಾಗಿವೆ. ದೇವರ ನಾಮ ಕೀರ್ತನೆಯನ್ನು ಮಾಡುವ ಭಕ್ತರಿಗಂತೂ ಕಾವ್ಯವಿಲ್ಲದೆ ಮಾರ್ಗವಿಲ್ಲ. ಧರ್ಮ ಗುರುಗಳಾದರೂ—

ಸಿರಿಯು ಸತಿ ಸುತ ಹಿತರು ನಿಜವೆಂದು ನೆರೆ ನಂಬಿ ।
ಬರಿದೆ ಮೈಮರೆದು ಕೆಡದಿರು ಮಂದ ಮನುಜಾ ॥

ಎಂಬ ಕಾವ್ಯ ಮಾರ್ಗದಿಂದಲೇ ತಮ್ಮ ಶಿಷ್ಯರನ್ನು ಸಂಸಾರ ದುಃಖದಿಂದ ದೂರಾಗಿಸಿ ಪರಮಾರ್ಥದ ಕಡೆಗೆ ಒಯ್ಯಲು ಹವಣಿಸುತ್ತಿರುವರು.

**ಕಾವ್ಯಾನಂದ.**—ಕಾವ್ಯ ಪ್ರತಿಪಾದ್ಯವಾದ ಜೀವನ ವಿಕಾಸ ರೂಪ ಧರ್ಮದ ಸಂಸ್ಕಾರವೂ ವಿಕಾಸ ಮಾರ್ಗದಲ್ಲಿ ಪ್ರವೃತ್ತಿಯೂ ಕಾವ್ಯ ಪಾಠಕರಿಗೆ ಸುಖ ರೂಪ ವಾಗಿ ಸುಲಭವಾಗಿ ಉಂಟಾಗುತ್ತಿರುವುವು. ಏಕೆಂದರೆ, ಕಾವ್ಯವನ್ನು ಓದೋದುತ್ತ ಅದರ ಮಾಧುರ್ಯಾರ್ಥವು ಮನಸ್ಸಿಗೆ ಹೊಳೆದೊಡನೆ ಪಾಠಕರು ಒಂದು ವಿಧವಾದ ಆನಂದದಲ್ಲಿ ಮುಳುಗಿಬಿಡುವರು. ಇದೇ ಕಾವ್ಯಾನಂದವು. ಸಂಗೀತ ರಸಜ್ಞನು ಮಧುರವಾದ ಗಾನವನ್ನು ಕೇಳಿದೊಡನೆ ಆನಂದದಿಂದ ಮೈ ಮರೆತು, ತಾನೂ ಆ ಗಾನದ ಹಾಡನ್ನು ಗುನುಗುಟ್ಟಲಾರಂಭಿಸುವನು; ಯಾರೂ ಇಲ್ಲದ ಸಮಯದಲ್ಲಿ ಹೇಗೋ ಅದನ್ನು ಅಂದುಬಿಡುವನು; ಅಷ್ಟಕ್ಕೆ ತೃಪ್ತನಾಗದೆ ಗಾಯಕನ ಸ್ನೇಹ ಹಿಡಿದು ಪುನಃ ಪುನಃ ಆ ಗಾನವನ್ನು ಕೇಳಿ ಅದರ ಬಲವಾದ ಸಂಸ್ಕಾರವನ್ನು ಹೊಂದು ವನು. ಕಡೆಗೆ ಗಾಯಕನಂತೆ ಸ್ವಲ್ಪ ಹೆಚ್ಚು ಕಡಿಮೆಯಾಗಿ ತಾನೂ ಒಂದು ದಿನ ಆ ಹಾಡನ್ನು ಹೇಳಿ ತೃಪ್ತನಾಗುವನು. ಇದು ಸಂಗೀತಾನಂದವನ್ನು ಅನುಭವಿಸುವ ರಸಿಕರಲ್ಲಿ ಉಂಟಾಗುವ ಸಂಗೀತ ಸಂಸ್ಕಾರ ಮತ್ತು ಅದರಲ್ಲಾಗುವ ಪ್ರವೃತ್ತಿಯ ಬಗೆ. ಕಾವ್ಯ ಪಾಠಕರ ಸ್ಥಿತಿಯಾದರೂ ಹೀಗೆಯೇ. ಓದಿದ ಕಾವ್ಯವನ್ನೇ ಪುನಃ ಪುನಃ ಓದುತ್ತ ಕಾವ್ಯಾನಂದವನ್ನನುಭವಿಸುತ್ತಿರುವ ಸಮಯದಲ್ಲಿಯೇ ಕಾವ್ಯ ಧರ್ಮದ ಸಂಸ್ಕಾರವೂ, ಅದರಲ್ಲಿ ಪ್ರವೃತ್ತಿಯೂ ಸುಲಭವಾಗಿ ಪಾಠಕರಲ್ಲಿ ನೆಲೆ ಗೊಂಡುಬಿಡುವುವು. ಈ ತೆರದ ಆನಂದವನ್ನನುಭವಿಸುತ್ತ ಆತ್ಮ ವಿಕಾಸವನ್ನು ಹೊಂದುವ ಜೀವಿಯೇ ಧನ್ಯನು. "ಪುಣ್ಯವಂತಃ ಪ್ರಮಿಣ್ವಂತಿ ಯೋಗಿವದ್ರಸಸಂತತಿಂ" ಎಂಬ ಪ್ರಾಚೀನೋಕ್ತಿಯು ಬ್ರಹ್ಮಾನಂದವನ್ನನುಭವಿಸುವ ಯೋಗಿಯಂತೆ ಕಾವ್ಯರಸ ಸಂತತಿಯನ್ನಾಸ್ವಾದಿಸುವವರೇ ಪುಣ್ಯವಂತರೆಂದು ಹೇಳುವುದು ಯಥಾರ್ಥವೆಂದು

ನನ್ನ ಭಾವನೆ. ಏಕೆಂದರೆ, ಯೋಗಿಗೆ ಬ್ರಹ್ಮ ಸಾಕ್ಷಾತ್ಕಾರವೂ ಬ್ರಹ್ಮಾನಂದವೂ ಉಂಟಾಗುವಂತೆ ಕಾವ್ಯಪಾಠಕನಿಗೆ ಆತ್ಮ ವಿಕಾಸವೂ ಕಾವ್ಯದ ಅಲೌಕಿಕಾನಂದವೂ ಉಂಟಾಗುವುವಲ್ಲವೆ? ಆನಂದಾನುಭವ ಸಮಯದಲ್ಲಿ ಉಭಯರೂ ತಮ್ಮ ಚಿತ್ತವನ್ನು ಲೌಕಿಕ ವಿಷಯದಿಂದ ದೂರಿರಿಸಿರುವರು.

ಸಂಸ್ಕೃತಾಲಂಕಾರಿಕರು ಈ ಕಾವ್ಯಾನಂದವನ್ನು "ಬ್ರಹ್ಮೈವ ರಸಃ ರಸೋವೈ ಸಃ" ಎಂಬ ಶ್ರುತಿ ಪ್ರಮಾಣವನ್ನು ಮುಂದುಮಾಡಿ ಬ್ರಹ್ಮಾನಂದ ಸದೃಶವಾದ ಅಲೌಕಿಕಾನಂದವೆಂದು ವರ್ಣಿಸಿರುವರು. ಈ ಆನಂದವೇ ರಸವು. ಅದು ಬ್ರಹ್ಮಾನಂದ ಸದೃಶವೆಂಬುದೇ ಅವರ ಅಭಿಪ್ರಾಯ. ಇದು ಬ್ರಹ್ಮಾನಂದ ಸದೃಶವೋ ಅಲ್ಲವೋ ಅದು ಚರ್ಚಾಸ್ಪದ ವಿಷಯ. ಕಾವ್ಯಾನಂದವು ಅಲೌಕಿಕಾನಂದವೆಂಬುದೇನೋ ನಮಗೆ ಅನುಭವಕ್ಕೆ ಬಂದಿರುವುದು. ಕಾವ್ಯ ಪ್ರಪಂಚದಲ್ಲಿ ದುಃಖವೆಂಬುದೇ ಇಲ್ಲ. ಬ್ರಹ್ಮ ಸೃಷ್ಟಿಯಲ್ಲಿ ದುಃಖಪ್ರದವೆಂದು ಭಾವಿಸಿರುವ ಸನ್ನಿವೇಶವೆಲ್ಲವೂ ಕಾವ್ಯ ಪ್ರಪಂಚದಲ್ಲಿ ಆನಂದಮಯವಾಗಿರುವುದು. ಕಾವ್ಯ ಜಗತ್ತಿನಲ್ಲಿ ವರ್ಣಿತವಾದ ಭಯಂಕರವಾದ ಅರಣ್ಯ ಮಧ್ಯದಲ್ಲಿ ನಾವು ಆನಂದದಿಂದ ವಿರಮಿಸುವೆವು. ಅಲ್ಲಿರುವ ಸಿಂಹ ಶಾರ್ದೂಲಾದಿಗಳು ನಮ್ಮ ಪ್ರೀತಿಯ ಜೀವಿಗಳು. ಅಲ್ಲಿಯ ರಣರಂಗವಂತೂ ನಮ್ಮ ವಿನೋದ ಸ್ಥಾನ. ರಣ ವರ್ಣನೆಯನ್ನು ನೋಡುವುದು ನಮಗೊಂದು ವಿನೋದ. ಕಾವ್ಯದಲ್ಲಿರುವ ಅದ್ಭುತ ಬೀಭತ್ಸಾದಿ ಸನ್ನಿವೇಶಗಳೂ ನಮಗೆ ಅಸಹ್ಯವನ್ನುಂಟು ಮಾಡದೆ ಆಶ್ಚರ್ಯಾನಂದಗಳನ್ನುಂಟುಮಾಡುತ್ತಿರುವುವು. ಕಾವ್ಯ ಲೋಕ ವಾಸಿಗಳಾದ ಸೀತಾ ರಾಮಾದಿಗಳ ದುಃಖದಿಂದ ನಾವು ದುಃಖಿತರಾಗಿದ್ದರೂ ನಮ್ಮ ಕಣ್ಣಲ್ಲಿ ಬರುವುದು ದುಃಖಾಶ್ರುವಲ್ಲ, ಆನಂದ ಬಾಷ್ಪ. ಅದನ್ನು ಕರುಣಾ ರಸವೆಂದು ಕವಿಗಳು ಕರೆಯುವರು. ವೀರ ಕರುಣಾದಿ ಯಾವ ಭಾವಗಳು ನಮ್ಮಲ್ಲಿ ಉಂಟಾದರೂ ಅವು ರಸವಾಗಿ ಪರಿಣಮಿಸುವುವು. ಈ ರಸಾ ಸ್ವಾದನದಿಂದುಂಟಾಗುವುದು ಅಲೌಕಿಕಾನಂದ. ಎಂದರೆ, ಕಾವ್ಯದಲ್ಲಿ ಶೋಕಾದಿ ಭಾವಗಳನ್ನುಂಟುಮಾಡುವ ಸೀತೆ ಮೊದಲಾದ ಆಲಂಬನ ವಸ್ತುಗಳು ಲೌಕಿಕ ವಿಷಯಗಳಂತೆ ಶೋಕಾದಿ ಭಾವವನ್ನಷ್ಟೇ ಉಂಟುಮಾಡದೆ ಶೋಕಾದಿ ಭಾವಗಳನ್ನು ಕರುಣಾದಿ ರಸಗಳನ್ನಾಗಿ ಮಾರ್ಪಡಿಸುವುವು. ಆ ರಸಗಳ ಆಸ್ವಾದನದಿಂದುಂಟಾಗುವ ಆನಂದವು ಲೌಕಿಕ ವಿಷಯಾನಂದಕ್ಕಿಂತಲೂ ಭಿನ್ನವಾಗಿರುವುದರಿಂದ ಅಲೌಕಿಕಾನಂದವೆಂದು ಕರೆಯಿಸಿಕೊಳ್ಳುವುದು.

ಕವಿ.—ಆತ್ಮೋದ್ಧಾರವೆಂದರೆ, ಆತ್ಮನ ಇರವೂ ಅರಿವೂ ಆನಂದ—ಇವುಗಳ ವಿಕಾಸದ ತತ್ತ್ವ ವಿಮರ್ಶೆ. ಯಾವನ ನವ ನುಡಿಯು ಕೃತಿಪಿಡಿಯಲ್ಲಿ ಪ್ರತಿಫಲಿತವಾಗುವುದೋ ಅವನೇ ಕವಿ. ಇಲ್ಲಿ ಆತ್ಮನ ಇರುವಿಕೆಯೆಂಬುದು ಅವನು ನಿತ್ಯವೆಂಬುದನ್ನು ಸೂಚಿಸುವುದು. ಸದಾ ಇರತಕ್ಕವನವನು ; ದೇಹವು ನಾಶವಾದರೆ ತಾನೂ ನಾಶವಾಗತಕ್ಕವನಲ್ಲ. ಇಂತಹ ಇರುವಿಕೆಯ ವಿಕಾಸವೆಂದರೆ, ಜನನ ಮರಣ ದೂರನಾಗಿ ಸ್ವಸ್ವರೂಪದಿಂದಲೇ ಇರುವ ಆತ್ಮನ ಪೂರ್ಣಾವಸ್ಥೆ. ಅರಿವಿನ ಮತ್ತು ಆನಂದದ ವಿಕಾಸವೆಂದರೆ ಸರ್ವಜ್ಞತೆ, ಸದಾನಂದ ಸ್ಥಿತಿ. ಇಂತಹ ಆತ್ಮೋ

ದ್ಧಾರದ ನಿಜ ಮಾರ್ಗವನ್ನು ತನ್ನ ಸವಿ ನುಡಿಯಿಂದ ಜಗತ್ತಿನ ಮುಂದಿಡುವವನೇ ಕವಿ. ಸರ್ವಜ್ಞತ್ವಾದಿ ಪ್ರಾಪ್ತಿಯ ತತ್ತ್ವವನ್ನು ತೋರಿಸುವವನು ಗುರು ; ಕವಿಯಲ್ಲವೆಂದು ನಾವು ತಿಳಿಯುವಂತಿಲ್ಲ. ಗುರುವು ಬೋಧಿಸುವುದಾದರೂ ಕವಿಯ ಸವಿ ನುಡಿಯನ್ನೇ ಅಲ್ಲ. ಅವನು ಬೋಧಿಸುವುದು ಋಷಿಗಳ ನುಡಿಯೆಂದರೆ, "ನಾನೃಷಿಃ ಕ್ರಿಯತೇ ಕಾವ್ಯಂ" (ಋಷಿಯಲ್ಲದವನು ಕಾವ್ಯ ರಚನೆಯನ್ನು ಮಾಡಲಾರನು) ಎಂಬ ಸೂಕ್ತಿಯು ಕವಿಯನ್ನು ಋಷಿಯೆಂದೇ ಹೇಳುವುದು. ಕವಿಯಲ್ಲಿ ಚಿತ್ತದ ಏಕಾಗ್ರತೆಯೂ, ತತ್ತ್ವ ವಿಚಾರವೂ, ಆ ವಿಚಾರದಿಂದುಂಟಾದ ಸ್ವಾನುಭವವೂ, ಆ ಸ್ವಾನುಭವವನ್ನು ಜಗತ್ತಿನ ಮುಂದಿಡುವ ಶಕ್ತಿಯೂ ಇರುವುವು. ಇಷ್ಟೇ ಅಲ್ಲ; ಅವನಲ್ಲಿ ಸಂಸಾರ ಸಂಬಂಧವಾದ ಕಷ್ಟ ನಷ್ಟಗಳುಂಟಾಗುತ್ತಿದ್ದರೂ, ಅವನು ಅವುಗಳಿಂದ ದುಃಖಿತನಾಗದೆ ಸೃಷ್ಟಿ ಸೌಂದರ್ಯದಿಂದುಂಟಾಗುವ ಆನಂದದಲ್ಲಿ ಮೈಮರೆಯುತ್ತಿರುವನು. ಆ ಆನಂದದ ಆವೇಶದಲ್ಲಿ ಹೃದಯದಲ್ಲುಂಟಾದ ತಾತ್ತ್ವಿಕ ಭಾವನಾ ತರಂಗವು ಬಾಯಿಂದ ಸವಿ ನುಡಿಯ ರೂಪದಿಂದ (ಕಾವ್ಯವಾಗಿ) ಹೊರಬೀಳುವುದು. ಜಗತ್ತಿನಲ್ಲಿರುವ ಸಹೃದಯರು ಅವನ ಸವಿ ನುಡಿಯ ಸವಿಯನ್ನು ಸವಿದು ತಾವೂ ಆನಂದದಿಂದ ಮೈಮರೆವರು. ಋಷಿ ಪದ ವಾಚ್ಯನಾದ ಇಂತಹ ಕವಿಯ ವಾಣಿಯನ್ನೇ ವ್ಯಾಕರಣಾದಿ ಶಾಸ್ತ್ರಗಳು ಬೆನ್ನಟ್ಟುವುವು. ಪ್ರಯೋಗ ಶರಣರಾದ ವೈಯಾಕರಣಿಗಳಿಗೂ "ಅಸ್ಮಿನ್ ವಿಷಯೇ ಋಷಿ ವಚನಮೇವ ಪ್ರಮಾಣಂ" ಎಂಬ ಇತರ ಶಾಸ್ತ್ರಕಾರರಿಗೂ ಕವಿಯ ಸ್ವತಂತ್ರ ವಾಣಿಯೇ ಆಧಾರ. ಕವಿ ವಾಣಿಯು "ನಿಯತಿ ಕೃತ ನಿಯಮ ರಹಿತವೂ, ಆಹ್ಲಾದೈಕಮಯವೂ, ಅನನ್ಯ ಪರ ತಂತ್ರವೂ, ನವ ರಸ ರುಚಿಕರವೂ ಆದ ನಿರ್ಮಿತಿಯನ್ನು (ನವ ಸೃಷ್ಟಿಯನ್ನು) ನಿರ್ಮಿಸುವುದು" ಎಂದು ಕಾವ್ಯಪ್ರಕಾಶಕಾರನು ಹೇಳಿದುದು ಯಥಾರ್ಥವಿರುವುದು. ಕವಿ ದೃಷ್ಟಿಯನ್ನು ಕಲ್ಪಿತ ಸೃಷ್ಟಿಯೆಂದು ನಾನು ಕರೆಯುವೆನು. ಅದನ್ನು ಹಾಗೆ ಕರೆಯದೆ ಆತ್ಮೋದ್ಧಾರದ ತಾತ್ತ್ವಿಕ ಸೃಷ್ಟಿಯೆಂದು ಕರೆಯುವುದು ವಿಹಿತವಲ್ಲವೇ? ಕವಿಯು ತನ್ನ ಕಾವ್ಯ ರಾಜ್ಯದಲ್ಲಿ ನಿರಂಕುಶ ಪ್ರಭುವಾಗಿರುವನು. ತನ್ನಧಿಕಾರ ನಿಯಮಕ್ಕೆ ತನ್ನ ಅಂತಃಕರಣ ಪ್ರವೃತ್ತಿಯನ್ನೇ ಪ್ರಮಾಣವೆಂದು ಗ್ರಹಿಸುವನು. ಆದರೆ, ಈ ನಿರಂಕುಶ ಪ್ರಭುತ್ವದ ಉದ್ದೇಶವು ಲೋಕೋದ್ಧಾರವು; ಸ್ವಾರ್ಥ ಸಾಧನೆಯಲ್ಲ.

ಇದೆಲ್ಲವೂ ಕವಿಗಳನ್ನು ವರ್ಣಿಸುವ ಅತಿಶಯೋಕ್ತಿಯೆಂದು ತಾವು ತಿಳಿಯಲಾರಿರೆಂದು ನಾನು ನಂಬಿರುವೆನು. ಕವಿಯು ಲೋಕ ಪ್ರಿಯನೆಂಬ ಬಿರುದನ್ನು ಹೊಂದಬೇಕಾದರೆ, ಅವನಲ್ಲಿ ಇಂತಹ ಅನನ್ಯ ಸಾಧಾರಣ ಶಕ್ತಿಯು ಇದ್ದೇ ಇರುವುದು. ಇನ್ನು, ಕವಿಗಳೆಲ್ಲರೂ ಇಂತಹ ಶಕ್ತಿಯುಳ್ಳವರೇ ಎಂದು ಕೇಳಿದರೆ ಇದಕ್ಕೆ ಬೇರೆ ಉತ್ತರವಿರುವುದು : ಕವಿಗಳಲ್ಲಿ ಎಷ್ಟೋ ವರ್ಗಗಳಿರುವುವೆಂದು ಹೇಳಬೇಕಾಗುತ್ತದೆ. ಲೋಕ ಪ್ರಿಯನಾದ ಉತ್ತಮ ಕವಿಯಲ್ಲಿ ಮಾತ್ರ ಮೇಲೆ ವಿವರಿಸಿದ ಸ್ವತಂತ್ರತೆಯನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಸವಿ ನುಡಿಯು ಕೆಲವರ ಹುಟ್ಟು ಗುಣವೆಂಬುದು ನಿಮ್ಮೆಲ್ಲರ ಅನುಭವದ ಮಾತು. ಓದು ಬರೆಹಗಳನ್ನು ಕಲಿಯದ ಕೆಲ ಕೆಲವು ಹಳ್ಳಿ

ಯವರಲ್ಲಿ ಎಂತಹ ಅಚ್ಚರಿಯ ಸವಿ ನುಡಿಯ ಬೆಡಗಿರುವುದೆಂಬುದನ್ನು ನಾನು ಅನೇಕ ಕಡೆಯಲ್ಲಿ ಕಂಡಿರುವೆನು. ಈ ಸವಿ ಮಾತುಗಾರರೇ ಹಳ್ಳಿಯ ರಸಿಕರು. ಲಾವಣಿ ಮೊದಲಾದ ಜನಪದ ಸಾಹಿತ್ಯದ ಕವಿಗಳಲ್ಲಿ ಇವರೂ ಸೇರತಕ್ಕವರು. ಓದು ಬರೆಹ ವನ್ನು ಕಲಿತ ಸವಿ ಮಾತುಗಾರರು ಜನಪದ ಸಾಹಿತ್ಯದಲ್ಲಿ ಉತ್ತಮ ವರ್ಗದ ಕವಿ ಗಳಾಗಬಹುದು; ಇನ್ನೂ ಹೆಚ್ಚಿನ ಅಭ್ಯಾಸದಿಂದ ಉತ್ತಮ ಸಾಹಿತ್ಯದ ಕವಿಗಳೂ ಆಗಬಹುದು. ಹುಟ್ಟುಗುಣವಾದ ಸವಿ ನುಡಿಯಲ್ಲಿ ನಾವು ಪ್ರತಿಭೆಯೆಂದು ಹೇಳುವ ಸ್ವತಸ್ಸಿದ್ಧವಾದ ಕವಿತಾ ಶಕ್ತಿಯ ಅಂಶವಿದೆ. ಅದನ್ನು ವಿದ್ಯಾಭ್ಯಾಸ, ನಾನಾ ಶಾಸ್ತ್ರ ಜ್ಞಾನ, ಲೋಕಾನುಭವ, ಸಾಹಿತ್ಯಜ್ಞರ ಸೇವೆ ಮೊದಲಾದವುಗಳಿಂದ ವೃದ್ಧಿ ಪಡಿಸಿಕೊಂಡರೆ ಹಳ್ಳಿಯ ಸವಿ ಮಾತುಗಾರನೇ ಮುಂದೆ ದೊಡ್ಡ ಕವಿಯಾಗುವನು. ಆ ವೃದ್ಧಿಯು ಹೆಚ್ಚು ಕಡಿಮೆಯಾದಂತೆ ಕವಿಗಳಲ್ಲಿಯೂ ಹೆಚ್ಚು ಕಡಿಮೆ ಯುಂಟಾಗುವುದು.

ಪ್ರತಿಭಾಸಂ ಕಾವ್ಯ ವಿದ್ಯಾ ಪ್ರಚಯ ಪರಿಚಯಂ ವೃದ್ಧ ಸೇವಾನುರಾಗಂ ।
ಸತತಾಭ್ಯಾಸ ಪ್ರಯತ್ನಂ ಕವಿತೆಗೆ ನಿಯತಂ ಕಾರಣಂ ॥

ಎಂದು "ಕಾವ್ಯಾವಲೋಕನ"ವು ಕವಿತೆಯ ಕಾರಣವನ್ನು ಹೇಳಿರುವುದು. ಕಾವ್ಯ ವಿದ್ಯಾಭ್ಯಾಸಾದಿಗಳು ಅನೇಕರಲ್ಲಿರಬಹುದು. ಪ್ರತಿಭೆಯೊಂದಿಲ್ಲದಿದ್ದರೆ ಕವಿಯಾಗ ಲಾರನು. ಏಕೆಂದರೆ, ಕಾವ್ಯಕ್ಕೆ ಕವಿಯಲ್ಲಿರುವ ಕೇವಲ ಪ್ರತಿಭೆಯೇ ಕಾರಣ. ಕಾವ್ಯ ವಾಗುವುದಕ್ಕೆ ಅನುಕೂಲವಾದ ಶಬ್ದಾರ್ಥಗಳು ಹೊಳೆಯುವುದೇ ಆ ಪ್ರತಿಭೆಯು. ಇದೇ ಕವಿತೆಗೆ ಮೂಲ ಕಾರಣವಾದ ಬೀಜ. ಕಾವ್ಯ ವಿದ್ಯಾಭ್ಯಾಸಾದಿಗಳು ಇದಕ್ಕೆ ಸಂಸ್ಕಾರಕಗಳೆಂದು ಜಗನ್ನಾಥಪಂಡಿತನ ಅಭಿಪ್ರಾಯವಿದೆ. ಈ ಅಭಿಪ್ರಾಯವು ಸರಿಯಾದುದೆಂದು ಅನೇಕರೊಪ್ಪುವರು. ಆದರೆ ಪ್ರತಿಭೆಯೆಂಬುದು ಕವಿಗಳಿಗೆ ಮಾತ್ರ ಸಂಬಂಧಿಸಿದ ಸ್ವತ್ತೆಂದು ತಿಳಿಯಲಾಗದು. ಅವನಲ್ಲಿ ಅದು ಪೂರ್ಣ ವ್ಯಕ್ತವಾಗಿದ್ದರೆ ನಮ್ಮೊಳಗೆ ಕೆಲವರಲ್ಲಿ ಅವ್ಯಕ್ತವಾಗಿಯೂ ಕೆಲವರಲ್ಲಿ ಸ್ವಲ್ಪ ವ್ಯಕ್ತವಾಗಿಯೂ ಇರ ಬಹುದು. ಆ ಕವಿಯ ಪ್ರತಿಭಾ ಸಂಪತ್ತಿನ ಅಲ್ಪಾಂಶವಾದರೂ ನಮ್ಮಲ್ಲಿರುವುದ ರಿಂದಲೇ ಅವನ ಮಾತಿನ ಸವಿಯು ನಮ್ಮೆದೆಯನ್ನು ಕರಗಿಸುವುದು. ಮತ್ತು—

ಇನಿಯಳ ಸೋಂಕಿನಂತೆ ಪೊಸ ಮಾವಿನ ಪೂವಿನ ಜೊಂಪದಂತೆ ಚಂ
ದನ ರಸದಣ್ಪಿನಂತೆ ನನೆಯೇರಿದ ಮಲ್ಲಿಗೆಯಂತೆ ಪೂರ್ಣ ಚಂ।
ದ್ರನ ಸಿರಿಯಂತೆ ಬಂದೆಸವ ತೆಂಕಣ ತೆಂಬೆಲರಂತೆ ರುದ್ರಭ
ಟ್ಟನ ಕವಿತಾ ರಸಂ ಮನಮನಿಳ್ಕುಳಿಗೊಳ್ಳುದು ಸಜ್ಜನರ್ಕಳಾ ॥

ಎಂದು ಮೊದಲಾಗಿ ಹೇಳುವ ಕವಿವರರ ಮಾತಿನಂತೆ ಅವರ ಕವಿತೆಯು ನಮ್ಮ ಮನವನ್ನು ಸೆಳೆದುಕೊಳ್ಳುವುದು.

ಕವಿಯಂತೆ ನಾವು ಅಭ್ಯಾಸಾದಿ ಸಾಧನದಿಂದ ವಾಚನ ವೈಭವವನ್ನು ಪಡೆಯದ ಕಾರಣ ಮೂಕರಂತಿರುತ್ತೇವೆ. ಕವಿಯಾದವನು ಮಾತ್ರ ತನ್ನನುಭವವನ್ನು ಕಾವ್ಯ

ಮುಖದಿಂದ ನಮ್ಮ ಮುಂದಿಡುವನು. ಆಗ ನಮ್ಮಲ್ಲಿ ಅವ್ಯಕ್ತವಾಗಿಯೋ ಸ್ವಲ್ಪ ವ್ಯಕ್ತವಾಗಿಯೋ ಇರುವ ಕಾವ್ಯ ಮೂಲ ಗುಣವಾದ ಪ್ರತಿಭೆಯು ತನ್ನ ಯೋಗ್ಯತೆಗೆ ತಕ್ಕಂತೆ ಕಾವ್ಯದ ಸವಿಯನ್ನು ಸವಿದು ಅಷ್ಟರಿಂದಲೇ ತೃಪ್ತಿಯನ್ನು ಹೊಂದುವುದು.

**ಕಾವ್ಯ ಸಾಮಗ್ರಿ.**—ಕವಿಯ ಮತ್ತು ಕಾವ್ಯದ ವೈಭವವನ್ನು ಎಷ್ಟು ವರ್ಣಿಸಿದರೂ ತೀರದು. ಆ ವೈಭವವನ್ನು ನಿಮ್ಮ ಮನಸ್ಸಿಗೆ ತೃಪ್ತಿಯಾಗುವಂತೆ ಸವಿ ನುಡಿಯಿಂದ ವರ್ಣಿಸುವ ಶಕ್ತಿಯು ನನ್ನಲ್ಲಿಲ್ಲ. ಇನ್ನು, ಕಾವ್ಯ ಸಾಮಗ್ರಿಯ ವಿಷಯವಾಗಿ ಎರಡು ಮಾತು ಹೇಳಬೇಕಾಗಿದೆ. ಸದ್ಯದ ಸಾಹಿತ್ಯ ಭಕ್ತರಲ್ಲಿ ಕಾವ್ಯ ಸಾಮಗ್ರಿಯ ವಿಷಯವಾಗಿ ವಾದ ವಿವಾದಗಳು ನಡೆಯುತ್ತಲೇ ಇರುವುವು. ಇದು ಸಾಹಿತ್ಯಾಭಿವೃದ್ಧಿಯ ಶುಭ ಸೂಚನೆ. ಈ ವಾದಾಂತದಲ್ಲಿ ಯಾವುದಾದರೊಂದು ನಿರ್ಣಯವಂತೂ ಆಗಲೇಬೇಕು. ಆ ನಿರ್ಣಯವನ್ನನುಸರಿಸಿ ಸಾಹಿತ್ಯ ಭಕ್ತರು ಇತೋಪ್ಯತಿಶಯವಾಗಿ ಸಾಹಿತ್ಯ ಸೇವೆಯನ್ನು ಮಾಡಿ ಅದರ ವೃದ್ಧಿಯನ್ನು ಮಾಡದೆ ಬಿಡಲಾರರೆಂದು ನಾನು ನಂಬಿರುವೆನು. ಕಾವ್ಯ ರಚನೆಗೆ ವ್ಯಾಕರಣ, ಛಂದಸ್ಸು, ಅಲಂಕಾರ ಮೊದಲಾದವುಗಳ ಅನುಭವ, ಕವಿಸಮಯದ ಪರಿಚಯ, ಪ್ರಾಚೀನ ಕಾವ್ಯಗಳ ಅಭ್ಯಾಸ—ಇವೇ ಮುಂತಾದವುಗಳು ಅವಶ್ಯವೆಂಬುದನ್ನು ಎಲ್ಲರೂ ಒಪ್ಪುವರು. ಕೆಲವರು, "ಹಳಗನ್ನಡದ ವ್ಯಾಕರಣಗಳನ್ನೂ, ಈಗಿರುವ ಅಲಂಕಾರ ಛಂದಸ್ಸುಗಳ ಗ್ರಂಥಗಳನ್ನೂ ಅನುಸರಿಸಿ ಕವಿತೆಗಳನ್ನು ಬರೆಯಬೇಕು; ಹೆಚ್ಚಿಗೆ ಬೇಕಾದ ಕವಿತಾ ವಿಷಯಗಳನ್ನು ಸಂಸ್ಕೃತ ಗ್ರಂಥಗಳ ಆಧಾರದಿಂದ ಪಡೆಯಬಹುದು. ಇಂಗ್ಲೀಷು ಮೊದಲಾದ ಭಾಷೆಗಳ ಸಾಹಿತ್ಯ ಪದ್ಧತಿಯನ್ನನುಸರಿಸುವುದು ನಮ್ಮ ಸಾಹಿತ್ಯದ ಅವನತಿಗೆ ಕಾರಣ"—ಇತ್ಯಾದಿಯಾಗಿ ವಾದಿಸುತ್ತಿರುವರು. ಮತ್ತೆ ಕೆಲವರು, "ಕವಿತೆಗೆ ವ್ಯಾಕರಣಾದಿಗಳು ಸಂಕಲೆಗಳು. ಇವುಗಳಿಂದ ಕವಿತಾ ಶಕ್ತಿಯು ಕುಗ್ಗಿ ಹೋಗುವುದಲ್ಲದೆ ವಿಕಾಸವಾಗುವುದಿಲ್ಲ. ಕವಿಯ ಹೃದ್ಗತ ಭಾವಗಳು ಯಾವ ನಿರ್ಬಂಧಕ್ಕೂ ಒಳಗಾಗದೆ ಸ್ವತಂತ್ರತೆಯಿಂದ ಹೊರಬಿದ್ದರೆ, ಆ ಭಾವಗಳಲ್ಲಿ ಸತ್ಯ ಸೌಂದರ್ಯವು ಎದ್ದು ಕಾಣುವುದು. ಹಳಗನ್ನಡದ ಕಾಲವು ಹಳೆಯದು. ಆ ಕಾಲದ ಭಾಷಾ ನಿಯಮಗಳು ಈ ನವೀನ ಕಾಲಕ್ಕೆ ಸರಿಬಾರವು. ಪ್ರತಿಯೊಂದು ವಿಷಯಕ್ಕೂ ಸಂಸ್ಕೃತವನ್ನೇ ಮರೆವೊಗುವುದು ಅವಿಚಾರ ರಮಣೀಯವು. ಇಂಗ್ಲೀಷು ಮೊದಲಾದ ಭಾಷೆಗಳ ಸಾಹಿತ್ಯ ಸೌಂದರ್ಯವು ದಿನಕ್ಕೊಂದು ಛಾಯೆಯಿಂದ ಜನತೆಯ ಬಗೆಯನ್ನಾಕರ್ಷಿಸುತ್ತಿರುವುದು. ಈ ತೆರದ ಸೌಂದರ್ಯವು ಕನ್ನಡದ ಸಾಹಿತ್ಯಕ್ಕೂ ಇರದಿದ್ದರೆ ಸದ್ಯದ ಕನ್ನಡಿಗರ ಮನಸ್ಸು ಸಾಹಿತ್ಯದ ಕಡೆಗೆ ತಿರುಗಲಾರದು"—ಇತ್ಯಾದಿಯಾಗಿ ಚರ್ಚಿಸುವರು. ಈ ಚರ್ಚೆಯನ್ನು ಕೇಳಿದೊಡನೆ ಸಂಸ್ಕೃತಾಭಿಮಾನಿಗಳಾದ ಕೆಲವರ ಕಣ್ಣು ಕೆಂಪಗಾಗುವುದು. "ಸಂಸ್ಕೃತದ ಸಹಾಯವಿಲ್ಲದಿದ್ದರೆ ಕನ್ನಡದಲ್ಲಿ ಪಾಂಡಿತ್ಯವೇ ಉಂಟಾಗಲಾರದು. ಕನ್ನಡದ ಸಾಹಿತ್ಯವು ಹುಟ್ಟಿ ಬೆಳೆದು ಪುಷ್ಟವಾಗಿರುವುದು ಸಂಸ್ಕೃತದಿಂದಲೇ. ಸಂಸ್ಕೃತ ಪದಗಳ ಮರೆವೊಗದಿದ್ದರೆ ಕನ್ನಡದ ಕವಿತೆಗೆ ಗತಿಯಿಲ್ಲ. ಆ ಪದಗಳ ಆವಶ್ಯಕತೆಯಿರುವುದರಿಂದ

ಸಂಸ್ಕೃತದ ಸಂಧಿ ಸಮಾಸಾದಿ ಜ್ಞಾನವು ಬೇಕೇ ಬೇಕು. ಈ ರೀತಿಯಾಗಿ ಸಂಸ್ಕೃತದ ಸಹಾಯವಿಲ್ಲದಿದ್ದರೆ ಕನ್ನಡದ ಆಟವು ನಡೆಯದು"—ಎಂದು ಮುಂತಾಗಿ ಅವರು ಆರ್ಭಟಿಸುವರು. ಸದ್ಯದಲ್ಲಿ ಕನ್ನಡ ಭಾಷೆಯ ಮತ್ತು ಸಾಹಿತ್ಯದ, ಹಾಗೂ ಕಾವ್ಯ ಸಾಮಗ್ರಿಯ ವಿಷಯದಲ್ಲಿ ಇನ್ನೂ ಅನೇಕ ವಿಧದ ಚರ್ಚೆಗಳು ನಡೆಯುತ್ತಿರುವುವು. ಈ ತೆರದ ಚರ್ಚೆಯು ನಮ್ಮ ಸಾಹಿತ್ಯದ ಏಳ್ಗೆಗೆ ಬೇಕಾಗಿದೆ. ಈ ಚರ್ಚೆಯಿಂದ ಮುಂದೆ ನಮ್ಮ ಸಾಹಿತ್ಯ ವಾಗ್ದೇವಿಯು ಸರ್ವಾಂಗ ಸುಂದರಳಾಗಿ ರಾಜಿಸುವಳೆಂಬ ಆಶೆಯು ನನ್ನಲ್ಲಿದೆ. ಈ ವಿಷಯವಾಗಿ ನನ್ನ ಅಭಿಪ್ರಾಯವನ್ನು ತಮಗೆ ತಿಳಿಸಲಾಶಿಸುವೆನು. ಅದರ ಯೋಗ್ಯಾಯೋಗ್ಯ ನಿರ್ಣಯವು ತಮ್ಮದಾಗಿದೆ.

ನಮ್ಮ ನಾಡಿನ ವೈಶಿಷ್ಟ್ಯವೊಂದಿದೆ: ಅದು ಪ್ರಾಚೀನತಮವಾದುದು ಎಂಬುದನ್ನು ಮೊದಲು ಹೇಳಿರುವೆನು. ಆ ವೈಶಿಷ್ಟ್ಯದಲ್ಲಿ ನಮ್ಮ ಭಾಷೆಯ ಮತ್ತು ಸಾಹಿತ್ಯದ ವೈಶಿಷ್ಟ್ಯವೂ ಅಡಕವಾಗಿದೆ. ಸಂಸ್ಕೃತದ ಸಂಬಂಧವನ್ನು ಪಡೆಯುವುದಕ್ಕೆ ಮೊದಲೇ ನಮ್ಮ ಭಾಷೆಯು ಅಸ್ತಿತ್ವದಲ್ಲಿದ್ದಿತೆಂಬುದನ್ನು ಸರ್ವರೂ ಒಪ್ಪುವರು. ಆಗ ಭಾಷೆಯೊಡನೆ ಸಾಹಿತ್ಯವೂ ಇದ್ದಿತು. ಸಾಹಿತ್ಯವೆಂಬುದು ಭಾಷೆಯೊಡನೆಯೇ ಹುಟ್ಟಿರುತ್ತದೆ. ಭಾವೋದ್ರೇಕದಲ್ಲಿ ಹೊರಬೀಳುವ ಭಾಷೆಯೇ ಸಾಹಿತ್ಯವು. ಮನುಷ್ಯನಲ್ಲಿ ಆಗಾಗ ಭಾವೋದ್ರೇಕವಾಗುವುದು ಸ್ವಾಭಾವಿಕ. ಕ್ರೋಧ ಭಾವವು ಅಧಿಕವಾದ ಸಮಯದಲ್ಲಿ ಸಾಹಿತ್ಯವೆಂಬ ಹೆಸರನ್ನರಿಯದ ಹೆಂಗಸು, "ನಿನ್ನ ಹೊಟ್ಟೆ ಉರಿಯಾ", "ನಿನ್ನ ಮೂತಿ ಸುಡಾ" ಎಂದು ಹೇಳಿಬಿಡುವಳು. ಈ ರೀತಿಯಾಗಿ ಕ್ರೋಧವೇ ಮೊದಲಾದ ಭಾವಗಳ ಆವೇಶದಲ್ಲಿ ಹೊರಬೀಳುವ ಭಾಷೆಗೆ ಬರಬರುತ್ತ ನಿಯಮಗಳುಂಟಾಗಿ ಸಾಹಿತ್ಯ ಶಾಸ್ತ್ರವಾಗುವುದು. ವ್ಯಾಕರಣ ಶಾಸ್ತ್ರವು ಹುಟ್ಟುವುದಕ್ಕೆ ಪೂರ್ವದಲ್ಲಿಯೇ ಹೇಗೆ ಭಾಷಾ ಪ್ರಪಂಚವು ಅಭಿವೃದ್ಧಿಯಾಗಿದ್ದಿತೋ ಹಾಗೆಯೇ ಸಾಹಿತ್ಯ ಶಾಸ್ತ್ರವು ಹುಟ್ಟುವುದಕ್ಕೆ ಬಹು ಕಾಲ ಪೂರ್ವದಲ್ಲಿಯೇ ಮಾನವ ವ್ಯವಹಾರದಲ್ಲಿ ಭಾವೋದ್ರೇಕದಿಂದ ಹೊರಬೀಳುವ ಭಾಷೆಯು (ಸಾಹಿತ್ಯವು) ವಿಸ್ತಾರವನ್ನು ಹೊಂದುತ್ತಿದ್ದಿತು. ಈ ತೆರದ ಸಾಹಿತ್ಯವನ್ನೇ ನಾವು ಈಗ ಜನಪದ ಸಾಹಿತ್ಯವೆಂದು ಕರೆಯುವೆವೆಂದರೆ ತಪ್ಪಾಗದಲ್ಲವೆ? ಕನ್ನಡದಲ್ಲಿ ಮೊಟ್ಟ ಮೊದಲು ಈ ವಿಧದ ಜನಪದ ಸಾಹಿತ್ಯವೇ ಅಲ್ಲದೆ ಗ್ರಾಂಥಿಕ ಸಾಹಿತ್ಯವೂ ಇದ್ದು, ತನ್ನದೊಂದು ಸಾಹಿತ್ಯ ವೈಶಿಷ್ಟ್ಯವನ್ನು ಕಾಪಾಡಿಕೊಂಡಿದ್ದಿತೆಂದು ದ್ರಾವಿಡ ವಾಙ್ಮಯದ ಪರಿಶೋಧನದಿಂದ ಊಹಿಸಲವಕಾಶವಿದೆ.

ಆರ್ಯ ದ್ರಾವಿಡರ ಸಂಸ್ಕೃತಿಗಳು ಬೆರೆತು ಹೋದ ಮೇಲೆ, ದ್ರಾವಿಡ ವಾಙ್ಮಯದ ಭಾಗವಾದ ಕನ್ನಡ ಸಾಹಿತ್ಯವೂ ಸಂಸ್ಕೃತ ಸಾಹಿತ್ಯದ ಅನೇಕ ನಿಯಮಗಳನ್ನು ಅಂಗೀಕರಿಸಿತು. ಕನ್ನಡದಲ್ಲಿಯೂ ವ್ಯಾಕರಣ, ಛಂದಸ್ಸು, ಅಲಂಕಾರ ಮೊದಲಾದ ವಿಷಯವನ್ನು ಪ್ರತಿಪಾದಿಸುವ ಗ್ರಂಥಗಳೂ ಉತ್ತಮ ಕಾವ್ಯಗಳೂ ಹೊರಬಿದ್ದುವು. ಸಂಸ್ಕೃತದಿಂದ ಕನ್ನಡಕ್ಕೆ ಬೇಕಾದಷ್ಟು ಸಹಾಯವು ದೊರೆತಿರುವುದು ನಿಜ. ಆದರೆ ಸಂಸ್ಕೃತದ ಎಷ್ಟೇ ಸಹಾಯವನ್ನು ಹೊಂದಿದ್ದರೂ ಕನ್ನಡಿಗರು ತಮ್ಮದೊಂದು ವೈಶಿಷ್ಟ್ಯವನ್ನು ಬಿಟ್ಟಿಲ್ಲ.

ನಡೆದುದೆ ಮಾರ್ಗಂ ಪದವಿಡೆ ।
ತೊಡರಿಸಿದುದೆ ಭಂಗಿ ಕೇಶವಂಗಿದಿರುಂಟೇ ॥
ತೊಡಗಿದ ಕೃತಿಗಳೊಳಾನೆಯ ।
ನಡು ಬಡವೇ? ತಾನೆ ಲೋಕದೊಳ್ ಲಾಕ್ಷಣಿಕಂ !"

ಎಂಬ ನೆಗಳ್ತೆಯ ಕೇಶಿರಾಜನು.—

ಗಮಕ ಸಮಾಸದಿಂ ಜ ಬ ಕುಳಕ್ಷಳದಿಂ ಶ್ರುತಿ ಸಹ್ಯ ಸಂಧಿಯಿಂ ।
ಸಮುಚಿತವಾಗಿ ಬರ್ಪ ಸತಿಸಪ್ತಮಿಯಿಂ ಸಮಸಂಸ್ಕೃತೋಕ್ತಿಯಿಂ ॥
ವ ಮ ಹ ಪ ಭೇದದಿಂ ವಿರಹಿತಾವ್ಯಯ ಸಂಸ್ಕೃತ ಲಿಂಗದಿಂ ಪದೋ ।
ತ್ತಮ ಶಿಥಿಲತ್ವದಿಂ ಯತಿ ವಿಲಂಘನದಿಂದರಿದಲ್ತೆ ಕನ್ನಡಂ ॥

ಎಂದು ಹೇಳಿ, ಕನ್ನಡ ಸಾಹಿತ್ಯದ ವೈಶಿಷ್ಟ್ಯವನ್ನು ಸೂಚಿಸಿರುವನು.

ಮಹೋದಯರೆ! ನಾವು ಹಿಂದೆ ಸಂಸ್ಕೃತದ ಸಹಾಯವನ್ನು ಪಡೆದಂತೆ, ಬೇಕಾದರೆ ಮುಂದೆಯೂ ಪಡೆಯಬಹುದು. ಹಾಗೂ, ಇಂಗ್ಲೀಷು, ಹಿಂದೀ ಮುಂತಾದ ಭಾಷೆಗಳ ಸಾಹಿತ್ಯದಲ್ಲಿರುವ ಉತ್ತಮವಾದ ಪದ್ಧತಿಗಳನ್ನು ತೆಗೆದು ಕೊಳ್ಳುವುದರಲ್ಲಿಯೂ ಅಡ್ಡಿಯಿಲ್ಲ. ಈಗ ಹೊರಬೀಳುತ್ತಿರುವ ಭಾವ ಗೀತೆಗಳು, ಸಣ್ಣ ಕತೆಗಳು ಮುಂತಾದವು ಇತರ ಸಾಹಿತ್ಯದ ಪದ್ಧತಿಯಿಂದ ಬಂದಿದ್ದರೂ, ನಮ್ಮ ಸಾಹಿತ್ಯಕ್ಕೆ ಭೂಷಣ ಪ್ರಾಯವಾಗಿಯೇ ಇರುವುವು. ಆದರೆ ನಮ್ಮ ಸಾಹಿತ್ಯದ ವೈಶಿಷ್ಟ್ಯವನ್ನು ಮಾತ್ರ ಕಳೆದುಕೊಳ್ಳಕೂಡದು. ನಮ್ಮವರು ಸಂಗೀತಾದಿ ಕಲೆಗಳಲ್ಲಿ ತಮ್ಮದೇ ಒಂದು ವಿಶಿಷ್ಟತೆಯನ್ನು ನೆಲೆಗೊಳಿಸಿಲ್ಲವೇ? ಅಂತೆಯೇ, ಸಾಹಿತ್ಯಕ್ಕೂ ನಮ್ಮದೊಂದು ವಿಶಿಷ್ಟತೆಯು ಇದ್ದೇ ಇರಬೇಕು. ವಿಶಿಷ್ಟತೆಯನ್ನು ಕಾಯ್ದು ಕೊಳ್ಳುವ ಸ್ವತಂತ್ರತೆಯು ನಮ್ಮಲ್ಲಿದೆ. ಈ ತೆರದ ಸ್ವಾತಂತ್ರ್ಯವು ಕವಿಗಳಿಗಂತೂ ಹುಟ್ಟು ಗುಣವಾಗಿರಬೇಕು. ತಮಗೆ ಬೇಕಾದ ವ್ಯಾಕರಣ, ಅಲಂಕಾರ, ಛಂದಸ್ಸು ಮೊದಲಾದ ಗ್ರಂಥಗಳನ್ನು ಪರಿಸ್ಥಿತಿಗನುಸರಿಸಿ ರಚಿಸಿಕೊಳ್ಳುವ ಸ್ವಾತಂತ್ರ್ಯವು ಸಾಹಿತ್ಯಕ್ಕೆ ಸ್ವತಸ್ಸಿದ್ಧವಾದುದು. ಪ್ರತಿಯೊಂದು ಭಾಷಾ ಚರಿತ್ರದಲ್ಲಿ ಈ ತೆರದ ಸ್ವಾತಂತ್ರ್ಯತೆಗೆ ಬೇಕಾದಷ್ಟು ನಿದರ್ಶನಗಳಿರುವುವು. ಆದರೆ, ಕೆಲವರು ವ್ಯಾಕರಣಾದಿಗಳು ಸಾಹಿತ್ಯಕ್ಕೆ ಸಂಕಲೆಗಳೆಂದು ಹೇಳುವರು. ಒಂದು ಕಾಲದ ವ್ಯಾಕರಣಗಳು ಮತ್ತೊಂದು ಕಾಲದ ಪರಿಸ್ಥಿತಿಗನುಸರಿಸಿ ಮಾರ್ಪಡುತ್ತಿರುವ ಸಾಹಿತ್ಯಕ್ಕೆ ಒಂದು ಪಕ್ಷದಲ್ಲಿ ಸಂಕಲೆಗಳಂತೆ ಪರಿಣಮಿಸಬಹುದು. ಯಾವಾಗಲೂ ಅವು ಸಾಹಿತ್ಯಕ್ಕೆ ಸಂಕಲೆಗಳಲ್ಲ. ಸಾಹಿತ್ಯವು ಮಾರ್ಪಟ್ಟಂತೆ ಅದಕ್ಕನುಗುಣವಾಗಿ ರಚಿತವಾದ ವ್ಯಾಕರಣಾದಿಗಳು ಸಾಹಿತ್ಯ ಸೌಂದರ್ಯವನ್ನು ಉಜ್ಜ್ವಲಗೊಳಿಸುವುವು. ಕವಿ ವಾಣಿಯು "ನಿಯತಿಕೃತ ನಿಯಮ ರಹಿತವೂ ಅನನ್ಯ ಪರತಂತ್ರವೂ" ಆದ ನವ ಕಾವ್ಯ ಸೃಷ್ಟಿಯನ್ನು ನಿರ್ಮಿಸುವ ಸ್ವತಂತ್ರತೆಯುಳ್ಳುದಾದರೂ, ಆ ನವ ಕಾವ್ಯ ಸೃಷ್ಟಿಯು ಆಹ್ಲಾದೈಕಮಯವೂ ನವ ರಸ ರುಚಿರವೂ ಆಗಬೇಕಾದರೆ, ಅದಕ್ಕೆ ಶಬ್ದ ಶಾಸ್ತ್ರದ, ಛಂದಸ್ಸಿನ ಮತ್ತು ಅಲಂಕಾರಾದಿಗಳ ಆವಶ್ಯಕತೆಯು ಬೇಕೇ ಬೇಕು. ಸ್ವತಂತ್ರ್ಯತೆ

ಯೆಂಬ ಮಾತಿನರ್ಥವು ನಿಯಮೋಲ್ಲಂಘನವಲ್ಲ: ಪರಿಸ್ಥಿತಿಗನುಸರಿಸಿ ನಿಯಮಗಳನ್ನು ಮಾಡಿಕೊಳ್ಳುವ ಸ್ವಾಧಿಕಾರ. ಕವಿಯ ಸ್ವತಂತ್ರ ಸೃಷ್ಟಿಯಲ್ಲಿಯೂ ಒಂದು ಕ್ರಮವಿರಬೇಕು. "ಕ್ರಮದಪ್ಪಿ ನಡೆಯುವುದಕ್ಕಿಂತ ಕಷ್ಟವುಂಟೇ?" ಎಂಬ ಹಿರಿಯರುಕ್ತಿಯು ಅನುಭವದ ಮಾತಾಗಿರುವುದು. ಸದ್ಯದಲ್ಲಿ ಉದಯವಾಗುತ್ತಿರುವ ಭಾವಗೀತಾದಿ ನೂತನ ಸಾಹಿತ್ಯಕ್ಕೆ ಅಂಗೀಕರಿಸುವ ಪ್ರಯೋಗದ ಮತ್ತು ಛಂದಸ್ಸು ಮೊದಲಾದುದರ ವಿಚಾರವಾಗಿ ಉಪಯುಕ್ತವಾದೊಂದು ಗ್ರಂಥವನ್ನು ಬರೆಯಿಸುವುದು ಪರಿಷತ್ತಿನವರ ಕಾರ್ಯಗಳಲ್ಲಿ ಮೊದಲನೆಯದಾಗಿರಬೇಕೆಂದು ನನ್ನ ಸೂಚನೆಯಿದೆ. ಆ ಗ್ರಂಥದಿಂದ ವಿದ್ಯಾರ್ಥಿಗಳಿಗೂ ನೂತನ ಕವಿತೆಯನ್ನು ಮಾಡಲಪೇಕ್ಷಿಸುವವರಿಗೂ ಹೆಚ್ಚು ಪ್ರಯೋಜನವಿರುವುದು.

ಒಟ್ಟಿನ ಮೇಲೆ, ಕರ್ಣಾಟಕ ಸಾಹಿತ್ಯಕ್ಕೆ ಕಳೆಯೇರಿದೆ. ಕನ್ನಡಿಗರು ಹುರುಪಿನಿಂದ ಸಾಹಿತ್ಯ ಸೇವೆಯನ್ನು ಮಾಡತೊಡಗಿರುವರು. ಕರ್ಣಾಟಕ ಕವಿ ಚರಿತ್ರಕಾರರಂತೂ ಸಾಹಿತ್ಯ ರಾಜ್ಯದ ಕವಿ ರಾಜರ ಪರಿಚಯವನ್ನು ಮಾಡಿಕೊಟ್ಟು ನಮ್ಮೆಲ್ಲರಿಗೂ ಸ್ತುತ್ಯರಾಗಿರುವರು. ರಾವಸಾಹೇಬ ಪಿ. ಜಿ. ಹಳಕಟ್ಟಿಯವರೂ ವಚನ ವಾಙ್ಮಯದ ಭಕ್ತಿ ರಸಾಂಬುಧಿಯಲ್ಲಿ ನಮ್ಮನ್ನು ಮುಳುಗಾಡಿಸಿ ನಮಗೆ ಅಭಿನಂದನೀಯರಾಗಿರುವರು. ಇದರಂತೆ, ಇನ್ನುಳಿದ ಸಾಹಿತ್ಯ ಸೇವಕರೂ, ನಾವು ತೋರಿಸುವ ಕೃತಜ್ಞತೆಗೆ ಪಾತ್ರರಾಗಿರುವರು. ಕರ್ಣಾಟಕ ವಾಗ್ದೇವಿಯು ತನ್ನ ವೈಶಿಷ್ಟ್ಯವನ್ನು ಜಗತ್ತಿಗೆ ತೋರಿಸಿ ಸರ್ವ ಜನಾಂಗದ ಆರಾಧ್ಯ ದೇವತೆಯಾಗಲೆಂಬುದೇ ನಮ್ಮೆಲ್ಲರ ಮಹತ್ವಾಕಾಂಕ್ಷೆ.

**ಸಾಹಿತ್ಯ ಪರಿಷತ್ತಿನ ಪ್ರಯೋಜನ.**—ಪೂರ್ವದಲ್ಲಿ ರಾಜರೂ ಮಂತ್ರಿಗಳೂ ಸಾಹಿತ್ಯ ಪಾರಂಗತರಾದಂತೆ ಅವರು ಬರೆದ ಗ್ರಂಥಗಳಿಂದಲೂ ಚರಿತ್ರಾಂಶಗಳಿಂದಲೂ ತಿಳಿದುಬರುವುದು. ಅವರು ತಮ್ಮ ರಾಜ ನೀತಿಯನ್ನು ಅಧಿಕಾರದ ಭಯ ದರ್ಪಗಳಿಂದ ಪ್ರಜೆಗಳಲ್ಲಿ ಪ್ರಸರಿಸಲು ಪ್ರಯತ್ನಿಸಲಿಲ್ಲ. ಅವರ ಪ್ರಯತ್ನವು ಸಾಹಿತ್ಯ ಮುಖದಿಂದ ಸಫಲವಾಗುವಷ್ಟು ಭಯ ದರ್ಪಗಳಿಂದಾಗುತ್ತಿರಲಿಲ್ಲ. ಅವರ ರಾಜ ನೀತಿಯೆಲ್ಲವೂ ಸಾಹಿತ್ಯಮಯವಾಗಿತ್ತು. ಜನರು ಉತ್ತಮ ಕಾವ್ಯಗಳನ್ನು ಓದುತ್ತ ಸುಲಭವಾಗಿ ರಾಜ್ಯ ನೀತಿಗೊಳಪಟ್ಟು ರಾಜ ಭಕ್ತಿಯನ್ನು ಪ್ರಕಟಿಸತಕ್ಕವರಾಗುತ್ತಿದ್ದರು. ಸಾಹಿತ್ಯದಲ್ಲಿ ಅಂತಹ ಶಕ್ತಿಯೊಂದಿದೆ. ರಾಜಕೀಯ, ಸಾಮಾಜಿಕ, ಧಾರ್ಮಿಕಾದಿ ವಿಷಯಗಳ ಯಾವ ತೆರದ ಸಮಸ್ಯೆಯನ್ನಾದರೂ ಸರಳವಾಗಿ ಬಿಡಿಸುವ ಶಕ್ತಿಯು ಅದರಲ್ಲಿದೆ. ರಾಜಕೀಯ ಸಾಮಾಜಿಕಾದಿ ಸುಸಂಸ್ಕೃತಿಯನ್ನು ಜನ ಜೀವನದಲ್ಲಿ ನೆಲೆಗೊಳಿಸಿ ಜನತೆಯನ್ನು ಹುರುಪುಗೊಳಿಸಿ ಕಾರ್ಯ ಮಾಡಿಸುವ ಮುಂದಾಳಿನಂತಿರುವುದು ಆ ಶಕ್ತಿಯು. ಅಂತಹ ಶಕ್ತಿಯಿಂದ, ಪರಿಸ್ಥಿತಿಗನುಸರಿಸಿ ಜನತೆಯಲ್ಲಿ ಸುಸಂಸ್ಕೃತಿಯನ್ನು ಸ್ಥಾಪಿಸುವುದಕ್ಕಾಗಿಯೇ ಸಾಹಿತ್ಯ ಪರಿಷತ್ತಿನ ಉದಯವೆಂದರೆ ತಪ್ಪಾಗದು.

**ಆಗಿರುವ ಪ್ರಯೋಜನಗಳು.**—ಈ ಪರಿಷತ್ತಿನಿಂದ ಆಗಿರುವ ಪ್ರಯೋಜನಗಳಲ್ಲಿ ಮುಖ್ಯವಾದುದೆಂದರೆ, ಸಮ್ಮೇಳನಗಳನ್ನು ನಡೆಸುವುದು. ಈ ಕಾರ್ಯವು

ಅತಿಮಹತ್ತ್ವದ್ದೆಂತು ನನ್ನ ಭಾವನೆ. ಪಂಡಿತರೂ ಕವಿಗಳೂ ಮೊದಲಾದ ಸಾಹಿತ್ಯಜ್ಞರು ಒಬ್ಬರಿಗೊಬ್ಬರು ಕೂಡಿ ಮೈತ್ರಿಯಿಂದ ಮಾತನಾಡುವುದೇ ಅಪೂರ್ವ. ಒಬ್ಬರಿಗೊಬ್ಬರು ಮತ್ಸರಗೊಳ್ಳುವುದು ಅವರ ಸ್ವಭಾವ. ಈ ಮತ್ಸರದಿಂದ, ಆಗಬಾರದ ಕೆಲಸವಾಗಿ ಜನತೆಯ ಬಾಳೇ ಹಾಳಾಗುತ್ತಿರುವುದು ಸರ್ವೆಲ್ಲರ ಅನುಭವ. ಸಮ್ಮೇಳನಗಳು ಇಂತಹ ದೋಷಗಳನ್ನು ಕಳೆದು ಗೆಳೆತನವನ್ನು ಬಳೆಯಿಸುವುವು. ಸಾಹಿತ್ಯಜ್ಞರಲ್ಲಿ ಗೆಳೆತನವುಂಟಾದರೆ ಜಗತ್ತಿಗೆ ಮಹೋಪಕಾರವಾಯಿತೆಂದೇ ಹೇಳಬಹುದು. ಸರ್ವೆಲ್ಲರನ್ನೂ ಅಂತಹ ಸ್ನೇಹ ರಜ್ಜುವಿನಿಂದ ಬಂಧಿಸಿ ಒಕ್ಕಟ್ಟಿನಲ್ಲಿರಿಸಿ ಹುರಿದುಂಬಿಸಿ ಭಾಷಾ ಸೇವೆಯನ್ನೂ ತನ್ಮೂಲಕ ದೇಶ ಸೇವೆಯನ್ನೂ ಮಾಡಲು ಮುಂದುವರಿಸುವುದಕ್ಕಾಗಿಯೇ ಇಂತಹ ಸಮ್ಮೇಳನಗಳು ನಡೆಯುವುವು. ಪರಿಷತ್ತಿನಿಂದಾದ ಪ್ರಯೋಜನಗಳಲ್ಲಿ ಇದು ಮುಖ್ಯವಲ್ಲವೇ? ಈ ಸಮ್ಮೇಳನವು ಕವಿಗಳ, ಪತ್ರಿಕಾ ಕರ್ತರ, ಗಾಯಕರ, ವಾಗ್ಮಿಗಳ, ಇನ್ನು ಸಾಹಿತ್ಯಾಂಗಗಳಾದ ಇತರ ಕಲೆಗಳನ್ನು ಬಲ್ಲವರ ಸಮ್ಮೇಳನಗಳನ್ನು ಈಗ ನಡೆಸುವುದಕ್ಕಿಂತಲೂ ಹೆಚ್ಚಾಗಿ ನಡೆಯಿಸಿ ಪ್ರೋತ್ಸಾಹವನ್ನುಂಟುಮಾಡಿದರೆ ಕನ್ನಡ ಸಾಹಿತ್ಯ ದೇವಿಯು ಸರ್ವಾಂಗ ಸುಂದರಳಾಗಿ ರಾಜಿಸುವುದರಲ್ಲಿ ಸಂಶಯವಿಲ್ಲ.

ಈ ಪರಿಷತ್ತು ಸ್ಥಾಪಿತವಾದಂದಿನಿಂದ ವಿಶ್ವ ವಿದ್ಯಾ ಪೀಠಗಳಿಗೂ, ರಾಜ್ಯಾಧಿಕಾರಿಗಳಿಗೂ, ಸ್ಥಾನಿಕ ಸಂಸ್ಥೆಗಳ ಅಧಿಕಾರಿಗಳಿಗೂ, ಭಾಷಾ ಸೇವೆಯ ಸಂಸ್ಥೆಗಳಿಗೂ ಕಾಲ ಕಾಲಕ್ಕೆ ತಕ್ಕ ಸೂಚನೆಗಳನ್ನು ಸಮ್ಮೇಳನದಲ್ಲಾಗುವ ಗೊತ್ತುವಳಿಗಳ ಮೂಲಕವಾಗಿ ತಿಳಿಸುತ್ತ ಕನ್ನಡ ಭಾಷೆಯನ್ನೂ ಸಾಹಿತ್ಯವನ್ನೂ ಉತ್ತಮಗೊಳಿಸಿ ಅಭಿವೃದ್ಧಿಪಡಿಸುತ್ತಿರುವುದು ಮುಖ್ಯ ಪ್ರಯೋಜನವಲ್ಲವೆ? ಇದರಂತೆ ಗ್ರಂಥಗಳನ್ನು ಶೋಧಿಸಿ ಪ್ರಕಟಿಸುವುದೂ, ಉತ್ತಮ ರೀತಿಯ ಪರಿಷತ್ಪತ್ರಿಕೆಯೊಂದನ್ನು ಪ್ರಕಟಿಸುತ್ತಿರುವುದೂ, ಗ್ರಂಥಕರ್ತರಿಗೆ ಪ್ರೋತ್ಸಾಹವನ್ನೀಯುವುದೂ—ಇವೇ ಮೊದಲಾದ ಪ್ರಯೋಜನಗಳಾಗಿರುವುದು ತಮಗೆ ತಿಳಿದ ವಿಷಯವಾಗಿದೆ.

**ಆಗಬೇಕಾದ ಪ್ರಯೋಜನಗಳು.**—ಪರಿಷತ್ತಿನಿಂದ ಆಗಬೇಕಾದ ಪ್ರಯೋಜನಗಳು ಅನೇಕವಾಗಿರುವುವು: ಅವೆಲ್ಲಕ್ಕೂ ಜನ ಸಹಾಯವೂ ಧನ ಸಹಾಯವೂ ಅವಶ್ಯವೆಂಬುದು ವಿದಿತವೇ. ಸದ್ಯದಲ್ಲಿರುವ ಪರಿಷತ್ತಿನ ಸದಸ್ಯರ ಸಂಖ್ಯೆಯು ಕನ್ನಡಿಗರ ಭಾಷಾಭಿಮಾನ ಶೂನ್ಯತೆಯನ್ನು ಸೂಚಿಸುತ್ತಿರುವುದು. ಸದಸ್ಯರ ಸಂಖ್ಯೆಯನ್ನು ವೃದ್ಧಿಪಡಿಸುವುದು ನಮ್ಮ ಆದ್ಯ ಕರ್ತವ್ಯವು. ಇದಲ್ಲದೆ, ಜನತೆಯಲ್ಲಿ ವಾಚನಾಭಿರುಚಿಯನ್ನು ವೃದ್ಧಿಪಡಿಸಲಿಕ್ಕೆ ಅನುಕೂಲವಾದ ಕಾರ್ಯಗಳನ್ನು ಪರಿಷತ್ತಿನವರು ಹೆಚ್ಚಾಗಿ ಕೈಕೊಳ್ಳಬೇಕಾಗಿದೆ. ವಾಚನಾಭಿರುಚಿಯುಂಟಾದೊಡನೆ ಜನತೆಯು ಸಾಹಿತ್ಯಾಭಿಮುಖವಾಗುವುದು. ಆಗ ಪರಿಷತ್ತಿಗೆ ಜನ ಸಹಾಯವು ಅಧಿಕವಾಗಿ ದೊರೆಯಬಹುದು. ಸದ್ಯದಲ್ಲಿ ಪರಿಷತ್ತಿಗೆ ಮೈಸೂರಿನ ಮಹಾರಾಜರೂ ಅವರ ಸರ್ಕಾರದವರೂ ಧನ ಸಹಾಯವನ್ನು ಮಾಡಿಯೂ ಮಾಡುತ್ತಲೂ ಇರುವುದು ಅಭಿನಂದನೀಯವೂ ಸ್ತುತ್ಯವೂ ಆಗಿರುವುದು. ಈ

ಪರಿಷತ್ತು ಮೈಸೂರು ಬೆಂಗಳೂರಿನವರಿಗೆ ಮಾತ್ರ ಸಂಬಂಧಿಸಿದುದಲ್ಲ; ಸರ್ವ ಪ್ರಾಂತಗಳ ಕನ್ನಡಿಗರಿಗೂ ಸಂಬಂಧಿಸಿರುವುದು. ಕನ್ನಡಿಗರ ಸಾಹಿತ್ಯವನ್ನು ವೃದ್ಧಿಗೊಳಿಸುವುದರಲ್ಲಿ ಅಭಿಮಾನವುಳ್ಳ ಎಲ್ಲಾ ಭಾಗದ ಪ್ರಾಂತಿಕ ಸರಕಾರದವರೂ, ಲೋಕಲ್ ಬೋರ್ಡಿನವರೂ, ಶ್ರೀಮಂತರೂ, ಇನ್ನುಳಿದವರೂ ಈ ಪರಿಷತ್ತಿಗೆ ಧನ ಸಹಾಯ ಮಾಡುವಂತೆ ಬೇಡುವ ಹಕ್ಕು ಕನ್ನಡಿಗರೆಲ್ಲರಿಗೂ ಇರುವುದು. ಪರಿಷತ್ತಿಗೆ ಜನ ಧನ ಸಹಾಯವಾದಂತೆ ಅದರಿಂದ ಅನೇಕ ಪ್ರಯೋಜನಗಳು ನಮಗುಂಟಾಗುವುದರಲ್ಲಿ ತೊಡಕಿಲ್ಲ.

ಇನ್ನು ಮುಂದೆ, ಬ್ರಿಟಿಷು ಸರಕಾರದಲ್ಲಿಯೂ ದೇಶೀಯ ಸಂಸ್ಥಾನಗಳಲ್ಲಿಯೂ ಹೊಸ ಸುಧಾರಣೆಗಳಾಗಿ ರಾಜ್ಯಭಾರ ಕ್ರಮಗಳು ಮಾರ್ಪಡುತ್ತಿರುವುವೆಂಬುದು ನಮಗೆ ತಿಳಿದ ವಿಷಯ. ಹೊಸ ಸುಧಾರಣೆಯ ರಾಜ್ಯಭಾರದಲ್ಲಿ ಇತರ ಪ್ರಾಂತಗಳಿಗೂ ಅವುಗಳ ಭಾಷೆಗಳಿಗೂ ಸಲ್ಲುವ ಅನುಕೂಲಗಳು ನಮಗೂ ನಮ್ಮ ಭಾಷೆಗೂ ಸಲ್ಲಲು ಅವಕಾಶವಿರುವುದೆ? ಅಂತಹ ಅನುಕೂಲಗಳನ್ನು ಪಡೆಯಲಿಕ್ಕೆ ಈಗ ನಾವು ಮಾಡಿಕೊಳ್ಳತಕ್ಕ ಪೂರ್ವ ಸಿದ್ಧತೆಯೇನು? ಈ ಪ್ರಶ್ನೆಯೇ ಸದ್ಯದಲ್ಲಿ ನಮ್ಮ ಮುಂದಿರುವುದು. ಕರ್ಣಾಟಕ ಪ್ರಾಂತ ರಚನೆಯಾಗಿ ಕನ್ನಡಿಗರಿಗೊಂದು ಸ್ವತಂತ್ರ ವಿಶ್ವವಿದ್ಯಾಲಯವಾದರೆ ಸಾಕೆಂದು ಹಲವರ ಅಭಿಪ್ರಾಯ. ಇದು ಶೀಘ್ರದಲ್ಲಿ ಸಫಲವಾಗಲಾರದೆಂಬುದೂ ಈಗಿನ ಪರಿಸ್ಥಿತಿಯ ಮೂಲಕ ನಮಗೆ ಗೊತ್ತಾಗುತ್ತಿರುವುದು. ಹೀಗೆಂದು ನಾವು ನಿರಾಶೆಯಿಂದ ಸುಮ್ಮನೆ ಕುಳಿತುಕೊಳ್ಳಲಿಕ್ಕೂ ಬರುವಂತಿಲ್ಲ. ನಮಗೆ ಅನುಕೂಲವನ್ನುಂಟುಮಾಡುವ ಕಾರ್ಯಗಳಲ್ಲಿ ಮುಂದುವರಿಯಬೇಕಾಗಿದೆ. ಪರಿಷತ್ತು ಸಮ್ಮೇಳನಗಳಲ್ಲಿಯೂ ತನ್ನ ವಾರ್ಷಿಕಾಧಿವೇಶನಗಳಲ್ಲಿಯೂ ನಿರ್ಣಯಿಸಿದ ಗೊತ್ತುವಳಿಗಳನ್ನೆಲ್ಲ ಕಾರ್ಯ ರೂಪದಲ್ಲಿ ತರುವುದೇನೋ ವಿಹಿತವೆ. ಆದರೆ ಹಾಗೆ ಮಾಡಬೇಕಾದರೆ ಮೇಲೆ ಹೇಳಿದಂತೆ ಜನ ಧನ ಸಹಾಯವು ಸಾಕಾದಷ್ಟಿರಬೇಕು. ಪರಿಷತ್ತು ಈಗ ತನಗಿರುವ ಜನ ಧನ ಸಹಾಯಕ್ಕೆ ತಕ್ಕಂತೆ, ಸದ್ಯದ ಪರಿಸ್ಥಿತಿಗೆ ಯಾವುದು ಮುಖ್ಯವೋ ಅಂತಹ ಒಂದೆರಡು ವಿಷಯಗಳನ್ನು ಕಾರ್ಯ ರೂಪದಲ್ಲಿ ತರುವುದಕ್ಕಾಗಿ ವರ್ಷಾವಧಿ ದುಡಿಯುವುದೇ ಮುಖ್ಯ ಪ್ರಯೋಜನವೆಂದು ನನ್ನ ಭಾವನೆ. ಅಂತಹ ಕಾರ್ಯಗಳು ಯಾವುವೆಂಬುದನ್ನು ನಿರ್ಣಯಿಸುವುದು ತಮ್ಮೆಲ್ಲರ ವಿಚಾರಕ್ಕೊಳಪಟ್ಟಿರುವುದು.

ಪರಿಷತ್ತಿನಿಂದ ನಮಗೆ ಬೇಕಾದ ಇತರ ಪ್ರಯೋಜನಗಳಲ್ಲಿ, ನನಗೆ ತಿಳಿದವುಗಳಲ್ಲಿ ಕೆಲವನ್ನು ಇಲ್ಲಿ ಸೂಚಿಸುವೆನು :—

ಈಚೆಗೆ ಭಾಷೆಯಲ್ಲಿ ಎಷ್ಟೋ ವ್ಯತ್ಯಾಸಗಳಾಗಿರುವುವು. ಆ ವ್ಯತ್ಯಾಸಗಳನ್ನು ಪರೀಕ್ಷಿಸಿ, ಅವುಗಳಲ್ಲಿ ಅವಶ್ಯವೂ ಅನಿವಾರ್ಯವೂ ಆಗಿರುವ ವ್ಯತ್ಯಾಸಗಳು ಆಕ್ಷೇಪ ರಹಿತಗಳೆಂದು ಹೇಳುವ ಹೊಸ ವ್ಯಾಕರಣ ಗ್ರಂಥವೊಂದು ಪರಿಷತ್ತಿನ ಪಂಡಿತ ಮಂಡಲದಿಂದ ರಚಿತವಾಗುವುದು ಅವಶ್ಯ. ಕನ್ನಡ ಭಾಷಾ ಶಾಸ್ತ್ರವೂ, ಶಾಸ್ತ್ರೀಯ ತತ್ತ್ವಗಳನ್ನು ವಿವರಿಸುವ ಗ್ರಂಥಗಳೂ, ಗ್ರಾಮ ಸುಧಾರಣೆಗೆ ಬೇಕಾದ ಸಣ್ಣ ಸಣ್ಣ

ಪುಸ್ತಕಗಳೂ ನಮ್ಮ ಸಾಹಿತ್ಯಕ್ಕೆ ಬೇಕಾಗಿವೆ. ಇವುಗಳನ್ನು ಬರಯಿಸುವುದೂ ಬರೆಯುವವರಿಗೆ ಪ್ರೋತ್ಸಾಹವನ್ನುಂಟುಮಾಡುವುದೂ ಪರಿಷತ್ತಿಗೆ ಅವಶ್ಯ.

ಕನ್ನಡದಲ್ಲಿ ಮುದ್ರಿತವಾದ ಪ್ರತಿಯೊಂದು ಗ್ರಂಥವೂ ಸಾಹಿತ್ಯ ಪರಿಷತ್ತಿನ ಪುಸ್ತಕ ಭಾಂಡಾರದಲ್ಲಿ ಸಿಕ್ಕುವಂತೆ ಅದನ್ನು ವೃದ್ಧಿಪಡಿಸಬೇಕು. ಬೇಕಾದ ಗ್ರಂಥವು ಕನ್ನಡಿಗರಿಗೆ ಸಮಯಕ್ಕೆ ಸರಿಯಾಗಿ ಸಿಕ್ಕದೆ ಎಷ್ಟೋ ತೊಂದರೆಯಾಗುತ್ತಿರುವುದು. ಈ ತೊಂದರೆಯನ್ನು ಪರಿಷತ್ತು ಪರಿಹರಿಸಬೇಕು. ಮುದ್ರಿತವಾಗದ ಪುಸ್ತಕಗಳನ್ನು ಸಾಧ್ಯವಾದ ಮಟ್ಟಿಗೆ ಸಂಗ್ರಹಿಸಬೇಕು.

**ಕೊನೆಯ ಮಾತು.**—ಭಗವದ್ಗೀತೆಯಲ್ಲಿ ನಮ್ಮನ್ನು ಕರ್ತವ್ಯ ಪರಾಯಣರನ್ನಾಗಿ ಮಾಡುವ ಅನೇಕ ತಾತ್ತ್ವಿಕ ವಾಕ್ಯಗಳಿರುವುವು. ಆತ್ಮೀಯ ಬಲದಿಂದ ಸುಖ ಸಂಪತ್ತುಗಳನ್ನು ಪಡೆಯುವ ಈ ನವ ನಾಗರಿಕತೆಯ ಕಾಲದಲ್ಲಿ ನಮಗೆ ಬೇಕಾಗಿರುವ ಗೀತೋಕ್ತಿಯೆಂದರೆ—"ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್" ಎಂಬುದೇ. (ತಾನು ತನ್ನ ಉದ್ಧಾರವನ್ನು ಮಾಡಿಕೊಳ್ಳತಕ್ಕದ್ದು; ತಾನು ತನ್ನನ್ನು ಅಧೋಗತಿಗೆ ತಳ್ಳಕೂಡದು—ಎಂಬುದೇ ಈ ಸೂಕ್ತಿಯ ಭಾವಾರ್ಥವು.) ಈ ಸೂಕ್ತಿಯಲ್ಲಿರುವ 'ತಾನು', 'ತನ್ನ' ಎಂಬ ಮಾತುಗಳು ವ್ಯಕ್ತಿಗೆ ಸಂಬಂಧಿಸಿರುವುದಲ್ಲದೆ ಸಮಾಜ, ದೇಶ ಮೊದಲಾದುವುಗಳಿಗೆಲ್ಲ ಅನ್ವಯಿಸುತ್ತಿರುವುವು.

ಭೂಲೋಕದಲ್ಲಿ ಜನ್ಮವೆತ್ತಿದ ಪ್ರತಿಯೊಂದು ವ್ಯಕ್ತಿಗೂ ತನ್ನಾತ್ಮೋದ್ಧಾರದ ಹಕ್ಕು ಜನ್ಮಸಿದ್ಧವಾಗಿರುವುದು. ಆತ್ಮೋದ್ಧಾರಕ್ಕಾಗಿಯೇ ವ್ಯಕ್ತಿಯ ಜನ್ಮಗ್ರಹಣವಿರುವುದು. ಇದೇ ಈಶ್ವರ ಸಂಕಲ್ಪ. ಈ ಸಂಕಲ್ಪಕ್ಕನುಸರಿಸಿ ಪ್ರತಿಯೊಂದು ವ್ಯಕ್ತಿಯೂ ತನ್ನ ಆತ್ಮೋದ್ಧಾರವನ್ನು ಮಾಡಿಕೊಳ್ಳುವುದೇ ಧರ್ಮ. ವ್ಯಕ್ತಿಯು ತನ್ನ ಆಲಸ್ಯಾದಿ ದೋಷದಿಂದ ಅಧಃಸ್ಥಲಕ್ಕೆ ಬಿದ್ದು ಇತರರಿಗಿಂತಲೂ ತಾನು ಕಡಿಮೆಯೂ, ಆತ್ಮೋದ್ಧಾರ ಮಾಡಿಕೊಳ್ಳಲಿಕ್ಕೆ ಅನಧಿಕಾರಿಯೂ ಎಂದು ತಿಳಿದುಕೊಳ್ಳುವುದೇ ಅಧರ್ಮ.

ಈ ಆತ್ಮೋದ್ಧಾರಕ್ಕೆ—ಆತ್ಮವಿಕಾಸಕ್ಕೆ—ಸ್ವಾವಲಂಬನ, ಸ್ವಪ್ರಯತ್ನ, ಸ್ವಕರ್ತವ್ಯ ದಕ್ಷತೆ ಮೊದಲಾದವುಗಳೇ ಮುಖ್ಯ ಸಾಧನಗಳು. ವ್ಯಕ್ತಿಯಂತೆ ಸಮಾಜದ, ಅಥವಾ ದೇಶವೇ ಮೊದಲಾದುದರ ಉದ್ಧಾರವಾಗಬೇಕಾದರೆ ಆಯಾ ಸಮಾಜದವರಿಂದಲೂ ಆಯಾ ದೇಶದವರಿಂದಲೂ ಆಗುವಂತೆ ಇತರರಿಂದ ಆಗಲಾರದೆಂಬುದು ಅನುಭವದ ಮಾತಾಗಿದೆ. ಕನ್ನಡಿಗರಾದ ನಾವು ನಮ್ಮ ನಾಡಿನ ಮತ್ತು ಭಾಷೆಯ ಉದ್ಧಾರವನ್ನು ನಾವೇ ಮಾಡಿಕೊಳ್ಳಬೇಕಾಗಿದೆ. ನಾವೆಲ್ಲರೂ ಒಕ್ಕಟ್ಟಾಗಬೇಕು. "ಉದ್ಧರೇದಾತ್ಮನಾತ್ಮಾನಂ" ಎಂಬ ವಾಕ್ಯವನ್ನು ಮೂಲಮಂತ್ರವಾಗಿಟ್ಟುಕೊಂಡಲ್ಲಿ ನಮ್ಮ ಭಾಷೆಯ ಮತ್ತು ಸಾಹಿತ್ಯದ ಉದ್ಧಾರಕ್ಕೆ ತಕ್ಕ ಆತ್ಮಶಕ್ತಿಯನ್ನು ನಮಗೆ ಪರಮಾತ್ಮನು ಅವಶ್ಯವಾಗಿ ಅನುಗ್ರಹಿಸುವನು.

ಹುಬ್ಬಳ್ಳಿಯ ಮಹಾಜನರೆ! ನಿಮ್ಮ ನಾಡು ಕನ್ನಡದ ನಡು ನಾಡು. ಇದು ಕನ್ನಡಿಗರ ಕೇಂದ್ರ ಸ್ಥಾನ. ಇಲ್ಲಿ ಕರ್ಣಾಟಕ ಸಾಹಿತ್ಯ ಸಮ್ಮೇಳನವನ್ನು ನಡೆಸಿದುದು ನಿಮಗೆ ಮಾತ್ರವಲ್ಲ, ಸರ್ವ ಕನ್ನಡಿಗರಿಗೂ ಭೂಷಣವಾಗಿರುವುದು. ನಿಮ್ಮ ಪ್ರೇಮಾದರಗಳು ಕನ್ನಡಿಗರಿಗೆಲ್ಲ ಅತ್ಯಂತ ಸಂತೋಷವನ್ನುಂಟುಮಾಡಿರುವುವು. ಈ ವಿಧದ ನಿಮ್ಮ ಭ್ರಾತೃ ವಾತ್ಸಲ್ಯಕ್ಕಾಗಿ ಎಲ್ಲಾ ಕನ್ನಡಿಗರ ಪರವಾಗಿ ನಿಮ್ಮನ್ನು ನಾನು ಅಭಿನಂದಿಸುತ್ತೇನೆ. ನಿಮ್ಮ ನಮ್ಮ ಸೋದರ ಭಾವವೂ ನಮ್ಮೆಲ್ಲರ ಭಾಷೆಯೂ ದೇಶವೂ ಈಶ್ವರ ಕೃಪೆಯಿಂದ ಏಳ್ಗೆಯನ್ನು ಹೊಂದಲಿ.

---

## ವಿಜಯನಗರ ಸಾಮ್ರಾಜ್ಯ ಸ್ಮಾರಕೋತ್ಸವ ಮಂಡಲಿ.

### ಮೂಲ ಸಂಸ್ಥೆಯ ರಚನೆ ಮತ್ತು ಕಾರ್ಯ ವಿವರಗಳು.

ಕರ್ಣಾಟಕದ ಮೇಲ್ಮೆಗೂ ಹೆಮ್ಮೆಗೂ ಆದರ್ಶಪ್ರಾಯವಾಗಿ, ಅದರ ಪುನರುಜ್ಜೀವನಕ್ಕೂ ಅಖಂಡೈಕ ಭಾವಕ್ಕೂ ಸಾಧನದಂತಿರುವ ವಿಜಯನಗರ ಸಾಮ್ರಾಜ್ಯ ಚರಿತ್ರೆಯನ್ನು ಆ ಸಾಮ್ರಾಜ್ಯದ ಪ್ರತಿಷ್ಠೆಯ ಆರು ನೂರನೆಯ ವರ್ಷದ ಸಂದರ್ಭದಲ್ಲಿ ಎಲ್ಲ ಜನರಿಗೂ ಮನಮುಟ್ಟುವಂತೆ ನೆನಪಿಗೆ ತರಲು ತಕ್ಕ ಏರ್ಪಾಟು ಗಳನ್ನು ನಡೆಯಿಸುವುದು ಶ್ರೇಯಃಪ್ರದವೆಂದು ಈಗ ಸುಮಾರು ಎರಡು ಮೂರು ವರ್ಷಗಳಿಂದ ಸಾಹಿತ್ಯ ಸಮ್ಮೇಳನ, ವೀರಶೈವ ತರುಣ ಸಮ್ಮೇಳನ ಮತ್ತು ಮಹಿಳಾ ಪರಿಷತ್ತು, ದೇವಾಂಗ ಸಾಮಾಜಿಕ ಸಮ್ಮೇಳನ ಮೊದಲಾದ ಸಂಸ್ಥೆಗಳು ಸೂಚಿಸಿರುವುವಷ್ಟೆ? ಅದರಂತೆ ಆಗಬೇಕಾದ ಏರ್ಪಾಟುಗಳನ್ನು ಕುರಿತು ವಿಚಾರ ನಡಸಿ ಆ ಉದ್ದೇಶವನ್ನು ಕಾರ್ಯ ರೂಪಕ್ಕೆ ತರಲು ಕನ್ನಡ ನಾಡಿನ ನಾನಾ ಭಾಗಗಳ ಪ್ರತಿನಿಧಿಗಳನ್ನೊಳಕೊಂಡ ಸಾರ್ವಜನಿಕ ಸಮ್ಮೇಳನವೊಂದನ್ನು ಹುಬ್ಬಳ್ಳಿ ಯಲ್ಲಿ ಸೇರಿಸಬೇಕೆಂದು ಕಳೆದ ಎರಡು ಮೂರು ತಿಂಗಳುಗಳಲ್ಲಿ ಬೆಳಗಾಂ, ಧಾರವಾಡ, ಬಿಜಾಪುರ, ಗದಗು ಮೊದಲಾದ ಮುಖ್ಯ ಸ್ಥಳಗಳ ಮಹಾ ಜನರು ಸಲಹೆ ಕೊಟ್ಟಿ ದ್ದರು. ಅದೇ ಮೇರೆಗೆ ಹುಬ್ಬಳ್ಳಿಯಲ್ಲಿ ಶ್ರೀಮಾನ್ ಪಾವಟೆ ಸಿದ್ಧರಾಮಪ್ಪನವರು, ಬಿ.ಎ., ಎಲ್.ಎಲ್.ಬಿ., ವಕೀಲ್, ಇವರ ಅಧ್ಯಕ್ಷತೆಯಲ್ಲಿ ಸ್ವಾಗತ ಸಮಿತಿಯೊಂದು ಏರ್ಪಟ್ಟು, ಅದರ ಪ್ರಯತ್ನದಿಂದ ೧೯೩೩ನೆಯ ಇಸ್ವಿ ಡಿಸೆಂಬರ್ ೩೦, ೩೧ನೆಯ ತಾರೀಖುಗಳಲ್ಲಿ ವಿಜಯನಗರ ಸಾಮ್ರಾಜ್ಯ ಸ್ಮಾರಕೋತ್ಸವ ಸಮ್ಮೇಳನವು ೧೯ನೆಯ ಸಾಹಿತ್ಯ ಸಮ್ಮೇಳನದ ಸಭಾಂಗಣದಲ್ಲಿ ಅತಿಶಯವಾದ ಉತ್ಸಾಹದಿಂದ ನೆರವೇರಿತು. ಆ ಸಭೆಯಲ್ಲಿ ಅಖಿಲ ಕರ್ಣಾಟಕದ ಯಾವತ್ತೂ ಭಾಗಗಳಿಂದ ಬಂದ ಮಹನೀಯರೂ ಸಾಹಿತ್ಯ ಸಮ್ಮೇಳನದ ಸದಸ್ಯರುಗಳೂ ಇತರ ವಿದ್ವಾಂಸರೂ ಇತಿಹಾಸ ಶೋಧಕರೂ ಲೇಖಕರೂ ಪ್ರಮುಖ ಜನರೂ ಒಟ್ಟು ಸುಮಾರು ಒಂದು ಸಾವಿರ ಮಂದಿ ಹಾಜ ರಿದ್ದರು. ಸಭಿಕರ ಕೋರಿಕೆಯಂತೆ, ಬೆಂಗಳೂರಿನ ಶ್ರೀಮಾನ್ ಡಿ. ವಿ. ಗುಂಡಪ್ಪ ನವರು ಅಧ್ಯಕ್ಷರಾಗಿದ್ದರು. ಅವರ ನೇತೃತ್ವದಲ್ಲಿ ಸದಸ್ಯರು ಕಲೆತು ವಿಷಯ ವಿವರ

ಗಳನ್ನು ನಾನಾ ದೃಷ್ಟಿಗಳಿಂದ ಸಾವಕಾಶವಾಗಿ ಚರ್ಚಿಸಿದ ಬಳಿಕ, ಸಮ್ಮೇಳನವು ಈ ಕೆಳಗೆ ಕೊಟ್ಟಿರುವ ತೀರ್ಮಾನಗಳನ್ನು ಸರ್ವಾನುಮತದಿಂದ ಅಂಗೀಕರಿಸಿತು :—

೧. ಕರ್ಣಾಟಕ ದೇಶದ ನಾನಾ ಭಾಗಗಳಿಂದ ಬಂದು ಹುಬ್ಬಳ್ಳಿಯಲ್ಲಿ ಸೇರಿರುವ ಈ ಮಹಾಜನರ ಸಭೆಯು, ವಿಜಯನಗರ ರಾಜ್ಯವು ಸ್ಥಾಪನೆಯಾದಂದಿನಿಂದ ಮುಂದಿನ ಧಾತು ಸಂವತ್ಸರಕ್ಕೆ—ಸುಮಾರು ಕ್ರಿ. ಶ. ೧೯೩೬ಕ್ಕೆ—ಆರು ಶತಮಾನಗಳು ತುಂಬುವ ಕಾರಣ, ಆ ಐತಿಹಾಸಿಕ ಸ್ಮರಣೆಯ ಸಂದರ್ಭದಲ್ಲಿ ಕರ್ಣಾಟಕದ ಪೂರ್ವ ವೈಭವವನ್ನೂ ಸಂಸ್ಕೃತಿಯನ್ನೂ ಜನರಿಗೆ ಮನಗಾಣಿಸಿ, ಅವರ ಜನಪದ ಭಾವವನ್ನು ಪುಷ್ಟಿಗೊಳಿಸುವುದಕ್ಕಾಗಿ ಉಚಿತವಾದ ಉತ್ಸವ ಪ್ರದರ್ಶನಗಳನ್ನು ಏರ್ಪಡಿಸುವುದಕ್ಕೋಸ್ಕರ ಈ ಕೆಳಗೆ ಕಾಣಿಸಿರುವ ರೀತಿಯಲ್ಲಿ **ವಿಜಯನಗರ ಸಾಮ್ರಾಜ್ಯ ಸ್ಮಾರಕೋತ್ಸವ ಮಂಡಲಿಯೆಂಬ** ಸಂಸ್ಥೆಯು ಏರ್ಪಡಬೇಕೆಂದು ನಿರ್ಧರಿಸುತ್ತದೆ.

೨. ಈ ಸಂಸ್ಥೆಯ ಉದ್ದೇಶವು ಮುಖ್ಯವಾಗಿ ಕನ್ನಡ ಜನರ ಚರಿತ್ರೆ, ಸಾಹಿತ್ಯ, ಶಿಲ್ಪ ಕಲೆ, ಕುಶಲ ವಿದ್ಯೆಗಳು, ಅವರ ಧರ್ಮ ಶ್ರದ್ಧೆ, ಅವರ ಉದಾತ್ತ ಜೀವನ ತತ್ತ್ವಗಳು, ಅವರ ಲೌಕಿಕ ಕಾರ್ಯದಕ್ಷತೆ, ಅವರ ಶೌರ್ಯ ಸಾಹಸಗಳು, ಅವರ ಔದಾರ್ಯ ಪಾರಮಾರ್ಥಿಕತೆಗಳು—ಇವೇ ಮೊದಲಾದ ಅವರ ಸಂಸ್ಕೃತಿ ಸಂಪದ್ವಿವರಗಳನ್ನು ಬೆಳಗಿಸಿ, ಅವರ ಏಕಮತ್ಯವನ್ನೂ ಆತ್ಮ ವಿಶ್ವಾಸವನ್ನೂ ಆತ್ಮ ಗೌರವ ಬುದ್ಧಿಯನ್ನೂ ಪರಿಪೋಷಿಸಿ, ಅವರನ್ನು ಉಚ್ಛ್ರಾಯ ಮಾರ್ಗಕ್ಕೆ ಪ್ರೇರಣೆಗೊಳಿಸುವುದಕ್ಕೆ ಸಾಧಕವಾಗುವ ಕಾರ್ಯಗಳನ್ನು ನಡೆಯಿಸುವುದು.

೩. ಈ ಉದ್ದೇಶ ಸಾಧನವಾಗಲು ಮೇಲೆ ಹೇಳಿದ ಮಂಡಲಿಯು ಈ ಕೆಳಗೆ ಹೇಳುವ ಮತ್ತು ಉಚಿತವೆಂದು ತೋರುವ ಇತರ ಕಾರ್ಯಗಳನ್ನು ಕೈಕೊಳ್ಳಬಹುದು :—

(೧) ವಿಜಯನಗರ ಸಾಮ್ರಾಜ್ಯದ ಚರಿತ್ರೆಯ ಅನೇಕ ಪ್ರಕರಣಗಳನ್ನು ನಾನಾ ದೃಷ್ಟಿಗಳಿಂದ ಪ್ರಮಾಣವತ್ತಾಗಿಯೂ ಸಾಮಾನ್ಯ ಜನ ಗ್ರಾಹ್ಯವಾಗಿಯೂ ಇರುವ ರೀತಿಯಲ್ಲಿ ಬರೆಯಿಸಿ, ಆ ಗ್ರಂಥಗಳನ್ನು ಕನ್ನಡದಲ್ಲಿಯೂ ಇತರ ಭಾಷೆಗಳಲ್ಲಿಯೂ ಪ್ರಕಟಗೊಳಿಸುವುದು.

(೨) ವಿಜಯನಗರದಲ್ಲಿಯೂ ಮತ್ತು ವಿಜಯನಗರ ಚರಿತ್ರೆಗೆ ಸಂಬಂಧಪಟ್ಟ ಇತರ ಸ್ಥಳಗಳಲ್ಲಿಯೂ ಇರುವ ಶಿಲ್ಪ ಕೃತಿಗಳ ಮತ್ತು ಇತರ ಐತಿಹಾಸಿಕ ದೃಶ್ಯಗಳ ಪ್ರತಿಕೃತಿಗಳನ್ನು (Photo) ತೆಗೆಯಿಸಿ ಅವನ್ನು ಮುದ್ರಣಗೊಳಿಸಿ ಪ್ರಕಟಪಡಿಸುವುದು.

(೩) ಹಂಪೆಯನ್ನು ನೋಡ ಹೋಗುವ ಜನರಿಗೆ ಸಹಾಯವಾಗುವ ಕೈಪಿಡಿ ಪುಸ್ತಕವೊಂದನ್ನು ಪ್ರಕಟಪಡಿಸುವುದು.

(೪) ಅಂಥಾ ಜನರಿಗೆ ಹಂಪೆಯಲ್ಲಿ ಬೇಕಾಗುವ ಸ್ಥಳ ವಸತಿಯನ್ನೂ ಇತರ ಅನುಕೂಲಗಳನ್ನೂ ಕಲ್ಪಿಸುವುದು.

(೫) ಹಂಪೆಯಲ್ಲಿರತಕ್ಕ ಚರಿತ್ರಾರ್ಹವಾದ ಕಟ್ಟಡಗಳನ್ನೂ ಶಿಲ್ಪ ಕೃತಿಗಳನ್ನೂ ಕಾಪಾಡಿಟ್ಟು, ನೋಟಕರಿಗೆ ಅವು ಸುಲಭವಾಗಿ ಸಿಕ್ಕಲಾಗುವಂತೆ ಮಾಡಬೇಕೆಂದು ಸರಕಾರದವರನ್ನು ಕೇಳಿಕೊಳ್ಳುವುದು.

(೬) ಚಲಚ್ಚಿತ್ರಗಳಲ್ಲಿಯೂ ಮಾಯಾ ದೀಪಗಳಲ್ಲಿಯೂ ವಿಜಯನಗರದ ಚರಿತ್ರೆಯ ಸಂಗತಿಗಳು ಪ್ರತ್ಯಕ್ಷವಾಗುವಂತೆ ಏರ್ಪಡಿಸುವುದು.

(೭) ವಿಜಯನಗರದ ಕಾಲದ ಶಸ್ತ್ರ ಆಯುಧಗಳು, ಉಡುವು ತೊಡುವುಗಳು, ನಾಣ್ಯಗಳು, ಪಾತ್ರೆ ಪದಾರ್ಥಗಳು, ಗ್ರಂಥಗಳು ಮೊದಲಾದ ಐತಿಹಾಸಿಕ ವಸ್ತುಗಳ ಪ್ರದರ್ಶನವನ್ನು ಏರ್ಪಡಿಸುವುದು.

(೮) ಮೇಲೆ ಹೇಳಿದ ಸಂದರ್ಭದಲ್ಲಿ—ಎಂದರೆ, ಮುಂದಿನ ಧಾತು ಸಂವತ್ಸರದಲ್ಲಿ—ಕರ್ನಾಟಕ ದೇಶದ ಎಲ್ಲ ಮುಖ್ಯ ಸ್ಥಳಗಳಲ್ಲೂ ಸಭೆಗಳು ನೆರೆದು ವಿಜಯನಗರದ ಸಂಬಂಧವಾಗಿ ಜ್ಞಾಪಕೋಪನ್ಯಾಸಗಳು ನಡೆಯುವಂತೆ ಮಾಡುವುದು.

(೯) ಆ ಸಂದರ್ಭದಲ್ಲಿ, ಹಂಪೆಯಲ್ಲಿ ಒಂದು ಉತ್ಸವ ವಾರವನ್ನು ಏರ್ಪಡಿಸಿ ದೇಶದ ನಾನಾ ಭಾಗಗಳಿಂದಲೂ ಜನರು ಅಲ್ಲಿಗೆ ಆಕರ್ಷಿತರಾಗುವಂತೆ ಅಲ್ಲಿ ಕೀರ್ತನ ವ್ಯಾಖ್ಯಾನ ಉಪನ್ಯಾಸಗಳೂ, ಸಂಗೀತ ಸಾಹಿತ್ಯ ನಾಟಕ ಪ್ರದರ್ಶನಗಳೂ, ವ್ಯಾಯಾಮ ಶಸ್ತ್ರ ಚಾತುರ್ಯ ಪ್ರದರ್ಶನಗಳೂ ನಡೆಯುವಂತೆ ಏರ್ಪಡಿಸುವುದು.

ಈ ನಾನಾ ತೆರದ ಕಾರ್ಯಗಳ ವಿವರಗಳನ್ನೂ ಕಾರ್ಯ ಕ್ರಮಗಳನ್ನೂ ನಿಶ್ಚಯಿಸಿ ಆಗಮಾಡಿಸುವುದಕ್ಕೆ ಈ ಮಂಡಲಿಯು ಸಮಿತಿಗಳನ್ನೂ ಉಪ ಸಮಿತಿಗಳನ್ನೂ ಏರ್ಪಡಿಸಿಕೊಳ್ಳಬಹುದು.

೪. ಒಂದಾವೃತ್ತಿ ಮೂರು ರೂಪಾಯಿಗಳಿಗೆ ಕಡಿಮೆಯಿಲ್ಲದಂತೆ ಚಂದಾ ಕೊಡತಕ್ಕವರು ಈ ಮಂಡಲಿಯ ಸಾಧಾರಣ ಸದಸ್ಯರಾಗಿರುವರು.

೫. ಮಂಡಲಿಯ ಕಾರ್ಯಾರಂಭವನ್ನು ಒಡನೆಯೇ ಕೈಕೊಳ್ಳುವುದಕ್ಕಾಗಿ ಈ ಕೆಳಗೆ ಹೇಳಿರುವ ಸದಸ್ಯರನ್ನೊಳಕೊಂಡ ಒಂದು ಕಾರ್ಯ ಸಮಿತಿಯು ಈ ಮೂಲಕ ನಿಯಾಮಕವಾಗಿರುತ್ತದೆ. (ಸದಸ್ಯರ ಪಟ್ಟಿ ಕೊನೆಯಲ್ಲಿದೆ.)

ಇವರ ಜೊತೆಗೆ, ಒಟ್ಟು ಕಾರ್ಯ ಸಮಿತಿಯ ಸದಸ್ಯರ ಸಂಖ್ಯೆ ೭೫ಕ್ಕೆ ಮೀರದಂತೆ ಇತರರನ್ನು ಸೇರಿಸಿಕೊಳ್ಳುವುದಕ್ಕೂ, ತೆರವು ಬೀಳುವ ಸದಸ್ಯ ಸ್ಥಾನಗಳಿಗೆ ತಕ್ಕವರನ್ನು ಆರಿಸಿಕೊಳ್ಳುವುದಕ್ಕೂ ಈ ಮೇಲೆ ಹೇಳಿದ ಕಾರ್ಯ ಸಮಿತಿಗೆ ಅಧಿಕಾರವಿರುತ್ತದೆ. ಹೀಗೆ ಇತರ ಸದಸ್ಯರನ್ನು ಸೇರಿಸುವುದರಲ್ಲಿ ನಾನಾ ಕರ್ನಾಟಕ ಪ್ರಾಂತಗಳಿಗೆ ಸಲ್ಲತಕ್ಕ ಪ್ರಾತಿನಿಧ್ಯವನ್ನು ಕೂಡಿದ ಮಟ್ಟಿಗೆ ಗಮನದಲ್ಲಿರಿಸಿಕೊಳ್ಳತಕ್ಕದ್ದು.

೬. ಈ ಕಾರ್ಯ ಸಮಿತಿಯು ತನಗೆ ಅವಶ್ಯವಾದ ಅಧಿಕಾರಿಗಳನ್ನು ತಾನೇ ನಿಯಮಿಸಿಕೊಳ್ಳಬಹುದು. ಮ|| ರಾ|| ಪ್ರಹ್ಲಾದರಾವ ಬೆಂಗೇರಿ, ಮ|| ರಾ|| ಮಧ್ವರಾವ ಮೆಳ್ಳಿಗಟ್ಟಿ (ವಕೀಲ)—ಇವರು ತಾತ್ಕಾಲಿಕ ಕಾರ್ಯದರ್ಶಿಗಳಾಗಿರ ತಕ್ಕದ್ದು. ಮಂಡಲದ ಉದ್ದೇಶಗಳು ಸಾಂಗವಾಗಿ ನೆರವೇರಲು ಬೇಕಾದ ಪ್ರಚಾರ ಕಾರ್ಯವನ್ನೂ, ಧನ ಸಂಗ್ರಹದ ಕಾರ್ಯವನ್ನೂ, ಇತರ ಅವಶ್ಯವೆಂದು ತೋರುವ ಎಲ್ಲ ಬಗೆಯ ಕಾರ್ಯಗಳನ್ನೂ ನಡೆಯಿಸಲು ಈ ಕಾರ್ಯ ಸಮಿತಿಗೆ ಅಧಿಕಾರವಿರ ತಕ್ಕದ್ದು. ಆದರೆ ಈ ಅಧಿಕಾರವು ಮಂಡಲದ ಸಾಮಾನ್ಯ ಸದಸ್ಯ ಸಭೆಯ ಅಪ್ಪಣೆ ವಿಚಾರಣೆಗಳಿಗೆ ಒಳಪಟ್ಟಿರತಕ್ಕದ್ದು.

೭. ಕಾರ್ಯ ಸಮಿತಿಯು ೧೯೩೪ನೆಯ ಇಸ್ವಿ ಜೂನ್ ೩೦ರೊಳಗಾಗಿ ಸಾಮಾನ್ಯ ಸದಸ್ಯರ ಸಭೆಯೊಂದನ್ನು ಸೇರಿಸಿ ಅದರ ಮುಂದೆ ಆದುವರೆಗೆ ನಡೆದಿರುವ ಕಾರ್ಯ ಕಲಾಪಗಳನ್ನು ವಿವರಿಸಿ ಮುಂದೆ ನಡೆಯಬೇಕಾದ ಕಾರ್ಯ ಕ್ರಮದ ಬಗ್ಗೆ ಸಲಹೆಗಳನ್ನು ತೆಗೆದುಕೊಳ್ಳತಕ್ಕದ್ದು.

೮. ಕಾರ್ಯ ಸಮಿತಿಯ ಮುಖ್ಯ ಕಾರ್ಯ ಸ್ಥಾನವು ಧಾರವಾಡದಲ್ಲಿರ ತಕ್ಕದ್ದು. ಕಾರ್ಯ ಸಮಿತಿಯು ೩ ತಿಂಗಳಲ್ಲಿ ಒಂದಾವರ್ತಿಯಾದರೂ ಸೇರತಕ್ಕದ್ದು. ಅದು ತನ್ನ ಮುಖ್ಯ ಕಾರ್ಯ ಸ್ಥಾನದಲ್ಲಿಯಾದರೂ, ಅಥವಾ ಕರ್ಣಾಟಕ ದೇಶದ ಮತ್ತೆ ಯಾವ ಸ್ಥಳದಲ್ಲಿಯಾದರೂ ಸೇರಬಹುದು. ಹೀಗೆ ಸೇರಿದ ಸಮಿತಿಯು ಅಧಿಕಾರ ನಡೆಯಿಸುವುದಕ್ಕೆ ಅದರ ಸದಸ್ಯರಲ್ಲಿ ೧೦ ಮಂದಿಯಾದರೂ (Quorum) ಹಾಜರಾಗಿರಬೇಕು.

೯. ಗ್ರಂಥ ರಚನೆಗೂ, ಪ್ರಚಾರ ಕಾರ್ಯಕ್ಕೂ, ಚಿತ್ರಗ್ರಹಣ ಮೊದಲಾದ ಕಾರ್ಯಗಳಿಗೂ ಬೇಕಾದ ಉಪ ಸಮಿತಿಗಳನ್ನು ನಿಯಮಿಸುವುದಕ್ಕೂ, ಲೇಖಕ ರನ್ನೂ ಇತರ ಕಾರ್ಯ ಕರ್ತರನ್ನೂ ನಿಯಮಿಸಿ ಕಾರ್ಯ ಕ್ರಮಗಳನ್ನು ನಿರ್ಣಯ ಮಾಡುವುದಕ್ಕೂ ಕಾರ್ಯ ಸಮಿತಿಗೆ ಅಧಿಕಾರವಿರುತ್ತದೆ.

೧೦. ಕಾರ್ಯ ಸಮಿತಿಯು ಮೇಲಿನ ಉದ್ದೇಶಗಳ ಸಾಧನೆಗಾಗಿ ಬೇಕಾಗುವ ದ್ರವ್ಯ ಸಹಾಯವನ್ನೂ ಇತರ ಎಲ್ಲ ಬಗೆಯ ಸಹಾಯವನ್ನೂ ಪಡೆದುಕೊಳ್ಳಲು ಮೈಸೂರಿನ ಶ್ರೀಮನ್ಮಹಾರಾಜರವರನ್ನೂ, ಹೈದರಾಬಾದಿನ ನೈಜಾಮರವರನ್ನೂ, ಇಂಡಿಯಾ ಸರಕಾರದವರನ್ನೂ, ಮದರಾಸ್ ಮುಂಬಯಿ ಇಲಾಖೆಗಳ ಸರಕಾರ ದವರನ್ನೂ, ಕೊಡಗಿನ ಸರಕಾರದವರನ್ನೂ, ನಾನಾ ಸಂಸ್ಥಾನಗಳ ಮತ್ತು ಮಠಗಳ ಅಧಿಪತಿಗಳನ್ನೂ ಸಂದರ್ಶಿಸಿ, ಮಂಡಲಿಯ ಉದ್ದೇಶಗಳನ್ನು ಅವರಿಗೆ ವಿವರಿಸಿ, ಎಲ್ಲ ಬಗೆಯ ಸಹಾಯವನ್ನೂ ಸಂಪಾದಿಸಲು ತಕ್ಕ ರಾಯಭಾರಿಗಳನ್ನು ಶೀಘ್ರವಾಗಿ ಏರ್ಪಡಿಸತಕ್ಕದ್ದು.

೧೧. ಕಾರ್ಯ ಸಮಿತಿಯು ಆದಷ್ಟು ಬೇಗನೆ ಮೇಲಿನ ಉದ್ದೇಶಗಳನ್ನು ಪತ್ರಿಕೆಗಳಲ್ಲಿಯೂ ಇತರ ಮೂಲಕವೂ ಪ್ರಕಟಪಡಿಸಿ ಮೇಲೆ ಹೇಳಿದ ಉತ್ಸವವು ಜನರಿಗೆ ಸ್ಫೂರ್ತಿದಾಯಕವಾಗಿಯೂ ಯಶಸ್ವಿಯಾಗಿಯೂ ನಡೆಯುವ ಬಗ್ಗೆ

ಸಮಸ್ತ ದೇಶಾಭಿಮಾನಿಗಳಿಂದಲೂ ಉದ್ದೇಶ ಸಾಧಕವಾದ ಸಲಹೆಗಳನ್ನೂ ಸೂಚನೆಗಳನ್ನೂ ಬೇಡಿ, ಉಚಿತ ತೋರಿದಂತೆ ಅವುಗಳನ್ನು ನಡೆಯಿಸತಕ್ಕದ್ದು.

೧೨. ಈ ಸಮಾರಂಭವು ಕೇವಲ ಜನಸಂಸ್ಕೃತಿ ದೇಶಚರಿತ್ರೆಗಳಿಗೆ ಸಂಬಂಧಪಟ್ಟುದಾದ ಕಾರಣ, ಕರ್ಣಾಟಕದ ನಾನಾ ಪ್ರಾಂತ ನಾನಾ ಪ್ರದೇಶಗಳ ಮಹಾಜನರೂ ರಾಜಕೀಯ ಭೇದ, ಧಾರ್ಮಿಕ ಮತಭೇದ ಮೊದಲಾದ ಭೇದಗಳನ್ನೆಣಿಸದೆ, ಈ ಸಂಸ್ಥೆಗೆ ಬೆಂಬಲಕೊಟ್ಟು ಈ ಮಹಾ ಸಮಾರಂಭವನ್ನು ಪರಿಪೋಷಿಸಬೇಕೆಂದು ಈ ಸಮ್ಮೇಳನವು ಬೇಡುತ್ತದೆ.

ಡಿ. ವಿ. ಗುಂಡಪ್ಪ
ಸಮ್ಮೇಳನದ ಅಧ್ಯಕ್ಷ

## ವಿಜಯನಗರ ಸಾಮ್ರಾಜ್ಯ ಸ್ಮಾರಕೋತ್ಸವ ಮಂಡಲಿಯ ಕಾರ್ಯ ಸಮಿತಿಯ ಸಭಾಸದರು

### ೧. ಬೆಳಗಾಂವಿ

(೧) ಶ್ರೀ. ಬೆಳವಿ ದತ್ತಾತ್ರಯರಾಯರು, (೨) ಶ್ರೀ. ಜೋಶಿ ನಾರಾಯಣರಾಯರು, (೩) ಡಾ॥ ಎಸ್. ಸಿ. ನಂದಿಮಠ, ಪಿಎಚ್.ಡಿ.

### ೨. ವಿಜಾಪುರ

(೪) ಶ್ರೀ. ಕೌಜಲಗಿ ಶ್ರೀನಿವಾಸರಾಯರು, (೫) ರಾ॥ ಸಾ॥ ಫ. ಗು. ಹಳಕಟ್ಟಿ, (೬) ಶ್ರೀ. ಹರ್ಡೇಕರ ಮಂಜಪ್ಪನವರು.

### ೩. ಕಾರವಾರ

(೭) ಶ್ರೀ. ಕೆ. ಆರ್. ಹಳದೀಪುರ, (೮) ಶ್ರೀ. ಜಿ. ಎಸ್. ಗಂಗೊಳ್ಳಿ.

### ೪. ಮಂಗಳೂರು

(೯) ಡಾ॥ ಯು. ರಾಮರಾಯರು, (೧೦) ಶ್ರೀ. ಸಿ. ಎಸ್. ಭಟ್ಟರು, (೧೧) ಶ್ರೀ. ಎ. ಬಿ. ಶೆಟ್ಟಿಯವರು.

### ೫. ಬಳ್ಳಾರಿ

(೧೨) ಶ್ರೀ. ಬಿ. ಭೀಮರಾಯರು, (೧೩) ಶ್ರೀ. ಎ. ರಂಗನಾಥ ಮುದಲಿಯಾರರು, (೧೪) ಶ್ರೀ. ವೈ. ನಾಗೇಶ ಶಾಸ್ತ್ರಿಗಳವರು, (೧೫) ಶ್ರೀ. ಎ. ಮಹಾಬಲೇಶ್ವರಪ್ಪನವರು, (೧೬) ಡಾ॥ ಆರ್. ನಾಗನಗೌಡರು, ಪಿಎಚ್.ಡಿ. (೧೭) ಶ್ರೀ. ಆಯ್. ವಸುಪಾಲಪ್ಪನವರು, (೧೮) ಶ್ರೀ. ತಟ್ಟಿ ಕೃಷ್ಣರಾಯರು.

### ೬. ಧಾರವಾಡ

(೧೯) ಶ್ರೀ. ವ್ಹಿ. ಬಿ. ಹಾಲಭಾವಿ, (೨೦) ಶ್ರೀ. ಜೋಗ ವಿಶ್ವನಾಥರಾಯರು, (೨೧) ರಾ॥ ಬ॥ ಬಿ. ಎಲ್. ಪಾಟೀಲ, (೨೨) ಶ್ರೀ. ಜಿ. ಎಸ್. ಕುಲಕರ್ಣಿ, (೨೩) ಶ್ರೀ. ಆಲೂರ ವೆಂಕಟರಾಯರು, (೨೪) ಶ್ರೀ. ಮುದವೀಡು ಕೃಷ್ಣರಾಯರು, (೨೫) ಶ್ರೀ. ಕುಲಕರ್ಣಿ ವ್ಹಿ. ಜಿ.,

ಏಕೆ ಬರೆಯಬಾರದು? ಎಲ್ಲ ಭಾಷೆಗಳಿಗೂ ಒಂದೇ ತೆರನಾದ ನಿಯಮಗಳಿರಬೇಕೆಂಬುದು ಸರಿಯಲ್ಲ. ಸಂಸ್ಕೃತ ಭಾಷೆಯಲ್ಲಿ ಕವಿತ್ವವು ಸುಲಭವೆಂದೂ ಆಂಧ್ರದಲ್ಲಿ ಅದು, ಯತಿ ಪ್ರಾಸ ನಿಯಮಗಳಿಂದ ಕಷ್ಟವೆಂದೂ ಕೆಲವರ ಭಾವನೆ. ಈ ನಿಯಮಗಳನ್ನು ಆಂಧ್ರ ಕವಿತ್ವದಲ್ಲಿ ತೊಲಗಿಸಿದರೆ ಮಿಕ್ಕ ನಿಯಮಗಳೆಲ್ಲವೂ ಈ ಎರಡು ಭಾಷೆಗಳಲ್ಲಿಯೂ ಸಮಾನವಾಗುವುವೇ? ಗಣ ಯತಿ ಪ್ರಾಸಗಳು ಇದ್ದರೆಯೇ ಅದು ಕವಿತ್ವವೆನಿಸಿಕೊಳ್ಳುವುದು; ಅವಿಲ್ಲದಿದ್ದರೆ ಯಕ್ಷ ಗಾನವೆನ್ನಬೇಕು. ತೆಲುಗು ಭಾಷೆಗೆ ಅದೇ ಒಳ್ಳೆಯ ಮಾರ್ಗವೆಂದೆಣಿಸಿ ಹಿರಿಯರು ನಿಶ್ಚಯಿಸಿದರು. ಅದನ್ನು ಬಿಟ್ಟಲ್ಲಿ ಮೇಲಾಗದು.

ವ್ಯರ್ಥ ಪದಗಳು ಇರಬಾರದೆಂದೂ, ಅಂತಹದು ಕವಿತ್ವವೇ ಅಲ್ಲವೆಂದೂ ಕೆಲವರ ಮತ. ಹಾಗಾದಲ್ಲಿ ವಾಲ್ಮೀಕಿ ಕವಿತ್ವವು ಕೂಡ ನಿಲ್ಲದು. ನಿರರ್ಥಕವಾಗಿ ವಿಶೇಷಿಸಿ ಅಂತಹ ಪದಗಳನ್ನು ಪ್ರಯೋಗಿಸಲು ಕವಿಗಳು ಸಮ್ಮತಿಗೊಡರು; ಕೆಲವು ಕಡೆ ಅಂಥವು ಕೂಡ ಇರಬೇಕಾಗುವುದು. ಪ್ರಾಚೀನ ಮಹಾ ಕವಿಗಳೆಲ್ಲರೂ ಸಾಮಾನ್ಯವಾಗಿ ಅರ್ಥವನ್ನು ಚೆನ್ನಾಗಿ ಪೋಷಿಸಿರುವರೆಂದೇ ಎಲ್ಲರೂ ಅಂಗೀಕರಿಸುವರು. ಅಂತಹ ಮಹಾ ಕವಿಗಳನ್ನು ದೂರುವುದು ಒಳ್ಳೆಯದಲ್ಲವೆಂದು ನಾವೆಲ್ಲರೂ ಅವರನ್ನು ಪ್ರಾರ್ಥಿಸಿಕೊಳ್ಳಬೇಕು.

'ಭಾವ ಕವಿತ್ವ'ವೆಂದು ಹೊಸ ಹೆಸರನ್ನೇನೋ ಇಡಲು ಕೆಲವರು ಯತ್ನಿಸಿದರೂ ಅದು ಅವರಿಗೇ ಕಟುವಾಗಿ ತೋರಿದೆಯೆನ್ನಬಹುದು. ಭಾವ ವಿಹೀನ ಕವಿತ್ವವೂ ಇರುವುದೇ? ಆದುದರಿಂದ, ಅಂತಹ ಕಾರ್ಯಗಳಿಗೆ ಪ್ರವರ್ತಿಸದೆ, ಇನ್ನೂ ಎಷ್ಟೋ ರೀತಿಗಳಲ್ಲಿ ಪೂರ್ವ ಮಾರ್ಗಗಳನ್ನು ಅಭಿವೃದ್ಧಿಗೊಳಿಸಲು ಯತ್ನಿಸಿರೆಂದು ಅವರನ್ನು ನಿರಂತರವೂ ನಾವು ಪ್ರಾರ್ಥಿಸಿಕೊಳ್ಳಬೇಕು.

**ಪಂಪನ ಆಶ್ರಯದಾತನಾದ ಅರಿಕೇಸರಿ (II)ಯ ಕಾಲದ ಶಾಸನಗಳು.**—ಆಂಧ್ರ ಐತಿಹಾಸಿಕ ಸಂಶೋಧನ ಸಂಸ್ಥೆಯ ನಿಯತ ಕಾಲಿಕ ಪತ್ರಿಕೆಯಲ್ಲಿ (The Journal of the Andhra Historical Research Society, ಸಂಪುಟ VI, ಭಾಗ ೩, ೪: ಜನವರಿ ಮತ್ತು ಏಪ್ರಿಲ್ ೧೯೩೨) 'ಇಮ್ಮಡಿ ಅರಿಕೇಸರಿಯ ವೇಮುಲವಾಡ ಶಾಸನ' ಎಂಬ ಹೆಸರಿನ ಒಂದು ಲೇಖನವನ್ನು ಇಂಗ್ಲಿಷು ಭಾಷೆಯಲ್ಲಿ ಕೊಟ್ಟಿದೆ. ಅದರಲ್ಲಿ ಮುಂದೆ ಹೇಳುವ ವಿಷಯಗಳಿವೆ:—"ಹೈದರಾಬಾದು ಸಂಸ್ಥಾನದಲ್ಲಿಯ ಕರೀಮ ನಗರವೆಂಬ ಊರಿನಿಂದ ಸುಮಾರು ಹತ್ತು ಮೈಲಿಗಳ ದೂರದಲ್ಲಿ ವೇಮುಲವಾಡ ಎಂಬ ಹಳ್ಳಿ ಇದೆ. ಈ ಹಳ್ಳಿಯನ್ನು 'ಲೇಮುಲವಾಡ' ಎಂದೂ ಕರೆಯುತ್ತಾರೆ; ಶಾಸನದಲ್ಲಿ ಇದಕ್ಕೆ 'ಲೆಂಬುಲವಾಡ' ಎಂಬ ಹೆಸರಿದೆ. ಈ ಹಳ್ಳಿಯಲ್ಲಿ ಚಾಲುಕ್ಯ ರೀತಿಯಲ್ಲಿ ಕಟ್ಟಿದ ಪುರಾತನ ದೇವಾಲಯಗಳಿವೆ. ಅವುಗಳಲ್ಲಿ 'ಬದ್ದೆಗೇಶ್ವರ'ವೆಂದು ಹಿಂದೆ ಕರೆಯುತ್ತಿದ್ದು ಈಗ 'ಭೀಮೇಶ್ವರ'ವೆಂದು ಹೆಸರುಳ್ಳ ಒಂದು ಶಿವಾಲಯವಿದೆ. ಈ ದೇವಾಲಯದ ಗರ್ಭ ಗುಡಿಯ ಎಡಕ್ಕೆ ಜಿಡ್ಡಿನಿಂದಲೂ ಕೊಳೆಯಿಂದಲೂ ವಿವರ್ಣವಾದ ಎರಡು ಕಲ್ಲು ಕಂಬಗಳಿವೆ. ಈ ಎರಡು ಕಂಬಗಳ

ಮೇಲೂ ಶಾಸನಗಳಿವೆ. ಒಂದು ಕಂಬದ ನಾಲ್ಕು ಕಡೆಗಳಲ್ಲಿಯೂ ಶಾಸನವು ಒಟ್ಟು ೧೦೮ ಪಙ್ಕ್ತಿಗಳಲ್ಲಿದೆ. ಇದರ ಲಿಪಿಯು ಕ್ರಿ. ಹತ್ತನೆಯ ಶತಮಾನದ 'ತೆಲ್ಗನ್ನಡ'ದ ರೀತಿಯದು. ಶಾಸನ ಭಾಷೆಯೆಲ್ಲವೂ ಸಂಸ್ಕೃತ ಗದ್ಯ, ಪದ್ಯ. ಭಾಷೆಯು ಅಷ್ಟು ಸಮರ್ಪಕವಾಗಿಲ್ಲ. ಶಾಸನದ ಕಾಲವನ್ನು ಕೊಟ್ಟಿಲ್ಲ. ಆದರೆ ಇತರ ಸಂದರ್ಭಗಳಿಂದ ಕಾಲವನ್ನು ಸರಿ ಸುಮಾರಾಗಿ ನಿಷ್ಕರ್ಷೆ ಮಾಡಬಹುದು. ಈ ದಾನ ಶಾಸನವು ಅರಿಕೇಸರಿಯ ಸಂಧಿ ವಿಗ್ರಹಿಯಾದ ಗುಣಕರನು ಬದ್ದೆಗೇಶ್ವರ ದೇವಾಲಯಕ್ಕಾಗಿ ಕೊಟ್ಟ ಭೂ ದಾನವನ್ನು ತಿಳಿಸುತ್ತದೆ. ಇದು ಚಾಳುಕ್ಯ ವಂಶದ 'ಮಹಾ ಮಂಡಲೇಶ್ವರ, ಮಹಾ ಸಾಮಂತಾಧಿಪತಿ' ಇಮ್ಮಡಿ ಅರಿಕೇಸರಿ ಮಹಾರಾಜನ ಆಳಿಕೆಯ ಕಾಲದ್ದು. ಈತನು ರಾಷ್ಟ್ರಕೂಟ ರಾಜನಾದ ನಾಲ್ವಡಿ ಗೋವಿಂದರಾಜನ (ಕ್ರಿ. ೯೧೮–೯೩೩) ಸಾಮಂತ ರಾಜನು. ಈ ಶಾಸನದಲ್ಲಿ ಇಮ್ಮಡಿ ಅರಿಕೇಸರಿಯ ವಂಶ ವಿವರಣೆಯಿದೆ; ದಕ್ಷಿಣ ದೇಶದಲ್ಲಿ ಏಳೂಕಾಲು ಸಾವಿರ ರಾಜ್ಯವನ್ನಾಳುತ್ತಿದ್ದ ಯುದ್ಧಮಲ್ಲ (I) ನೆಂಬ ('ವಿನಯಾದಿತ್ಯ'ನೆಂಬ) ಮೂಲ ಪುರುಷನಿಂದ ಈ ವಂಶವನ್ನು ವಿವರಿಸಿದೆ.''

ಪಂಪನು 'ವಿಕ್ರಮಾರ್ಜುನ ವಿಜಯ'ದಲ್ಲಿ ಕೊಟ್ಟಿರುವ ಅರಿಕೇಸರಿಯ ವಂಶಾವಳಿಗೂ ಈ ಶಾಸನದಲ್ಲಿ ಕೊಟ್ಟಿರುವ ವಂಶಾವಳಿಗೂ ಹೋಲಿಕೆಯಿದ್ದರೂ, ಲೇಖಕರು 'ವಿಕ್ರಮಾರ್ಜುನ ವಿಜಯ'ದಲ್ಲಿ ಕೊಟ್ಟಿರುವ ವಂಶಾವಳಿಯನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೆ, ಇಮ್ಮಡಿ ಅರಿಕೇಸರಿಯು ಇಮ್ಮಡಿ ಯುದ್ಧಮಲ್ಲನ ಮಗನೆಂದೂ, ಇಮ್ಮಡಿ ನರಸಿಂಹನ ತಮ್ಮನೆಂದೂ ಹೇಳಿರುತ್ತಾರೆ. ಇದು ತಪ್ಪು. (ಪಂ. ಭಾ. I, ೩೦–೪೨ ನೋಡಿರಿ)

ಇದೇ ವಿಷಯವಾದ ಶಾಸನಗಳು ಮತ್ತೆರಡಿವೆ: ನೈಜಾಂ ಸರಕಾರದ (೧) ನಳಗೊಂಡ ಜಿಲ್ಲೆಯಲ್ಲಿರುವ ಕೊಲ್ಲೆಪಾರಾ ತಾಮ್ರ ಶಾಸನ; (೨) ಪರಭಣಿಯ ತಾಮ್ರಶಾಸನ—ಇವುಗಳ ವಿಚಾರವನ್ನು 'ಪ್ರಬುದ್ಧ ಕರ್ಣಾಟಕ'ದ ೧೫ನೆಯ ಸಂಪುಟದ ೧ನೆಯ ಸಂಚಿಕೆಯಲ್ಲಿ ಕೊಟ್ಟಿದೆ.

ಮೂಲ್ಕಿಯ 'ಭಾರತಿ' ಮಾಸ ಪತ್ರಿಕೆಯ ೧೯೩೩ನೆಯ ಅಕ್ಟೋಬರು ಮತ್ತು ನವೆಂಬರು ಸಂಚಿಕೆಗಳಲ್ಲಿ ಶ್ರೀಮಾನ್ ಗೋವಿಂದ ಪೈ ಅವರು "ಪಂಪನ ದೇಶ ಕಾಲಗಳ ವಿಚಾರ'' ಎಂಬ ಲೇಖನವನ್ನು ಬರೆದಿರುವರು. ಅದರಲ್ಲಿ "ಪಂಪರೇ ಇಬ್ಬರಿದ್ದರೇ'' ಎಂಬ ವಿಚಾರವನ್ನೆತ್ತಿಕೊಂಡು ಚರ್ಚಿಸಿ, "'ವಿಕ್ರಮಾರ್ಜುನ ವಿಜಯ'ದ ಪಂಪನಿಗೆ ಹಿಂದೆ ಬೇರೊಬ್ಬ ಪಂಪನೆಂಬ ಭಾರತ ಕವಿ ಆಗಿ ಹೋಗಿರಬೇಕೆಂದಾಗಲಿ, ಅಭಿನವ ಪಂಪನೆಂಬ ಆ ನಾಗಚಂದ್ರನನ್ನು ಬಿಟ್ಟೇ ಬಿಟ್ಟು ಪಂಪರೆಂಬವರೇ ಇಬ್ಬರಿದ್ದರೆಂದಾಗಲಿ ಸರ್ವಥಾ ಸಿದ್ಧವಾಗದು'' ಎಂದು ನಿರ್ಣಯಿಸಿರುತ್ತಾರೆ.

'ಜಯಕರ್ನಾಟಕ'ದ ಡಿಸೆಂಬರು ಸಂಚಿಕೆಯಲ್ಲಿ, ಶ್ರೀ. ಪಾಂಡುರಂಗ ದೇಸಾಯಿಯವರು ಬರೆದ "ಆದಿ ಪಂಪನು . ಅಚ್ಚ ಕನ್ನಡಿಗನೆ'' ಎಂಬ ಲೇಖನವಿರುವುದು. ಇದರಲ್ಲಿ, ಮೊದಲು ಹೇಳಿದ ಶಾಸನಗಳು ಮೂರನ್ನೂ, ಯಶಸ್ತಿಲಕ ಚಂಪೂವನ್ನೂ

ಪಂಪ ಭಾರತವನ್ನೂ ಆಧಾರವಾಗಿಟ್ಟುಕೊಂಡು, ಲೇಖಕರು ಮುಂದೆ ಹೇಳುವ ವಿಷಯಗಳನ್ನು ನಿರ್ಧರ ಮಾಡಿರುತ್ತಾರೆ:—(೧) ಪರಭಣಿಯ ಶಾಸನವು "ಸಕಲಿಂಗ ತ್ರಯಾಂ ವೆಂಗೀಂ ಯೋವತಿಸ್ಮ ಪರಾಕ್ರಮಾತ್" ಎಂದು ಹೇಳುವುದರಿಂದ, ಈ ಮೂರು ಕಲಿಂಗ ನಾಡುಗಳು ಯಾವುವು ಎಂಬುದನ್ನು ವಿಶದವಾಗಿ ಹೇಳಲು ಸಾಧ್ಯವಿಲ್ಲವಾದರೂ, ಮೂರು ಕಲಿಂಗ ಮತ್ತು ವೆಂಗಿ ಎಂಬ ನಾಲ್ಕು ನಾಡುಗಳಿಂದ ಒಂದೂಕಾಲು ಲಕ್ಷ ಭೂಪ್ರದೇಶದ ನಿರ್ದೇಶವಾಗಿ, ಯುದ್ಧಮಲ್ಲನ ರಾಜ್ಯದ ವಿಸ್ತಾರವು ಚಿಕ್ಕದಾಗಿದ್ದಿಲ್ಲವೆಂದು ನಿಶ್ಚಿತವಾಗಿ ತಿಳಿಯಬರುತ್ತದೆ. (೨) ಬೋದನದ ವಿಚಾರವು ಈ ಎಲ್ಲವುಗಳಲ್ಲಿಯೂ ಹೇಳಿರುವುದರಿಂದ* ಇದು ಯುದ್ಧಮಲ್ಲನ ರಾಜಧಾನಿಯೇ ಆಗಿರಬೇಕು. ಇದು "ಈಗ ನಿಜಾಮು ರಾಜ್ಯದಲ್ಲಿಯ ನಿಜಾಮಾಬಾದ ಜಿಲ್ಲೆಯಲ್ಲಿಯ **ಬೋಧನವೇ** ಆಗಿದೆ." (೩) ಅರಿಕೇಸರಿಯ ರಾಜ್ಯವು ಬೋದನ ಮತ್ತು **ಲೆಂಬುಳಪಾಟಕ**—ಈ ಊರುಗಳನ್ನೊಳಗೊಂಡ ನಿಜಾಮು ರಾಜ್ಯದಲ್ಲಿಯ ನಿಜಾಮಾಬಾದ, ಕರೀಮನಗರ ಮೊದಲಾದ ಜಿಲ್ಲೆಗಳಲ್ಲಿ ವ್ಯಾಪಿಸಿತ್ತು. (೪) "ಭಾರತವನ್ನು ಬರೆದು ಪಂಪನು ಪಡೆದ **ಧರ್ಮಪುರ** ಉಳ್ಳ ಸಾವಿರದ ಬಚ್ಚೆನಾಡೂ, ಪರಭಣೀ ಶಾಸನದಲ್ಲಿಯ ಸಾವಿರದ ಸಬ್ಬಿನಾಡೂ ಅರಿಕೇಸರಿಯ ಈ ದೊಡ್ಡ ರಾಜ್ಯದಲ್ಲಿಯೇ ಸೇರ್ಪಟ್ಟಿರಬೇಕು." (೫) ಚಾಲುಕ್ಯರ ಮನೆತನದ ಹೆಣ್ಣು ಗಂಡು ಹೆಸರುಗಳೂ ಬಿರುದುಗಳೂ ಎಲ್ಲ ಕನ್ನಡವಾಗಿರುವುದರಿಂದಲೂ, "ವೆಂಗಿನಾಡೆಂದರೆ ಕೇವಲ ತೆಲುಗು ನಾಡಾಗಿರದೆ ಅದರ ಬಹುಭಾಗವು ಕರ್ನಾಟಕದಲ್ಲಿ ಸಮಾವಿಷ್ಟವಾಗಿರಬೇಕು" ಎಂದೂ, "ವೆಂಗಿಪಳು" ಎಂಬುದು ಕನ್ನಡ ಹೆಸರಾಗಿದೆ ಎಂದೂ; ಅಲ್ಲದೆ, ಸಿಡುಗುಂದಿ, ಕೊಟ್ಟೂರು ಎಂಬ ನೆರೆಯ ಅಗ್ರಹಾರಗಳ ಹೆಸರುಗಳೂ ಕನ್ನಡವಾಗಿದೆಯೆಂದೂ—ಇವೇ ಮೊದಲಾದ ಕಾರಣಗಳಿಂದ ಅರಿಕೇಸರಿಯೂ ಪಂಪನೂ ಅಚ್ಚ ಕನ್ನಡಿಗರು. (೬) ಪಂಪನು ಲಕ್ಷ್ಮೇಶ್ವರದವನಲ್ಲ; ಧರ್ಮಪುರವು ಹಂಬಳವಲ್ಲ.

---

* "ಯಃ ಪಾದನೇ ಸೌಧಮಯೀಂ ಗಜಾನಾಂ ವಿಧಾಯ ವಾಪೀಮತಿ ತೈಲಪೂರ್ಣಾಂ" (ವೇಮುಲವಾಡ ಶಾಸನ, ಶ್ಲೋ. ೩; 'ಪಾದನೇ' ಎಂಬುದು 'ಪೋದನೇ' ಎಂದಿರಬಹುದೇನೋ!)

"ಸಪಾದಲಕ್ಷ ಭೂಭರ್ತ್ತಾ ತೈಳವಾಪ್ಯಾಂ ಸ ಪೋದನೇ ಅವಗಾಹೋತ್ಸವಂ ಚಕ್ರೇ ಸಕ್ರೀಮ್ಮರ್ದದನ್ತಿನಾಂ॥ ಸಕಳಿಂಗ ತ್ರಯಾಂ ವೆಂಗಿಂ—" (ಪರಭಣಿ ಶಾಸನ, I, ೩, ೪.)

# ಗ್ರಂಥ ವಿಮರ್ಶೆ

## ೧. ಭಾವನಾ ತ್ರಯಂ

ಗ್ರಂಥಕರ್ತರು.—ಹನೂಮಾನ್ ವೇಂಕಟರಾಯ ಕವಿ, ತುಮಕೂರು.

ಮುದ್ರಣಕಾರರು.—ತುಮಕೂರು ಪ್ರೆಸ್, ತುಮಕೂರು.

ಡೆಮ್ಮಿ ಅಷ್ಟಪತ್ರ ಪುಟಗಳು ೫೦; ಬೆಲೆ ೬ ಆಣೆ; ೧೯೩೩.

ಇದರಲ್ಲಿ, "ರಾಜ ಯೋಗಂ, ಕೋಕ ಶೋಕಂ, ಜೀವ ತತ್ವಂ" ಎಂಬ ಮೂರು ಉದಾತ್ತ ಕವಿತೆಗಳಿವೆ. ಗ್ರಂಥಕರ್ತರು, "ಚಂದ್ರಹಾಸಾಭ್ಯುದಯಂ, ಪೂರ್ವ ರಾಮ ಚರಿತಂ" ಎಂಬ ಗ್ರಂಥಗಳನ್ನು ಬರೆದಿರುವುದಾಗಿಯೂ, ಕಾರಣಾಂತರದಿಂದ ಅವರ ಮನವು ಮಾರ್ಪಟ್ಟುದರಿಂದ ಈ ಕಾವ್ಯವನ್ನು ಬರೆದಿರುವುದಾಗಿಯೂ ತಮ್ಮ ಮುನ್ನುಡಿಯಲ್ಲಿ ತಿಳಿಸುತ್ತಾರೆ.

ಮೊದಲನೆಯ ಭಾವನೆಯಲ್ಲಿ, ಮೈಸೂರನ್ನಾಳುವ ಮಹಾಸ್ವಾಮಿಯವರ ಸದ್ಗುಣ ಸಂಪತ್ತಿಯನ್ನು ಕುರಿತ, ವಿವಿಧಾಲಂಕಾರಗರ್ಭಿತವಾದ ೧೦೫ ವೃತ್ತಗಳಿವೆ. ಎರಡನೆಯ ಭಾವನೆಯು, 'ಕೋಕ ಶೋಕಂ'. ಇದು ಪ್ರಿಯಾ ವಿರಹ ಸಂತಪ್ತನಾದ ನಾಯಕನ ವಿಲಾಪ ರೂಪವಾದುದು. ಇದರಲ್ಲಿ ೧೩೭ ಕಂದ ಪದ್ಯಗಳಿವೆ. ಪ್ರಾಯಶಃ ಇದು, ಗ್ರಂಥಕರ್ತರು ತಮ್ಮ ಮುನ್ನುಡಿಯಲ್ಲಿ ತಿಳಿಸಿರುವ ಕಾರಣ ಪರಂಪರೆಯ ಫಲ ರೂಪವಾಗಿರಬಹುದೆಂದು ನಮ್ಮ ಭಾವನೆ. ಮೂರನೆಯದು 'ಜೀವ ತತ್ವಂ'. ಇದರಲ್ಲಿ ಭವ ಬಂಧನದಲ್ಲಿ ತೊಳಲಿ ಬಳಲಿದ ಜೀವವು ತನ್ನನ್ನು ತಾನರಿತು ಆಮೇಲೆ ವಿಶ್ವ ಮಯನಾದ ಪರಮಾತ್ಮನ ಸದ್ಭಾವವನ್ನು ತಿಳಿದು ಶಾಂತಿಯನ್ನು ಪಡೆದ ವಿಧಾನವು ವರ್ಣಿತವಾಗಿದೆ.

ಕವಿತೆಯು ಬಿಕ್ಕಟ್ಟಾಗಿಯೂ, ರಸ ಭರಿತವಾಗಿಯೂ ಇರುವುದು ಮಾತ್ರವಲ್ಲದೆ ಓದುಗರ ಮನವರಳುವ ಹೊಸ ಹೊಸ ಭಾವನೆಗಳಿಂದಲೂ ಕಳೆಗೊಂಡಿದೆ. ಕೆಲವೆಡೆ ಗಳಲ್ಲಿ ಜೈನ ಕವಿಗಳ ಪ್ರತಿಭೆಯೂ ಶಯ್ಯೆಯೂ ಕಂಡುಬರುವುದು. ಕವಿತೆಯು ಪ್ರಾಚೀನ ಸಂಪ್ರದಾಯಕ್ಕೆ ಸೇರಿದುದಾದರೂ, ಹೊಸ ಸಂಪ್ರದಾಯವನ್ನು ಸ್ವಲ್ಪ ಮಾತ್ರ ಅನುಸರಿಸಿದೆ. ಇದನ್ನು ಗ್ರಂಥಕರ್ತರು,

ಕಂ॥ ಪ್ರಾಸಂ ಸದಭಿಪ್ರಾಯ ।
　ಗ್ರಾಸಂ ಭಾವಾರ್ಥ ರೀತಿ ಕಾರಕ ಕವಿ ಸಂ ॥
　ತ್ರಾಸಂ ಬಂಧುರ ಕವಿತಾ ।
　ಹ್ರಾಸಂ ಕವಿ ಕುಲಕಿದೊಂದು ಪಾಸಂ ದೋಸಂ ॥

ಎಂಬುದಾಗಿ ತಿಳಿಸಿ, ತಮಗೆ ಪ್ರಾಸ ಬದ್ಧವಾದ ಕವಿತೆಯನ್ನು ಮಾಡಲು ಬಂದರೂ,

ಭಾವ ಮಾಧುರ್ಯಕ್ಕಾಗಿ ಪ್ರಾಸವಿಲ್ಲದೆಯೇ ಕವನ ಮಾಡಿರುವುದಾಗಿ ಸೂಚಿಸಿ ಯಿತ್ತಿರುವರು. ಕಾವ್ಯವು ಕನ್ನಡದ್ದಾದರೂ ಸಂಸ್ಕೃತ ಭೂಯಿಷ್ಠವಾಗಿದೆ; ಸಂಸ್ಕೃತ ಸಮಾಸ ಪದಗಳ ಆಡಂಬರವು ಅಧಿಕವಾಗಿ ಸಾಮಾನ್ಯರಾದವರು ಸುಲಭ ವಾಗಿ ಅರ್ಥಮಾಡಿಕೊಳ್ಳಲು ಅಡಚಣೆಯನ್ನುಂಟುಮಾಡಿದೆ. ಆದರೂ ರಸ ವಿನ್ಯಾಸ ವನ್ನೇ ಗಮನಿಸುವವರಿಗೆ ಇದು ಸೊಗಸಾಗಿಯೇ ಇರುವುದು.

ಕವಿತಾ ಝುರಿಯೂ ಭಾವನೆಗಳೂ ಸ್ವತಂತ್ರವಾದರೂ ಅಲ್ಲಲ್ಲಿ ಕಾಳಿದಾಸ ಭವಭೂತಿಯೇ ಮೊದಲಾದ ಸಂಸ್ಕೃತ ಕವಿಗಳ ಹಲ ಕೆಲವು ಭಾವನೆಗಳ ಛಾಯೆಯು ಗೋಚರವಾಗದಿರದು. ಅಂತು, ಒಟ್ಟಿನ ಮೇಲೆ "ಭಾವನಾ ತ್ರಯವು" ಪಂಡಿತರನ್ನು ಮೆಚ್ಚಿಸುವ ಗ್ರಂಥ.

ನೋ. ಶಂ. ಸು.

---

## ೨. ಬಾಳಿನ ಬೆಳಕು

ಬರೆದವರು.—'ಚಂದಿರದೇವ', ಸಾತನೂರು.

ಪ್ರಕಾಶಕರು.—'ಅರ್ಥಸಾಧಕ ಪತ್ರಿಕೆ', ಬೆಂಗಳೂರು ನಗರ.

ಮುದ್ರಾಪಕರು.—ಮೈಸೂರು ಪ್ರೆಸ್, ಬಸವನಗುಡಿ, ಬೆಂಗಳೂರು ಸಿಟಿ.

ಕ್ರೌ ಅಷ್ಟಪತ್ರ ಪುಟಗಳು ೧೨.

ಈ ಪುಟ್ಟ ಪುಸ್ತಕದಲ್ಲಿ, 'ನರಮೇಧಯಾಗ', 'ಹಳ್ಳಿಯ ಬಾಳು' ಎಂಬ ಎರಡು ಹೊಸ ಕವಿತೆಗಳಿವೆ. ಮೊದಲನೆಯದು ಮಹಾತ್ಮಾ ಗಾಂಧಿಯವರು ಈಗ ಕೈಕೊಂ ಡಿರುವ 'ಹರಿಜನೋದ್ಧಾರ'ದ ವಿಷಯವನ್ನು ಕುರಿತಿದೆ. ಎರಡನೆಯದು 'ಗ್ರಾಮ ಜೀವನದ ಸಾರಳ್ಯ, ಅದರಿಂದುಂಟಾಗುವ ಆನಂದ'—ಇವುಗಳನ್ನೊಳಕೊಂಡ ವರ್ಣಕ ಕವಿತೆಯಾಗಿದೆ.

ಕವಿತೆಯಲ್ಲಿ ನುಡಿತವಿದೆ; ಪ್ರವಾಹವಿದೆ. ಆದರೆ, ಭಾಷೆ ಇನ್ನೂ ಕುದುರ ಬೇಕು. ಅಲ್ಲಲ್ಲಿ ಅರಿಸಮಾಸಗಳೂ, ವಿಸಂಧಿ ದೋಷಗಳೂ ಕಂಡುಬರುತ್ತವೆ. ಅನುಭವವು ಹೆಚ್ಚಿದಂತೆಲ್ಲ ಈ ಬರೆಹಗಾರರು ಒಳ್ಳೆಯ ಕವಿಗಳಾಗುವುದರಲ್ಲಿ ಸಂದೇಹವಿಲ್ಲ.

ನೋ. ಶಂ. ಸು.

---

## ೩. ಶ್ರೀ ಕಾವೇರಿ ಕಥಾಮೃತಮ್

ಬರೆದವರು.—ಎಂ. ಎಸ್. ಅನಂತಪದ್ಮನಾಭ ರಾವ್, ಮಡಿಕೇರಿ.

ಮುದ್ರಾಪಕರು.—ಕ್ರೌನ್ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.

ಕ್ರೌ ಅಷ್ಟಪತ್ರ ಪುಟಗಳು ೭೮; ಬೆಲೆ ೪ ಆಣೆ; ೧೯೩೩.

ಇದು ವಾರ್ಧಿಕ ಷಟ್ಪದಿಯಲ್ಲಿ ಬರೆದಿರುವ ಕಾವ್ಯ. ಪುರಾಣ ಪ್ರಸಿದ್ಧವಾದ 'ಕಾವೇರೀ ಮಾಹಾತ್ಮ್ಯ'ವೇ ಈ ಕಾವ್ಯದ ಕಥಾ ವಸ್ತು. ಈ ಗ್ರಂಥಕ್ಕೆ ಮುಳಿಯ ತಿಮ್ಮಪ್ಪಯ್ಯನವರು ಮುನ್ನುಡಿಯನ್ನು ಬರೆದಿದ್ದಾರೆ.

ಕವಿತೆಯ ಶೈಲಿಯು ಸರಳವಾಗಿದೆ. ಕಾವ್ಯ ಪ್ರಣಾಳಿಕೆಯಲ್ಲಿ ಹೊಸ ಹೊಸ ರೀತಿಗಳಿವೆ. ಗ್ರಂಥಕರ್ತರು ಪೌರಾಣಿಕ ಕಥಾನಕವನ್ನು ವರ್ಣಿಸುವಾಗ, ಅಲ್ಲಲ್ಲಿ ದೇಶಭಕ್ತಿ ಪುರಸ್ಸರವಾದ, ಭಾಷಾಭಿಮಾನ ಪೂರ್ಣವಾದ ತಮ್ಮ ಭಾವನೆಯನ್ನು ಹೊರಸೂಸಿರುವುದು ಓದುಗರ ಮನಸ್ಸನ್ನು ಅಹುದೆನಿಸದಿರದು.

ಗ್ರಂಥಕರ್ತರು ಈ ಕಾವ್ಯವನ್ನು "ಬಹಳ ಕಾಲ ಆಲೋಚಿಸಿ ಪ್ರಯತ್ನದಿಂದ ಬರೆದಂತೆ ತೋರುವುದಿಲ್ಲ" ಎಂದು ಮುನ್ನುಡಿಕಾರರು ತಿಳಿಸುವರು. ನಮಗೂ ಅಂತೆಯೇ ತೋರುವುದು. ಕೆಲವು ಪದ್ಯಗಳಲ್ಲಿ ದೂರಾನ್ವಯ ದೋಷವಿರುತ್ತದೆ. ಕೆಲವೆಡೆಗಳಲ್ಲಿ ಶೈಲಿಗೆ ಭಂಗ ಬರುವ ಎಡರುಗಳೂ ಇವೆ. ಅಚ್ಚಿನ ತಪ್ಪುಗಳು ಹೆಚ್ಚಾಗಿದ್ದರೂ ಮುದ್ರಣವು ಚೆನ್ನಾಗಿದೆ. ಅಂತು, ಹೆಂಗಸರು ಮಕ್ಕಳಾದಿಯಾಗಿ ಎಲ್ಲರೂ ಓದಬೇಕಾದ ಗ್ರಂಥವಿದು.

ಮೋ. ಶಂ. ಸು.

---

## ೪. ಮುಂಬಯಿ ವಿಶ್ವವಿದ್ಯಾನಿಲಯದ ೧೯೩೪ನೆಯ ವರ್ಷದ ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಗೆ ನಿಯಮಿಸಿದ ಪದ್ಯ ಭಾಗ

ಪ್ರಕಾಶಕರು.—ವಾಙ್ಮಯ ಶಾಖೆ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ.

ಡೆಮ್ಮಿ ಅಷ್ಟಪತ್ರ ಪುಟಗಳು ೫೧+೫+೨೯ ; ೧೯೩೩; ಬೆಲೆ ೮ ಆಣೆ.

ಈ ಪುಸ್ತಕದಲ್ಲಿ ಚೆನ್ನಬಸವ ಪುರಾಣದ (ಮೂರನೆಯ ಕಾಂಡ) ೩೫, ೩೬ ೩೭ನೆಯ ಸಂಧಿಗಳೂ (ಕಾಮ ದಹನ, ಗಿರಿಜಾ ಕಲ್ಯಾಣ), ಕುಮಾರ ವ್ಯಾಸನ ಮಹಾಭಾರತದ ಆದಿ ಪರ್ವದ ೨೭ನೆಯ ಸಂಧಿಯೂ (ಬಕವಧ ಪರ್ವ) ಇವೆ. ಇವಕ್ಕೆ ಪ್ರಸ್ತಾವನೆಗಳನ್ನೂ ಕಠಿನ ಶಬ್ದ ಕೋಶಗಳನ್ನೂ ಕೊಟ್ಟಿದೆ.

ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ವಾಙ್ಮಯ ಶಾಖೆಯವರು 'ಚೆನ್ನಬಸವ ಪುರಾಣ'ವನ್ನು ಅನೇಕ ತಾಳೆಯೋಲೆಯ, ಕೈಬರೆಹದ ಮತ್ತು ಹಳೆಯ ಅಚ್ಚಿನ ಪ್ರತಿಗಳ ಸಹಾಯದಿಂದ ಶೋಧಿಸಿ ಪ್ರಕಟಿಸುವ ಕಾರ್ಯವನ್ನು ಕೈಕೊಂಡಿರುವರೆಂದು ಕೇಳಿ ಬಹಳ ಸಂತೋಷವಾಗಿದೆ. ಹಾಗೆಯೇ, ಕನ್ನಡ ಮಹಾಭಾರತದ ಬಕವಧ ಪರ್ವವನ್ನು ಪ್ರಕಟಿಸುವಲ್ಲಿ, ಮೇಲೆ ಹೇಳಿದ ಸಂಸ್ಥೆಗೆ ೧೭೨೨ನೆಯ ಶಕ ವರ್ಷದಲ್ಲಿ ಬರೆದ ಆದಿ ಪರ್ವವು ದೊರೆತು, ಅದರಿಂದ ಬಹಳ ಸಹಾಯವಾಗಿರುವುದಂತೆ. ಈ ಪ್ರತಿಯನ್ನೂ, ಮದರಾಸು ಸರ್ಕಾರದ ಪ್ರಾಚ್ಯ ಕೋಶಾಲಯದ ಓಲೆಯ ಪ್ರತಿಯನ್ನೂ, ಮೈಸೂರು ಸರ್ಕಾರದ ಪ್ರಾಚ್ಯ ಕೋಶಾಲಯದಿಂದ ೧೯೧೨ನೆಯ ಇಸವಿಯಲ್ಲಿ ಅಚ್ಚಾಗಿ ಪ್ರಕಟವಾದ ಪ್ರತಿಯನ್ನೂ ಹೋಲಿಸಿ ನೋಡುವಲ್ಲಿ, ಮದರಾಸು ಪ್ರತಿಯಲ್ಲಿ ಈ ಭಾಗವು ತೀರ ಸಂಕ್ಷಿಪ್ತವಾಗಿರುವುದೆಂದೂ, ಆ ಕಾರಣದಿಂದ ಆ ಪ್ರತಿಯು ಅಷ್ಟು ಪ್ರಯೋಜನವಿಲ್ಲವೆಂದೂ, ಮೈಸೂರು ಪ್ರತಿಯು ಆದಿ ಪರ್ವದಲ್ಲಿ ೩೭ ಸಂಧಿಗಳೂ ಒಟ್ಟು ೨,೪೬೩ ಪದ್ಯಗಳೂ ಇದ್ದು, ಮೇಲೆ ಹೇಳಿದ ಧಾರವಾಡದ ಪ್ರತಿಯಲ್ಲಿ ೪೨ ಸಂಧಿಗಳೂ ಒಟ್ಟು ೩,೦೫೮ ಪದ್ಯಗಳೂ

ಇರುವುವೆಂದೂ ಅನೇಕ ಸಂದರ್ಭಗಳಲ್ಲಿ, ಈ ಹೊಸ ಪ್ರತಿಯ ಪಾಠಗಳು ಹೆಚ್ಚು ಸಮಂಜಸವಾಗಿರುವುವೆಂದೂ ತಿಳಿಯಬರುತ್ತದೆ.

ಆದುದರಿಂದ, ಕನ್ನಡ ಮಹಾಭಾರತದ ಆದಿ ಪರ್ವದ ಈ ಹೊಸ ಪ್ರತಿಯು ದೊರೆತುದು ಕನ್ನಡಿಗರ ಪುಣ್ಯೋದಯವೆಂದೇ ಹೇಳಬೇಕು. ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಚಾಲಕರು ಈ ಕನ್ನಡ ಮಹಾಭಾರತದ ಇತರ ಪರ್ವಗಳ ಪ್ರತಿಯನ್ನೂ ಅಲ್ಲಿಯೇ ಹುಡುಕಿ ಸಂಪಾದಿಸಿ, ಈಗಿರುವ ಕನ್ನಡ ಮಹಾಭಾರತದ ಪ್ರತಿಗಳಲ್ಲಿ ಸಿಕ್ಕುವ ತಪ್ಪುಗಳನ್ನು ತಿದ್ದಿ ಸರಿಪಡಿಸಲು ಅನುಕೂಲ ಮಾಡಿಕೊಡುವರೆಂದು ಕೋರುತ್ತೇವೆ.

ಪ್ರಕೃತ ಪುಸ್ತಕವನ್ನು ರಚಿಸುವುದರಲ್ಲಿ ಸಂಪಾದಕರು ಬಹಳ ಶ್ರಮವನ್ನು ವಹಿಸಿ ಮುದ್ರಣದ ತಪ್ಪುಗಳು ಹೆಚ್ಚಾಗಿ ಬೀಳದಂತೆಯೂ, ಪದಗಳನ್ನು ಬಿಡಿಸಿ ಬರೆದಿರುವುದರಿಂದ ಓದುವುದಕ್ಕೆ ಅನುಕೂಲವಾಗುವಂತೆಯೂ ಮಾಡಿರುತ್ತಾರೆ. ಕೆಲವು ಕಡೆ ಬರುವ ದೊಡ್ಡ ದೊಡ್ಡ ಸಮಾಸ ಪದಗಳನ್ನೂ ಸೂಕ್ಷ್ಮಾವಕಾಶ ಕೊಟ್ಟು ಬಿಡಿಸಿ ಬರೆಯುವುದರಿಂದ ಓದುಗರಿಗೆ ಹೆಚ್ಚು ಅನುಕೂಲವುಂಟಾಗುವುದು. ಶುದ್ಧಿ ಪತ್ರಿಕೆಯು ಅಪೂರ್ಣವಾಗಿದೆ. ಮುದ್ರಣವು ಅಂದವಾಗಿಯೂ ಕಾಗದವು ಬಿಳುಪಾಗಿಯೂ ನುಣುಪಾಗಿಯೂ ದಪ್ಪವಾಗಿಯೂ ಇರುವುದರಿಂದ ಪಾಠಕರಿಗೆ ಓದಲು ಆಸಹನೆ ಕಡಿಮೆಯಾಗುವುದು. ಗಿರಿಜಾ ಕಲ್ಯಾಣ ಮಹೋತ್ಸವದ ಸುಂದರವಾದ ಬಣ್ಣದ ಚಿತ್ರವನ್ನು ಎರಡು ಪುಟಗಳ ಅಗಲದಲ್ಲಿ ಚಿತ್ರಿಸಿರುವುದು ಪುಸ್ತಕಕ್ಕೆ ಬಹಳ ಅಂದವನ್ನು ಕೊಡುತ್ತದೆ. ಸ್ಕೂಲು ಹುಡುಗರು ಓದುವ ಪುಸ್ತಕವನ್ನು ಇಷ್ಟು ಅಂದವಾಗಿ ಪ್ರಕಟಿಸಿ ಸುಲಭವಾದ ಬೆಲೆಯನ್ನಿಟ್ಟಿರುವುದಕ್ಕಾಗಿ ಪ್ರಕಾಶಕರನ್ನು ಅಭಿನಂದಿಸುತ್ತೇವೆ.

---

## ೫. ಸುದರ್ಶನ
## ೬. ನವಿಲು ಗರಿ

೫ರ ಲೇಖಕರು.—ಆನಂದ ಕಂದರು, ಧಾರವಾಡ.

ಸಂಪಾದಕರು.—ಬೆಟಗೇರಿ ಕೃಷ್ಣಶರ್ಮ ಮತ್ತು ಜಿ. ಬಿ. ಜೋಶಿ, ಧಾರವಾಡ.

ಪ್ರಕಾಶಕರು.—ಗೋವಿಂದ ವೆಂಕಟೇಶ ಚುಳಿಕಿ, ಧಾರವಾಡ.

ಮುದ್ರಕರು.—ಮೋಹನ ಮುದ್ರಣಾಲಯ, ಧಾರವಾಡ.

ಕ್ರೌನ್ ಅಷ್ಟಪತ್ರ ಪುಟಗಳು ೮+೧೩೫; ೧೪+೧೩೩;

ಬೆಲೆ: ಪ್ರತಿಯೊಂದಕ್ಕೂ ೧೨ ಆಣೆಗಳು; ೧೯೩೩.

**ಸುದರ್ಶನವು** ಮನೋಹರ ಗ್ರಂಥಮಾಲೆಯ ಮೊದಲನೆಯ ಕುಸುಮ; ನವಿಲು ಗರಿಯು ಎರಡನೆಯ ಕುಸುಮ. "ಸಾಂಸಾರಿಕ ತಾಪಗಳಿಂದ ಬೆಂದು ಬೇಗುದಿಗೊಂಡವರ ಬೇಸರವನ್ನು ಕಳೆಯುವುದಕ್ಕೂ", "ಸಮಾಜದ ಅಸಂಸ್ಕೃತತೆಯನ್ನು

ಕಳೆದು, ಹೊಸ ವಿಚಾರಗಳನ್ನು ಹರಡಿ, ಜನ ಜೀವನವನ್ನು ಸಂಸ್ಕಾರಗೊಳಿಸು ವುದಕ್ಕೂ'' ಸರಸ ಸಾಹಿತ್ಯವು ಬೇಕು. ''ಇದಕ್ಕನುಗುಣವಾದ ಕಾದಂಬರಿ, ಸಣ್ಣ ಕತೆಗಳ ಸಂಗ್ರಹ, ನಾಟಕ—ಇವುಗಳನ್ನು ಎರಡು ತಿಂಗಳಿಗೊಂದರಂತೆ, ವೇಳೆಗೆ ಸರಿಯಾಗಿ, ಸುಲಭ ಬೆಲೆಗೆ ಒದಗಿಸಿಕೊಡಬೇಕೆಂಬುದೇ ನಮ್ಮ ಗ್ರಂಥಮಾಲೆಯ ಗುರಿಯಾಗಿದೆ'' ಎಂದು ಈ ಗ್ರಂಥಮಾಲೆಯ ಕಾರ್ಯದರ್ಶಿಯವರು ತಮ್ಮ 'ಬಿನ್ನಹ'ದಲ್ಲಿ ಹೇಳುತ್ತಾರೆ.

'ಸುದರ್ಶನ'ವು ಒಂದು ಸಂಸಾರ ಚಿತ್ರ. ಅದನ್ನು ಲೇಖಕರು ಬಹಳ ಸಹಜವಾಗಿ ಚಿತ್ರಿಸಿದ್ದಾರೆ. ಆದರೆ ಒಂದೆರಡು ಕಡೆಗಳಲ್ಲಿ ಮಾತ್ರ ನಮ್ಮ ಸಮಾಜಕ್ಕೆ ಒಪ್ಪದ ಸನ್ನಿವೇಶಗಳು ದೊರೆಯುವುವು (ಉದಾ. ಪುಟ ೯೫, ೧೦೪). ಲೇಖಕರು ನಿಜವಾದ ಕವಿಯೆಂಬುದನ್ನು ಅವರ ವರ್ಣನೆಗಳು ತಪ್ಪದೆ ತೋರಿಸುತ್ತವೆ. ಭಾಷೆಯು ಲಲಿತ ವಾಗಿಯೂ ಮನೋಹರವಾಗಿಯೂ ಇದೆ. ಮುದ್ರಣವು ಅಂದವಾಗಿದೆ. ಮುದ್ರಣದ ದೋಷಗಳು ಸಾಮಾನ್ಯವಾಗಿ ಇಲ್ಲವೆಂದೇ ಹೇಳಬೇಕು.

**ನವಿಲುಗರಿಯು** ''ಕತೆಗಳ ಸಂಗ್ರಹ''. ಇದರಲ್ಲಿ 'ಛಪ್ಪರ ಬಂದ್' (ಶ್ರೀ. ಟೇಂಗ್ಸೆ ಗೋವಿಂದರಾಯರು), 'ಅನಿಷ್ಟಕ್ಕೆ ಶನೀಶ್ವರ ಗುರಿ' (ಶ್ರೀ. ಜಿ. ಪಿ. ರಾಜರತ್ನಂ, ಎಂ.ಎ.), 'ಮಾಲ್ಕೀ ಹಕ್ಕು' (ಶ್ರೀ. ಆನಂದಕಂದರು), 'ನಮ್ಮಾಸ್ಪತ್ರೆ ಸತ್ತರು' (ಶ್ರೀ. ಕೋ. ಶಿ. ಕಾರಂತ), 'ವಿತಂತು–ವೇಶ್ಯೆ' (ಪ್ರೊ. ರಂ. ಶ್ರೀ. ಮುಗಳಿ, ಎಂ.ಎ., ಬಿ.ಟಿ.), 'ರಮೇಶ' (ಪ್ರೊ. ಪಡುಕೋಣೆ ರಮಾನಂದರು, ಎಂ.ಎ.), 'ಕಿಚ್ಚಿನ ಕಾವಲು' (ಶ್ರೀ. ಎಚ್. ಪಿ. ಜೋಶಿ, ಬಿ.ಎ.), 'ಹತಭಾಗ್ಯನ ಭಾಗ್ಯ' (ಪ್ರೊ. ವಿ. ಕೃ. ಗೋಕಾಕ, ಎಂ.ಎ.), 'ಡೂಗಜ್ಜನ ಬಹಿಷ್ಕಾರ' ('ಜಡಭರತ'), 'ಗಿರಿಜಾ ಕಲ್ಯಾಣ' (ಶ್ರೀ. ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ.)— ಈ ಹತ್ತು ಸಣ್ಣ ಕತೆಗಳಿವೆ. ಪ್ರೊ. ರಂ. ಶ್ರೀ. ಮುಗಳಿಯವರು ಸಣ್ಣ ಕತೆಗಳ ವಿಷಯವನ್ನೆತ್ತಿ ಕೊಂಡು ಇದಕ್ಕೆ ಮುನ್ನುಡಿಯನ್ನು ಬರೆದಿದ್ದಾರೆ.

ಸಂಪಾದಕರು ಕರ್ಣಾಟಕದ ನಾನಾ ಪ್ರಾಂತಗಳ ಪ್ರಸಿದ್ಧ ಪಂಡಿತರನ್ನು ಕಲೆ ಹಾಕಿ, ಅವರವರಿಗೆ ಸ್ವಭಾವ ಜನ್ಯವಾದ ರೀತಿಯಲ್ಲಿ ಅವರಿಂದ ಕತೆಗಳನ್ನು ಬರೆಯಿಸಿ, ಅವೆಲ್ಲವನ್ನೂ ಒಂದೇ ಕಡೆಯಲ್ಲಿ ಕೊಟ್ಟಿರುವುದು ಕನ್ನಡ ಭಾಷೆಗೆ ಬಹಳ ಉಪಕಾರ ಮಾಡಿದಂತಾಯಿತೆಂದು ಭಾವಿಸುತ್ತೇವೆ. ಏಕೆಂದರೆ, ಕರ್ಣಾಟಕದ ನಾನಾ ಪ್ರಾಂತ ಗಳ ಕನ್ನಡ ಭಾಷೆಯ ಸ್ವರೂಪವನ್ನು ಹೋಲಿಸಿ ಗ್ರಂಥಸ್ಥ ಭಾಷೆಯ ಏಕೀಕರಣವು ಹೇಗೆ ನಡೆಯಬೇಕೆಂಬುದನ್ನು ಆಲೋಚಿಸಲು ಇಂತಹ ಗ್ರಂಥಗಳಿಂದ ಅವಕಾಶ ದೊರೆತಂತಾಗುವುದು.

ಶ್ರೀ. ಗೋವಿಂದರಾಯರ ಭಾಷೆಯು ಕೇವಲ ಧಾರವಾಡದ್ದು, ಶ್ರೀ. ವೆಂಕಟ ರಾಮಯ್ಯನವರದು ಕೇವಲ ಮೈಸೂರಿನದು, ಶ್ರೀ. ಕೃಷ್ಣಶರ್ಮರದು ಇವೆರಡರ ಅಂದವಾದ ಸಮ್ಮೇಳನ. ಶ್ರೀ. ಗೋವಿಂದರಾಯರ ಭಾಷೆಯ ಅನೇಕ ಪದಗಳೂ

ಕೆಲವು ವಾಕ್ಯಗಳೂ ಮೈಸೂರಿನವರಿಗೆ ಸುಲಭವಾಗಿ ಅರ್ಥವಾಗುವಂತಿಲ್ಲ; ಉದಾಹರಣೆಗಾಗಿ—

ಅಗಸ (ಪು. ೧), ತುಡುಗು (ಪು. ೩), ಛಪ್ಪರ ಬಂದ (೩), ಚಿನ್ನಾಟ (೫), ತಪಾಸು (೫), ಸುಂದಾಗಿ (೫), ಧರ್ತಿಯ (೬), ಮಾನೀಕಡ್ಡಿ (೬), ಲಗಳ ಚಣ್ಣ (೭), ಪಾಳತಿ (೭).

ಪುಟ ೧.—ಕರ್ನಾಟಕದಲ್ಲಿಯ ಸಂಸ್ಕೃತಿಯ ಗಂಡುಮೆಟ್ಟು ಎನಿಸುವ ಈ ಪಟ್ಟಣದ ಮಧ್ಯಭಾಗದಲ್ಲೊಂದು ಬರೆ;

ಪುಟ ತ.—ದೀಪಗಂಬದ ಮೂಕಿಗಿರುವ ಮನೆಯ ಗೌಂಡಿ—ಬಸಪ್ಪನ ಹೆಂಡತಿಗೆ ಇವಳು ಹೇಳಿಕೊಂಡು, ಅವನ ಕೈಕೆಳಗೆ ಆಳೆಂದು ಒಯ್ಯು ಹಚ್ಚಿದ್ದಳು.

ಪುಟ ೪.—ಮೇಲಿನ ವರ್ಗದವರು ಮಾಡಿದ ಒಳ ಸಂಚಿನ ಸಮಾಜ ವ್ಯವಸ್ಥೆಯೇ ಇವರ ದೆಶೆಯಿಂದ ಹಚ್ಚಿದ ಕಲ್ಪನೆಗಳ ಮುಳ್ಳು ಬೇಲಿಯ ಅರಿವು ಅವನಿಗೆ ಇನ್ನೂ ಇರಲಿಲ್ಲ.

ಮಂಗಳೂರಿನ ಪ್ರಾಂತದ ಭಾಷೆಗೂ ಮೈಸೂರು ಪ್ರಾಂತದ ಭಾಷೆಗೂ ಅಷ್ಟು ಹೆಚ್ಚು ವ್ಯತ್ಯಾಸಗಳು ಕಾಣಬರುವುದಿಲ್ಲ: ಶ್ರೀ. ರಮಾನಂದರ 'ರಮೇಶ' ಎಂಬ ಕತೆಯನ್ನು ಓದಿ ನೋಡಿದಲ್ಲಿ ಇದು ತಿಳಿಯಬರುವುದು.

ಹೀಗೆ, ಒಂದು ಪ್ರಾಂತದ ಲೇಖಕರ ಭಾಷೆಯನ್ನು ಮತ್ತೊಂದು ಪ್ರಾಂತದ ಲೇಖಕರು ಓದುತ್ತ ಹೋದರೆ, ಕ್ರಮೇಣ ಗ್ರಂಥಸ್ಥ ಭಾಷೆಯಲ್ಲಿ ಮಾರ್ಪಾಡು ಉಂಟಾಗಿ ಕೆಲ ಕಾಲದಲ್ಲಿ ಕರ್ಣಾಟಕದ ಎಲ್ಲ ಪ್ರಾಂತಗಳ ಗ್ರಂಥಸ್ಥ ಭಾಷೆಯೂ ಒಂದೇ ಆಗುವುದರಲ್ಲಿ ಸಂಶಯ ತೋರುವುದಿಲ್ಲ.

---

## ೭. ಹಳೆಯ ಬಾಕಿ

'ವೈಭವ' ಪತ್ತೇದಾರಿ ಕಾದಂಬರಿ ಸಂಗ್ರಹದ ಭಾಗ ೧

ಲೇಖಕರು.—ಬಿ. ಎನ್. ಸುಬ್ಬರಾವ್, ಮೈಸೂರು.

ಪ್ರಕಾಶಕರು.—ದಿ ಸಿಟಿ ನಾವೆಲ್ ಪಬ್ಲಿಷಿಂಗ್ ಬ್ಯೂರು, ಮೈಸೂರು.

ಕ್ರಾರ್ಣ ಅಷ್ಟಪುತ್ರ ಪುಟಗಳು ೯೯ ; ಬೆಲೆ ೮ ಆಣೆ; ೧೯೩೩.

"ವಿಷಕಂಠನು ತನ್ನ ಪಾಲುದಾರನಾದ ಸಾರಂಗಪಾಣಿಯು ಮಾಡಿದ ಕೊಲೆಗಾಗಿ ೧೮ ವರುಷ ಸಜಾ ಅನುಭವಿಸಿ ಹಿಂದಿರುಗಿ ಬಂದು ತನ್ನ ಸೇಡನ್ನು ತೀರಿಸಿಕೊಂಡನು" ಎಂಬುದು ಈ ಕಥೆಯ ವಸ್ತು. ಓದುವುದಕ್ಕೆ ಚೆನ್ನಾಗಿದೆ. ಕಥೆಯನ್ನು ಹೇಳಿರುವ ರೀತಿಯು ಮಾತ್ರ ಇನ್ನೂ ಮೇಲಿನ ಮೆಟ್ಟಿಲನ್ನು ಮುಟ್ಟಿಲ್ಲ.

"ಡಿಟೆಕ್ಟಿವ್, ಅಥವಾ ಪತ್ತೇದಾರಿ" ಕಥೆಗಳಲ್ಲಿ ನಾವು ನೋಡುವುದು, ಅಸಹಜ ಮನೋವೃತ್ತಿಗಳಿಗೆ ಗುರಿಯಾಗಿ ಸಮಾಜಕ್ಕೆ ದ್ರೋಹ ಮಾಡಿರುವವರನ್ನು

ಆ ಮನೋವೃತ್ತಿಗಳ ಪರಿಚಯವಿರುವ ನ್ಯಾಯ ಪಕ್ಷಪಾತಿಯು ಹಿಡಿದು ದಂಡನೆಗೆ ಗುರಿಮಾಡಿದನೆನ್ನುವ ವಿಚಿತ್ರ ವ್ಯವಹಾರವನ್ನು. ಅಸಹಜ ಮನೋವ್ಯಾಪಾರವುಳ್ಳವರು ಪ್ರಪಂಚದಲ್ಲಿ ಎಲ್ಲೆಲ್ಲಿಯೂ ಸಿಕ್ಕುವರಾದರೂ ಆ ವ್ಯಾಪಾರವು ಮಾತ್ರ ಆಯಾ ಮನುಷ್ಯನ ದೇಶ ಕಾಲ ಸ್ಥಿತಿಗಳಿಗೆ ಅನುಸಾರವಾಗಿ ಪ್ರಕಟವಾಗುವುದರಿಂದ ಬೇರೆ ಬೇರೆ ಜನಾಂಗದಲ್ಲಿ ಬೇರೆ ಬೇರೆಯ ರೀತಿಗಳಿರುವುವು. ಈ ವೈಶಿಷ್ಟ್ಯವನ್ನೂ, ಆಯಾ ದೇಶಗಳಲ್ಲಿಯ ನ್ಯಾಯ ರಚನಾ ಕ್ರಮವನ್ನೂ ಲಕ್ಷ್ಯದಲ್ಲಿಟ್ಟುಕೊಂಡು ಈ ಪತ್ತೇದಾರಿಯ ಕಥೆಗಳನ್ನು ಬರೆಯತಕ್ಕುದು. "ಹಾಗಲ್ಲದೆ, ಪಾಶ್ಚಾತ್ಯರ ಕಾದಂಬರಿಗನುಸಾರವಾಗಿ ತಿಳಿಗನ್ನಡದಲ್ಲಿ ಬರೆಯಲ್ಪಟ್ಟ" ಮಾತ್ರಕ್ಕೇ ಈ ಜಾತಿಯ ಸಾಹಿತ್ಯಕ್ಕೆ ಗೌರವವು ದೊರೆಯಲಾರದು. ನಮ್ಮಲ್ಲಿ ಈ ಜಾತಿಯು ಹೊಸದು; ಅದರಲ್ಲೂ, ಸ್ವತಂತ್ರವಾಗಿ ಬರೆದ ಪತ್ತೇದಾರಿಯ ಕಥೆಗಳು ಇಲ್ಲವೆಂದರೆ ಅತಿಶಯೋಕ್ತಿಯಲ್ಲ.

ಅದ್ಭುತ ಘಟನಾವಳಿಗಳಿಲ್ಲದೆ, ಬೌದ್ಧಿಕ ಪ್ರಪಂಚದ ಸರಹದ್ದಿನಲ್ಲಿದ್ದುಕೊಂಡು ನಮ್ಮ ಜನತೆಯ ವ್ಯವಹಾರಕ್ಕೆ ಅನುಗುಣವಾದ ಕಾರ್ಯಕಲಾಪಗಳನ್ನು ವಸ್ತುವಾಗಿಟ್ಟುಕೊಂಡು ಬರೆವ ಈ ಪತ್ತೇದಾರಿಯ ಕಥೆಗಳು ನಮಗೆ ಆಗತ್ಯ ಬೇಕಾದವು. 'ವೈಭವ' ಗ್ರಂಥ ಮಾಲೆಯು ಈ ತೆರದ ಗ್ರಂಥಗಳನ್ನು ಪ್ರಕಟಿಸಲಿ ಎಂದು ನಾವು ಹಾರೈಸುತ್ತೇವೆ.

---

## ೮. ಖಾದೀ ಶಾಸ್ತ್ರ

ಲೇಖಕರು.—ಶ್ರೀ ಹರ್ಡೀಕರ ಮಂಜಪ್ಪನವರು, ಆಲಮಟ್ಟಿ.

ಸಂಪಾದಕರು ಮತ್ತು ಪ್ರಕಾಶಕರು.—ಶ್ರೀ ಆಲೂರ ವೆಂಕಟರಾಯರು, ಧಾರವಾಡ.

ಕ್ರೌ ಅಷ್ಟಪತ್ರ ಪುಟಗಳು ೬+೧೧೦; ಬೆಲೆ ರೂ. ೧—೨—೦; ೧೯೩೩.

ಇದು 'ನವಜೀವನ ಗ್ರಂಥ ಭಾಂಡಾರ'ದ ೪ನೆಯ ಗ್ರಂಥ. ಇದರ ಲೇಖಕರು ಕನ್ನಡಿಗರಿಗೆ ಪರಿಚಿತರಾದುದರಿಂದ ಈ ಗ್ರಂಥವು ಓದುವುದಕ್ಕೆ ಎಷ್ಟು ಸ್ವಾರಸ್ಯವಾಗಿದೆಯೆಂಬುದನ್ನು ಕುರಿತು ಹೇಳಬೇಕಾಗಿಲ್ಲ. ಈಗ್ರಂಥವು—ಭಾರತೀಯ ಸುವರ್ಣಯುಗದಲ್ಲಿ, ನೇಯುವ ಉದ್ಯೋಗವು ಎಷ್ಟು ಉನ್ನತ ಸ್ಥಿತಿಯನ್ನು ಹೊಂದಿದ್ದಿತು; ನೇಗೆಕಾರರ ಕೌಶಲ್ಯವು ಯಾವ ಮಟ್ಟದಲ್ಲಿದ್ದಿತು; ಸ್ವಾರ್ಥಪರರಾದ ಪರಕೀಯರ ಕಯ್ಗೆ ಸಿಕ್ಕಿ ಈ ಉದ್ಯೋಗವು ಕಳೆದ ಸುಮಾರು ಒಂದೂವರೆ ಶತಮಾನದೊಳಗೆ ಹೇಗೆ ಹಾಳಾಯಿತು—ಎಂಬ ಚಾರಿತ್ರಿಕ ಅಂಶಗಳನ್ನು ಮೊದಲು ಸಾಧಾರವಾಗಿ ಪ್ರತಿಪಾದಿಸಿ, ಅನಂತರದ ಉತ್ತರ ಭಾಗದಲ್ಲಿ (ಪುಟ ೫೮—೧೧೦) ಖಾದಿಯ ತತ್ತ್ವವನ್ನು ಏಕೆ ಅಂಗೀಕರಿಸಬೇಕು? ಅದೆಂತು ಬಡವರ ಆಧಾರಿಯಾಗುವುದು? ಮೊದಲಾದ ಮಹತ್ತ್ವದ ಸಂಗತಿಗಳನ್ನು ಓದುಗರ ಮನ ಮೆಚ್ಚುವಂತೆ ನಿರೂಪಿಸುತ್ತದೆ,

ವಿಷಯದ ದೃಷ್ಟಿಯಿಂದಲೂ ಬರೆದಿರುವ ರೀತಿಯಿಂದಲೂ ಇದು ಉತ್ತಮ ಗ್ರಂಥವೆನ್ನುವುದರಲ್ಲಿ ಸಂದೇಹವಿಲ್ಲ. ಬಹು ಉಪಯುಕ್ತವಾದ ವಿಷಯಗಳನ್ನು ನಯವಾದ, ಸುಂದರವಾದ ಶೈಲಿಯಲ್ಲಿ ಬರೆದಿರುವ ಲೇಖಕರನ್ನೂ, ಇಂತಹ ಶ್ರೇಷ್ಠ ಗ್ರಂಥವನ್ನು ಸಂಪಾದಿಸಿಕೊಟ್ಟ 'ನವಜೀವನ ಗ್ರಂಥ ಭಾಂಡಾರ'ದ ಸಂಪಾದಕರನ್ನೂ ಅಭಿನಂದಿಸುತ್ತೇವೆ.

---

## ೯. ಖಾದಿಯೇ ಬಡವರ ಕಾಮಧೇನು

ಲೇಖಕರು.—ಎಂ. ಡಿ. ಆಳ್ವಾರಯ್ಯಂಗಾರ್ಯರು, ಬೆಂಗಳೂರು.

ಪ್ರಕಾಶಕರು.—ಶ್ರೀರಾಮ ಸೇವಾ ಭಕ್ತ ಮಂಡಲಿ, ಮಲ್ಲೇಶ್ವರ, ಬೆಂಗಳೂರು.

ಮುದ್ರಾಪಕರು.—ಶ್ರೀ ಬಾದರಾಯಣ ಪ್ರೆಸ್, ಮಲ್ಲೇಶ್ವರ, ಬೆಂಗಳೂರು.

ಡೆಮ್ಮೈ ಅಷ್ಟಪತ್ರ ಪುಟಗಳು ೩೮; ಬೆಲೆ ೨ ಆಣೆ; ೧೯೩೩.

ಇದೊಂದು "ನೂತನ ಸಾಮಾಜಿಕ ನಾಟಕ." ಕೆಟ್ಟ ಸಹವಾಸದಿಂದ ತಂದೆ ತಾಯಿಗಳನ್ನು ಲಕ್ಷಿಸದೆ, ಮದ್ಯಪಾನ, ವೇಶ್ಯಾ ಸಮಾಗಮ ಮೊದಲಾದ ದುರಾಚಾರಗಳಲ್ಲಿ ಸಿಲುಕಿ, ಇದ್ದ ಆಸ್ತಿಯನ್ನೆಲ್ಲ ಹಾಳುಮಾಡಿಕೊಂಡು ನಿರ್ಗತಿಕನಾದ ವ್ಯಕ್ತಿಯೊಬ್ಬನನ್ನೂ, ವೇಶ್ಯಾವೃತ್ತಿಯಿಂದ ಆಸ್ತಿ ಸಂಪಾದಿಸಿ, ಆ ಆಸ್ತಿ ನಷ್ಟವಾದ ಮೇಲೆ ಪಶ್ಚಾತ್ತಾಪಪಟ್ಟ ವೇಶ್ಯೆಯರನ್ನೂ, ಮದ್ಯಪಾಯಿಗಳನ್ನೂ, ದೇಶ ಸೇವಕನಾದ ಒಬ್ಬ ವ್ಯಕ್ತಿಯು ಬುದ್ಧಿವಾದಗಳಿಂದ ಒಳ್ಳೆಯ ಮಾರ್ಗಕ್ಕೆ ತಂದು, ಅವರಿಗೆ ಚರಕದ ಅವಲಂಬನೆ ಮಾಡಿಕೊಟ್ಟ ಕಥೆಯಿದು. ಸನ್ನಿವೇಶಗಳು ಅಷ್ಟೇನೂ ಮನಸ್ಸಿಗೆ ಹಿಡಿಯುವಂತಿಲ್ಲ. ಇಲ್ಲಿ ಹೇಳಿರುವ ಬುದ್ಧಿವಾದಗಳು ಇಂತಹ ಪರಿಣಾಮವನ್ನುಂಟು ಮಾಡುವಷ್ಟು ಪ್ರತಿಭೆಯುಳ್ಳವಾಗಿಲ್ಲ. ಭಾಷೆಯು ಮಾತನಾಡುವ ಭಾಷೆ.

---

## ೧೦. ಭರತ ಖಂಡ ಮತ್ತು ಜಪಾನ ದೇಶಗಳ ಬಟ್ಟೆಯ ಉದ್ಯೋಗದ ಬೆಳವಣಿಗೆ

ಲೇಖಕರು.—ಶ್ರೀ ಬಳ್ಳಾರಿ ವೀರಭದ್ರಪ್ಪನವರು, ಗದಗ.

ಪ್ರಕಾಶಕರು.—ಕರ್ನಾಟಕ ಚೇಂಬರ್ ಆಫ್ ಕಾಮರ್ಸ್, ಗದಗ.

ಮುದ್ರಾಪಕರು.—ಆಲಮಟ್ಟಿ ವೀರಶೈವ ವಿದ್ಯಾಲಯದ ಶ್ರೀ ಬಸವಲಿಂಗ ಮುದ್ರಣ ಮಂದಿರ.

ಡೆಮ್ಮೈ ೧೬ ಪತ್ರ ಪುಟಗಳು ೨೩ ; ೧೯೩೩.

ಇದು 'ಕರ್ನಾಟಕ ಚೇಂಬರ್ ಆಫ್ ಕಾಮರ್ಸ್' ಎಂಬ ವ್ಯಾಪಾರ ಸಂಘದ ಮೂರನೆಯ ಪ್ರಕಟನೆ. ಬಟ್ಟೆಯ ಉದ್ಯೋಗದಲ್ಲಿ ಜಪಾನಿನವರು ಎಷ್ಟು ಪ್ರವರ್ಧಮಾನಕ್ಕೆ ಬಂದಿರುವರೆಂದೂ, ನಮ್ಮ ದೇಶವು ಬರಿ "ಸಂರಕ್ಷಣೆಯ ಸುಂಕದ ಮೇಲೆ

ಅವಲಂಬಿಸಿದರೆ ನಡೆಯಲಾರದು'' ಎಂದೂ, ''ದೇಶೀಯ ಕೂಲಿಕಾರರ ನೈಪುಣ್ಯವನ್ನು ಬೆಳಸುವದರಲ್ಲಿಯೂ ಯಂತ್ರಗಳನ್ನು ಹೊಸ ಪರಿಸ್ಥಿತಿಗೆ ತಕ್ಕಂತೆ ಸುಧಾರಿಸುವದ ರಲ್ಲಿಯೂ ಗಿರಣಿಗಳೊಡೆಯರು ಲಕ್ಷ್ಯ ಹಾಕಲೇ ಬೇಕು'' ಎಂದೂ ಈ ಸಣ್ಣ ಪುಸ್ತಕ ದಲ್ಲಿ ಅಂಕಿಗಳನ್ನು ಕೊಟ್ಟು ವಿಶದಪಡಿಸಿದೆ.

---

## ೧೧. ವಿದುರಾಶ್ವತ್ಥ ಕ್ಷೇತ್ರ

ಲೇಖಕರು.—ಶ್ರೀ ರಾಮಾನಂದ ಸ್ವಾಮಿಜೀಯವರು.

ಪ್ರಕಾಶಕರು.—ಶ್ರೀ ದುರ್ಗಾದೇವಿ ಪೀಠಂ, ''ಶ್ರೀನಿವಾಸ'', ಮಲ್ಲೇಶ್ವರ.

ಮುದ್ರಾಪಕರು.—ಬೆಂಗಳೂರು ಸಿಟಿ ಇಂಡಿಯನ್ ಪ್ರೆಸ್.

ಡೆಮ್ಮಿ ಅಷ್ಟಪತ್ರ ಪುಟ ೧೮ ; ಬೆಲೆ ೨ ಆಣೆ.

ಇದರಲ್ಲಿ, ಕ್ಷೇತ್ರ ಪರಿಚಯ, ಕ್ಷೇತ್ರ ಪೂರ್ವ ವೃತ್ತ, ಪಿನಾಕಿನೀ ಮಾಹಾತ್ಮ್ಯ, ಜೀವನಾಶ್ವತ್ಥ, ಅಶ್ವತ್ಥ ಮಹಿಮೆ, ಹಲವು ದೃಷ್ಟಾಂತಗಳು, ಪ್ರಕೃತ ಸ್ಥಿತಿ—ಇವು ಗಳನ್ನು ಸಲಕ್ಷಣವಾದ ಭಾಷೆಯಲ್ಲಿ ವರ್ಣಿಸಿದೆ.

---

## ೧೨. ಕರ್ನಾಟಕ ಚೇಂಬರ ಆಫ್ ಕಾಮರ್ಸ (ವಣಿಕ್ ಸಂಘ) ಗದಗ

ಳನೆಯ ವಾರ್ಷಿಕ ವರದಿ

ಡೆಮ್ಮಿ ಅಷ್ಟಪತ್ರ ಪುಟಗಳು ೬+೫೦+೮ : ೧೯೩೨.

ಈ ವರದಿಯಲ್ಲಿ, ಈ ಸಂಘದವರು ಕರ್ಣಾಟಕ ದೇಶದ ವ್ಯಾಪಾರಾಭಿವೃದ್ಧಿ ಗಾಗಿಯೂ ವಿದ್ಯಾಭಿವೃದ್ಧಿಗಾಗಿಯೂ ಅನೇಕ ಬಗೆಗಳಲ್ಲಿ ಮಾಡುತ್ತಿರುವ ಪ್ರಯತ್ನ ಗಳನ್ನು ಕುರಿತು ವಿಶದವಾಗಿ ಹೇಳಿರುತ್ತಾರೆ. ಅವರು ಮಾಡುತ್ತಿರುವ ಕಾರ್ಯ ಗಳನ್ನು ಹತ್ತು ಮುಖ್ಯ ವಿಭಾಗಗಳಾಗಿ ವಿಂಗಡಿಸಿರುತ್ತಾರೆ:—(೧) ಪ್ರಾಂತಿಕ ಸರಕಾರಗಳು, (೨) ಕೇಂದ್ರ ಸರಕಾರ, (೩) ಕರ್ನಾಟಕ ಏಕೀಕರಣ, (೪) ಅಂಚೆ ಮತ್ತು ತಂತಿ, (೫) ರೇಲ್ವೆ, (೬) ಪ್ರಾಂತಿಕ ಔದ್ಯೋಗಿಕ ಖಾತೆಗಳು, (೭) ವ್ಯಾಪಾರ ಸಮಾಚಾರ ಮತ್ತು ಸಂಖ್ಯಾ ಪರಿಗಣನ ಖಾತೆ, (೮) ಉತ್ಪನ್ನದ ಕರದ ಖಾತೆ, (೯) ಸ್ಥಾನಿಕ ಸಂಸ್ಥೆಗಳು, ಮತ್ತು (೧೦) ಇತರ ವಿಷಯಗಳು.

ಒಟಾವಾ ಒಪ್ಪಂದ, ನಿಜಾಂ ಸರಕಾರದವರು ಕೃಷ್ಣಾ ನದಿಗೆ ಕಟ್ಟಲಿರುವ ಅಣೆಕಟ್ಟು; ದಿ ಲಿಂಗಾಯತ ಆರ್ಟ್ಸ ಕಾಲೇಜ, ಬೆಳಗಾವಿ; ಮೋಟಾರು ಗಾಡಿ ಗಳ ವಿಚಾರವಾದ ಕನ್ನಡದ ಬೋರ್ಡುಗಳು; ಲ್ಯಾಂಡ ರಿಕಾರ್ಡ್ಸ ಖಾತೆಯ ಎಲ್ಲ ಫಾರ್ಮುಗಳನ್ನು ಕನ್ನಡಿಸುವುದು ; ಅಂಚೆಯ ತಕರಾರುಗಳು ; ರೇಲ್ವೆಯಲ್ಲಿ ಕಡಿಮೆ ದರ—ಇವೇ ಮೊದಲಾದ ವಿಷಯಗಳನ್ನು ಚರ್ಚಿಸಿ, ಅವುಗಳ ವಿಷಯವಾಗಿ

ಆಯಾ ಅಧಿಕಾರಿಗಳೊಡನೆ ಪತ್ರ ವ್ಯವಹಾರ ಬೆಳೆಯಿಸಿ, ವ್ಯಾಪಾರಸ್ಥರಿಗೂ ಇತರರಿಗೂ ಅನುಕೂಲ್ಯಗಳನ್ನು ಒದಗಿಸಿಕೊಡಲು ಮಾಡಿದ ವಿಚಾರಗಳೆಲ್ಲವನ್ನೂ ಈ ವರದಿಯಲ್ಲಿ ತಿಳಿಸಿದೆ.

---

## ೧೩. ಚನ್ನಪ್ಪನ ಛೇರ್‌ಮನ್ಗಿರಿ

ಲೇಖಕರು.—ಎಸ್. ಆರ್. ಎಸ್. ಕಿಕ್ಕೇರಿ, ಮೈಸೂರು.

ಪ್ರಕಾಶಕರು.—ಮೈಸೂರು ಗ್ರಾಮ ಪುನರುಜ್ಜೀವನ ಸಂಘ, ಕಿಕ್ಕೇರಿ, ಮೈಸೂರು.

ಮುದ್ರಾಪಕರು.—ಶ್ರೀ ಸೀತಾರಾಘವ ಪ್ರೆಸ್, ಮೈಸೂರು.

ಡೆಮ್ಮಿ ಅಷ್ಟಪತ್ರ ಪುಟ ೧೬ ; ಬೆಲೆ ೧ ಆಣೆ.

ಇದು 'ಗ್ರಾಮಾಭ್ಯುದಯ ಪತ್ರಿಕೆ'ಯ ಪುಸ್ತಕ. ಗ್ರಾಮಾಭ್ಯುದಯ ಕಾರ್ಯವು ಯಾವ ರೀತಿಯಾಗಿ ನಡೆಯಬೇಕೆಂಬುದನ್ನೂ, ಉತ್ಸಾಹದಿಂದ ಕೆಲಸ ಮಾಡಬೇಕೆಂದಿರುವವರಿಗೆ ಹೇಗೆ ತೊಂದರೆಗಳು ಸಂಭವಿಸುವುವೆಂಬುದನ್ನೂ ಕಥಾ ರೂಪವಾಗಿ ಈ ಪುಸ್ತಕದಲ್ಲಿ ವರ್ಣಿಸಿದೆ.

---

## ೧೪. ನವೀನ ವಿದ್ಯಾಭ್ಯಾಸ

ಮತ್ತು

## ಆಧುನಿಕ ಶಿಕ್ಷಣ ಪದ್ಧತಿಗಳು

(ಭಾಗ ೨—ಸಚಿತ್ರ)

ಲೇಖಕರು.—ಎಂ. ವೆಂಕೋಬಾಚಾರ್ಯರು, ಬಿ.ಎ., ಬಿ.ಟಿ., ಬೆಂಗಳೂರು.

ಮುದ್ರಣಕಾರರು.—ಸುಬೋಧ ಪ್ರೆಸ್, ಬೆಂಗಳೂರು ನಗರ.

ಕ್ರೌನ್ ಅಷ್ಟಪತ್ರ ಪುಟಗಳು ೨೬+೧೫೩ ; ಬೆಲೆ: ಲೈಬ್ರರಿ ಪ್ರತಿಗೆ ರೂ. ೧—೪—೦, ಸಾಮಾನ್ಯ ಪ್ರತಿಗೆ ರೂ. ೧—೦—೦ ; ೧೯೩೩.

ಪಾಶ್ಚಾತ್ಯ ದೇಶಗಳಲ್ಲಿಯ ಪ್ರಾಥಮಿಕ ಶಿಕ್ಷಣದ ಪದ್ಧತಿಗಳನ್ನು ನಮ್ಮ ದೇಶದಲ್ಲಿಯೂ ರೂಢಿಗೆ ತರುವ ಪ್ರಯತ್ನಗಳು ಅನೇಕ ವರುಷಗಳಿಂದಲೂ ನಡೆಯುತ್ತಿವೆ. ಆದರೆ ಹಲವು ಕಾರಣಗಳಿಂದ ಇದು ಇನ್ನೂ ಸಫಲವಾಗಿಲ್ಲ. ಮುಖ್ಯವಾದುದು ಹಣದ ಕೊರತೆ. ಶಕ್ತರೂ ಉತ್ಸಾಹಶಾಲಿಗಳೂ ಆದ ಉಪಾಧ್ಯಾಯರನ್ನು ನಿಯಮಿಸಿ ಅವರಿಗೆ ತಕ್ಕ ವೇತನವನ್ನು ಕೊಟ್ಟು, ಯಾವ ತರಗತಿಯಲ್ಲಿಯೂ ಇಪ್ಪತ್ತು ಮಂದಿ ಹುಡುಗರಿಗಿಂತಲೂ ಹೆಚ್ಚಾಗಿ ಸೇರಿಸದೆ ಇದ್ದಲ್ಲಿ, ಅಂತಹ ಉಚ್ಚ ಶಿಕ್ಷಣವನ್ನು ನಡೆಯಿಸಲು ಸಾಧ್ಯವಾಗುವುದೇ ವಿನಾ, ಈಗಿನಂತೆ ಹೆಚ್ಚು ಮಂದಿ ಹುಡುಗರೂ, ಜೀವನಕ್ಕೆ ಸಾಲದೆ ಪೇಚಾಡುತ್ತಿರುವ ಉಪಾಧ್ಯಾಯರೂ ಉಳ್ಳ ಶಾಲೆಗಳಲ್ಲಿ ಇದಕ್ಕೆ ಎಡೆಯಿಲ್ಲ. ಈಗಲೂ ನಮ್ಮ ಪ್ರಾಥಮಿಕ ಶಾಲೆಗಳಲ್ಲಿ, ಶಕ್ತರೂ

ಉತ್ಸಾಹಶಾಲಿಗಳೂ ಆದ ಉಪಾಧ್ಯಾಯರು ಇಲ್ಲದೆ ಇಲ್ಲ. ಆದರೆ ಅವರಿಗೆ ಕೊಡುತ್ತಿರುವ ವೇತನವು ಅವರ ಉತ್ಸಾಹವನ್ನು ತಲೆಯೆತ್ತದಂತೆ ಮಾಡಿರುತ್ತದೆ. ಈ ಕಾರಣದಿಂದ, 'ಕಿಂಡರ್‌ಗಾರ್ಟನ್' ಪದ್ಧತಿ, 'ಮಾಂಟಿಸೋರಿ' ಪದ್ಧತಿ, 'ಡಾಲ್ಟನ್' ಪದ್ಧತಿ—ಮೊದಲಾದುವು ಬರಿ ಹೆಸರಿನಲ್ಲಿ ಮಾತ್ರ ಇರುವುವೇ ವಿನಾ ಕಾರ್ಯದಲ್ಲಿರುವಂತೆ ಕಾಣುವುದಿಲ್ಲ.

ಇಂಗ್ಲಿಷು ಬಾರದ, ಉತ್ಸಾಹಶಾಲಿಗಳಾದ ಕೆಲವರು ಉಪಾಧ್ಯಾಯರು ಈ ವಿಚಾರಗಳನ್ನು ತಿಳಿದುಕೊಳ್ಳಲು ಕುತೂಹಲಿಗಳಾಗಿದ್ದರೂ, ಕನ್ನಡದಲ್ಲಿ ಈ ವಿಷಯಕ ವಾದ ಪುಸ್ತಕಗಳಲ್ಲಿಲ್ಲದುದರಿಂದ ಅವರ ಕುತೂಹಲವು ಸಫಲವಾಗುವಂತಿಲ್ಲ. ಮ|| ವೆಂಕೋಬಾಚಾರ್ಯರವರು ಅಂತಹ ಉಪಾಧ್ಯಾಯರಿಗೆ ಸಹಾಯವಾಗಲೆಂದು ಆಗಲೇ ಒಂದು ಪುಸ್ತಕವನ್ನು ಬರೆದು ಪ್ರಕಟಿಸಿರುತ್ತಾರೆ. ಪ್ರಕೃತ ಗ್ರಂಥವು ಅದರ ಎರಡನೆಯ ಭಾಗ. ಇದರಲ್ಲಿ, ಕಿಂಡರ್‌ಗಾರ್ಟನ್, ಮಾಂಟಿಸೋರಿ, ಪ್ರಾಜೆಕ್ಟ್, ಪ್ಲೇವೆ, ಡಾಲ್ಟನ್, ಹೋವರ್ಡ್, ಗೇರಿ, ವಿನೆಟ್ಕಾ, ಡೆಕ್ರೋಲಿ—ಈ ಶಿಕ್ಷಣ ಪದ್ಧತಿ ಗಳ ಮತ್ತು ರಚನೆಗಳ ವಿಚಾರವನ್ನು ಲೇಖಕರು ಸಂಕ್ಷೇಪವಾಗಿ ಕೊಟ್ಟಿರುತ್ತಾರೆ. ಈ ಶಿಕ್ಷಣ ಪದ್ಧತಿಗಳ ಕೆಲವರು ಮೂಲ ಪುರುಷರ ಚಿತ್ರಗಳೂ ಇತರ ಚಿತ್ರಗಳೂ, ಒಟ್ಟು ಒಂಬತ್ತಿವೆ. ಭಾಷೆಯು ಸುಲಭವಾಗಿದೆ. ವಿಷಯಗಳನ್ನು, ತಕ್ಕ ಯೋಗ್ಯತೆ ಯುಳ್ಳ ಉಪಾಧ್ಯಾಯರು ಅರ್ಥಮಾಡಿಕೊಳ್ಳಲು ಸಾಧ್ಯವಾಗುವಂತೆ ಲೇಖಕರು ಬರೆದಿರುತ್ತಾರೆ. ಈ ಗ್ರಂಥಕ್ಕೆ, ಪಾಶ್ಚಾತ್ಯ ದೇಶಗಳ ಶಿಕ್ಷಣ ಕ್ರಮಗಳ ಅನುಭವ ವುಳ್ಳ ಹೆಡ್ಮಾಸ್ಟರ್ ಡಾ|| ಕೆಸಿಯವರ ಇಂಗ್ಲಿಷಿನ ಮುನ್ನುಡಿ ಇದೆ.

ಗ್ರಂಥಕರ್ತರು ತಾವಾಗಿ ತಮ್ಮ ಸ್ವಂತ ವೆಚ್ಚದಿಂದ ಈ ಪುಸ್ತಕಗಳನ್ನು ಪ್ರಕಟ ಮಾಡಿರುವುದು ಅವರ ಕಾರ್ಯತತ್ಪರತೆಯನ್ನೂ ಉತ್ಸಾಹವನ್ನೂ ತೋರಿಸು ತ್ತದೆ. ಮುದ್ರಣದ ದೋಷಗಳು ಹಲವಿರುವುದಕ್ಕೂ ಮುದ್ರಣವು ಅಷ್ಟು ಅಂದ ವಾಗಿಲ್ಲದಿರುವುದಕ್ಕೂ ಹಣದ ಕೊರತೆಯೇ ಕಾರಣವೆಂದು ತೋರುವುದು. ಅಧಿಕಾರಿ ಗಳು ಇಂತಹ ಶ್ಲಾಘನೀಯವಾದ ಪ್ರಯತ್ನಗಳಿಗೆ ತಕ್ಕ ಪ್ರೋತ್ಸಾಹವನ್ನು ದ್ರವ್ಯ ರೂಪವಾಗಿ ಕೊಟ್ಟು, ಇಂತಹ ಪುಸ್ತಕಗಳು ಕನ್ನಡದಲ್ಲಿ ಹೆಚ್ಚಾಗಿ ಪ್ರಕಟ ವಾಗುವಂತೆಮಾಡುವರೆಂದು ಹಾರೈಸುತ್ತೇವೆ.

---

## ೧೫. Manual of Kannada Shorthand

ಲೇಖಕರು.—ಎನ್. ದೇವರಾಯರು, ಬಿ.ಎ., ಬೆಂಗಳೂರು.

ಮುದ್ರಾಪಕರು.—ಗವರ್ನಮೆಂಟು ಪ್ರೆಸ್, ಬೆಂಗಳೂರು.

ಡೆಮ್ಮೈ ಅಷ್ಟಪತ್ರ ಪುಟಗಳು ೧೧+೧೩೮ ; ಬೆಲೆ ೩ ರೂಪಾಯಿ ; ೧೯೩೩.

ಮ|| ರಾ|| ದೇವರಾಯರು ಮೈಸೂರು ಸರಕಾರದಲ್ಲಿ ಅಸಿಸ್ಟೆಂಟು ಸೆಕ್ರಿಟರಿ ಹುದ್ದೆಯಲ್ಲಿದ್ದು ಈಗ ವಿಶ್ರಾಂತಿ ಸುಖವನ್ನು ಅನುಭವಿಸುತ್ತಿರುವವರು. ಇವರು

ಇಂಗ್ಲಿಷು ಭಾಷೆಯ 'ಸೂಕ್ಷ್ಮ ಲೇಖನ'ದಲ್ಲಿ ಬಹಳ ಪ್ರಸಿದ್ಧರು; ಎಂದರೆ, ಇಂಗ್ಲಿಷಿನಲ್ಲಿ ಬಹು ಬೇಗ ಮಾತನಾಡುತ್ತಿರುವವರ ಭಾಷಣವನ್ನು ತಪ್ಪಿಲ್ಲದೆ ಬರೆದುಕೊಳ್ಳಲು ದಕ್ಷರು. ಈ ಸೂಕ್ಷ್ಮ ಲೇಖನವನ್ನು ಇಂಗ್ಲಿಷು ಭಾಷೆಯಲ್ಲಿ ತಕ್ಕಂತೆ ರಚಿಸಿ ರೂಢಿಗೆ ತಂದವರಲ್ಲಿ 'ಸರ್ ಐಸಕ್ ಪಿಟ್‌ಮೆನ್' ಎಂಬವರು ಬಹಳ ಪ್ರಸಿದ್ಧರು. ಇವರ ಕ್ರಮವನ್ನೇ ಇಂಗ್ಲಿಷು ಸೂಕ್ಷ್ಮ ಲೇಖಕರೆಲ್ಲರೂ ಈಗ ಸಾಮಾನ್ಯವಾಗಿ ಅನುಸರಿಸುತ್ತಿರುವುದು.

ಮ|| ರಾ|| ದೇವರಾಯರಿಗೆ, ಈ ಸೂಕ್ಷ್ಮ ಲೇಖನ ಕ್ರಮವನ್ನು ಕನ್ನಡಕ್ಕೂ ಅನ್ವಯಿಸುವಂತೆ ಮಾಡಬೇಕೆಂಬ ಅಭಿಲಾಷೆಯು ಬಹಳ ದಿನಗಳಿಂದಲೂ ಇದ್ದಿತು. "ಆದರೆ 'ಪಿಟ್‌ಮೆನ್' ಕ್ರಮವನ್ನೇ ಪೂರ್ತಿಯಾಗಿ ಇಲ್ಲಿ ಉಪಯೋಗಿಸಿಕೊಳ್ಳಲು ಅನೇಕ ಕಾರಣಗಳಿಂದ ಸಾಧ್ಯವಿಲ್ಲ: ಇಂಗ್ಲಿಷಿನಲ್ಲಿ ಪದಗಳೆಲ್ಲವೂ ಸಾಮಾನ್ಯವಾಗಿ ಸಣ್ಣವು; ವಾಕ್ಯಗಳಲ್ಲಿ ಸಾಮಾನ್ಯವಾಗಿ ಅನೇಕ ಸಾರಿ ಬರುವ ಪದಗಳು ಅನೇಕ ವಿರುವುವು. ಇವೆಲ್ಲಕ್ಕೂ ಉಪಯೋಗಿಸುವ ಚಿಹ್ನೆಗಳನ್ನು ಕನ್ನಡ ಪದಗಳಿಗೆ ಉಪಯೋಗಿಸಲಾಗುವುದಿಲ್ಲ. ಅಲ್ಲದೆ, ಕನ್ನಡದಲ್ಲಿ ವಿಶೇಷವಾಗಿ ಬರುವ ಅನುಸ್ವಾರ ಅರ್ಕಾವತ್ತುಗಳಿಗೆ ಇಂಗ್ಲಿಷಿನಲ್ಲಿ ಚಿಹ್ನೆಗಳಿಲ್ಲ. ಆದುದರಿಂದ, 'ಪಿಟ್‌ಮೆನ್' ರೀತಿಯನ್ನು ಇದ್ದಂತೆಯೇ ಕನ್ನಡಕ್ಕೆ ತೆಗೆದುಕೊಳ್ಳಲು ಸಾಧ್ಯವಿಲ್ಲ. ಕೆಲವರು ಆ ರೀತಿಯನ್ನೇ ಕನ್ನಡಕ್ಕೂ ಉಪಯೋಗಿಸುತ್ತಿರುವರಾದರೂ ಅವರ ಪ್ರಯತ್ನವು ಅಷ್ಟು ಸಮರ್ಪಕವಾಗಿಲ್ಲ." ಈ ಕಾರಣಗಳಿಂದ, ಮ|| ರಾ|| ದೇವರಾಯರು 'ಪಿಟ್‌ಮೆನ್' ರೀತಿಯನ್ನೇ ಕನ್ನಡಕ್ಕೆ ತಕ್ಕಂತೆ ಬದಲಾಯಿಸಿಕೊಂಡು ಕನ್ನಡ ಸೂಕ್ಷ್ಮ ಲೇಖನವನ್ನು ರಚಿಸಿರುತ್ತಾರೆ.

ಈಚೆಗೆ, ಎಲ್ಲೆಲ್ಲಿಯೂ ಕನ್ನಡ ಭಾಷಣಗಳು ಹೆಚ್ಚು ಹೆಚ್ಚಾಗಿ ನಡೆಯುತ್ತಿರುವುದರಿಂದಲೂ, ಮೈಸೂರು ಪ್ರಜಾ ಪ್ರತಿನಿಧಿ ಸಭೆಯಲ್ಲಿ ಸಭಿಕರು ಮಾಡುವ ಕನ್ನಡ ಭಾಷಣಗಳೆಲ್ಲವನ್ನೂ ಮಾತನಾಡಿದಂತೆಯೇ ಬರೆದುಕೊಳ್ಳಬೇಕೆಂಬ ಅಭಿಪ್ರಾಯವು ಹುಟ್ಟುತ್ತಿರುವುದರಿಂದಲೂ, ಕನ್ನಡ ಸೂಕ್ಷ್ಮ ಲೇಖನದ ಆವಶ್ಯಕತೆಯು ದಿನೇ ದಿನೇ ಹೆಚ್ಚುತ್ತಿರುವುದು. ಆದಕಾರಣ, ಮ|| ರಾ|| ದೇವರಾಯರ ಸೂಕ್ಷ್ಮಲೇಖನ ಕ್ರಮವನ್ನು ವಿದ್ಯಾರ್ಥಿಗಳು ಕಲಿತುಕೊಳ್ಳಬೇಕಾದುದು ಆವಶ್ಯಕ. ಮ|| ರಾ|| ದೇವರಾಯರವರೇ ಒಬ್ಬ ವಿದ್ಯಾರ್ಥಿಯನ್ನು ತಯಾರು ಮಾಡಿರುವುದಾಗಿ ಈ ಪುಸ್ತಕದ ಪೀಠಿಕೆಯಲ್ಲಿ ತಿಳಿಸಿರುತ್ತಾರೆ.

ಕನ್ನಡ ದೇಶದಲ್ಲಿಯ ಸರಕಾರಗಳವರೂ ಸ್ಥಳೀಯ ಸಂಸ್ಥೆಗಳವರೂ ಇಂತಹ ಸೂಕ್ಷ್ಮ ಲೇಖಕರನ್ನು ತಮ್ಮ ಕಚೇರಿಗಳಲ್ಲಿಯೂ ಕಾರ್ಯ ಸ್ಥಾನಗಳಲ್ಲಿಯೂ ನಿಯಮಿಸಿಕೊಂಡು, ಮ|| ರಾ|| ದೇವರಾಯರ ಶ್ರಮಕ್ಕೂ ಅವರ ಭಾಷಾ ಸೇವೆಗೂ ತಕ್ಕ ಪ್ರೋತ್ಸಾಹವನ್ನು ಕೊಡುವರೆಂದು ಹಾರೈಸುತ್ತೇವೆ.

---

# ಕರ್ಣಾಟಕ ಸಾಹಿತ್ಯ ಪರಿಷತ್ತಿನ

## ಆಂಗೀರಸ ಸಂವತ್ಸರದ ವರದಿ

೧೯೩೩

ಶ್ರೀಃ

# ಕರ್ಣಾಟಕ ಸಾಹಿತ್ಯ ಪರಿಷತ್ತು, ಬೆಂಗಳೂರು

(ಸ್ಥಾಪನೆ ೧೯೧೫)

---

## ಆಂಗೀರಸ ಸಂವತ್ಸರದ ವರದಿ

---

ಮಹನೀಯರೆ!

ಕರ್ಣಾಟಕ ಸಾಹಿತ್ಯ ಪರಿಷತ್ತಿನ ಆಂಗೀರಸ ಸಂವತ್ಸರದ ವರದಿಯನ್ನು, ಕಾರ್ಯನಿರ್ವಾಹಕ ಮಂಡಲಿಯ ಅಪ್ಪಣೆಯ ಮೇರೆಗೆ, ತಮ್ಮ ಮುಂದಿಡಲು ಅನುಮತಿಯನ್ನು ಬೇಡುತ್ತೇನೆ.

**೧. ಕಾರ್ಯನಿರ್ವಾಹಕ ಮಂಡಲಿ.**—೧೯೩೧ನೆಯ ಡಿಸೆಂಬರು ೩೦ನೆಯ ತಾರೀಖಿನಲ್ಲಿ (ಮಡಿಕೇರಿಯಲ್ಲಿ) ನಡೆದ ಪರಿಷತ್ತಿನ ವಾರ್ಷಿಕಾಧಿವೇಶನದಲ್ಲಿ, ಮುಂದಣ ಎರಡು ವರ್ಷಗಳಿಗೆ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯ ಅಧಿಕಾರಿಗಳನ್ನೂ, ಮುಂದಣ ವರ್ಷಕ್ಕೆ ಅದೇ ಮಂಡಲಿಯ ಸದಸ್ಯರನ್ನೂ ಚುನಾಯಿಸಲಾಯಿತು :—

### ಅಧ್ಯಕ್ಷರು

ಮೈಸೂರು ಸಂಸ್ಥಾನದ ಶ್ರೀಮದ್ಯುವರಾಜರವರು

**ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹಾದ್ದೂರ್,** ಜಿ.ಸಿ.ಐ.ಇ.

ಮಹಾಸ್ವಾಮಿಯವರೇ ಮುಂದೆಯೂ ಪರಿಷತ್ತಿನ ಅಧ್ಯಕ್ಷ ಪದವಿಯನ್ನಲಂಕರಿಸಿ ಪರಿಷತ್ತನ್ನು ಪ್ರೋತ್ಸಾಹಗೊಳಿಸುವಂತೆ ಪ್ರಾರ್ಥಿಸಿಕೊಳ್ಳಬೇಕೆಂದು ಸಭಾಧ್ಯಕ್ಷರು ಮಾಡಿದ ಸೂಚನೆಯನ್ನು ಸದಸ್ಯರೆಲ್ಲರೂ ಏಕ ಕಂಠದಿಂದ ಅನುಮೋದಿಸಿದರು.

### ಉಪಾಧ್ಯಕ್ಷರು

ರಾಜಕಾರ್ಯ ಪ್ರಸಕ್ತ, ದಿವಾನ್ ಬಹಾದ್ದೂರ್

ಶ್ರೀಮಾನ್ ಎಂ. ಎನ್. ಕೃಷ್ಣರಾಯರು, ಬಿ.ಎ.

### ಗೌರವ ಕಾರ್ಯದರ್ಶಿಗಳು

ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ.

### ಗೌರವ ಕೋಶಾಧ್ಯಕ್ಷರು

ಶ್ರೀಮಾನ್ ಬೆಳ್ಳಾವೆ ವೆಂಕಟನಾರಾಯಣಪ್ಪನವರು, ಎಂ.ಎ.

## ಸದಸ್ಯರು

**ಮೈಸೂರು ಪ್ರಾಂತಕ್ಕೆ.—**

| | | | |
|---|---|---|---|
| ೧ | ಶ್ರೀಮತಿ | ಡಿ. ಸಾಕಮ್ಮನವರು | ಬೆಂಗಳೂರು |
| ೨ | ಶ್ರೀಮಾನ್ | ಡಿ. ವಿ. ಗುಂಡಪ್ಪನವರು | ,, |
| ೩ | ,, | ನಿಟ್ಟೂರು ಶ್ರೀನಿವಾಸರಾಯರು, ಬಿ.ಎಸ್‌ಸಿ., ಬಿ.ಎಲ್. | ,, |
| ೪ | ,, | ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ., | ಮೈಸೂರು |
| ೫ | ,, | ಮಾಸ್ತಿ ವೆಂಕಟೇಶ ಐಯಂಗಾರ್‍ಯರು, ಎಂ.ಎ. | ಬೆಂಗಳೂರು |
| ೬ | ,, | ತಿರುಮಲೆ ತಾತಾಚಾರ್‍ಯ ಶರ್ಮರು | ,, |
| ೭ | ,, | ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ. | ,, |
| ೮ | ,, | ವಿ. ವೆಂಕಟಪ್ಪನವರು | ,, |
| ೯ | ,, | ಟಿ. ಅಪ್ಪೂರಾಯರು, ಬಿ.ಎ., ಬಿ.ಎಲ್. | ,, |
| ೧೦ | ,, | ನಂ. ವೆಂಕಟೇಶಯ್ಯಂಗಾರ್‍ಯರು, ಬಿ.ಎ. | ,, |
| ೧೧ | ,, | ಎಂ. ಆರ್. ಶ್ರೀನಿವಾಸಮೂರ್ತಿಗಳು, ಬಿ.ಎ. | ,, |
| ೧೨ | ,, | ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್. | ,, |

**ಮುಂಬಯಿ ಪ್ರಾಂತಕ್ಕೆ.—**

| | | | |
|---|---|---|---|
| ೧ | ಶ್ರೀಮಾನ್ | ಬಿ. ಡಿ. ಬೆಳ್ವಿಯವರು | ಮುಂಬಯಿ |
| ೨ | ,, | ಬಿ. ಎಸ್. ಬೆಟಿಗೇರಿಯವರು | ಬೆಳಗಾಂವಿ |
| ೩ | ರಾವ್ ಸಾಹೆಬ್ ಶ್ರೀಮಾನ್ | ಪಿ. ಜಿ. ಹಳಕಟ್ಟಿಯವರು, ಬಿ.ಎ., ಎಲ್‌ಎಲ್.ಬಿ. | ಬಿಜಾಪುರ |
| ೪ | ಶ್ರೀಮಾನ್ | ರಂಗಪ್ಪ ಪೋದ್ದಾರರು, ಬಿ.ಎ. | ಕಾರವಾರ |
| ೫ | ,, | ಎಚ್. ಚೆನ್ನಕೇಶವಯ್ಯಂಗಾರ್‍ಯರು | ಧಾರವಾಡ |
| ೬ | ,, | ನಾರಾಯಣ ವೆಂಕಟೇಶ ಕುರಡಿಯವರು | ,, |
| ೭ | ,, | ವೆಂಕಟೇಶ ಭೀಮರಾವ್ ಆಲೂರವರು, ಬಿ.ಎ., ಎಲ್‌ಎಲ್.ಬಿ. | ,, |
| ೮ | ,, | ಗುರುಶಿದ್ದಪ್ಪ ಮಹಾಲಿಂಗಪ್ಪ ಮಿರ್ಜಿಯವರು, ಬಿ.ಎ., ಎಲ್‌ಎಲ್.ಬಿ. | ಹುಬ್ಬಳ್ಳಿ |
| ೯ | ,, | ಚಂದ್ರಶೇಖರ ಶಾಸ್ತ್ರಿಗಳು, ವ್ಯಾಕರಣತೀರ್ಥ | ,, |

**ಮದರಾಸು ಪ್ರಾಂತಕ್ಕೆ.—**

| | | | |
|---|---|---|---|
| ೧ | ಶ್ರೀಮಾನ್ | ಲಕ್ಷ್ಮೀನಾರಾಯಣ ಪುಣಿಂಚತ್ತಾಯರು | ಕಾಸರಗೋಡು |
| ೨ | ,, | ಬೆನಗಲ್ ರಾಮರಾಯರು, ಎಂ.ಎ., ಎಲ್‌ಎಲ್.ಬಿ. | ಮದರಾಸು |
| ೩ | ,, | ಎಚ್. ತಿಮ್ಮಕೃಷ್ಣರಾಯರು, ಬಿ.ಎ., ಬಿ.ಎಲ್. | ಬಳ್ಳಾರಿ |

**ಉತ್ತರ ಕರ್ಣಾಟಕ ಸಂಸ್ಥಾನಗಳಿಗೆ.—**

| | | | |
|---|---|---|---|
| ೧ | ಶ್ರೀಮಾನ್ | ಕೆ. ಜಿ. ಕುಂಡಣಗಾರರು, ಎಂ.ಎ. | ಕೊಲ್ಹಾಪುರ |
| ೨ | ,, | ಟಿ. ಎಸ್. ಚಿಕ್ಕೋಡಿಯವರು | ಬನಹಟ್ಟಿ |

**ಹೈದರಾಬಾದು ಸಂಸ್ಥಾನಕ್ಕೆ.—**

| | | |
|---|---|---|
| ೧ | ಶ್ರೀಮಾನ್ ನಾರಾಯಣಶಾಸ್ತ್ರೀ ಭಾವೂಶಾಸ್ತ್ರಿಗಳು | ಕೊಪ್ಪಳ |
| ೨ | ,, ಗರುಡ ಸದಾಶಿವರಾಯರು | ಹೈದರಾಬಾದು |

**ಕೊಡಗಿಗೆ.—**

| | | |
|---|---|---|
| ೧ | ಶ್ರೀಮಾನ್ ಬಿ. ಎ. ಬೆಳ್ಳಿಯಪ್ಪನವರು | ಮಡಿಕೇರಿ |

ಮೈಸೂರು ಅರಮನೆಯ ಪರವಾಗಿ, ಮೈಸೂರು ಮಹಾರಾಜಾ ಕಾಲೇಜಿನ ಕನ್ನಡ ಪ್ರೊಫೆಸರ್ ಶ್ರೀಮಾನ್ ಟಿ. ಎಸ್. ವೆಂಕಣ್ಣಯ್ಯ, ಎಂ.ಎ. ಅವರು ನಿಯಮಿತರಾದರು.

**೨. ಅಧಿವೇಶನಗಳು.**—ಆಂಗೀರಸ ಸಂವತ್ಸರದಲ್ಲಿ ನಡೆದ ಕಾರ್ಯನಿರ್ವಾಹಕ ಮಂಡಲಿಯ ಅಧಿವೇಶನಗಳು ೭ (೧೯೩೨ನೆಯ ಏಪ್ರಿಲ್ ೨೪, ಜೂಲೈ ೨೪, ಸೆಪ್ಟಂಬರು ೧೮, ನವೆಂಬರು ೨೭, ಡಿಸೆಂಬರು ೧೮ ಮತ್ತು ೩೦; ೧೯೩೩ನೆಯ ಮಾರ್ಚಿ ೨೬).

ಈ ಅಧಿವೇಶನಗಳಿಗೆ ಬಂದಿದ್ದ ಸದಸ್ಯರ ಹೆಸರು ಮತ್ತು ಅಧಿವೇಶನಗಳ ಸಂಖ್ಯೆ.—

ಗೌರವ ಕಾರ್ಯದರ್ಶಿಗಳು ೬; ಗೌರವ ಕೋಶಾಧ್ಯಕ್ಷರು ೭; ಮ॥ ರಾ॥ ಗಳಾದ ಟಿ. ಅಪ್ಪೂರಾಯರು ೭, ಸಂ. ವೆಂಕಟೇಶಯ್ಯಂಗಾರ್ಯರು ೬, ಬಿ. ಎಂ. ಶ್ರೀಕಂಠಯ್ಯನವರು ೪, ನಿಟ್ಟೂರು ಶ್ರೀನಿವಾಸರಾಯರು ೪, ತಿರುಮಲೆ ತಾತಾಚಾರ್ಯ ಶರ್ಮರು ೪, ಮಾಸ್ತಿ ವೆಂಕಟೇಶ ಐಯಂಗಾರ್ಯರು ೩, ಕೆ. ಕೃಷ್ಣಯ್ಯಂಗಾರ್ಯರು ೨, ಎ. ಆರ್. ಕೃಷ್ಣಶಾಸ್ತ್ರಿಗಳು ೨, ಎಂ. ಆರ್. ಶ್ರೀನಿವಾಸಮೂರ್ತಿಗಳು ೨, ಬಿ. ಶಿವಮೂರ್ತಿ ಶಾಸ್ತ್ರಿಗಳು ೨, ವಿ. ಸೀತಾರಾಮಯ್ಯನವರು ೧, ಡಿ. ವಿ. ಗುಂಡಪ್ಪನವರು ೧, ಟಿ. ಎಸ್. ವೆಂಕಣ್ಣಯ್ಯನವರು ೧, ನಾರಾಯಣ ವೆಂಕಟೇಶ ಕುರಡಿಯವರು ೧, ಎಚ್. ಚೆನ್ನಕೇಶವಯ್ಯಂಗಾರ್ಯರು ೧.

**೩. ಸದಸ್ಯರು.**—ಆಂಗೀರಸ ಸಂವತ್ಸರಾಂತ್ಯದಲ್ಲಿದ್ದ ಸದಸ್ಯರ ಸಂಖ್ಯೆ ಮೊದಲಾದುವು :—

| ತರಗತಿ | ಸದಸ್ಯರ ಸಂಖ್ಯೆ | ಈ ವರ್ಷ ವಸೂಲಾದ ಚಂದಾ ಹಣ ರೂ. ಆ. ಪೈ | ಬಾಕಿ ಬರಬೇಕಾದ ಚಂದಾ ಹಣ ರೂ. ಆ. ಪೈ |
|---|---|---|---|
| ಸಹಾಯಕರು | ೫ | ೧೦೦–೦–೦ | .. |
| ಆಜೀವ ಸದಸ್ಯರು | ೭೯ | ೨೧೫–೦–೦ | ೨೬೦–೩–೦ |
| ಸಾಧಾರಣ ಸದಸ್ಯರು | ೪೩ | ೨೯೯–೦–೦ | ೩೪೦–೦–೦ |
| ಒಟ್ಟು | ೧೨೭ | ೬೧೪–೦–೦ | ೬೦೦–೩–೦ |

ಪ್ರದಾತೃಗಳಾಗಿದ್ದ ಶ್ರೀಮಾನ್ ಕರ್ಪೂರ ಶ್ರೀನಿವಾಸರಾಯರವರೂ, ಆಜೀವ ಸದಸ್ಯರಲ್ಲೊಬ್ಬರೂ ಆಂಗೀರಸ ಸಂವತ್ಸರದಲ್ಲಿ ದೈವಾಧೀನರಾದರು. ಸಹಾಯಕ

ರೊಬ್ಬರೂ ಆಜೀವ ಸದಸ್ಯರೊಬ್ಬರೂ ಹೊಸದಾಗಿ ಸೇರಿದರು. ಇಬ್ಬರು ಸಾಧಾರಣ ಸದಸ್ಯರು ವರ್ಗವನ್ನು ಬದಲಾಯಿಸಿಕೊಂಡು ಆಜೀವ ಸದಸ್ಯರಾದರು. ಸಾಧಾರಣ ಸದಸ್ಯರಲ್ಲಿಬ್ಬರು ಬಿಟ್ಟುಹೋದರು. ಮೂರು ವರ್ಷಗಳಿಂದಲೂ ಚಂದಾ ಬಾಕಿ ಕೊಡದೆ ಇದ್ದ ಆರು ಮಂದಿ ಸಾಧಾರಣ ಸದಸ್ಯರನ್ನು ನಿಯಮಾನುಸಾರವಾಗಿ ತೆಗೆದುಹಾಕಲಾಯಿತು. ಹೊಸದಾಗಿ ಹನ್ನೊಂದು ಮಂದಿ ಸಾಧಾರಣ ಸದಸ್ಯರಾಗಿ ಸೇರಿದರು. ಸದಸ್ಯರ ಸಂಖ್ಯೆಯು ವರ್ಷಾರಂಭದಲ್ಲಿದ್ದುದಕ್ಕಿಂತಲೂ ಮೂರು ಮಾತ್ರ ಹೆಚ್ಚಿತು.

ಪರಿಷತ್ಪತ್ರಿಕೆಗೆ ಮಾತ್ರ ಚಂದಾದಾರರಾಗಿರುವವರು ಮೂವತ್ತೈದು ಮಂದಿ.

**೪. ಸಂಪಾದಕ ಮಂಡಲಿ.**—ಹಿಂದಣ ವರ್ಷದಲ್ಲಿದ್ದ ಸಂಪಾದಕ ಮಂಡಲಿಯೇ ಈ ವರ್ಷವೂ ಕಾರ್ಯಭಾರವನ್ನು ನಡೆಯಿಸಿತು.

ಸದಸ್ಯರು.—

೧ ಶ್ರೀಮಾನ್ ತಿರುಮಲೆ ತಾತಾಚಾರ್ಯ ಶರ್ಮರು
೨ ,, ಕೆ. ಕೃಷ್ಣಯ್ಯಂಗಾರ್ಯರು, ಬಿ.ಎ.
೩ ,, ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ.
೪ ,, ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ.
೫ ,, ಬೆಳ್ಳಾವೆ ವೆಂಕಟನಾರಾಯಣಪ್ಪನವರು, ಎಂ.ಎ.
೬ ,, ನಂ. ವೆಂಕಟೇಶಯ್ಯಂಗಾರ್ಯರು, ಬಿ.ಎ.
೭ ,, ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ. (ಮೈಸೂರು)
೮ ,, ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರು, ಬಿ.ಎ. (ಧಾರವಾಡ)
೯ ರಾವ್ ಸಾಹೆಬ್ ಶ್ರೀಮಾನ್ ಪಿ. ಜಿ. ಹಳಕಟ್ಟಿಯವರು, ಬಿ.ಎ., ಎಲ್‌ಎಲ್.ಬಿ. (ಬಿಜಾಪುರ)
೧೦ ಶ್ರೀಮಾನ್ ಆರ್ಕಾಟು ಭೀಮಾಚಾರ್ಯರು, ಎಂ.ಎ. (ಬಳ್ಳಾರಿ)

**೫. ಪರಿಷತ್ತಿನ ವಾಙ್ಮಯ ಕಾರ್ಯ ವಿಚಾರ.**—

**ಪರಿಷತ್ಪತ್ರಿಕೆ.**—ಈ ಸಂವತ್ಸರದಲ್ಲಿ ಪ್ರಮೋದ ಸಂವತ್ಸರದ ಪುಷ್ಯ ಮಾಸದ ಸಂಚಿಕೆಯನ್ನೂ, ಆಂಗೀರಸ ಸಂವತ್ಸರದ ಚೈತ್ರ ಮಾಸದ ಸಂಚಿಕೆಯನ್ನೂ ಪ್ರಕಟಿಸಲಾಯಿತು. ಬಾಕಿಯಿರುವ ಸಂಚಿಕೆಗಳನ್ನೂ ಬೇಗನೆ ಪ್ರಕಟಿಸಲು ಪ್ರಯತ್ನಗಳು ನಡೆದಿವೆ. ಅಲ್ಲದೆ, ಈ ಸಮ್ಮೇಳನಕ್ಕೆ ಸಂಬಂಧಪಟ್ಟ ಸಂಚಿಕೆಯನ್ನೂ ಶೀಘ್ರದಲ್ಲಿಯೇ ಹೊರಡಿಸಲು ಏರ್ಪಾಡು ಮಾಡಿದೆ.

**ಪೋಸ್ಟಾಫೀಸಿನ ನಮೂನೆಗಳು.**—ಈ ನಮೂನೆಗಳಲ್ಲಿಯ ಕನ್ನಡ ಭಾಷೆಯು ವ್ಯಾಕರಣ ಸಮ್ಮತವಾಗಿಲ್ಲವೆಂದೂ ಜನರಿಗೆ ಅರ್ಥವಾಗುವುದಿಲ್ಲವೆಂದೂ, ಆದುದರಿಂದ ಇದನ್ನು ಪೋಸ್ಟಾಫೀಸಿನ ಅಧಿಕಾರಿಗಳು ತಕ್ಕಂತೆ ತಿದ್ದಿಸಿ ಪ್ರಕಟಿಸಬೇಕೆಂದೂ ಪರಿಷತ್ಸಮ್ಮೇಳನಗಳಲ್ಲಿ ಮಾಡಿದ ಸಲಹೆಗಳನ್ನು ಆ ಅಧಿಕಾರಿಗಳು ಗಮನಿಸಿ, ಆ ನಮೂನೆಗಳನ್ನು ತಿದ್ದುವುದಕ್ಕಾಗಿ ನಮ್ಮಲ್ಲಿಗೆ ಕಳುಹಿಸಿದರು. ಅವನ್ನು ನಾವು ಜನರಿಗೆ ಅರ್ಥವಾಗುವಂತೆಯೂ ವ್ಯಾಕರಣ ಸಮ್ಮತವಾಗಿರುವಂತೆಯೂ

ಹಿಂದೆಯೇ ತಿದ್ದಿ ಕಳುಹಿಸಿರುವ ವಿಷಯವನ್ನು ತಿಳಿಸಿರುವೆವಷ್ಟೆ! ನಮ್ಮ ಸಲಹೆಗಳನ್ನು ಮುಂಬಯಿಯ ಪೋಸ್ಟುಮಾಸ್ಟರ್-ಜನರಲ್ ಅವರು ಅಂಗೀಕರಿಸಿ ಅವನ್ನು ನಾವು ತಿದ್ದಿದಂತೆ ಪುನರ್ಮುದ್ರಣ ಮಾಡಿಸಿದರು. ಆದರೆ ಅವುಗಳಲ್ಲಿ ಮುದ್ರಣದ ತಪ್ಪುಗಳು ಅನೇಕವಾಗಿರುವುದರಿಂದ ಈ ವಿಷಯವನ್ನು ಆ ಅಧಿಕಾರಿಗಳಿಗೆ ತಿಳಿಸಿದೆವು. ಈಚೆಗೆ ಆ ಅಧಿಕಾರಿಗಳು ಈ ವಿಷಯದಲ್ಲಿ ನಮ್ಮ ಸಹಾಯವನ್ನು ಮರಳಿ ಕೇಳಿದರಲ್ಲದೆ ಪೋಸ್ಟಾಫೀಸಿನ ಸೇವಿಂಗ್ಸು ಬ್ಯಾಂಕು ನಿಯಮಗಳನ್ನೂ, ಸಾಮಾನ್ಯ ಜನರಿಗೂ ಅರ್ಥವಾಗುವಂತೆ, ಕನ್ನಡಕ್ಕೆ ಪರಿವರ್ತನ ಮಾಡಿಕೊಡಬೇಕೆಂದೂ ಕೇಳಿದರು. ಈ ಕೆಲಸವನ್ನು ನೆರವೇರಿಸಲಾಗಿದೆ.

೬. **ವಾಚನ ಮಂದಿರ ಮತ್ತು ಪುಸ್ತಕ ಭಾಂಡಾಗಾರ.**—ಇವುಗಳ ಪ್ರಯೋಜನವನ್ನು ಮಹಾಜನರೂ ವಿದ್ಯಾರ್ಥಿಗಳೂ ಹೆಚ್ಚು ಹೆಚ್ಚಾಗಿ ಪಡೆಯುತ್ತಿದ್ದಾರೆ. ವಿಮರ್ಶೆಗಾಗಿ ಬಂದ ೫೦ ಪುಸ್ತಕಗಳಲ್ಲದೆ ಕೆಲವನ್ನು ಮಾತ್ರ ಬೆಲೆಗೆ ತೆಗೆದುಕೊಂಡು ಭಾಂಡಾಗಾರಕ್ಕೆ ಸೇರಿಸಲಾಯಿತು. ಪುಸ್ತಕ ಭಾಂಡಾಗಾರದಲ್ಲಿರುವ ಪುಸ್ತಕಗಳನ್ನು ವರ್ಗೀಕರಿಸಿ ಅವುಗಳ ಪಟ್ಟಿಯೊಂದನ್ನು ತಯಾರಿಸಿ ಮುದ್ರಣಕ್ಕೆ ಸಿದ್ಧಪಡಿಸುತ್ತಿದೆ.

ವಾಚನ ಮಂದಿರದಲ್ಲಿ ವಾಚಕರಿಗೆ ದೊರೆಯುವ ಪತ್ರಿಕೆಗಳು.—

**ಕನ್ನಡ.**—ರಾಜಹಂಸ, ಒಕ್ಕಲತನವೂ ಸಹಕಾರಿತನವೂ, ಕಂಠೀರವ, ರಾಷ್ಟ್ರಬಂಧು, ಸ್ವದೇಶಾಭಿಮಾನಿ, ವಿಶ್ವಕರ್ಣಾಟಕ, ವಿಶ್ವಬಂಧು, ವೃತ್ತಾಂತ ಪತ್ರಿಕೆ, ಜಯಕರ್ನಾಟಕ, ದೇಶೀಯ ವಿದ್ಯಾಶಾಲಾ ಪತ್ರಿಕೆ, ರಂಗಭೂಮಿ, ಮೈಸೂರು ವ್ಯಾವಸಾಯಿಕ ಮತ್ತು ಪರೀಕ್ಷಕ ಸಂಘದ ಪತ್ರಿಕೆ, ಕಲಾ, ಸುಬೋಧ, ಮಕ್ಕಳ ಪುಸ್ತಕ, ಶಿವಾನುಭವ, ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ.

**ತೆಲುಗು.**—ಆಂಧ್ರ ಸಾಹಿತ್ಯ ಪರಿಷತ್ಪತ್ರಿಕೆ.

**ಮರಾಠಿ.**—ವಿವಿಧ ಜ್ಞಾನ ವಿಸ್ತಾರ.

**ಇಂಗ್ಲಿಷು.**—The Daily Post, The Hindu, The Mysore Gazette, The Modern Review, The Indian Antiquary, The Quarterly Journal of the Mythic Society, The Andhra Historical Research Institute Magazine.

ಪರಿಷತ್ಪತ್ರಿಕೆಯ ವಿನಿಮಯಕ್ಕಾಗಿ ಬರುತ್ತಿರುವ ಮಾಸಪತ್ರಿಕೆ ಮೊದಲಾದ ನಿಯತಕಾಲಿಕ ಪತ್ರಿಕೆಗಳನ್ನು ಒಟ್ಟುಗೂಡಿಸಿ ತಕ್ಕಂತೆ ರಟ್ಟು ಕಟ್ಟಿಸಿ ಸಂಪುಟಗಳನ್ನಾಗಿ ಮಾಡುವ ಕಾರ್ಯವು ನಡೆಯುತ್ತಿದೆ.

೭. **ಪ್ರಚಾರ ಕಾರ್ಯ.**—ಪ್ರಸಿದ್ಧ ಗಮಕಿಗಳಾದ ಶ್ರೀಮಾನ್ ಎಸ್. ಜಿ. ಬಿಂದೂರಾಯರವರು ಈಗ ಸುಮಾರು ನಾಲ್ಕು ವರ್ಷಗಳಿಂದ ಪರಿಷತ್ತಿನ ಪರವಾಗಿ

ಕರ್ಣಾಟಕದ ನಾನಾ ಪ್ರಾಂತಗಳಲ್ಲಿ ಸುತ್ತುತ್ತ, ಅಲ್ಲಲ್ಲಿ ಕನ್ನಡ ಭಾರತ ಪಠನ ಮಾಡಿ, ಕನ್ನಡಿಗರಲ್ಲಿ ಭಾಷಾಭಿಮಾನವನ್ನು ಅಭಿವೃದ್ಧಿಗೊಳಿಸುತ್ತಿರುವರು. ಇವರಿಗಾಗುವ ಪ್ರಯಾಣದ ವೆಚ್ಚವನ್ನು ಪರಿಷತ್ತು ವಹಿಸಿಕೊಂಡಿದೆ. ಈ ವರುಷ ಇವರು ನಿಜಾಂ ಕರ್ಣಾಟಕದಲ್ಲಿಯೂ, ಮದರಾಸು ಕರ್ಣಾಟಕದಲ್ಲಿಯೂ (೧೯೩೨ನೆಯ ಜೂನ್, ಜೂಲೈ, ಆಗಸ್ಟು ತಿಂಗಳುಗಳಲ್ಲಿ) ವಾಚನಗಳನ್ನು, ಮುಂದೆ ಹೇಳುವ ಸ್ಥಳಗಳಲ್ಲಿ ನಡೆಯಿಸಿರುವರು:—ಕೊಪ್ಪಳ, ಕೂಡ್ಲಿಗಿ, ಬಳ್ಳಾರಿ, ಸೊಂಡೂರು, ಶಿರಗುಪ್ಪಿ, ಆದವಾನಿ, ಆಲೂರು, ರಾಯದುರ್ಗ, ತಂಬರಹಳ್ಳಿ, ಹರಪನಹಳ್ಳಿ.

ಶಿರಗುಪ್ಪಿ ಮತ್ತು ಸೊಂಡೂರಿನ ಪುರನಿವಾಸಿಗಳು ಪರಿಷತ್ತಿನ ಈ ಪ್ರಚಾರ ಕಾರ್ಯಕ್ಕಾಗಿ ಅಭಿನಂದನ ಪತ್ರಗಳನ್ನು ಕಳುಹಿಸಿರುತ್ತಾರೆ.

೮. ಸಮ್ಮೇಳನ.—ಕರ್ಣಾಟಕ ಸಾಹಿತ್ಯ ಪರಿಷತ್ತಿನ ಹದಿನೆಂಟನೆಯ ಸಮ್ಮೇಳನವು ೧೯೩೨ನೆಯ ಡಿಸೆಂಬರು ಕೊನೆಯ ವಾರದಲ್ಲಿ ಕೊಡಗು ಸೀಮೆಯ ಮುಖ್ಯ ಪಟ್ಟಣವಾದ ಮಡಿಕೇರಿಯಲ್ಲಿ ಬಹಳ ವಿಜೃಂಭಣೆಯಿಂದ ನಡೆಯಿತು. ಅದೇ ಸಮಯದಲ್ಲಿ ಕವಿ ಸಮ್ಮೇಳನವೂ ಅಲ್ಲಿಯೇ ಸೇರಿ ಕವಿತಾ ಪ್ರದರ್ಶನವೂ ಬಹಳ ಸಮರ್ಪಕವಾಗಿ ನೆರವೇರಿತು. ಈ ಸಮ್ಮೇಳನಗಳಿಗೆ ಕನ್ನಡ ದೇಶದ ನಾನಾ ಪ್ರಾಂತಗಳಿಂದ ಭಾಷಾ ಸೇವಕರನೇಕ ಮಂದಿ ಬಂದಿದ್ದರು. ಹಿಂದೆಯೇ ಕೊಡಗಿನಲ್ಲಿ ನಡೆಯಬೇಕೆಂದು ಸಂಕಲ್ಪ ಮಾಡಿದ್ದಂತೆ ಸಾಹಿತ್ಯ ಸಮ್ಮೇಳನವು ಈ ವರುಷ ಕೊಡಗಿನಲ್ಲಿ ನಡೆದುದು ಬಹಳ ಸಂತೋಷಕರವಾದ ವಿಷಯ. ಸಮ್ಮೇಳನಕ್ಕೆ ಹೊರಗಿನಿಂದ ಬಂದಿದ್ದ ಸುಮಾರು ೧೨೫ ಮಂದಿ ಪ್ರತಿನಿಧಿಗಳಿಗೂ, ಪ್ರೇಕ್ಷಕರಾಗಿ ಬಂದಿದ್ದ ಅನೇಕ ಮಂದಿಗೂ ಮಾಡಿದ್ದ ಏರ್ಪಾಡುಗಳೂ, ಸ್ವಾಗತ ಮಂಡಲಿಯ ಆದರಾತಿಥ್ಯಗಳೂ ಬಹಳ ಸಮರ್ಪಕವಾಗಿದ್ದು ಎಲ್ಲರನ್ನೂ ಬಹಳ ಸಂತೋಷಗೊಳಿಸಿದುವು. ಕೊಡಗಿನ ಪ್ರತಿನಿಧಿಗಳ ಸಂಖ್ಯೆ ೩೮೮. ಈ ಸಮ್ಮೇಳನದಲ್ಲಿ ಪ್ರತಿ ದಿನವೂ ಉತ್ಸಾಹಪೂರಿತರಾದ ಅನೇಕ ಮಂದಿ ಸಭಾಸದರು ನೆರೆದು ಕಾರ್ಯಕಲಾಪಗಳಿಗೆ ಬಹಳ ಆಸಕ್ತಿಯಿಂದ ಗಮನಕೊಡುತ್ತಿದ್ದರು. ಮಹಿಳೆಯರು ೩೦೦ಕ್ಕೆ ಕಡಿಮೆಯಿಲ್ಲದೆ ಪ್ರತಿ ಸಭೆಯನ್ನೂ ಅಲಂಕರಿಸುತ್ತಿದ್ದರು.

ಈ ಸಮ್ಮೇಳನಕ್ಕೆ ಹುಬ್ಬಳ್ಳಿಯಿಂದ ಪ್ರತಿನಿಧಿಗಳಾಗಿ ಬಂದಿದ್ದ ಶ್ರೀಮಾನ್ ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರಿಗಳವರು, ಹುಬ್ಬಳ್ಳಿಯ ಶ್ರೀ ಮೂರು ಸಾವಿರ ಮಠದ ಪರವಾಗಿ, ಸಾಹಿತ್ಯ ಸಮ್ಮೇಳನವು ಮುಂದಿನ ವರುಷ ಹುಬ್ಬಳ್ಳಿಯಲ್ಲಿ ಸೇರಬೇಕೆಂದು ಆಹ್ವಾನವನ್ನಿತ್ತರು.

೯. ಮಡಿಕೇರಿಯ (೧೮ನೆಯ) ಸಮ್ಮೇಳನದಲ್ಲಿ ಆದ ತೀರ್ಮಾನಗಳು.—

೧ನೆಯ ತೀರ್ಮಾನ.—ಮೈಸೂರು ಶ್ರೀಮನ್ಮಹಾರಾಜರವರು ಕನ್ನಡ ಭಾಷೆಯ ಏಳಿಗೆಗಾಗಿ ಅನುಗ್ರಹಿಸುತ್ತಿರುವ ಉದಾರಾಶ್ರಯಕ್ಕಾಗಿ ಭಕ್ತಿ ವಿಶ್ವಾಸ ಸಮರ್ಪಣೆ,

(೨) ಪರಿಷತ್ತಿನ ಉಪಾಧ್ಯಕ್ಷರಾಗಿದ್ದು ಪರಿಷತ್ತಿನ ಏಳಿಗೆಗಾಗಿ ಶ್ರಮಿಸಿ, ಪರಿಷತ್ತಿಗೆ ಒಂದು ಶಾಶ್ವತವಾದ ನೆಲೆಯನ್ನು ಸಂಪಾದಿಸಿಕೊಟ್ಟ ರಾಜಸಭಾ ಭೂಷಣ, ವಿದ್ಯಾಭೂಷಣ ಶ್ರೀಮಾನ್ ಕರ್ಪೂರ ಶ್ರೀನಿವಾಸರಾಯರವರ ನಿಧನಕ್ಕಾಗಿ ದುಃಖ ಪ್ರದರ್ಶನ.

(೩) ಕನ್ನಡ ನಾಡಿನ ಹೊರಗಣ ದೇಶದಲ್ಲಿ, ಹೆಚ್ಚು ಕನ್ನಡಿಗರಿರುವ ಪಟ್ಟಣಗಳಲ್ಲಿ, ಕನ್ನಡದ ಶಿಕ್ಷಣದ ಬಗ್ಗೆ ಅನುಕೂಲ್ಯಗಳನ್ನು ಕಲ್ಪಿಸುವ ವಿಚಾರ.

ಈ ತೀರ್ಮಾನವನ್ನು ಮುಂಬಯಿ, ಮದರಾಸು ಮತ್ತು ಹೈದರಾಬಾದಿನ ಸರಕಾರಗಳ ಛೀಫ್ ಸೆಕ್ರೆಟರಿಯವರಿಗೆ ಕಳುಹಿಸಲಾಯಿತು. ಮುಂಬಯಿ ಸರಕಾರದಿಂದ ಮಾತ್ರ ನಮ್ಮ ಪತ್ರವು ತಲುಪಿತೆಂದು ಉತ್ತರ ಬಂದಿದೆ.

(೪) ಕೊಡಗಿನಲ್ಲಿ ಪ್ರಾಥಮಿಕ ಶಿಕ್ಷಣವನ್ನು ಮಾಫಿಯಾಗಿ ಕೊಡುತ್ತಿರುವುದಕ್ಕಾಗಿ ಅಭಿನಂದನೆ; ಇದನ್ನು ಕಡ್ಡಾಯವಾಗಿಯೂ ಮಾಡಿಸಬೇಕೆಂದು ಸಲಹೆ.

ಈ ತೀರ್ಮಾನವನ್ನು ಕೊಡಗಿನ ವಿದ್ಯಾ ಇಲಾಖಾಧಿಕಾರಿಗಳಿಗೂ, ಸ್ಥಳೀಯ ಜಿಲ್ಲಾಧಿಕಾರಿಗಳಿಗೂ ಪೌರ ಸಭಾಧಿಕಾರಿಗಳಿಗೂ ಕಳುಹಿಸಲಾಯಿತು. ಮಡಿಕೇರಿಯ ಪೌರ ಸಭಾಧಿಕಾರಿಗಳು ಈ ವಿಷಯದಲ್ಲಿ ಪ್ರಯತ್ನಗಳನ್ನು ನಡೆಯಿಸಲಾಗುವುದೆಂದು ಉತ್ತರ ಕೊಟ್ಟಿರುತ್ತಾರೆ. ಇತರ ಅಧಿಕಾರಿಗಳಿಂದ ಇನ್ನೂ ಉತ್ತರ ಬಂದಿಲ್ಲ.

(೫) ಮದರಾಸಿನ ಎಸ್.ಎಸ್.ಎಲ್.ಸಿ. ಪರೀಕ್ಷೆಯ ಭಾಷೇತರ ಪಾಠ ವಿಷಯಗಳನ್ನು ದೇಶ ಭಾಷೆಯಲ್ಲಿ ಕಲಿಸುವುದಕ್ಕೂ ಪರೀಕ್ಷಿಸುವುದಕ್ಕೂ ಆ ಅಧಿಕಾರಿಗಳು ಸಮ್ಮತಿ ಕೊಟ್ಟುದಕ್ಕೆ ಅಭಿನಂದನ. ಆದರೆ ಕರ್ಣಾಟಕ ದೇಶದ ಉಪಾಧ್ಯಾಯರುಗಳು ಈ ವಿಷಯದಲ್ಲಿ ಉತ್ಸಾಹ ತೋರದಿರುವುದಕ್ಕಾಗಿ ವಿಷಾದ.

ಈ ತೀರ್ಮಾನವನ್ನು ಮೈಸೂರು, ಮುಂಬಯಿ, ಮದರಾಸು ಸರ್ಕಾರಗಳ ವಿದ್ಯಾಧಿಕಾರಿಗಳಿಗೂ, ಮದರಾಸಿನ ಎಸ್.ಎಸ್.ಎಲ್.ಸಿ. ಬೋರ್ಡಿನ ಅಧ್ಯಕ್ಷರಿಗೂ ತಿಳಿಸಲಾಯಿತು. ಮೈಸೂರಿನ ಅಧಿಕಾರಿಗಳು ಬರೆದಿರುವ ಪತ್ರದಲ್ಲಿ, ಚರಿತ್ರೆಯನ್ನೂ ಭೂಗೋಳವನ್ನೂ ದೇಶ ಭಾಷೆಯಲ್ಲಿ ಕಲಿಸಲು ಈ ದೇಶದ ದೊಡ್ಡ ಹೈಸ್ಕೂಲುಗಳ ಕೆಲವು ತರಗತಿಗಳಲ್ಲಿ ಏರ್ಪಡಿಸಿರುವುದಾಗಿಯೂ, ಸಾಧ್ಯವಾದಲ್ಲಿ ಮುಂದಣ ವರ್ಷದಿಂದ ಗಣಿತವನ್ನೂ ಕನ್ನಡ ಭಾಷೆಯಲ್ಲಿ ಕಲಿಸಲು ಏರ್ಪಾಡು ಮಾಡುವ ಪ್ರಯತ್ನಗಳು ನಡೆಯುತ್ತಿರುವುದಾಗಿಯೂ ತಿಳಿಸಿರುತ್ತಾರೆ. ಮದರಾಸಿನ ಅಧಿಕಾರಿಗಳು ನಮ್ಮ ಪತ್ರವು ತಲುಪಿತೆಂದು ಮಾತ್ರ ತಿಳಿಸಿರುತ್ತಾರೆ. ಇತರರಿಂದ ಉತ್ತರವೇನೂ ಬಂದಿಲ್ಲ.

(೬) ಕರ್ಣಾಟಕದ ವಿದ್ಯಾಶಾಲೆಗಳಲ್ಲಿ ಅಭ್ಯಾಸ ಮಾಡಬೇಕಾದ ಕನ್ನಡ ಭಾಷೆಯ ಪಠ್ಯ ಭಾಗಗಳನ್ನು ಆರಿಸಿ ಸಂಪಾದಿಸುವ ಮತ್ತು ಪಠ್ಯ ಪುಸ್ತಕಗಳನ್ನು ತಯಾರಿಸುವ ಕೆಲಸವನ್ನೂ, ಭಾಷೇತರ ವಿಷಯಗಳ ಪಠ್ಯ ಪುಸ್ತಕಗಳನ್ನು ಕನ್ನಡ ಭಾಷೆಯಲ್ಲಿ ತಯಾರಿಸುವ ಕೆಲಸವನ್ನೂ ಪರಿಷತ್ತಿಗೆ ವಹಿಸುವ ವಿಚಾರ.

ಈ ತೀರ್ಮಾನವನ್ನು ಮೈಸೂರು, ಮುಂಬಯಿ, ಮದರಾಸು ಸರ್ಕಾರಗಳ ವಿದ್ಯಾಧಿಕಾರಿಗಳಿಗೂ, ಧಾರವಾಡ, ಬೆಳಗ್ಗಾಂವಿ, ಬಿಜಾಪುರ ಮತ್ತು ಕಾರವಾರದ ಜಿಲ್ಲಾಧಿಕಾರಿಗಳಿಗೂ ತಿಳಿಸಲಾಯಿತು. ಮೈಸೂರು ವಿದ್ಯಾಧಿಕಾರಿಗಳು ಈ ವಿಷಯಕ್ಕೆ ತಕ್ಕ ಗಮನ ಕೊಡಲಾಗುವುದೆಂದು ಬರೆದಿರುತ್ತಾರೆ. ಮುಂಬಯಿ ವಿದ್ಯಾಧಿಕಾರಿಗಳು ನಮ್ಮ ಪತ್ರವು ತಲುಪಿತೆಂದು ಮಾತ್ರ ತಿಳಿಸಿರುತ್ತಾರೆ. ಧಾರವಾಡದ ಜಿಲ್ಲಾ ಸ್ಕೂಲ್ ಬೋರ್ಡಿನ ಅಧ್ಯಕ್ಷರು ಈ ತೀರ್ಮಾನವನ್ನು, ಈ ಪ್ರಸ್ತಾವ ಬಂದಾಗ, ಬೋರ್ಡಿನವರು ಸಹಾನುಭೂತಿಯಿಂದ ವಿಚಾರ ಮಾಡುವರೆಂದು ಬರೆದಿರುತ್ತಾರೆ. ಕಾರವಾರದ ಜಿಲ್ಲಾ ಬೋರ್ಡಿನ ಅಧ್ಯಕ್ಷರು ಬರೆದಿರುವ ಪತ್ರದಲ್ಲಿ—ಈ ಜಿಲ್ಲೆಯ ಪಾಠಶಾಲೆಗಳಲ್ಲಿ ಈಗ ಉಪಯೋಗಿಸುತ್ತಿರುವ ಕನ್ನಡ ಪಠ್ಯಪುಸ್ತಕಗಳು ಬಹಳ ಕಾಲದ ಹಿಂದೆ ತಯಾರಾದುವೆಂದೂ, ಅವನ್ನು ಈ ಕಾಲಕ್ಕೆ ತಕ್ಕಂತೆ ತಿದ್ದುವುದು ಆವಶ್ಯಕವೆಂದೂ, ಈ ವಿಷಯದಲ್ಲಿ ಕಾರ್ಯ ನಡೆಯಿಸಬೇಕೆಂದು ಬೋರ್ಡಿನವರು ಆಲೋಚಿಸುತ್ತಿರುವರೆಂದೂ, ಈ ಜಿಲ್ಲೆಯು ಬಹಳ ಸಣ್ಣದಾಗಿರುವುದರಿಂದ ಈ ಆಧಿಪತ್ಯದ ಇತರ ಜಿಲ್ಲೆಗಳೊಡನೆ ಈ ವಿಷಯವನ್ನು ಪ್ರಸ್ತಾವಿಸದೆ ಕೆಲಸವನ್ನು ಕೈಕೊಂಡಲ್ಲಿ, ತಯಾರಾದ ಪುಸ್ತಕಗಳ ಪ್ರತಿಗಳು ಹೆಚ್ಚಾಗಿ ಖರ್ಚಾಗದೆ ಪರಿಷತ್ತಿನ ಶ್ರಮಕ್ಕೆ ತಕ್ಕ ಪ್ರತಿಫಲ ದೊರೆಯದೆ ಹೋಗುವ ಸಂಭವವಿರುವುದರಿಂದ ಪರಿಷತ್ತಿನವರು ಈ ಆಧಿಪತ್ಯದ ಇತರ ಜಿಲ್ಲೆಗಳಲ್ಲಿಯ ಬೋರ್ಡುಗಳೊಡನೆಯೂ ಈ ವಿಷಯವನ್ನು ದಯುವಿಟ್ಟು ಪ್ರಸ್ತಾವಿಸಬೇಕೆಂದೂ, ಅವರು ಒಪ್ಪುವುದಾದರೆ, ಈ ತಿದ್ದುವ ಕಾರ್ಯವನ್ನು ಪರಿಷತ್ತಿಗೆ ಒಪ್ಪಿಸಲು ಆ ಬೋರ್ಡುಗಳವರೊಡನೆ ತಾವೂ ಸಂತೋಷದಿಂದ ಸಹಕರಿಸುವೆವೆಂದೂ, ಈ ಆಧಿಪತ್ಯದ ನಾಲ್ಕು ಜಿಲ್ಲೆಗಳಲ್ಲಿಯೂ ಕನ್ನಡ ಪಠ್ಯಪುಸ್ತಕಗಳೂ, ಚರಿತ್ರೆ, ಭೂಗೋಳ, ವಿಜ್ಞಾನ ಮೊದಲಾದ ಭಾಷೇತರ ವಿಷಯಗಳ ಪುಸ್ತಕಗಳೂ ಏಕರೂಪತೆಯಿಂದಿರುವುದು ಎಲ್ಲ ಸಂದರ್ಭಗಳಿಗೂ ಅನುಕೂಲವೆಂದೂ, ಈ ವಿಚಾರವಾಗಿ ಪರಿಷತ್ತಿನವರು ನಡೆಯಿಸಬೇಕೆಂದಿರುವ ಕಾರ್ಯವೇನೆಂಬುದನ್ನು ಈ ಬೋರ್ಡಿಗೆ ದಯುವಿಟ್ಟು ತಿಳಿಸಬೇಕೆಂದೂ ಬರೆದಿರುತ್ತಾರೆ.

ಇತರರಿಂದ ಉತ್ತರ ಬಂದಿಲ್ಲ.

(೭) ಮದರಾಸು ವಿಶ್ವವಿದ್ಯಾನಿಲಯದ ಪ್ರೆಸಿಡೆನ್ಸೀ ಕಾಲೇಜಿನಲ್ಲಿ ಕನ್ನಡ ಆನರ್ಸ್ ತರಗತಿಯನ್ನು ತೆರೆಯುವ ವಿಚಾರ.—

ಈ ತೀರ್ಮಾನವನ್ನು ಮದರಾಸು ಸರ್ಕಾರದ ಛೀಫ್ ಸೆಕ್ರೆಟರಿಯವರಿಗೆ ಕಳುಹಿಸಲಾಯಿತು. ಅವರಿಂದ ಉತ್ತರವೇನೂ ಬಂದಿರುವುದಿಲ್ಲ.

(೮) ಧಾರವಾಡದ ಕರ್ಣಾಟಕ ಕಾಲೇಜಿನ ಕನ್ನಡ ಪ್ರೊಫೆಸರರಿಗೆ, ಉಳಿದ ವಿಷಯಗಳ ಪ್ರೊಫೆಸರರುಗಳಿಗಿರುವಂತೆಯೇ, ಸ್ಥಾನ ಮಾನ್ಯತೆ ಕೊಡಬೇಕೆಂಬ ವಿಚಾರ.

ಈ ತೀರ್ಮಾನವನ್ನು ಮುಂಬಯಿ ಸರ್ಕಾರದ ಛೀಫ್ ಸೆಕ್ರೆಟರಿಯವರಿಗೆ ಕಳುಹಿಸಲಾಯಿತು. ನಮ್ಮ ಪತ್ರವು ತಲುಪಿರುವುದೆಂದು ಮಾತ್ರ ವಿದ್ಯಾ ಇಲಾಖೆಯ ಸೆಕ್ರೆಟರಿಯವರಿಂದ ಉತ್ತರ ಬಂದಿದೆ.

(೯) ಕನ್ನಡ ಕಾವ್ಯಗಳ ವಿಮರ್ಶಾತ್ಮಕ ಗ್ರಂಥಗಳನ್ನು ಬರೆಯಿಸುವ ವಿಚಾರ.

ಈ ತೀರ್ಮಾನವನ್ನು ಮೈಸೂರು, ಮುಂಬಯಿ, ಮದರಾಸು ವಿಶ್ವವಿದ್ಯಾನಿಲಯಗಳ ರೆಜಿಸ್ಟ್ರಾರವರಿಗೆ ಕಳುಹಿಸಲಾಯಿತು. ಮುಂಬಯಿ ವಿಶ್ವವಿದ್ಯಾನಿಲಯದಿಂದ ಮಾತ್ರ ಉತ್ತರ ಬಂದಿದೆ. ಈ ವಿಷಯಕ್ಕೆ ಗಮನ ಕೊಡುತ್ತಿರುವುದಾಗಿ ಅಲ್ಲಿಯ ರೆಜಿಸ್ಟ್ರಾರವರು ತಿಳಿಸುತ್ತಾರೆ. ಕರ್ಣಾಟಕ ಸಾಹಿತ್ಯ ಪರಿಷತ್ತು ಅನುಕೂಲ ದೊರೆತಂತೆ ಈ ಕಾರ್ಯವನ್ನು ನೆರವೇರಿಸಲು ಸಿದ್ಧವಾಗಿರುತ್ತದೆ.

(೧೦) ಹೈದರಾಬಾದಿನಲ್ಲಿರುವ ಶಾಸನಗಳ ಪ್ರಕಟನ ಕಾರ್ಯವನ್ನು ಸ್ಥಾನಿಕ ಖಾಸಗಿ ಸಂಸ್ಥೆಗಳಿಗೆ ವಹಿಸಬೇಕೆಂಬ ವಿಚಾರ.

ಈ ತೀರ್ಮಾನವನ್ನು ನಿಜಾಂ ಸರ್ಕಾರದ ಛೀಫ್ ಸೆಕ್ರೆಟರಿಯವರಿಗೆ ಕಳುಹಿಸಲಾಯಿತು. ಅವರಿಂದ ಉತ್ತರವೇನೂ ಬಂದಿಲ್ಲ.

(೧೧) ಕನ್ನಡ ಉದ್ಗ್ರಂಥಗಳನ್ನು ವಿಶ್ವವಿದ್ಯಾನಿಲಯಗಳವರು ಪ್ರಕಟಮಾಡಿಸುವ ವಿಚಾರ.

ಈ ತೀರ್ಮಾನವನ್ನು ಮೈಸೂರು, ಮುಂಬಯಿ, ಮದರಾಸು ವಿಶ್ವವಿದ್ಯಾನಿಲಯಗಳ ರೆಜಿಸ್ಟ್ರಾರವರಿಗೆ ಕಳುಹಿಸಲಾಯಿತು. ಮುಂಬಯಿ ವಿಶ್ವವಿದ್ಯಾನಿಲಯದಿಂದ ಮಾತ್ರ ಉತ್ತರ ಬಂದಿದೆ. ಈ ವಿಷಯಕ್ಕೆ ಗಮನ ಕೊಡುತ್ತಿರುವುದಾಗಿ ಅಲ್ಲಿಯ ರೆಜಿಸ್ಟ್ರಾರವರು ತಿಳಿಸುತ್ತಾರೆ.

(೧೨) ಪರಿಷತ್ಸಮ್ಮೇಳನ ಕಾಲದಲ್ಲಿ ಸ್ಥಳೀಯ ಗಮಕಿಗಳ ನೈಪುಣ್ಯ ಪ್ರದರ್ಶನಗಳನ್ನೇರ್ಪಡಿಸಿ ಅವರಿಗೆ ಬಹುಮಾನಗಳನ್ನು ಕೊಡುವ ವಿಚಾರ.

ಈ ತೀರ್ಮಾನವನ್ನು ಹುಬ್ಬಳ್ಳಿಯ ಪರಿಷತ್ಸಮ್ಮೇಳನದ ಸ್ವಾಗತ ಮಂಡಲಿಯ ಕಾರ್ಯದರ್ಶಿಯವರಿಗೆ ಕಳುಹಿಸಲಾಗಿದೆ.

(೧೩) ಕೆಲವು ಕನ್ನಡ ಪದಗಳು ಬೇರೆ ಬೇರೆ ಪ್ರಾಂತಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಪ್ರಯೋಗವಾಗುತ್ತಿರುವ ಅವ್ಯವಸ್ಥೆಯನ್ನೂ, ಕೆಲವು ಸಂಸ್ಕೃತ ಪದಗಳು ಕನ್ನಡದಲ್ಲಿ ತಪ್ಪು ರೀತಿಯಲ್ಲಿ ಪ್ರಯೋಗವಾಗುತ್ತಿರುವುದನ್ನೂ ತಪ್ಪಿಸಿ ಇವುಗಳನ್ನು ಒಂದು ಕ್ರಮಕ್ಕೆ ತರಲು ಪರಿಷತ್ತಿನವರು ಒಂದು ಉಪ ಸಮಿತಿಯನ್ನು ಏರ್ಪಡಿಸುವ ವಿಚಾರ.

ಈ ವಿಷಯವು ಪರಿಷತ್ತಿನ ಪರ್ಯಾಲೋಚನೆಯಲ್ಲಿದೆ.

(೧೪) ಭಾಷಾ ಶಾಸ್ತ್ರ ವಿಷಯಕವಾದ ಪುಸ್ತಕಗಳನ್ನು ಕನ್ನಡದಲ್ಲಿ ಬರೆಯಿಸುವ ವಿಚಾರ.

ಈ ತೀರ್ಮಾನವನ್ನು ಮೈಸೂರು, ಮುಂಬಯಿ, ಮದರಾಸು ವಿಶ್ವವಿದ್ಯಾನಿಲಯಗಳ ರೆಜಿಸ್ಟ್ರಾರವರಿಗೆ ತಿಳಿಸಲಾಯಿತು. ಮುಂಬಯಿ ವಿಶ್ವವಿದ್ಯಾನಿಲಯದಿಂದ ಮಾತ್ರ

ಉತ್ತರ ಬಂದಿದೆ. ಈ ವಿಷಯಕ್ಕೆ ಗಮನ ಕೊಡುತ್ತಿರುವುದಾಗಿ ಅಲ್ಲಿಯ ರೆಜಿಸ್ಟ್ರಾರರವರು ತಿಳಿಸಿರುತ್ತಾರೆ.

(೧೫) ಪರಿಷತ್ತಿನವರು ತಮ್ಮ ಪ್ರಚಾರಕರನ್ನು ಕೊಡಗಿಗೂ ಕರ್ಣಾಟಕದ ಇತರ ಪ್ರಾಂತಗಳಿಗೂ ಕಳುಹಿಸುವ ವಿಚಾರ.

ಕಾರ್ಯ ನಿರ್ವಾಹಕ ಮಂಡಲಿಯ ಸದಸ್ಯರು ವೀರರಾಜಪೇಟೆ, ಪೊನ್ನಂಪೇಟೆ, ಪುತ್ತೂರು, ಗದಗು, ಹುಬ್ಬಳ್ಳಿ, ಧಾರವಾಡ, ದಾವಣಗೆರೆ, ಅನಂತಪುರ, ಚಿಕ್ಕಮಗಳೂರು, ಶಿವಮೊಗ್ಗ, ಹಾಸನ, ಕೋಲಾರ, ದೊಡ್ಡಬಳ್ಳಾಪುರ, ಮಂಡ್ಯ—ಇವೇ ಮೊದಲಾದ ಸ್ಥಳಗಳಲ್ಲಿ ಪ್ರಚಾರ ಕಾರ್ಯವನ್ನು ನಡೆಯಿಸಿರುತ್ತಾರೆ.

(೧೬) ಕೊಡಗಿನ ಶಾಸನಗಳ ಮತ್ತು ಚರಿತ್ರೆಗೆ ಸಂಬಂಧಪಟ್ಟ ಲೇಖನಗಳ ವಿಚಾರಗಳು ಚರಿತ್ರ ಸಂಶೋಧಕರಿಗೆ ದೊರೆಯುವಂತೆ ಏರ್ಪಡಿಸುವ ವಿಚಾರ.

ಕೊಡಗಿನ ಸರ್ಕಾರದ ಛೀಫ್ ಸೆಕ್ರೆಟೆರಿಯವರಿಗೆ ಈ ತೀರ್ಮಾನವನ್ನು ಕಳುಹಿಸಲಾಗಿದೆ. ಅವರಿಂದ ಉತ್ತರವೇನೂ ಬಂದಿಲ್ಲ.

(೧೭) ಕರ್ಣಾಟಕ ನಿಘಂಟುವನ್ನೂ ವಿಶ್ವಕೋಶವನ್ನೂ ವ್ಯಾಕರಣವನ್ನೂ ರಚಿಸಲು ಪರಿಷತ್ತಿನವರು ಏರ್ಪಾಡು ಮಾಡುವ ವಿಚಾರ.

ಮೈಸೂರು ವಿಶ್ವವಿದ್ಯಾನಿಲಯದವರು ಇಂಗ್ಲಿಷು–ಕನ್ನಡ ನಿಘಂಟುವನ್ನು ರಚಿಸಲು ಏರ್ಪಡಿಸಿರುವ ಸಮಿತಿಗೆ ಪರಿಷತ್ತು ತನ್ನ ಕಟ್ಟಡದಲ್ಲಿ ವಸತಿಯನ್ನೂ ಪುಸ್ತಕ ಭಾಂಡಾಗಾರದ ಉಪಯೋಗವನ್ನೂ ಕೊಟ್ಟಿದೆ.

೧೦. ಆಯ ವ್ಯಯ.—ಇದರ ಪಟ್ಟಿಯನ್ನು ೧೪, ೧೫ನೆಯ ಪುಟಗಳಲ್ಲಿ ಕೊಟ್ಟಿದೆ. ಅಂಗೀರಸ ಸಂವತ್ಸರಾದಿಯಲ್ಲಿ ನಮ್ಮಲ್ಲಿದ್ದ ಮೊಬಲಗು ರೂ. ೫,೫೬೮–೩–೮. ಈ ವರ್ಷ ವಸೂಲಾದುದು ರೂ. ೧೦,೫೭೭–೭–೫; ಒಟ್ಟು ರೂ. ೧೬,೦೯೫–೧೧–೧. ಈ ವರ್ಷ ವೆಚ್ಚವಾದ ಮೊಬಲಗು ರೂ. ೧೦,೧೯೮–೧೩–೦. ವ್ಯಯಕ್ಕಿಂತಲೂ ಆಯವು ರೂ. ೩೭೮–೧೦–೫ ಹೆಚ್ಚಾಗಿದೆ. ಈಗ ಶಿಲ್ಕು ನಿಂತಿರುವ ಮೊಬಲಗಿಗಿಂತಲೂ (ರೂ. ೫,೮೯೬–೧೪–೧) ಜೀವಾವಧಿ ಸದಸ್ಯರಿಂದ ಬಂದಿರುವ ಚಂದಾ ಮೊಬಲಗು (ರೂ. ೬,೬೫೪–೧೩–೦) ಹೆಚ್ಚಾಗಿದೆ. ಮೈಸೂರು ಶ್ರೀಮದ್ಯುವರಾಜರವರು ವಿಜ್ಞಾನ ಗ್ರಂಥ ಪ್ರಕಟನೆಗಾಗಿ ದಯಪಾಲಿಸಿದ ಅಸಲು ಮೊಬಲಗಿನಲ್ಲಿ ಇನ್ನೂ ವೆಚ್ಚವಾಗದೆ ಇರುವ ಮೊಬಲಗು ರೂ. ೫೦೩.

ಅಂಗೀರಸ ಸಂವತ್ಸರದ ಪರಿಷತ್ತಿನ ಲೆಕ್ಕಗಳನ್ನು ಪರಿಶೀಲಿಸಿ ಅಭಿಪ್ರಾಯ ಕೊಟ್ಟಿರುವುದಕ್ಕಾಗಿ ಮೈಸೂರು ಸರ್ಕಾರದ ಕಂಟ್ರೋಲರ್ ಆಫೀಸಿನ ಸೂಪರಿಂಟೆಂಡೆಂಟರಾದ ಶ್ರೀಮಾನ್ ಕೆ. ನಾರಾಯಣಸ್ವಾಮಿ ಅಯ್ಯಂಗಾರ್ಯರವರಿಗೆ ಪರಿಷತ್ತು ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಅರ್ಪಿಸಬೇಕು.

**೧೧. ಪರಿಷತ್ತಿನ ಕಟ್ಟಡ.**—ಮೈಸೂರು ಶ್ರೀಮನ್ಮಹಾರಾಜರವರ ಉದರಾಶ್ರಯದಲ್ಲಿ ಆರಂಭಿಸಿದ ಈ ಕಟ್ಟಡದ ಕೆಲಸವು ಪೂರ್ತಿಯಾಗಿ ಇದೇ ಜ್ಯೇಷ್ಠ ಶುದ್ಧ ಪಂಚಮಿ ಸೋಮವಾರ (೧೯೩೩ನೆಯ ಇಸವಿ ಮೇ ೨೯ರಲ್ಲಿ) ಗೃಹ ಪ್ರವೇಶ ಮಾಡಲಾಯಿತು. ಈ ಕಟ್ಟಡಕ್ಕಾಗಿ ಇದುವರೆಗೆ (೧೯೩೩ರ ಅಕ್ಟೋಬರು ಅಂತ್ಯದ ವರೆಗೆ) ವೆಚ್ಚವಾಗಿರುವ ಮೊಬಲಗು ರೂ. ೩೧,೧೧೧. ಇದಕ್ಕಾಗಿ ಮೈಸೂರು ಶ್ರೀಮನ್ಮಹಾರಾಜರವರ ಸರ್ಕಾರದಿಂದ ಇದುವರೆಗೆ (೧೯೩೩ರ ಅಂತ್ಯದ ವರೆಗೆ) ಬಂದಿರುವ ಮೊಬಲಗು ರೂ. ೧೫,೧೧೧; ಇನ್ನೂ ಬರಬೇಕಾದುದು ರೂ. ೫೮೯; ಪರಿಷತ್ತಿನ ಚಾಲತಿ ವರಮಾನದಿಂದ ಈ ಕೆಲಸಕ್ಕಾಗಿ ಕೊಟ್ಟಿರುವ ಮೊಬಲಗು ರೂ. ೩,೦೦೦.

ಮೈಸೂರು ಶ್ರೀಮನ್ಮಹಾರಾಜರವರಿಂದಲೂ ಶ್ರೀಮದ್ಯುವರಾಜರವರಿಂದಲೂ ಹಿಂದೆ ನಮ್ಮ ಅಧ್ಯಕ್ಷರಾಗಿದ್ದ ದಿವಂಗತ ಸರದಾರ್ ಶ್ರೀ ಸರ್ ಎಂ. ಕಾಂತರಾಜ ಅರಸಿನವರಿಂದಲೂ ಉದಾರ ಸಹಾಯವನ್ನು ಪಡೆದು, ವಿಶೇಷ ಆಸಕ್ತಿಯನ್ನು ವಹಿಸಿ, ಪರಿಷತ್ತಿಗೆ ಸ್ಥಿರವಾದ ಒಂದು ನೆಲೆಯನ್ನು ಮಾಡಿಕೊಟ್ಟ ಕೀರ್ತಿಯು ನಮ್ಮ ಉಪಾಧ್ಯಕ್ಷರಾಗಿದ್ದ ದಿವಂಗತ ಶ್ರೀಮಾನ್ ಕರ್ಪೂರ ಶ್ರೀನಿವಾಸರಾಯರಿಗೆ ವಿಶೇಷವಾಗಿ ಸಲ್ಲತಕ್ಕದ್ದಾಗಿದೆ.

**೧೨. ಪರಿಷತ್ತಿನ ಅಂಗ ಸಂಸ್ಥೆಗಳು.**—೧೯೩೨ನೆಯ ಡಿಸೆಂಬರು ತಿಂಗಳಲ್ಲಿ ಮಡಿಕೇರಿಯಲ್ಲಿ ನಡೆದ ಪರಿಷತ್ತಿನ ವಾರ್ಷಿಕಾಧಿವೇಶನದಲ್ಲಿ ತೀರ್ಮಾನವಾದಂತೆ, ಕಾರ್ಯ ನಿರ್ವಾಹಕ ಮಂಡಲಿಯವರು ಆ ಅಂಗ ಸಂಸ್ಥೆಗಳ ವಿಚಾರಕ್ಕಾಗಿ ನಿಯಮಿತ ವಾದ ಉಪಸಮಿತಿಯು ಒಪ್ಪಿಸಿದ ನಿಬಂಧನಾವಳಿಗೆ, ೧೯೩೩ನೆಯ ಮಾರ್ಚಿ ೨೬ನೆಯ ತಾರೀಖಿನಲ್ಲಿ ನಡೆದ ಅಧಿವೇಶನದಲ್ಲಿ, ಒಪ್ಪಿಗೆ ಕೊಟ್ಟು ಅವನ್ನು ಕೂಡಲೆ ಪ್ರಚಾರಕ್ಕೂ ಆಚರಣೆಗೂ ತಂದರು.

ಈ ನಿಯಮಗಳನ್ನನುಸರಿಸಿ ದರಖಾಸ್ತು ಮಾಡಿಕೊಂಡ ಕುಮಟದ ಕರ್ಣಾಟಕ ಸಂಘವನ್ನು ೧೯೩೩ನೆಯ ನವೆಂಬರು ೫ನೆಯ ತಾರೀಖಿನಲ್ಲಿ ನಡೆದ ಕಾರ್ಯ ನಿರ್ವಾಹಕ ಮಂಡಲಿಯ ಅಧಿವೇಶನದಲ್ಲೂ, ಬೆಂಗಳೂರು ಮತ್ತು ಮೈಸೂರು ಕಾಲೇಜುಗಳ ಕರ್ಣಾಟಕ ಸಂಘಗಳನ್ನು ೧೯೩೩ನೆಯ ಡಿಸೆಂಬರು ೧೦ನೆಯ ತಾರೀಖಿನಲ್ಲಿ ನಡೆದ ಅಧಿವೇಶನದಲ್ಲೂ ಪರಿಷತ್ತಿನ ಅಂಗ ಸಂಸ್ಥೆಗಳನ್ನಾಗಿ ಅಂಗೀಕರಿಸಲಾಯಿತು. ಕರ್ಣಾಟಕದ ನಾನಾ ಪ್ರಾಂತಗಳಲ್ಲಿಯ ಇತರ ಕರ್ಣಾಟಕ ಸಂಘಗಳೂ ಹೀಗೆಯೇ ಬೇಗನೆ ಪರಿಷತ್ತಿನ ಅಂಗ ಸಂಸ್ಥೆಗಳಾಗುವುವೆಂದು ಹಾರೈಸುತ್ತೇವೆ.

**೧೩. ಉಪಸಂಹಾರ.**—ಮಹನೀಯರೆ! ಪರಿಷತ್ತು ಸ್ಥಾಪನೆಯಾಗಿ ಇಂದಿಗೆ ೧೮ ವರುಷಗಳಾದುವು. ಈ ಸಂಸ್ಥೆಯು ಕರ್ಣಾಟಕದ ನಾನಾ ಪ್ರಾಂತಗಳಲ್ಲಿ ಸಂಚಾರ ಮಾಡಿ ಕನ್ನಡಿಗರೆಲ್ಲರ ವಿಶ್ವಾಸಕ್ಕೆ ಪಾತ್ರವಾಗಿದೆ. ಈ ಸಂಸ್ಥೆಯಿಂದ ಕನ್ನಡ ಭಾಷಾಭಿವೃದ್ಧಿಯ ಕಾರ್ಯವು ಇಷ್ಟುಮಟ್ಟಿಗೆ ನಡೆಯಲು ಕರ್ಣಾಟಕ ಸಿಂಹಾಸನಾಧೀಶ್ವರರ ಮತ್ತು ಅವರ ಮನೆತನದ, ಮತ್ತು ಅವರ ಸರ್ಕಾರದ ಉದಾರಾಶ್ರಯದಿಂದಲೂ, ಅಖಿಲ ಕರ್ಣಾಟಕದ ಮಹಾಜನರ ಅಭಿಮಾನದಿಂದಲೂ ಸಾಧ್ಯ

ವಾಯಿತು. ಆದರೆ, ಸುಮಾರು ೧೪೦ ಕೋಟಿ ಕನ್ನಡ ಪ್ರಜೆಯುಳ್ಳ ಕರ್ಣಾಟಕದ ಸೇವೆಗಾಗಿ ದುಡಿಯುತ್ತಿರುವ ಕರ್ಣಾಟಕ ಸಾಹಿತ್ಯ ಪರಿಷತ್ತು ತನ್ನ ಧ್ಯೇಯಗಳನ್ನು ಸಮರ್ಪಕವಾಗಿ ನೆರವೇರಿಸಲು ಇನ್ನೂ ಬಹಳ ಹೆಚ್ಚಾದ ಸಹಾಯ ಸಂಪತ್ತಿಗಳು ಮಹಾಜನರಿಂದ ದೊರೆಯಬೇಕೆಂದು ನಿರೀಕ್ಷಿಸುವುದು ಸಹಜವಾಗಿದೆ. ಮೈಸೂರು ಶ್ರೀಮನ್ಮಹಾರಾಜರವರ ಸರ್ಕಾರದ ಸಹಾಯವು, ಈಗ ಎಲ್ಲೆಲ್ಲಿಯೂ ಬಾಧಿಸು ತ್ತಿರುವ ದ್ರವ್ಯಾಭಾವದಿಂದ, ನಿಂತುಹೋಗುವುದೇನೂ ಅಸಂಭವವಲ್ಲ. ಈ ವಿಚಾರವು ಕರ್ಣಾಟಕದಲ್ಲಿಯ ಪ್ರತಿ ಪ್ರಾಂತದ ಪ್ರಮುಖ ಕನ್ನಡಿಗರಲ್ಲಿಯೂ ಮೂಡಿ, ಸಕಲ ಕರ್ಣಾಟಕಕ್ಕೂ ಕೇವಲ ಉಪಯುಕ್ತವೂ ಗೌರವಾರ್ಹವೂ ಆದ ಈ ಸಂಸ್ಥೆಯು ಚಿರಕಾಲ ಬಾಳಿ ಬೆಳಗುವಂತೆ ಮಾಡಲು ಶ್ರೀ ಪರಮೇಶ್ವರನು ಅನುಗ್ರಹಿಸಲಿ ಎಂಬುದೇ ನಮ್ಮ ಪ್ರಾರ್ಥನೆ.

ಬೆಂಗಳೂರು
೧೦ನೆಯ ಡಿಸೆಂಬರು ೧೯೩೩

(ಕಾರ್ಯ ನಿರ್ವಾಹಕ ಮಂಡಲಿಯ ಅಪ್ಪಣೆಯ ಮೇರೆಗೆ)

ಸಿ. ಕೆ. ವೆಂಕಟರಾಮಯ್ಯ
ಗೌರವ ಕಾರ್ಯದರ್ಶಿ

# ಕರ್ಣಾಟಕ ಸಾಹಿತ್ಯ ಪರಿಷತ್ತು

## ಆಸ್ತಿ ಋಣಗಳ ಪಟ್ಟಿ

(೧೯೩೩ನೆಯ ಇಸವಿ ಏಪ್ರಿಲ್ ೧ನೆಯ ತಾರೀಖಿನಲ್ಲಿದ್ದಂತೆ)

| ಆಸ್ತಿ | ರೂ. ಆ. ಪೈ | ಋಣ | ರೂ. ಆ. ಪೈ |
|---|---|---|---|
| ಪರಿಷತ್ತಿನ ಕಟ್ಟಡ (ಸುಮಾರು) | ೩೩,೦೦೦—೦—೦ | ಸಿಬ್ಬಂದಿಯ ವೆಚ್ಚ | ೬೭—೦—೦ |
| | | ಮನೆಯ ಬಾಡಿಗೆ | ೩೦—೦—೦ |
| ಸರ್ಕಾರದ ಗ್ರಾಂಟು | ೧೫೦—೦—೦ | ದೀಪದ ವೆಚ್ಚ | ೩—೪—೬ |
| ಬರಬಹುದಾದ ಚಂದಾ ಹಣ (ಸುಮಾರು) | ೧,೦೦೦—೦—೦ | ಜೀವಾವಧಿ ಸದಸ್ಯರ ಚಂದಾ ಮೊಬಲಗು | ೬,೬೫೪—೧೩—೦ |
| ಡಿಪಾಜಿಟ್ಟುಗಳು | ೫,೮೫೪—೧—೫ | | |
| ನಗದು ಹಣ | ೪೨—೧೨—೮ | ವೈಜ್ಞಾನಿಕ ಗ್ರಂಥ ಪ್ರಕಟನೆಯ ಹಣ (ಸುಮಾರು) | ೧,೩೬೦—೦—೦ |
| ಡಿಪಾಜಿಟ್ಟುಗಳ ಬಡ್ಡಿ (ಸುಮಾರು) | ೧೦೦—೦—೦ | | |
| ಕೈಯಲ್ಲಿರುವ ಅಚ್ಚಿನ ಕಾಗದ (ಸುಮಾರು) | ೫—೦—೦ | ಋಣಕ್ಕಿಂತಲೂ ಆಸ್ತಿಯ ಹೆಚ್ಚು | ೪೧,೦೪೭—೬—೭ |
| ಕೈಯಲ್ಲಿರುವ ಪುಸ್ತಕಗಳ ಬೆಲೆ (ಸುಮಾರು) | ೩,೦೦೦—೦—೦ | | |
| ಪುಸ್ತಕ ಭಾಂಡಾಗಾರ (ಸುಮಾರು) | ೪,೬೦೦—೦—೦ | | |
| ಪರಿಷತ್ಪತ್ರಿಕೆಯ ಹಳೆಯ ಸಂಚಿಕೆಗಳಿಗಾಗಿ ಬರಬೇಕಾದುದು | ೧೦—೧೦—೦ | | |
| ಸಾಮಾನು ವಗೈರೆ (ಸುಮಾರು) | ೧,೪೦೦—೦—೦ | | |
| ಒಟ್ಟು .. | ೪೯,೧೬೨—೮—೧ | ಒಟ್ಟು .. | ೪೯,೧೬೨—೮—೧ |

ಕರ್ಣಾಟಕ ಸಾಹಿತ್ಯ
ಆಂಗೀರಸ ಸಂವತ್ಸರದ

## ಆಯ

| | ರೂ. ಆ. ಪೈ |
|---|---|
| ೧. ಹೋದ ವರ್ಷದ ಶಿಲ್ಕು .. .. | ೫,೫೬೮—೩—೮ |
| ೨. ತಿಂಗಳುಗಟ್ಟಲೆ ಸರ್ಕಾರದಿಂದ ಬಂದ ಸಹಾಯ ದ್ರವ್ಯ | ೧,೮೦೦—೦—೦ |
| ೩. ಪರಿಷತ್ತಿನ ಸದಸ್ಯರಿಂದ ಬಂದ ಚಂದಾ ಹಣ .. | ೬೧೪—೦—೦ |
| ೪. ಪರಿಷತ್ಪತ್ರಿಕೆಯ ಚಂದಾ ಹಣ .. | ೧೪೬—೦—೦ |
| ೫. ಪರಿಷತ್ತಿನ ಪುಸ್ತಕಗಳ ಮಾರಾಟದಿಂದ ಬಂದ ಹಣ | ೧೪೮-೧೫—೦ |
| ೬. ಡಿಪಾಜಿಟ್ಟುಗಳ ಮೇಲೆ ಬಂದ ಬಡ್ಡಿ .. | ೨೪೭-೧೩—೫ |
| ೭. ಅಂಚೆಯ ಹಾಸಲು ವಗೈರೆ ವಸೂಲಾದದ್ದು .. | ೭-೧೪—೦ |
| ೮. ಕೊಠಡಿಯ ಬಾಡಿಗೆ .. .. | ೧೦—೦—೦ |
| ೯. ಪರಿಷತ್ಪತ್ರಿಕೆಯ ಲೇಖನಗಳ ಹೆಚ್ಚು ಪ್ರತಿಗಳ ಮುದ್ರಣದ ವೆಚ್ಚ ವಸೂಲಾದದ್ದು .. | ೧೬-೧೧—೦ |
| ೧೦. ಪರಿಷನ್ಮಂದಿರದ ಕಟ್ಟಡಕ್ಕಾಗಿ ಸರ್ಕಾರದಿಂದ ಬಂದ ಸಹಾಯ ದ್ರವ್ಯ .. .. | ೭,೫೦೦—೦—೦ |
| ೧೧. ಇತರ ಬಾಬುಗಳಿಂದ .. .. | ೩೬—೨—೦ |
| ಒಟ್ಟು .. | ೧೬,೦೯೫-೧೧—೧ |

Checked and found correct.

(Sd.) K. NARAYANASWAMI AIYENGAR,
*Special Auditor.*

**ಪರಿಷತ್ತು, ಬೆಂಗಳೂರು**
ಆಯ ವ್ಯಯದ ಪಟ್ಟಿ

## ವ್ಯಯ

| | | ರೂ. ಆ. ಪೈ |
|---|---|---|
| ೧. | ಪರಿಷತ್ತಿನ ಆಫೀಸು ಸಿಬ್ಬಂದಿಗಾಗಿ .. | ೮೦೩-೧೨-೦ |
| ೨. | ಪರಿಷನ್ಮಂದಿರದ ಬಾಡಿಗೆ .. .. | ೩೬೦-೦-೦ |
| ೩. | ದೀಪದ ವೆಚ್ಚ .. .. | ೪೦-೧೪-೦ |
| ೪. | ಬರೆವಣಿಗೆಯ ಸಾಮಗ್ರಿ ಮತ್ತು ಇತರ ಸಾದಿಲ್ವಾರು | ೩೧-೨-೦ |
| ೫. | ಅಂಚೆಯ ಮತ್ತು ಟೆಲಿಗ್ರಾಂ ಹಾಸಲು .. | ೧೦೯-೧೩-೯ |
| ೬. | ಕಾಗದ, ಮುದ್ರಣ ಮತ್ತು ಬೈಂಡಿಗಾಗಿ .. | ೯೧೬-೧೫-೦ |
| ೭. | ಪುಸ್ತಕ ಭಾಂಡಾಗಾರಕ್ಕಾಗಿ .. .. | ೪೫-೧೪-೯ |
| ೮. | ವಾಚನ ಮಂದಿರದ ಪತ್ರಿಕೆಗಳ ಚಂದಾ .. | ೯೬-೩-೦ |
| ೯. | ಪರಿಷನ್ಮಂದಿರದ ಕಟ್ಟಡಕ್ಕಾಗಿ ಕೊಟ್ಟದ್ದು .. | ೭,೫೦೦-೦-೦ |
| ೧೦. | ಮರದ ಅಲಮಾರು ವಗೈರೆ .. | ೯೫-೦-೦ |
| ೧೧. | ಸಮ್ಮೇಳನದ ಪ್ರಯಾಣದ ವೆಚ್ಚ ವಗೈರೆ .. | ೮೫-೦-೬ |
| ೧೨. | ಪ್ರಚಾರ ಕಾರ್ಯಕ್ಕಾಗಿ .. .. | ೫೦-೦-೦ |
| ೧೩. | ಅಮಾನತ್ತು .. .. | ೪೯-೮-೦ |
| ೧೪. | ಇತರ ಬಾಬುಗಳು .. .. | ೧೪-೧೦-೦ |
| ೧೫. | ವರ್ಷಾಂತ್ಯದಲ್ಲಿದ್ದ ಶಿಲ್ಕು* .. .. | ೫,೮೯೬-೧೪-೧ |
| | ಒಟ್ಟು .. | ೧೬,೦೯೫-೧೧-೧ |

* ಶಿಲ್ಕಿಗೆ ತಪಶೀಲು :—

| | |
|---|---|
| ಫಿಕ್ಸೆಡ್ ಡಿಪಾಜಿಟ್ಟು | ೪,೫೦೦-೦-೦ |
| ಸೇವಿಂಗ್ಸ್ ಬ್ಯಾಂಕು ಡಿ॥ | ೧,೩೫೪-೧-೫ |
| ಗೌ॥ ಕಾರ್ಯದರ್ಶಿಯವರಲ್ಲಿ | ೪೨-೧೨-೮ |
| ಒಟ್ಟು ರೂ. | ೫,೮೯೬-೧೪-೧ |

(Sd.) C. K. VENKATARAMAIYA, M.A., LL.B.,
*Honorary Secretary.*

(Sd.) B. VENKATANARANAPPA, M.A.,
*Honorary Treasurer.*

# ಪ ರಿ ಶಿ ಷ್ಟ

## ಕರ್ಣಾಟಕ ಸಾಹಿತ್ಯ ಪರಿಷತ್ತಿನ

## ಸದಸ್ಯರ ಪಟ್ಟಿ

(೧೯೩೩ನೆಯ ಇಸವಿ ಏಪ್ರಿಲ್ ಮೊದಲನೆಯ ತಾರೀಖಿನಲ್ಲಿದ್ದಂತೆ)

---

### ಸಹಾಯಕರು

*೧. ರಾಜಕಾರ್ಯ ಪ್ರಸಕ್ತ ದಿವಾನ್ ಬಹಾದ್ದೂರ್
ಮ॥ ರಾ॥ ಎಂ. ಎನ್. ಕೃಷ್ಣರಾಯರು, ಬಿ.ಎ., ಬೆಂಗಳೂರು.

೨. ಮ॥ ರಾ॥ ನಾರಾಯಣಸ್ವಾಮಿರಾವ್ ಲೋಕೂರ, ಬೆಳಗಾಂವಿ.

೩. ರಾಜಸಭಾ ಭೂಷಣ ದಿವಾನ್ ಬಹಾದ್ದೂರ್ ಸರ್ ಕೆ. ಪಿ. ಪುಟ್ಟಣ್ಣಸೆಟ್ಟರು,
ಕೆಟಿ., ಸಿ.ಐ.ಇ., ರಿ॥ ಕೌನ್ಸಿಲರ್, ಬೆಂಗಳೂರು.

೪. ಮ॥ ರಾ॥ ಶ್ರೀನಿವಾಸರಾವ್ ಕೌಜಲಗಿ, ಬಿ.ಎ., ಎಲ್ಎಲ್.ಬಿ., ಬಿಜಾಪುರ.

*೫. ಶ್ರೀಮತಿ ಡಿ. ಸಾಕಮ್ಮನವರು (ಸೋಮವಾರಪೇಟೆ, ಕೊಡಗು), ಬೆಂಗಳೂರು.

### ಆಜೀವ ಸದಸ್ಯರು

(ಮೈಸೂರು ದೇಶದ ಸದಸ್ಯರು)

ಮ॥ ರಾ॥ ಗಳಾದ

೬. ಎಸ್. ಜಿ. ಅಪ್ಪಣ್ಣಯ್ಯಂಗಾರ್ಯರು, ಬಿ.ಎ., ಬಿ.ಎಲ್., ಸೀ॥ ಅ॥ ಕ॥ ಬೆಂಗಳೂರು.

೭. ಪಿ. ಅಪ್ಪಾಜೀರಾಯರು, ಬಿ.ಎಸ್‌ಸಿ., 11 B, ಅರ್ಪತಿ ಲೇನ್, ಕಲ್ಕತ್ತ.

*೮. ಟಿ. ಅಪ್ಪೂರಾಯರು, ಬಿ.ಎ., ಬಿ.ಎಲ್., ಅಡ್ವೊಕೇಟ್, ಬೆಂಗಳೂರು.

೯. ಡಿ. ಆದೆಪ್ಪನವರು, ಸಾಹುಕಾರರು, ಬೆಂಗಳೂರು.

೧೦. ಡಾ॥ ಜೆ. ಎ. ಈಶ್ವರಮೂರ್ತಿಗಳು, ಬಿ.ಎ., ಎಲ್.ಎಂ.ಎಸ್., ಬಿ.ಎಸ್.ಎಸ್‌ಸಿ.
ಶಂಕರಪುರ, ಬೆಂಗಳೂರು.

೧೧. ಮಾಗಡಿ ಕರಣಿಕ ಕೃಷ್ಣಮೂರ್ತಿರಾಯರು, ಜಮೀನ್‌ದಾರರು, ಬಸವನಗುಡಿ.

೧೨. ಸಿ. ಕೃಷ್ಣರಾಯರು, ಬಿ.ಎ., ವಿದ್ಯಾ॥ ರಿ॥ ಡೆ॥ ಇನ್॥ ಜನರಲ್, ತುಮಕೂರು.

*೧೩. ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ., ಕನ್ನಡ ಅ॥ ಪ್ರೊ॥ ಬೆಂಗಳೂರು.

೧೪. ಕೆ. ಕೃಷ್ಣಯ್ಯಂಗಾರ್ಯರು, ಬಿ.ಎ., ವಿಶ್ವೇಶ್ವರಪುರ.

೧೫. ಎ. ಕೇಶವಯ್ಯನವರು, ರಿ॥ ಸ್ಕೂಲ್ ಮಾಸ್ಟರು, ಚಿಕ್ಕಬಳ್ಳಾಪುರ.

೧೬. ಲೋಕಸೇವಾನಿರತ ಡಿ. ಕೊಂಗಾಡಿಯಪ್ಪನವರು, ರಿ॥ ಹೆ॥ ಮಾಸ್ಟರ್, ದೊಡ್ಡಬಳ್ಳಾಪುರ.

೧೭. ಎಂ. ಎನ್. ಗೋಪಾಲರಾಯರು, ಎಲೆಕ್ಟ್ರಿಕಲ್ ಡಿಪಾರ್ಟ್‌ಮೆಂಟ್, ಕೋಲಾರದ ಗಣಿ.

೧೮. ವಿ. ಆರ್. ತ್ಯಾಗರಾಜ ಅಯ್ಯರವರು, ಎಂ.ಎ., ರಿ॥ ಎ॥ ಕಮಿಷನರ್, ಬಸವನಗುಡಿ.

೧೯. ವೈ. ನರಸಿಂಗರಾಯರು, ಬಿ.ಎ., ಬಿ.ಎಲ್., ರಿ॥ ಅ॥ ಕ॥ ಬೆಂಗಳೂರು.

೨೦. ಸಿ. ಆರ್. ನರಸಿಂಹಯ್ಯಂಗಾರ್ಯರು, ಬಿ.ಎ., ಜಿಯಾಲೊಜಿಸ್ಟ್, ಕಡಕೊಳ.

---

* ಈ ಗುರುತು ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರ ಹೆಸರನ್ನು ತೋರಿಸುತ್ತದೆ.

ಮ|| ರಾ' ಗಳಾದ

೨೧. ಪ್ರಾಕ್ತನ ವಿಮರ್ಶ ವಿಚಕ್ಷಣ ರಾವ್ ಬಹಾದ್ದೂರ್ ಆರ್. ನರಸಿಂಹಾಚಾರ್ಯರು, ಎಂ.ಎ., ರಿ || ಡೈರೆಕ್ಟರು, ಶಾಸನದ ಇಲಾಖೆ, ಮಲ್ಲೇಶ್ವರ.

೨೨. ಬಿ. ನರಹರಿ ಶಾಸ್ತ್ರಿಗಳು, ಹೆ|| ಮಾಸ್ಟರ್, ಬಸವನಗುಡಿ.

೨೩. ಡಿ. ಕೆ. ಭಾರದ್ವಾಜರು, ವಿದ್ಯಾಭೂಷಣ, ಬಸವನಗುಡಿ.

೨೪. ವೈ. ಕೆ. ರಾಮಚಂದ್ರರಾಯರು, ಬಿ.ಎ., ಎಲ್.ಸಿ.ಇ., ರೈಲ್ವೆ ಎಂಜಿ|| ಮೈಸೂರು.

೨೫. ರಾವ್ ಸಾಹೆಬ್ ಎಂ. ರಾಮರಾಯರು, ರಿ|| ಫಾರೆಸ್ಟ್ ಆಫಿಸರ್, ಬಸವನಗುಡಿ.

೨೬. ಎಂ. ಎ. ರಾಮಾನುಜಯ್ಯಂಗಾರ್ಯರು, ''ಕಾವ್ಯಕಲಾನಿಧಿ''ಯ ಸಂ|| ಮೈಸೂರು.

೨೭. ವೀಣೆ ರಂಗಸ್ವಾಮಯ್ಯಂಗಾರ್ಯರು, ಜಮೀನ್‌ದಾರರು, ಶ್ರೀರಂಗಪಟ್ಟಣ.

೨೮. ರಾಜಕವಿಭೂಷಣ ಎಚ್. ಲಿಂಗರಾಜ ಅರಸಿನವರು, ಮೈಸೂರು.

೨೯. ಎಚ್. ಕೆ. ವೀರಬಸವಯ್ಯನವರು, ಬಿ.ಎ., ಬಿ.ಎಲ್., ಸ|| ಜಡ್ಜ್, ಬೆಂಗಳೂರು.

೩೦. ಎಂ. ವೆಂಕಟಕೃಷ್ಣಯ್ಯನವರು, ಮೈಸೂರು.

*೩೧. ಬಿ. ವೆಂಕಟನಾರಾಯಣಪ್ಪನವರು, ಎಂ.ಎ., ರಿ|| ಕಾಲೇಜು ಪ್ರೊ|| ಬಸವನಗುಡಿ.

*೩೨. ಎನ್. ವೆಂಕಟೇಶ ಅಯ್ಯಂಗಾರ್ಯರು, ಬಿ.ಎ., ರಿ|| ಮೀಟಿಯೊರೊಲಾಜಕಲ್ ರಿಪೋರ್ಟರು, ಚಾಮರಾಜಪೇಟೆ, ಬೆಂಗಳೂರು.

೩೩. ರಾವ್ ಬಹಾದ್ದೂರ್ ಬಿ. ವೆಂಕಟೇಶಾಚಾರ್ಯರು, ಎಂ.ಎ., ಪ್ರೊಫೆಸರ್, ಸೆಂಟ್ರಲ್ ಕಾಲೇಜು, ಬೆಂಗಳೂರು.

೩೪. ಕೆ. ಶಂಕರನಾರಾಯಣರಾಯರು, ಎಂ.ಎ., ಬಿ.ಎಲ್., ಡಿ|| ಜಡ್ಜ್, ಮೈಸೂರು.

೩೫. ಬಿ. ಶಿವಮೂರ್ತಿ ಶಾಸ್ತ್ರಿಗಳು, ಹೊಂಪೇಟೆ, ತುಮಕೂರು.

*೩೬. ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್., ಪ್ರೊಫೆಸರ್, ಸೆಂ|| ಕಾ|| ಬೆಂಗಳೂರು.

೩೭. ಕೆ. ಶ್ರೀನರಸಿಂಹಯ್ಯನವರು, ಎಂ.ಎ., ಎಲ್.ಟಿ., ವಿದ್ಯಾಭ್ಯಾಸದ ಇಲಾಖಾ ಡೆಪ್ಯುಟಿ ಡೈರೆಕ್ಟರು, ಮೈಸೂರು.

*೩೮. ಎಂ. ಆರ್. ಶ್ರೀನಿವಾಸಮೂರ್ತಿಗಳು, ಬಿ.ಎ., ಚಾಮರಾಜಪೇಟೆ, ಬೆಂಗಳೂರು.

೩೯. ಟಿ. ಶ್ರೀನಿವಾಸರಾಘವಾಚಾರ್ಯರು, ರಿ|| ಕನ್ನಡ ಪಂಡಿತರು, ಮೈಸೂರು.

೪೦. ಎಂ. ಶ್ರೀನಿವಾಸರಾಯರು, ಬಿ.ಎ., ರಿ| ಸರ್ಕಲ್ ಇನ್‌ಸ್ಪೆಕ್ಟರು, ಮೈಸೂರು.

೪೧. ಎ. ಸದಾಶಿವಯ್ಯ, ಬಿ.ಎ., ಬಿ.ಎಲ್., ಮೈಸೂರು ರೈಲ್ವೆ ಛೀಫ್ ಸ್ಟೋರು-ಕೀಪರು, ಮೈಸೂರು.

*೪೨. ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ., ಕನ್ನಡ ಪ್ರೊಫೆಸರು, ಮೈಸೂರು.

## (ಮುಂಬಯಿ ಪ್ರಾಂತದ ಸದಸ್ಯರು)

ಮ|| ರಾ|| ಗಳಾದ

೪೩. ದಿವಾನ್ ಬಹಾದ್ದೂರ್ ಅಣ್ಣಾರಾವ್ ಬಿ. ಲಠ್ಠೆ, ಎಂ.ಎ., ಎಲ್‌ಎಲ್.ಬಿ., ಕೊಲ್ಹಾಪುರ.

೪೪. ಆನಂದರಾವ್ ಶೇಷಗಿರಿ ಮುಂಡಕೂರ್, ಬಿ.ಎ., ಡೆಪ್ಯುಟಿ ಕಲೆಕ್ಟರ್, ಕಾರವಾರ.

೪೫. ಭಿ. ಪಿ. ಆಲಠಗಿ, ಸ್ಕೂಲ್ಮಾಸ್ಟರು, ರಬಕವಿ.

ಮ॥ ರಾ॥ ಗಳಾದ

*೪೬. ವಿ. ಬಿ. ಆಲೂರ್, ಬಿ.ಎ., ಎಲ್‌ಎಲ್.ಬಿ., ಸಾಧನಕೇರಿ, ಧಾರವಾಡ.

*೪೭. ಎಚ್. ಚೆನ್ನಕೇಶವಯ್ಯಂಗಾರ್ಯರು, ಕನ್ನಡ ಪ್ರೊಫೆಸರ್, ಧಾರವಾಡ.

೪೮. ಆರ್. ಎ. ಜಹಗೀರ್‌ದಾರ್, ಎಂ.ಎ., ಎಲ್‌ಎಲ್.ಬಿ., ಹೈ॥ ವಕೀಲ್, ಮುಂಬಯಿ.

೪೯. ರಾವ್ ಬಹಾದ್ದೂರ್ ವಿ. ಬಿ. ಜೋಶಿ, ಬಿ.ಎ., ರಿ॥ ಪ್ರಿನ್ಸಿಪಾಲ್, ಧಾರವಾಡ.

೫೦. ಎನ್. ಆರ್. ದೇಶಪಾಂಡೆ, ಬಿ.ಎ., ಎಲ್‌ಎಲ್.ಬಿ., ಪ್ಲೀಡರು, ಧಾರವಾಡ.

೫೧. ನಾರಾಯಣ ಗುರುರಾವ್ ಜೋಷಿ, ಬಿ.ಎ., ಎಲ್‌ಎಲ್.ಬಿ., ವಕೀಲ್, ಬೆಳಗಾಂವಿ.

೫೨. ನಾರಾಯಣ ಶ್ರೀನಿವಾಸ ರಾಜಪುರೋಹಿತರು, ಶುಕ್ರವಾರಪೇಟೆ, ಧಾರವಾಡ.

*೫೩. ನಾರಾಯಣ ವೆಂಕಟೇಶ ಕುರಡಿ, ಟ್ರೈನಿಂಗ್ ಸ್ಕೂಲ್, ಧಾರವಾಡ.

*೫೪. ಆರ್. ಬಿ. ಪೋತ್ದಾರ್, ಬಿ.ಎ., ಹೈಸ್ಕೂಲ್ ಮಾ ಕಾರವಾರ.

೫೫. ಎಸ್. ಆರ್. ಪೋತ್ದಾರ್, ಮಾಳಮಡ್ಡಿ, ಧಾರವಾಡ.

೫೬. ಬಿ. ಬಿ. ಬಾಗಿ, ಲೆಕ್ಚರರ್, ಕರ್ಣಾಟಕ ಕಾಲೇಜು, ಧಾರವಾಡ.

*೫೭. ಬಿ. ಎಸ್. ಬೆಟಗೇರಿ, ಢಳಕವಾಡಿ, ಬೆಳಗಾಂವಿ.

೫೮. ವಿ. ಎನ್. ಮುಗದಾಳ್, ಬಿ.ಎ., ಹೆ॥ ಮಾ॥ ಟ್ರೈ॥ ಸ್ಕೂ॥ ಧಾರವಾಡ.

೫೯. ವೆಂಕಟೇಶ ತಿರಕೊ ಕುಲಕರಣಿ ಗಳಗನಾಥರು, ಹಾವೇರಿ.

೬೦. ಶಾಸ್ತ್ರಿ ಶಿವರಾವ್, ವಕೀಲರು, ಹೊನ್ನಾವರ.

೬೧. ಶ್ರೀನಿವಾಸ ಪಾಂಡುರಂಗ ಕೋಟೀ, ರೇಂಜು ಫಾರೆಸ್ಟ್ ಆಫೀ॥, ಕಿರವತ್ತಿ (ಉ. ಕನ್ನಡ).

೬೨. ಶ್ರೀನಿವಾಸ ರಾಜೇರಾವ ಮಂಗಳವೇಡೆ, ಪತ್ರಿಕಾ ಕರ್ತರು, ಬಾಗಲಕೋಟೆ.

೬೩. ಸಣ್ಣಪ್ಪನಾಯಿಕ ರಾಮಚಂದ್ರನಾಯಿಕ ಪಡಕೂಟ, ಹಲಸಿಗೆ (ಬೆಳಗಾಂ ಡಿ॥).

*೬೪. ರಾವ್ ಸಾಹೆಬ್ ಪಿ. ಜಿ. ಹಳಕಟ್ಟಿ, ಬಿ.ಎ., ಎಲ್‌ಎಲ್.ಬಿ., ಪಬ್ಲಿಕ್ ಪ್ರಾಸಿಕ್ಯೂಟರ್ ಮತ್ತು ಪ್ಲೀಡರ್, ಬಿಜಾಪುರ.

## (ಉತ್ತರ ಕರ್ಣಾಟಕ ಸಂಸ್ಥಾನಗಳ ಸದಸ್ಯರು)

ಮ॥ ರಾ॥ ಗಳಾದ

*೬೫. ಕೆ. ಜಿ. ಕುಂದಣಗಾರ, ಎಂ.ಎ., ಪ್ರೊಫೆಸರ್, ಕೊಲ್ಹಾಪುರ.

*೬೬. ತಮ್ಮಪ್ಪ ಸತ್ಯಪ್ಪ ಚಿಕ್ಕೋಡಿ, ವರ್ತಕರು, ಬನಹಟ್ಟಿ (ಬೆಳಗಾಂ ಡಿ॥).

೬೭. ಮಾಧವರಾವ್ ತಿರುಮಲರಾವ್ ದೇಶಪಾಂಡೆ, ಹುನ್ನೂರು (ಜಮಖಂಡಿ).

೬೮. ರಾಮಚಂದ್ರ ಶಂಕರ ಮುಂಗಸೂಲಿ, ಶಿರಹಟ್ಟಿ (ಧಾರವಾಡ ಡಿ ).

## (ಹೈದರಾಬಾದು ಪ್ರಾಂತದ ಸದಸ್ಯರು)

ಮ॥ ರಾ॥ ಗಳಾದ

*೬೯. ಕರ್ಣಾಟಕ ನಾಟಕಾಲಂಕಾರ, ಅಭಿನಯ ಕೇಸರಿ, ಗರುಡ ಸದಾಶಿವರಾಯರು, ಹೈದರಾಬಾದು.

*೭೦. ನಾರಾಯಣಶಾಸ್ತ್ರೀ ಭಾವೂಶಾಸ್ತ್ರೀ, ಕೊಪ್ಪಳ.

೭೧. ರಾಘವೇಂದ್ರರಾವ್ ಚ್ಯಾಕಲಬ್ಬಿ, ವಕೀಲರು, ಕೊಪ್ಪಳ.

೭೨. ಟಿ. ಆರ್. ರಾಮರಾಯರು, ಬಿ.ಎ., ಕನ್ನಡ ಪ್ರೊಫೆಸರ್, ಹೈದರಾಬಾದು,

